# ಕಣವಿ ಸಮಗ್ರ ಕಾವ್ಯ

(ಕವಿತೆಗಳು : ೧೯೪೯-೨೦೧೮)

**ಚೆನ್ನವೀರ ಕಣವಿ**




ಸಂವಹನ

**12/1A, ಈವ್ನಿಂಗ್ ಬಜಾರ್ ಹಿಂಭಾಗ**

**ಶಿವರಾಂಪೇಟೆ, ಮೈಸೂರು - 570 001**

**Kanavi Samagra Kavya :** Complete collected Poems (1949-2018) of Chennaveera Kanavi, Kalyana Nagar, Dharwad-580 007; Published by Samvahana, Behind Evening Bazaar, Shivarampet, Mysore - 570 001

Pages : XL + 752 = 792

೧೯೮೯ ಮೊದಲ ಮುದ್ರಣ
೧೯೯೬ ಪರಿಷ್ಕೃತ ಎರಡನೆಯ ಮುದ್ರಣ
೨೦೦೩ ಪರಿವರ್ಧಿತ ಮೂರನೆಯ ಮುದ್ರಣ
೨೦೦೭ ಪರಿವರ್ಧಿತ ನಾಲ್ಕನೆಯ ಮುದ್ರಣ
೨೦೧೮ ಪರಿವರ್ಧಿತ ಐದನೆಯ ಮುದ್ರಣ



Price : ₹ 650/-
ಬೆಲೆ : ಆರುನೂರಾಐವತ್ತು ರೂಪಾಯಿ

ಪ್ರತಿಗಳು ದೊರೆಯುವ ಸ್ಥಳ :
**ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್**
೧೨/೧, ಈವನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು - ೫೭೦ ೦೦೧
ದೂರವಾಣಿ : ೨೪೭೬೦೧೯

ರಕ್ಷಾಪುಟ ವಿನ್ಯಾಸ : ಸಂದೇಶ್

ಮುದ್ರಕರು:
**ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್**
೧೨/೧, ಈವನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು- ೫೭೦ ೦೦೧
ದೂರವಾಣಿ : ೨೪೭೬೦೧೯

# ಪ್ರಸ್ತಾವನೆ

ಆಧುನಿಕ ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬರಾದ ಚೆನ್ನವೀರ ಕಣವಿಯವರು ನಲವತ್ತು ವರ್ಷಗಳ ತಮ್ಮ ಸುದೀರ್ಘ ಕಾವ್ಯಜೀವನದಲ್ಲಿ ಓದುಗರ ಪ್ರೀತಿ, ವಿಮರ್ಶಕರ ಮೆಚ್ಚುಗೆ ಮತ್ತು ಸಾಂಸ್ಥಿಕ ಮನ್ನಣೆಗಳನ್ನು ಯಥೇಚ್ಛ ಸಂಪಾದಿಸಿದ್ದಾರೆ. ಅಂಥವರ ಸಮಗ್ರ ಕಾವ್ಯಕ್ಕೆ ಮುನ್ನುಡಿಯ ಅವಶ್ಯಕತೆಯೇ ಇಲ್ಲ. ಇಂಥ ಅವಶ್ಯಕತೆಯಿದ್ದಾಗ ಬೇಂದ್ರೆ, ವಿನಾಯಕರಂಥ ಹಿರಿಯ ಕವಿಗಳು ಈ ಕಾರ್ಯವನ್ನು ಅತ್ಯಂತ ಸಮರ್ಥ ರೀತಿಯಲ್ಲಿ ನಿರ್ವಹಿಸಿದ್ದಾರೆ. ಸ್ವತಃ ಕಣವಿ ಅವರೇ ಹಲವಾರು ಕೃತಿಗಳಿಗೆ ಮುನ್ನುಡಿ ಬರೆದು ಹೊಸ ಪ್ರತಿಭೆಯನ್ನು ಪ್ರೋತ್ಸಾಹಿಸಿದ್ದಾರೆ. ಅವರ ಕಾವ್ಯದ ಬಗ್ಗೆ ತೀರ ಹೊಸತು ಎನ್ನುವ ವಿಷಯವು ವಿಮರ್ಶೆಯ ಹೊರಗೆ ಉಳಿದಿಲ್ಲ. ಸಮಕಾಲೀನ ಸಾಹಿತ್ಯ ಚಳುವಳಿಗಳೊಡನೆ ಅವರು ಹೊಂದಿದ ಸಂಬಂಧ, ಅವರ ಕಾವ್ಯದ ಮೇಲಿನ ಸಾಹಿತ್ಯಕ ಪ್ರಭಾವಗಳು, ಕಾವ್ಯಮಾರ್ಗ, ಮನೋಧರ್ಮಗಳಂಥ ಮಹತ್ತ್ವದ ಅಂಶಗಳ ಬಗ್ಗೆ ವಿವರವಾದ ಚರ್ಚೆ ಈಗಾಗಲೇ ಬಂದಿದೆ. ಮುಖ್ಯ ಕವನಗಳ ವಿಶ್ಲೇಷಣೆ, ರಸಗ್ರಹಣಗಳೂ ತಕ್ಕ ಪ್ರಮಾಣದಲ್ಲಿ ನಡೆದಿವೆ. ಇದೆಲ್ಲದರ ಅರಿವಿದ್ದೂ ಈ ಸಮಗ್ರ ಕಾವ್ಯದಲ್ಲಿ ನನ್ನ ಹಾಜರಿಯ ಹಿಂದಿನ ಮುಖ್ಯ ಪ್ರೇರಣೆ ಕಳೆದ ಎರಡು ದಶಕಗಳಿಗೂ ಮೇಲ್ಪಟ್ಟು ಬೆಳೆದುಬಂದ ನಮ್ಮ ಸ್ನೇಹ. ಇದರ ಜೊತೆಗೆಯೆ, ಪ್ರಮುಖ ಕವಿಯೊಬ್ಬರ ಕಾವ್ಯ ಸಾಧನೆಯನ್ನು ವೈಯಕ್ತಿಕವಾಗಿ ಗ್ರಹಿಸುವ, ಪುನರ್ವಿಮರ್ಶೆಗೆ ಒಳಪಡಿಸುವ ವಿಮರ್ಶಕನ ಕರ್ತವ್ಯವನ್ನು ನೆರವೇರಿಸುತ್ತಿದ್ದೇನೆ ಎಂಬ ಸಮಾಧಾನವೂ ಒಂದು ಕಾರಣ. ನಾನು ಹೇಳಲಿರುವ ಮಾತುಗಳಲ್ಲಿ ಕೆಲವಾದರೂ ಕಣವಿಯವರ ಕಾವ್ಯವನ್ನು ಇಡಿಯಾಗಿ ನೋಡಬೇಕೆನ್ನುವವರಿಗೆ ಪ್ರಸ್ತುತವೆನಿಸಬಹುದು ಎಂದುಕೊಂಡಿದ್ದೇನೆ.

೧

ಕಣವಿಯವರ ಕಾವ್ಯಜೀವನದ ಎದ್ದುಕಾಣುವ ವೈಶಿಷ್ಟ್ಯವೆಂದರೆ, ಎಲ್ಲ ಸಮಕಾಲೀನ ಸಾಹಿತ್ಯ ಚಳುವಳಿಗಳಿಗೆ ಪ್ರತಿಸ್ಪಂದಿಸಿಯೂ ಯಾವುದಕ್ಕೂ ತಮ್ಮನ್ನು ಸಂಪೂರ್ಣವಾಗಿ ಒಪ್ಪಿಸಿಕೊಳ್ಳದೆ ಇರುವುದು. ಇದು ಅವರ ಮನೋಧರ್ಮದ ಗುಣವಿದ್ದಂತೆ ಉದ್ದೇಶಪೂರ್ಣವಾದ ಆಯ್ಕೆಯೂ ಆಗಿದೆ ಎಂದೆನಿಸುತ್ತದೆ. ಅವರನ್ನು 'ಸಮನ್ವಯ' ಕವಿಯೆಂದು ಗುರುತಿಸುವುದರಲ್ಲಿ ಯಾವ ಔಚಿತ್ಯವೂ ಕಾಣುವುದಿಲ್ಲ. ಇಷ್ಟೇ ಅಲ್ಲದೆ, ಇಂಥ ಹೇಳಿಕೆಗಳು ತಪ್ಪು ತಿಳುವಳಿಕೆಗೆ ಕಾರಣವಾಗಬಲ್ಲವು. ನವೋದಯ, ನವ್ಯ, ನವ್ಯೋತ್ತರ ಈ ಎಲ್ಲ ಮಾರ್ಗಗಳನ್ನು ಕಣವಿಯವರು ತುಳಿದಿದ್ದಾರೆ ಎನ್ನುವುದು ನಿಜವಾದರೂ ಅವುಗಳ ಸಮನ್ವಯಕ್ಕೆ - ಇಂಥ ಕಾರ್ಯ ಒಬ್ಬ ಕವಿಯಿಂದ ಸಾಧ್ಯ ಎಂದಿಟ್ಟುಕೊಂಡರೂ- ಅವರು ಪ್ರಯತ್ನಿಸಿಲ್ಲ. ತಮ್ಮ ಕಾವ್ಯಪ್ರತಿಭೆಯ ಸ್ವರೂಪವನ್ನು ಸ್ವವಿಮರ್ಶೆಯಿಂದ ಗುರುತಿಸಿ, ಅದರ

ವಿಕಾಸಕ್ಕೆ ಅನುಕೂಲವಾಗಬಲ್ಲ ಅಂಶಗಳನ್ನು ಮಾತ್ರ ಅವರು ತಮ್ಮಲ್ಲಿ ಅಳವಡಿಸಿಕೊಳ್ಳುತ್ತ ಬಂದಿದ್ದಾರೆ. ಬೇಂದ್ರೆ ಅಥವಾ ಅಡಿಗರಂತೆ ಮಾರ್ಗಪ್ರವರ್ತಕ ಕವಿಯಾಗದೆಯೂ ತಮ್ಮ ಅನನ್ಯತೆಯನ್ನು ಮತ್ತು ವೈಶಿಷ್ಟ್ಯವನ್ನು ಅವರು ಕಾಯ್ದುಕೊಂಡು ಬಂದಿರುವುದಕ್ಕೆ ಮುಖ್ಯ ಕಾರಣ, ತಮ್ಮ ಕಾವ್ಯಜೀವನದ ಉದ್ದಕ್ಕೂ ಆಯ್ಕೆಯ ವಿಷಯದಲ್ಲಿ ತೋರಿರುವ ಧೈರ್ಯ, ಸ್ವಾತಂತ್ರ್ಯ ಮತ್ತು ಪ್ರಾಮಾಣಿಕತೆಗಳು. ಇದರಿಂದಾಗಿಯೇ ಅನೇಕ ಪ್ರಭಾವಗಳನ್ನು ಅರಗಿಸಿಕೊಂಡರೂ ತಮ್ಮ ಸ್ವಂತದ ಪ್ರತಿಭೆಯನ್ನು ಮೆರೆಯುವುದು ಅವರಿಗೆ ಸಾಧ್ಯವಾಗಿದೆ.

೨

ಕಣವಿಯವರ ಕಾವ್ಯ ಮನೋಧರ್ಮವನ್ನು 'ರೊಮ್ಯಾಂಟಿಕ್' ಎಂದು ಗುರುತಿಸುವುದು ವಾಡಿಕೆಯಾಗಿದೆ. ಆದರೆ ಅದು ಇದಕ್ಕಿಂತಲೂ ಹೆಚ್ಚು ಸಂಕೀರ್ಣವಾದ ಮನೋಧರ್ಮ. ಆದರ್ಶವಾದ, ನಿಸರ್ಗಪ್ರೇಮ, ಭಾವನಿಷ್ಠೆ ಇವು ಅವರ ರೊಮ್ಯಾಂಟಿಕ್ ಒಲವುಗಳತ್ತ ಬೊಟ್ಟು ಮಾಡಿ ತೋರಿಸಿದರೆ, ಸಮದರ್ಶನ, ಸಮಭಾವ, ಸ್ವೀಕೃತಿಗಳಂಥ ಮೌಲ್ಯಗಳಲ್ಲಿರುವ ಅವರ ನಂಬುಗೆ ಭಾರತೀಯ ಸಂದರ್ಭದಲ್ಲಿ ಅಭಿಜಾತ ಒಲವುಗಳನ್ನೇ ಸೂಚಿಸುತ್ತದೆ. ಸ್ವತಃ ಕಣವಿಯವರಿಗೆ ಈ ಸಂಕೀರ್ಣತೆಯ ಅರಿವಿದೆ:

ನನ್ನ ನಂಬಿಕೆಯೊಂದು ಆಕಾಶ;
ನಿಜ, ಅದಕ್ಕೆ ತಳಬುಡವಿಲ್ಲ, ನಾನೆಷ್ಟು ಬೆಳೆದರೂ
ನನಗೆ ನಿಲುಕುವುದಿಲ್ಲ, ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ. ಮೇಲೆ ನೋಡದೆ ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯ ಮೇಲೆ.
ಹಗಲು ಹೊತ್ತಿನಲಿ ಅದರೆಡೆಗೆ ಲಕ್ಷ್ಯವಿಲ್ಲ, ನಮ್ಮ ಬದುಕಿನಲಿ
ನಾವು ಮಗ್ನರಾದರೆ ಸಾಕು, ಅದಕೆ ಚಿಂತೆಯಿಲ್ಲ . . . .

'ನಂಬಿಕೆ'

ಕಣವಿಯವರ ಕಾವ್ಯಜೀವನದ ವಿಕಾಸಕ್ರಮ ಒಂದು ಸುಯೋಜಿತವಾದ ಬೆಳವಣಿಗೆ. ಮೊದಲ ಹಂತದ ಕವಿತೆಗಳಲ್ಲಿ ಬಹಳಷ್ಟು ರಚನೆಗಳ ಆಶಯ ಸಾಂಕಲ್ಪಿಕ (Programmatic) ವಾಗಿದೆ. ಇವನ್ನು ಅವರ ಪ್ರಜ್ಞಾವಿಕಾಸದ ನಕ್ಷೆ ಎಂದು ಕರೆಯಬಹುದು. ಈ ಕವಿತೆಗಳಿಗೂ ಅವರ ಪರಿಣತಿಯ ಹಂತದ ಕವಿತೆಗಳಿಗೂ ಇರುವ ಅಂತರ ಸಂಕಲ್ಪ, ಸಾಧನೆಗಳ ಅಂತರ. ಲಕ್ಷಿಸಬೇಕಾದ ಸಂಗತಿಯೆಂದರೆ ಕಣವಿಯವರ ಕನಸುಗಳ ಸ್ವರೂಪ ವೈಯಕ್ತಿಕವಿದ್ದಂತೆ ಸಾಮಾಜಿಕವೂ ಆಗಿರುವುದು. 'ಹಿರಿದು ಮನಸು ಹಿರಿದಾದ ಭಾವ ಮುಗಿಲಗಲವಾಗಬೇಕು' ಎಂಬ ಅಭೀಪ್ಸೆಯಂತೆ 'ಮನುಕುಲವು ಹೂವಾಗಿ, ಜಗವು ಜೇಂಗೊಡವಾಗಿ ಮನವು ತನಿವಣ್ಣಾಗಲೆಂಬ ಹುಚ್ಚು' ಕೂಡ ನಿಜವಾದುದು. ಇದರಿಂದಾಗಿ, ಅವರ ಕಾವ್ಯ ಆಂತರ್ಯದ ವಿಕಾಸಕ್ಕೆ ಕೊಟ್ಟಷ್ಟು, ಅಥವಾ ಇನ್ನೂ ಒಂದು ತೂಕ ಹೆಚ್ಚೇ,

ಲಕ್ಷ್ಯವನ್ನು ಸಾಮಾಜಿಕ ಸ್ವಾಸ್ಥ್ಯಕ್ಕೆ ಕೊಟ್ಟಿದೆ. ವೈಯಕ್ತಿಕ ನೆಲೆಯಲ್ಲಿ ಕಣವಿಯವರು ನಡೆಸುವ ಮೌಲ್ಯ ಸ್ವೀಕೃತಿಯ ಉದಾಹರಣೆಗಳೆಂದು ಕೆಳಗಿನ ಸಾಲುಗಳನ್ನು ನೋಡಬಹುದು:

ನನ್ನದೆಲ್ಲವನ್ನು ಧಾರೆಯೆರೆಯೆ ಮಹಾದರ್ಶಕೆ
ಉರುಳುತಿಹುದು ಜೀವಝರಿಯು ಆಳಲ ಕಡಲಿಗೆ
'ಒಳ್ಗುರಿಗೆ'

ಹಿರಿದು ಕಿರಿದೆಂಬುವುದು ಅಲ್ಪ ಬುದ್ಧಿ.
'ಭಾವಜೀವಿ'

ಕಾಲಗತಿಯೊಡನೆ ಸಮರಸವಾಗಿ ಸಾಗುವುದೆ
ಜೀವನ ಪ್ರವಾಹಕ್ಕೆ ದೊರೆತ ಗುರಿಯು.
'ಹೊಸ ಬಾಳು ನಮ್ಮದಿದೆ'

ಬರುವುದೆಲ್ಲ ಬರಲಿ ಬಿಡು-
ಏಕೆ ಅದರ ಚಿಂತೆ.
'ಬರುವುದೆಲ್ಲ ಬರಲಿ ಬಿಡು'

ಬದುಕು ಮಡಿಯಾಗಿರಲಿ.
'ಕವಿತೆಗೆ'

ಹರಗು
ಒಳಹೊರಗು ಸಿದ್ಧವಿರು.
'ನೆಲ-ಮುಗಿಲು'

ಸಮರ್ಪಣೆ, ಸಮದರ್ಶನ, ಸ್ವೀಕೃತಿ, ಮಹದ ಅಭೀಪ್ಸೆ, ಆತ್ಮಕೃಪಿ ಇಂಥ ಮೌಲ್ಯಗಳ ಉಪಾಸನೆಯ ಸಂಕಲ್ಪ ಕಣವಿಯವರ ಮೊದಲಹಂತದ ಕಾವ್ಯದ ಮುಖ್ಯ ಪ್ರೇರಣೆಯಾಗಿದೆ. ಅವರ ಕಾವ್ಯದ ಕೇಂದ್ರಸ್ಥಾನದಲ್ಲಿರುವ 'ಬೆಳಕು' ಈ ಎಲ್ಲ ಮೌಲ್ಯಗಳನ್ನು ಒಳಗೊಳ್ಳುವ ಆದರ್ಶದ ಪ್ರತೀಕ. ಬೆಳಕಿನ ಸಂಕೇತ ವೇದಕಾಲದಷ್ಟು ಪೂರ್ವದ್ದಾದರೂ ರೊಮ್ಯಾಂಟಿಕ್ ಕಾವ್ಯದಲ್ಲಿ ಅದಕ್ಕೆ ವಿಶೇಷವಾದ ಪ್ರಾಧಾನ್ಯವಿದೆ. ಕಣವಿಯವರ ಮನೋಧರ್ಮದ ಇನ್ನೊಂದು ಮುಖ್ಯವಾದ ಸಮಷ್ಟಿ ಪ್ರಜ್ಞೆಯ ಉಗಮ ಭಾರತೀಯ ಸಂಸ್ಕೃತಿಯ ಆಳದಲ್ಲಿದೆ. 'ಸಹನಾವವತು ಸಹ ನೌ ಭುನಕ್ತು ಸಹವೀರ್ಯಂ ಕರವಾವಹೈ' ಮಂತ್ರದ ಪುನರುಚ್ಚಾರದಂತಿರುವ

ಕೂಡಿ ಬಾಳುತ ಕೂಡಿ ಬೆಳೆಯೋಣ ಕಾಂತಿಯಲಿ
ಸೂರ್ಯಪಾನದ ಹಾಗೆ ವೀರ್ಯ ತಳೆದು
'ಹೊಸ ಬಾಳಿನ ಯೋಜನೆ'

ಇಂಥ ಸಾಲುಗಳು ಅವರ ಸ್ಫೂರ್ತಿಯ ಕೇಂದ್ರವನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಕಣವಿಯವರ ಕಾವ್ಯ ತಳೆಯುವ ಎಲ್ಲ ಧೋರಣೆಗಳು - ಅವು ಇತ್ಯಾತ್ಮಕವಿರಲಿ ಅಥವಾ ನೇತ್ಯಾತ್ಮಕವಿರಲಿ- ಈ ನೆಲೆಗೆ ಸಂಬಂಧಪಟ್ಟವುಗಳು. ಯಾಕೆಂದರೆ ಇದು ಅವರ ಕಾವ್ಯ ಪ್ರಕೃತಿಯ ಮೂಲಧರ್ಮವಾಗಿದೆ.

೩

ನವೋದಯ ಕಾವ್ಯ ತನ್ನ ಸಿದ್ಧಿಯ ಪರಾಕಾಷ್ಠೆಯನ್ನು ತಲುಪಿದ್ದ ಕಾಲದಲ್ಲಿ, ಅದೂ ಕೂಡ ಅದರ ಪ್ರಮುಖ ಕೇಂದ್ರಗಳಲ್ಲೊಂದಾದ ಧಾರವಾಡದಲ್ಲಿ, ತಮ್ಮ ಕಾವ್ಯೋದ್ಯೋಗವನ್ನು ಪ್ರಾರಂಭಿಸಿದ ಕಣವಿಯವರು ಸಹಜವಾಗಿಯೇ ಅದರ ಪ್ರಭಾವಕ್ಕೆ ಒಳಗಾದರು. ಬೇಂದ್ರೆ, ಮಧುರಚೆನ್ನ, ಆನಂದಕಂದರೇ ಮೊದಲಾದ ಗೆಳೆಯರ ಗುಂಪಿನ ಕವಿಗಳ ಕಾವ್ಯಪ್ರಯೋಗಗಳು ಅವರನ್ನು ಆಕರ್ಷಿಸಿದವು. ಗೆಳೆಯರ ಗುಂಪಿನ ನಿಜವಾದ ವಾರಸುದಾರರೆಂದರೆ ಕಣವಿಯವರೇ. ಆದರೆ, ಗುಂಪಿನ ಸತ್ವವನ್ನು ಹೀರಿಕೊಂಡು ಬೆಳೆದರೂ ತಮ್ಮ ಪ್ರತಿಬೆಗೆ ಒಗ್ಗುವಂಥ ಅಂಶಗಳನ್ನು ಮಾತ್ರ ಅವರು ಸ್ವೀಕರಿಸಿದ್ದರಿಂದ ತಮ್ಮ ಸ್ವಂತಿಕೆಯನ್ನು ಎಂದೂ ಕಳೆದುಕೊಳ್ಳಲಿಲ್ಲ. ಗುಂಪಿನ ಹೊರಗಿನ ಮಹತ್ತ್ವದ ಕವಿಗಳಾದ ಕುವೆಂಪು, ಪು.ತಿ.ನ., ಕೆ.ಎಸ್. ನರಸಿಂಹಸ್ವಾಮಿಯವರಂಥ ಸತ್ವಶಾಲೀ ಕವಿಗಳ ಕಾವ್ಯಪ್ರಯೋಗಗಳಿಗೂ ತಮ್ಮನ್ನು ತೆರೆದುಕೊಂಡರಲ್ಲದೆ, ಇಂಗ್ಲಿಷ್ ಸಾಹಿತ್ಯದ ವಿದ್ಯಾರ್ಥಿಯಾಗಿ ರೊಮ್ಯಾಂಟಿಕ್ ಕಾವ್ಯ ಪರಂಪರೆಗೆ ನೇರವಾಗಿಯೇ ಪ್ರತಿಕ್ರಿಯಿಸಿದರು. ಈ ಪ್ರಭಾವಗಳು ಸೃಜನಶೀಲ ಸ್ವರೂಪವಾದ್ದರಿಂದ ಅವರ ಪ್ರಜ್ಞೆ, ಪ್ರತಿಭೆಗಳ ವಿಕಾಸಕ್ಕೆ ಪೋಷಕವಾದವು. ಒಂದೇ ಮಧ್ಯಬಿಂದುವಿನಿಂದ ಹುಟ್ಟಿಕೊಳ್ಳುವ ವರ್ತುಳಗಳ ವಿಕಾಸಕ್ರಮ ಅವರ ಕಾವ್ಯಸಾಧನೆಯ ಮೂಲ ಆಕೃತಿ. ಬೇಂದ್ರೆ ಮತ್ತು ಅಡಿಗರಲ್ಲಿ ಕಂಡುಬರುವ ಕ್ರಾಂತಿಕಾರೀ ಲಂಘನದ ಮಾರ್ಗ ಅವರದಲ್ಲ. ನೆಲಮುಗಿಲಿಗೆ ಬರೆದ ನಾಲ್ಕು ಮಾತುಗಳಲ್ಲಿ ಬೇಂದ್ರೆಯವರು ಕಣವಿಯವರ ಕಾವ್ಯ ಸ್ವರೂಪದ ಸಾಮಾನ್ಯ ಲಕ್ಷಣವನ್ನು ಸರಿಯಾಗಿಯೇ ಗುರುತಿಸಿದ್ದಾರೆ.

> 'ಕಾವ್ಯಾಕ್ಷಿ'ಯ ಮುನ್ನುಡಿಯಲ್ಲಿ ನಾನು ಹೇಳಿದ ಮಾತು ಇಂದೂ ಹೇಳಬಹುದು. ಜಾತಿ ಅದೇ. ಆದರೆ ಒಂದು ಪೊಗರು ಕಣ ಕಣದಲ್ಲಿ ಪಿಂಡಗೊಂಡಿದೆ. ವಿನಯವೂ ಅಷ್ಟೇ ದಿಟವಾಗಿದೆ. ವಿನಯ ಹಳಸುವ ಬದುಕಲ್ಲ, ವಿಶಿಷ್ಟಕ್ಕೆ ತೊಡಕಲ್ಲ.

ಇದನ್ನು 'ಧಾರವಾಡದ ತತ್ತ್ವ'ವೆಂದು ಬೇಂದ್ರೆಯವರು ಕರೆದಿದ್ದಾರೆ.

ಕಣವಿಯವರ ಪ್ರಕೃತಿಗೀತಗಳು ಈ ಮಾತಿನ ಸತ್ಯತೆಯ ಉತ್ತಮ ದಾಖಲೆಗಳಾಗಿವೆ. ಮೊದಲ ಕಾವ್ಯ ಸಂಗ್ರಹವಾದ ಕಾವ್ಯಾಕ್ಷಿ (೧೯೪೯) ಯಿಂದ ತೀರ ಇತ್ತೀಚಿನ ಜೀನಿಯಾ (೧೯೮೯)ದ ವರೆಗಿನ ಅವರ ಎಲ್ಲ ಸಂಕಲನಗಳಲ್ಲಿಯೂ ಪ್ರಕೃತಿಗೀತಗಳಿವೆ. ನುಡಿಛಂದ (Stanzaic form), ಮುಕ್ತಛಂದ, ಸಾನೆಟ್ ಇಂಥ ಅನೇಕ ಛಂದೋರೂಪಗಳನ್ನು ಅವರು

ಬಳಸಿದ್ದಾರಾದರೂ ಈ ಎಲ್ಲ ಕವಿತೆಗಳ ಮೂಲ ರಚನೆ ಒಂದೇ ರೀತಿಯದು. ಇದನ್ನು ಎಮ್.ಎಚ್. ಏಬ್ರಮ್ಸ್‌ರ ಪರಿಭಾಷೆಯಲ್ಲಿ ವರ್ಣಕ-ಚಿಂತಕ ಕವಿತೆ (descriptive - meditative poem) ಎಂದು ಕರೆಯಬಹುದು. ವರ್ಣಕ-ಚಿಂತಕ ಕವಿತೆಯ ಮುಖ್ಯ ಅಂಶಗಳೆಂದರೆ, ಕವಿಯ ನಿರ್ದಿಷ್ಟ ಉಪಸ್ಥಿತಿ, ನಿಸರ್ಗದ ವರ್ಣನೆ ಬಾಹ್ಯದೃಶ್ಯಗಳೊಡನೆ ಸಂಬಂಧ ಬೆಳೆಸುವ ನೆನಪು-ವಿಚಾರಗಳನ್ನೊಳಗೊಂಡ ಮಾನಸಿಕ ಕ್ರಿಯೆ, ಕವಿ ದೊರಕಿಸುವ ಒಳನೋಟಗಳು ಮತ್ತು ನೈತಿಕ ತಿಳಿವು. ಕಣವಿಯವರ ಪ್ರಮುಖ ಪ್ರಕೃತಿಗೀತಗಳಾದ 'ಮೇಘೋಪಾಸನೆ', 'ಶ್ರಾವಣದ ಲಾವಣ್ಯ', 'ಮತ್ತೊಂದು ಪುಟ್ಟ ಹಕ್ಕಿಗೆ', 'ಹೊಸ ಹುಟ್ಟು', 'ಮೊದಲ ಮಳೆ', 'ಹುಲ್ಲು', 'ಕಾರ್ತಿಕದ ಮೋಡ' - ಇವೆಲ್ಲ ಈ ಮೂಲ ರಚನೆಯನ್ನೇ ವಿವಿಧ ಪ್ರಕಾರಗಳಲ್ಲಿ ಬಳಸಿಕೊಳ್ಳುತ್ತವೆ. ಮೊತ್ತಮೊದಲಿನ ಕವಿತೆಗಳಲ್ಲೊಂದಾದ 'ಮೇಘೋಪಾಸನೆ' ಮತ್ತು ಇತ್ತೀಚಿನ ರಚನೆ 'ಈ ವರ್ಷ ಕಂಡ ಮಳೆಗಾಲ' ಇವುಗಳಲ್ಲಿ ರಚನೆಯ ದೃಷ್ಟಿಯಿಂದ ವಿಶೇಷ ಅಂತರವಿಲ್ಲ. 'ಮೇಘೋಪಾಸನೆ'ಯ ಮೇಲೆ ಬೇಂದ್ರೆಯವರ ದಟ್ಟ ಪ್ರಭಾವವಿದೆ. ಅದರ ಛಂದಸ್ಸು ಕೂಡ ಮೇಘದೂತದ್ದು. ಬಾನಬಟ್ಟೆಯಲ್ಲಿ ಓಡುತ್ತಿರುವ ಮೋಡಗಳ ವರ್ಣನೆಯೊಂದಿಗೆ ಕವಿತೆ ಪ್ರಾರಂಭವಾಗುತ್ತದೆ. ಆರನೆಯ ಪದ್ಯದಿಂದ ಕವಿಯ ದನಿ ಸ್ಪಷ್ಟವಾಗಿ ಕೇಳತೊಡಗುತ್ತದೆ. ವಿಸ್ಮಯ, ಜಿಜ್ಞಾಸೆ, ಸೌಂದರ್ಯಾನುಭೂತಿ ಇಂಥ ಭಾವಗಳು ಈ ದನಿಯಲ್ಲಿ ಮೂಡಿಬರುತ್ತವೆ. ಹದಿನಾರನೆಯ ಪದ್ಯದಲ್ಲಿ ಕವಿಯ ಬಾಲ್ಯದ ನೆನಪುಗಳ ಸ್ಮರಣೆಯಿದೆ. ಕೊನೆಯ ಮೂರು ಪದ್ಯಗಳಲ್ಲಿ ಮೋಡಗಳೊಂದಿಗಿನ ತಾದಾತ್ಮ್ಯದಿಂದ ಕವಿ ದೊರಕಿಸುವ ಒಳನೋಟಗಳ, ತಾತ್ವಿಕ ತಿಳಿವಿನ, ವೈಯಕ್ತಿಕ ಆಕಾಂಕ್ಷೆಗಳ ವರ್ಣನೆಯಿದೆ. 'ಈ ವರ್ಷ ಕಂಡ ಮಳೆಗಾಲ'ದಲ್ಲಿ ನಾಟಕೀಯತೆ, ಮುಕ್ತಛಂದಗಳಂಥ ಹೊಸ ಅಂಶಗಳು ಎದ್ದು ಕಾಣುತ್ತವೆ. ಆದರೆ ಇಲ್ಲಿಯೂ ಕೂಡ ವರ್ಣಕ-ಚಿಂತಕ ರಚನೆಯ ಮೂಲರೂಪವನ್ನು ಸಹಜವಾಗಿ ಗುರುತಿಸಬಹುದು. ಈ ಕವಿತೆ ಮೂರು ಭಾಗಗಳಲ್ಲಿದೆ. ಮೊದಲಿನ ಭಾಗದಲ್ಲಿ ಮೋಡಗಳ ಅತ್ಯಂತ ಆಕರ್ಷಕವಾದ, ನಾಟ್ಯಮಯವಾದ ವರ್ಣನೆಯಿದೆ. ಈ ಭಾಗದ ಕೊನೆಯ ಸಾಲಿನಲ್ಲಿ ('ಯಾವ ನಾಟಕದ ರಂಗ ತಾಲೀಮೋ ಅಲ್ಲಿ ಮೇಲೆ') ತಾದಾತ್ಮ್ಯದ ಸ್ಥಿತಿಯಿಂದ ಹೊರಬಂದ ಕವಿಯ ಸ್ವಂತದ ದನಿಯ ಉದ್ಗಾರವಿದೆ. ಎರಡನೆಯ ಭಾಗದಲ್ಲಿಯೂ ವರ್ಣನೆಯಿದೆ. ಆದರೆ ಇದರ ವಸ್ತು ಮಳೆಗಾಲದಲ್ಲಿ ನಡೆಯುವ ಮಾನವೀಯ ಘಟನೆಗಳು. ಮೂರನೆಯ ಭಾಗದಲ್ಲಿ ಕವಿಯ ಸಾಮಾಜಿಕ ಚಿಂತನೆಯ ವಿವಿಧ ಮುಖಗಳನ್ನು ಕಾಣುತ್ತೇವೆ. ಇದು ತೀರ ಕ್ಯಾಜ್ಯುಅಲ್ (casual) ಎನಿಸಬಹುದಾದ ಧಾಟಿಯಲ್ಲಿ ಮೂಡಿಬಂದರೂ ಅದರ ಮುಕ್ತಾಯದಲ್ಲಿ ಮಾತ್ರ ಸೃಷ್ಟಿಯ ಮೂಲಗುಣವಾದ ಹೊಸ ಹುಟ್ಟಿನ ಸೂಚನೆಯಿದೆ. ಹೀಗೆ, ವರ್ಣಕ-ಚಿಂತಕ ಭಾವಗೀತದ ಅನೇಕ ರೂಪಗಳಲ್ಲಿ ಕಣವಿಯವರು ನಿಸರ್ಗದೊಡನೆ ಬೆಳೆಸಿಕೊಂಡು ಬಂದ ಸಂಬಂಧ ಮೂಡಿಬಂದಿದೆ.

ನವೋದಯ ಪ್ರಕೃತಿಕಾವ್ಯದ ಅನೇಕ ಗುಣಗಳನ್ನು ಕಣವಿಯವರು ತಮ್ಮಲ್ಲಿ ಅನಾಯಾಸವಾಗಿ ಮೈಗೂಡಿಸಿಕೊಂಡರು. ಬೇಂದ್ರೆಯವರ ಕಾವ್ಯದಲ್ಲಿ ಅವರು ಮುಖ್ಯವಾಗಿ ಮೆಚ್ಚಿಕೊಂಡದ್ದು ಶಬ್ದ-ನಾದ-ಲಯಗಳ ಮೇಲಿದ್ದ ಅವರ ಪ್ರಭುತ್ವ. ಬೇಂದ್ರೆಯವರಂತೆ

ಅವರು ಕೂಡ ಹಾಡುವ ಕವಿ (singing poet), ಯೇಟ್ಸ್‌ನ ಅರ್ಥದಲ್ಲಿ. ಆದರೆ ಬೇಂದ್ರೆಯವರ ಪ್ರಕೃತಿ ಗೀತಗಳಲ್ಲಿ ಅಭಿವ್ಯಕ್ತವಾಗುವ ರಸಪ್ರಜ್ಞೆಯಾಗಲಿ, ಪರಿವರ್ತನಶೀಲ ಸಾಂಕೇತಿಕತೆಯಾಗಲಿ, ಆಧ್ಯಾತ್ಮಿಕತೆಯಾಗಲಿ ಕಣವಿಯವರಲ್ಲಿ ಕ್ವಚಿತ್ತಾಗಿ ಮಾತ್ರ ಕಂಡುಬರುತ್ತವೆ. ಅದೇ ರೀತಿ, ಕುವೆಂಪುರವರ ಪ್ರಕೃತಿ ಗೀತಗಳ ತಾದಾತ್ಮ್ಯ ಗುಣವನ್ನು ಅವರು ಸ್ವೀಕರಿಸುತ್ತರಾದರೂ ಪ್ರಕೃತಿಯ ದೈವೀಕರಣಕ್ಕಾಗಲಿ, ಭೂಮಾನುಭೂತಿಯ ಸಾಹಸಕ್ಕಾಗಲಿ ಕೈ ಹಾಕುವುದಿಲ್ಲ. ಭೂಮದ ಬಯಕೆ ಕಣವಿಯವರಲ್ಲಿ ಇಲ್ಲವೆಂದಲ್ಲ. ಆದರೆ ಇದು ಹೆಚ್ಚಾಗಿ ಮಾನವ ಕೇಂದ್ರಿತವಾಗಿದೆ. ಮಾನವ ಸಂಸ್ಕೃತಿಯ ಎಲ್ಲ ಕ್ಷೇತ್ರಗಳಲ್ಲಿಯ ವಿಭೂತಿಗಳನ್ನು ಕುರಿತು ಅವರು ಬರೆದಿರುವ ಹಲವಾರು ಸುನೀತಗಳ ಹಿಂದಿನ ಮುಖ್ಯ ಪ್ರೇರಣೆ ಭೂಮದ ಅರಸುವಿಕೆಯೆ ಆಗಿದೆ ಎಂದು ಹೇಳಬಹುದು. ಹೀಗೆ, ನವೋದಯ ಕವಿಗಳ ಪ್ರಮುಖ ಮಾಧ್ಯಮಗಳಲ್ಲೊಂದಾದ ಪ್ರಕೃತಿ ಗೀತವನ್ನು ಸ್ವೀಕರಿಸುವ ವಿಧಾನದಲ್ಲಿಯೇ ಕಣವಿಯವರು ತಮ್ಮ ಆಯ್ಕೆಯ ಸ್ವಾತಂತ್ರ್ಯವನ್ನು ತೋರಿದ್ದಾರೆ. ಈ ಸಂದರ್ಭದಲ್ಲಿ ಇನ್ನೊಂದು ಅಂಶವನ್ನೂ ಲಕ್ಷಿಸಬಹುದು. ಕಣವಿಯವರ ಪ್ರಕೃತಿಗೀತಗಳ ಮೂಲರಚನೆ ರೊಮ್ಯಾಂಟಿಕ್ ಕಾವ್ಯಮಾರ್ಗದಿಂದ ಬಂದುದಾದರೂ ಅದು ನಿಯೋಕ್ಲಾಸಿಕಲ್ (neoclassical) ಅಥವಾ ಆಗಸ್ಟನ್ (Augustan) ಎಂದು ಕರೆಯಬಹುದಾದ ಗುಣಗಳನ್ನೂ ಒಳಗೊಂಡಿರುವುದು. ಕಣವಿಯವರ ಭಾಷೆಯಲ್ಲಾಗಲಿ, ರೂಪಕಗಳಲ್ಲಾಗಲಿ ಅಸ್ಪಷ್ಟತೆ, ದುರೂಹತೆಗಳು ಕಂಡುಬರುವುದಿಲ್ಲ. ಕವಿತೆಗಳ ಬೆಳವಣಿಗೆಯ ಕ್ರಮ ತಾರ್ಕಿಕ ಸುಸಂಬದ್ಧತೆಯನ್ನು ಎಂದೂ ಬಿಟ್ಟುಕೊಡುವುದಿಲ್ಲ.

ಕಣವಿಯವರ ಪ್ರಕೃತಿಗೀತಗಳ ಮುಖ್ಯ ಸಾಧನೆಯೆಂದರೆ, ತಮ್ಮ ಸಾಮರ್ಥ್ಯದ ಕ್ಷೇತ್ರದಲ್ಲಿ ಅವು ದೊರಕಿಸುವ ಯಶಸ್ಸು. ಸಾಮಾನ್ಯವಾಗಿ, ವರ್ಣಕ-ಚಿಂತಕ ಕವನಗಳಲ್ಲಿ ಚಿಂತನೆಗೆ ಪ್ರಾಮುಖ್ಯವಿರುತ್ತದೆ. ಆದರೆ ಕಣವಿಯವರ ಕವಿತೆಗಳಲ್ಲಿ ವರ್ಣನೆಯದೇ ಮೇಲುಗೈ. ಶ್ರೇಷ್ಠ ದರ್ಜೆಯ ಕಲ್ಪಕತೆಗೆ ಮಾತ್ರ ಸಾಧ್ಯವಾಗುವ ಅನೇಕ ಶಬ್ದಚಿತ್ರಗಳನ್ನು ಅವರು ಸೃಷ್ಟಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಬಹುದು:

ಉಣ್ಣೆಯಾಗಿ ಮಿದುಬೆಣ್ಣೆಯಾಗಿ ಹಿಂಜಿರುವ ಅರಳೆಯಾಗಿ
ತೊಟ್ಟಿಲಾಗಿ ತೂಗುವವು ಮೋಡಪಡೆ ನಡೆವ ಬೆಟ್ಟವಾಗಿ
'ಮೇಘೋಪಾಸನೆ'

ಬಾನ ಸಾಣೆಗೆ ಹಿಟ್ಟು ಸಣ್ಣಿಸಿ-
ದಂತೆ ಜಿನುಗಿದೆ ಸೋನೆಯು
'ಶ್ರಾವಣದ ಲಾವಣ್ಯ'

ಸಾಲಾಗಿ ನವಿಲು ಗರಿಗೆದರಿ ನರ್ತಿಸಿದಂತೆ
ಮುಂಜಾವದಲಿ ಬೇಲಿ ತುಂಬ ನೀಲಿಯ ಹೂವು
'ಬೇಲಿಯ ಮೇಲಿನ ನೀಲಿಯ ಹೂಗಳು'

ಹಚ್ಚನೆ ಹಸುರೆಲ್ಲವು ಬಂಗಾರದ
ಬಿಸಿಲನು ಹೊದ್ದು ಸಿಂಗಾರಾಯಿತು.
ತುಂಬಿದ ಕೆರೆ-ತೆರೆಯಲಿ ಕಚಕುಳಿ
ಹಕ್ಕಿಯು ಹಾರಿದ ರೆಕ್ಕೆಯ ಪಟಪಟ ಸದ್ದು
ಹನಿಹನಿಗಳ ವರ್ತುಲ, ಅಂಚಿಗೆ ಅಲೆ ಅಲೆ ಮುದ್ದು.
'ಮತ್ತೆಮಳೆ'

ಬಾನಬೀದಿಗೆ ಜೋಲಿ ಹೊಡೆದು ಉರುಳಿವೆ ಮೋಡ
ಪಡುವಣದ ಪಡಖಾನೆಯಿಂದ ತೂರಿ;
ಬೇಕು ಬೇಕಾದತ್ತ ಹೊರಳಿ ಅಸ್ತವ್ಯಸ್ತ
ಸುಸ್ತಾಗಿ ಬಿದ್ದಿಹವು ನೆರಳು ಕಾರಿ
'ಮಧ್ಯಾಹ್ನದ ಮಜಲು'

ನವೋದಯ ಕಾವ್ಯದ ಆಸ್ಥೆಗಳ ಇನ್ನೊಂದು ಪ್ರಮುಖ ಕೇಂದ್ರ ಕಾಮ, ಪ್ರೇಮ, ಸ್ನೇಹ, ವಾತ್ಸಲ್ಯ ಇಂಥ ಅನೇಕ ರೂಪಗಳಲ್ಲಿ ಕಂಡುಬರುವ ಮಾನವೀಯ ಸಂಬಂಧ. ಈ ಮಾತು ಕಣವಿಯವರ ಕಾವ್ಯಕ್ಕೂ ಅನ್ವಯಿಸುತ್ತದೆ. ಇಲ್ಲಿಯೂ ಕೂಡ ಬೇಂದ್ರೆ, ಕುವೆಂಪು, ಮಧುರಚೆನ್ನ, ಪು.ತಿ.ನ, ಕೆ.ಎಸ್.ನ. ಮೊದಲಾದ ಹಿರಿಯ ಕವಿಗಳು ತುಳಿದ ಹಾದಿ ಕಣವಿಯವರಿಗೆ ಮಾರ್ಗದರ್ಶಕವಾಯಿತಾದರೂ ಅವರು ತಮ್ಮ ವೈಶಿಷ್ಟ್ಯವನ್ನು ಬಿಟ್ಟುಕೊಡಲಿಲ್ಲ. ವಿನಾಯಕರು ಗುರುತಿಸಿದಂತೆ ಮಧುರಗೀತ, ಸಖೀಗೀತಗಳ ಪರಂಪರೆಯಲ್ಲಿಯೇ ಬಂದ ಭಾವಜೀವಿ (೧೯೪೫)ಯಲ್ಲಿ ಕಾಮ, ಪ್ರೇಮ, ಗೆಳೆತನಗಳ ಬಗ್ಗೆ ಕಣವಿಯವರು ತಳೆಯುವ ಸೈದ್ಧಾಂತಿಕ ನಿಲುವಿನಲ್ಲಿ ಬೇಂದ್ರೆ, ಮಧುರಚೆನ್ನರ ಪ್ರಭಾವವನ್ನು ಸಹಜವಾಗಿ ಗುರುತಿಸಬಹುದು. ಉದಾಹರಣೆಗೆ,

ಸ್ವಾರ್ಥವಿರದಿಹ ಪ್ರೇಮ ನಿಸ್ಸೀಮದಾರಾಮ
ಹೋಮಾಗ್ನಿಯಂತಿಹುದು ಪ್ರೇಮಾಗ್ನಿಯು;
ಪತನ ಹೊಂದುವ ಆ ಪತಂಗದಂತಿದೆ ಕಾಮ
ಪ್ರೇಮ ಚಿನ್ನವ ಸುಡುವ ದಿವ್ಯಾಗ್ನಿಯು.
ಭಾವಜೀವಿ

ಈ ಸಾಲುಗಳಿಗೆ ಬೇಂದ್ರೆಯವರ ಮೇಘದೂತದ ಪೀಠಿಕೆ ಪ್ರೇರಣೆಯಿತ್ತಂತೆ
ಸಖ್ಯವಿಲ್ಲದ ಜೀವ ಲಕ್ಷ್ಯವಿಲ್ಲದ ಬಾಣ
ಅಥವಾ
ನೂರು ಜಂಜಾಟಗಳು ಹೆಡಮುರಿಗೆ ಕಟ್ಟಿದರು
ಗೆಳೆತನವೆ ಬಾ ಬಾರ ಎಂದುಸುರುವೆ
ಭಾವಜೀವಿ

ಎಂಬ ಹೇಳಿಕೆಗಳಲ್ಲಿ ಮಧುರಗೀತದ ಆಶಯವೇ ಅಡಗಿದೆ. ಹೀಗಿದ್ದರೂ ಬೇಂದ್ರೆಯವರ ಕಾವ್ಯದಲ್ಲಿ ಕಂಡುಬರುವ ಒಲವಿನ ದರ್ಶನದ ಪರಿಪೂರ್ಣತೆಯನ್ನಾಗಲಿ, ಮಧುರಚೆನ್ನರ ಕಾವ್ಯದಲ್ಲಿ ಅಭಿವ್ಯಕ್ತವಾಗುವ, ವ್ಹಿಟ್‌ಮನ್ ಕಾವ್ಯದ ತೀವ್ರತೆ (intensity)ಯನ್ನು ನೆನಪಿಗೆ ತಂದುಕೊಡುವ, ಗೆಳೆತನದ ಅನುಭಾವವನ್ನಾಗಲಿ, ಕಣವಿಯವರಲ್ಲಿ ನಾವು ಅಪೇಕ್ಷಿಸುವಂತಿಲ್ಲ. ಈ ಕ್ಷೇತ್ರದಲ್ಲಿಯೂ ಕೂಡ ಅವರು ಯಶಸ್ಸು ಪಡೆಯುವುದು ತಮ್ಮ ಅನುಭವದ ಮಿತಿಯಲ್ಲಿಯೇ ತಮ್ಮ ಪ್ರತಿಭೆಯನ್ನು ದುಡಿಸಿಕೊಳ್ಳುವುದರ ಮೂಲಕ.

ಗೆಳೆತನದ ಬಗ್ಗೆ ಕಣವಿಯವರು ಬರೆದ ಕವಿತೆಗಳು ಅವರ ಕಾವ್ಯ ಜೀವನದ ಮೊದಲ ಹಂತಕ್ಕೆ ಮಾತ್ರ ಸೀಮಿತವಾಗಿವೆ. ಇದರ ಅರ್ಥ, ಮುಂದೆ ಸ್ನೇಹ ಒಂದು ಮೌಲ್ಯವಾಗಿ ಉಳಿಯುವುದಿಲ್ಲವೆಂದಲ್ಲ. ದೀಪಧಾರಿ (೧೯೫೬) ಸಂಗ್ರಹದ 'ಚಿಂತನ' ಹಿನ್ನೋಟವಾದರೂ ಸ್ನೇಹಸೂಕ್ತವೇ ಆಗಿದೆ:

ಅಲ್ಲೊಬ್ಬರು
ಇಲ್ಲೊಬ್ಬರು
ಬಾಳ ಕವಲು ದಾರಿಯಲ್ಲಿ
ಸಾಗಿದತಿಥಿಗಳೆಯರು;
ನೋವಿನೆಳೆಯ ಜಗ್ಗಿದಂತೆ
ನೆನಹಿನೊಡನೆ ಬರುವರು.

ಭಾವಜೀವಿ, ಆಕಾಶಬುಟ್ಟಿ (೧೯೫೩) ಸಂಗ್ರಹಗಳಲ್ಲಿ ಬರುವ ಸಖ್ಯಗೀತಗಳಲ್ಲಿ ಈ ವಿಷಾದದ ದನಿಯಿಲ್ಲ. ಇಲ್ಲಿ ಗೆಳೆತನ ಒಂದು ಜ್ವಲಂತ ಅನುಭವವಾಗಿ ಅಭಿವ್ಯಕ್ತಿ ಪಡೆದಿದೆ:

ಮೋಟುಮರ ಚಿಗುರೊಡೆದು ಫಲಫಲಿಸಿತೆನ್ನುವೊಲು
ಗೆಳೆತನವು ರಸಧಾರೆ ಧಾರೆಯಾಗಿ
ಸುರಿದು ಸಂಜೀವನವನಿತ್ತು ಚೇತನಗೊಳಿಸಿ
ರೂಪಿಸಿರೆ ನಾನಾದೆ ಸಖ್ಯಯೋಗಿ

ಭಾವಜೀವಿ

ಆದರೂ ಮಧುರಚೆನ್ನರ ಮಧುರಗೀತದ ಉತ್ಕಟತೆ, ಆಧ್ಯಾತ್ಮಿಕತೆಗಳಿಂದ ಕಣವಿಯವರು ದೂರವೇ ಉಳಿಯುತ್ತಾರೆ. ಅದೊಂದು ಸೃಷ್ಟ್ಯಾತ್ಮಕ ಪ್ರೇರಣೆಯೆ ಹೊರತು,

ತುಟಿಗೆ ತುಟಿ ಹಚ್ಚಿ ನಾವಾತ್ಮ ರುಚಿ ನೋಡಿದೆವು
ಎದೆಗೆ ಎದೆ ಹಚ್ಚಿ ತೆರೆ ಹಾರಿಸಿದೆವು
ಗುಟುಗುಟುಕು ಹೀರಿದೆವು ತಲೆಯ ಕಮಲದ ಗಂಧ
ನೋಡ ನೋಡುತ ಕಾಲ ಖಂಡಿಸಿದೆವು

ಮಧುರಗೀತ

ಇಂಥ ಸಾಲುಗಳು ಪ್ರತಿಮಿಸುವ ಪೂರ್ಣಾನುಭೂತಿಯಿಲ್ಲ.

ಗಂಡು ಹೆಣ್ಣಿನ ಪ್ರೇಮ, ಗೆಳೆತನಕ್ಕಿಂತಲೂ ಆಳವಾದ ಅನುಭವವಾಗಿ ಕಣವಿಯವರ ಕವಿತೆಗಳಲ್ಲಿ ಮೂಡಿಬರುತ್ತದೆ. ವಾತ್ಸಲ್ಯಗೀತಗಳಿಗೆ ಹೋಲಿಸಿದರೆ ಪ್ರೇಮಗೀತಗಳು ಅವರ ಕಾವ್ಯಜೀವನದ ಒಂದು ಹಂತದಲ್ಲಿ ಮಾತ್ರ ಕಾಣಿಸಿಕೊಂಡರೂ ಅವುಗಳಲ್ಲಿ ಹೆಚ್ಚಿನ ಶ್ರೀಮಂತಿಕೆಯಿದೆ. ಪ್ರಣಯಭಾವದ ಹೊಸ ಅನುಭವ, ಸಾಮಾಜಿಕ ವಿಘ್ನಗಳಿಂದುಂಟಾದ ಪ್ರಣಯಭಂಗದ ನೋವು, ಕಾವ್ಯದ ಉಪಾಸನೆಯಲ್ಲಿ ಈ ಅನುಭವಗಳ ರೂಪಾಂತರ ಭಾವಜೀವಿಯ ಆತ್ಮ ನಿವೇದನೆಗೆ ವಸ್ತುವನ್ನೊದಗಿಸಿದರೆ, **ಮಧುಚಂದ್ರ** (೧೯೫೪)ದ ಕವಿತೆಗಳಲ್ಲಿ ಪ್ರೇಮದ ದ್ವೈತಾದ್ವೈತಗಳು ಗರಿಗೆದರಿವೆ. ಗುಲಾಬಿ, ಮಲ್ಲಿಗೆಗಳಿಗೆ ಸೀಮಿತವಾದ ರೂಪಕದ ಭಾಷೆ ಸಾಂಪ್ರದಾಯಿಕವೆನಿಸಿದರೂ ಇಲ್ಲಿ ಪ್ರೇಮದ ಅನುಭವ ಹಾಡಿನಲ್ಲಿ ಹೊರಹೊಮ್ಮುವ ಸೌಂದರ್ಯ ಅನ್ಯಾದೃಶವಾಗಿದೆ: ('ಇಲ್ಲಿ ಎಲ್ಲ ಪ್ರೀತವು ಮಾತು ಕೂಡ ಗೀತವು') ಈ ಪ್ರೇಮಗೀತಗಳ ವೈಶಿಷ್ಟ್ಯವಿರುವುದು. ಸುಸಂಸ್ಕೃತ ಭಾವನೆಗಳ ಅಭಿವ್ಯಕ್ತಿಗೆ ಜಾನಪದ ಮೂಲದ ದೇಸಿಯನ್ನು ಬಳಸುವುದರಲ್ಲಿ. ಇದು 'ಗಿರಿ ಗಿರಿ ಗಿಂಡಿ' ಯಂಥ ಕವನಗಳಲ್ಲಿ ಇಡಿಯಾಗಿ ಕಂಡರೆ ಉಳಿದ ಕವನಗಳಲ್ಲಿ ಅಂಶಿಕ ರೂಪದಲ್ಲಿದೆ. ಉದಾಹರಣೆಗೆ ಕೆಳಗಿನ ಸಾಲುಗಳನ್ನು ನೋಡಬಹುದು:

ನಿನ್ನ ಕಂಡ ಚಣದೊಳೆನ್ನ
ಕಂಗಳ ಬರ ಹಿಂಗಿತು

' -ಗೆ'

ಮನೆಯೊಳಗೆ ಅತ್ತಿತ್ತ ಕಾಲು ಸುಳಿದಾಡುತಿವೆ
ಕಂಡು ಕಂಡೂ ಕಣ್ಣು ಹುಡುಕುತಿಹವು;
ಸುಮ್ಮಸುಮ್ಮನೆ ಕಿವಿಗಳೇನೊ ಆಲಿಸಿದಂತೆ. . .
ತಮ್ಮ ರೂಢಿಗೆ ತಾವೆ ನಾಚುತಿಹವು.
ಅಡುಗೆಮನೆಯೊಳು ಬರಿಯ ಹೊಗೆಯಾಡಿದಂತಿಹುದು
ದಿನದ ಗುಂಜಾರವದ ನಿನದವಿಲ್ಲ;
ನಡುಮನೆಗು ಪಸರಿಸುವ ನಗೆಯ ಸುಳಿವೇ ಇಲ್ಲ;
ಸಜ್ಜೆವನೆ ಪಡಿಪಾಟು ಶಿವನೆ ಬಲ್ಲ.

'ವಿರಹ ಕೂಜನ'

ಕಣವಿಯವರ 'ಸಖ್ಯದ ಆಖ್ಯಾನ'ದಲ್ಲಿ 'ಕಟು ಮಧುರ ವ್ಯಾಖ್ಯಾನ'ವಿಲ್ಲ. ಆದರೆ ಆನಂದದ ಏಕತಾನತೆಯ ನಡುವೆ 'ನೆನಹು-ನಲ್ಗನಸು' ಮತ್ತು 'ನಲ್ಮೆ'. ಇಂಥ ಕವನಗಳ ವಿಷಾದದ, ನೋವಿನ ದನಿ ಸೇರಿ ತಕ್ಕಮಟ್ಟಿಗಿನ ವೈವಿಧ್ಯವನ್ನು ಒದಗಿಸಿದೆ.

ಕಣವಿಯವರ ವಾತ್ಸಲ್ಯಗೀತಗಳು ಇದಕ್ಕೂ ಹೆಚ್ಚಿನ ವೈವಿಧ್ಯವನ್ನು ಹೊಂದಿವೆ ಎಂದೆನಿಸುತ್ತದೆ. ಪ್ರೇಮಗೀತಗಳಲ್ಲಿಗಿಂತ ಇಲ್ಲಿ ತಾತ್ವಿಕತೆಯ ಅಂಶ ಹೆಚ್ಚು ಸೀಮಿತವಾದದ್ದು. ಪರಿಚಿತ ವಿವರಗಳನ್ನು ಲಯಬದ್ಧ ಭಾಷೆಯಲ್ಲಿ ಹಿಡಿದು (ಶಾಕುಂತಲದ 'ಆಲಕ್ಷ್ಯದಂತ ಮುಕುಲಾನ್' . . . . ಶ್ಲೋಕದಲ್ಲಿಯಂತೆ) ಸಂತೋಷವನ್ನು ಕೊಡುವುದು ಈ ಗೀತಗಳ

ಉದ್ದೇಶ. ಈ ಉದ್ದೇಶಕ್ಕಾಗಿ ಜಾನಪದಭಾಷೆ, ಭಾವನೆಗಳನ್ನು ಕಣವಿಯವರು ತುಂಬ ಸಮರ್ಥವಾಗಿ ಬಳಸಿಕೊಂಡಿದ್ದಾರೆ. 'ಆನಿ ಬಂತವ್ವಾನಿ' ಇಂಥ ಕವಿತೆಗಳ ಮುಖ್ಯ ವಿಧಾನ ಗೇಯತೆಯಾದರೆ, 'ದೀಪಧಾರಿ'ಯ ವಾತ್ಸಲ್ಯಗೀತಗಳ ರಚನೆಯಲ್ಲಿ ಪ್ರತಿಮೆಗಳಿಗೆ ವಿಶೇಷವಾದ ಮಹತ್ವವಿದೆ. ದಿನವಿಡೀ ಆಡಿ ಕುಣಿದ ಮಗು ನಿದ್ರೆ ಹೋದುದನ್ನು ಚಿತ್ರಿಸಿದ ಪಕ್ಷಿಯ ಪ್ರತಿಮೆ ಇದಕ್ಕೆ ಒಂದು ಒಳ್ಳೆಯ ಉದಾಹರಣೆ.

ಏರಿ ಗಗನಕೆ ಹಾರಿ ತೂರಿ ಬಿನ್ನಾಣದಲಿ
ಬಗೆ ಬಗೆಯ ಲಾಗ ಹಾಕಿ,
ಗೂಡಿಗಿಳಿವುದು ಪಾರಿವಾಳ ನೆಟ್ಟಗೆ ಬಂದು
ಬಾನಿನಲಿ ಸಂಜೆಯಾಗಿ

'ಇವನಿಂದಲೇ ನಮಗೆ ಬೈಗು ಬೆಳಗು'

ಇದೇ ಸಂಗ್ರಹದ 'ದೀಪಧಾರಿ' ಬೆಳಕಿನ ಪ್ರತಿಮೆಯನ್ನು ಇನ್ನೂ ಹೆಚ್ಚು ಏಕಾಗ್ರತೆಯಿಂದ ಉಪಯೋಗಿಸುತ್ತದೆ. ಮಣ್ಣಿನ ಮೆರವಣಿಗೆ (೧೯೬೦)ಯ 'ಶಿಶು ಕಂಡ ಕನಸು' ಮತ್ತು ನೆಲ-ಮುಗಿಲಿನ 'ರಂಜನಾ' ಈ ಕವಿತೆಗಳು ಹೆಚ್ಚಿನ ಸಾಂಕೇತಿಕತೆಯತ್ತ ಕೈ ಚಾಚಿವೆ. ಇಲ್ಲಿ ಮಗು ಮತ್ತು ಪ್ರಬುದ್ಧಾವಸ್ಥೆಯ ಮಾನವನ ನಡುವಿನ ಪರಸ್ಪರ ಕ್ರಿಯೆ ಹೆಚ್ಚು ಸಂಕೀರ್ಣವಾಗಿದೆ. ಕಾರ್ತಿಕದ ಮೋಡ (೧೯೮೬)ದಲ್ಲಿ ಬರುವ 'ಈಗಿನ ಮಕ್ಕಳು' ಕವಿತೆಯಲ್ಲಿ ತಾದಾತ್ಮ್ಯದ ಧಾಟಿಯ ಬದಲು ಹೆಚ್ಚು ಬೌದ್ಧಿಕವಾದ ಚಿಂತನದ ಪ್ರಕ್ರಿಯೆ ಇದೆ. ನವ್ಯಕಾವ್ಯದ ಪರಂಪರೆಯಲ್ಲಿಯೂ ವಾತ್ಸಲ್ಯಗೀತೆಗಳನ್ನು ಬರೆದುದು ಕಣವಿಯವರ ವೈಶಿಷ್ಟ್ಯ.

೪

ದೀಪಧಾರಿ (೧೯೫೬)ಗೆ ಬರೆದ ಪ್ರಾಸ್ತಾವಿಕ ಮಾತುಗಳಲ್ಲಿ ಕಣವಿಯವರು ನವ್ಯಮಾರ್ಗಕ್ಕೆ ತಮ್ಮ ಪ್ರತಿಕ್ರಿಯೆಯನ್ನು ಸ್ಪಷ್ಟವಾಗಿ ಸೂಚಿಸಿದ್ದಾರೆ.

"ಕನ್ನಡ ಕವಿತೆ ಈಚೆಗೆ ಒಂದು ಹೊಸ ಆಕೃತಿಯಲ್ಲಿ ನೂತನ ರಚನಾ ವಿಧಾನದೊಂದಿಗೆ ರೂಪುಗೊಳ್ಳುತ್ತಿದೆ 'ನವ್ಯಕಾವ್ಯ'ದ ಹೆಸರಿನಲ್ಲಿ ಅದು ಮತ್ತೊಂದು ಮಜಲು ಮುಂದುವರಿಯುತ್ತಿದೆ. . . . ಇತ್ತೀಚಿನ ಕವನಗಳಲ್ಲೂ-ಶೈಲಿ, ಛಂದ, ಪದಗಳ ಬಳಕೆ, ಒಟ್ಟಂದದ ಪರಿಣಾಮ ಇತ್ಯಾದಿಗಳಲ್ಲಿ ಹಿಂದಿನ ಕವಿತೆಗಳಿಗಿಂತ ವಿಭಿನ್ನವಾದ ಹಾಗೂ ತೀಕ್ಷ್ಣವಾದ ಒಂದು ಹೊಸ ರುಚಿ ಕಂಡುಬರುತ್ತಿದೆ."

ವಿ.ಕೃ. ಗೋಕಾಕರೊಡನೆ ಅವರು ಸಂಪಾದಿಸಿದ ನವ್ಯಧ್ವನಿಯೂ ೧೯೫೬ರಲ್ಲಿಯೇ ಪ್ರಕಟವಾಯಿತು. ಆದರೆ, ಇದಕ್ಕೂ ಮೊದಲೇ ಅವರು ನವ್ಯ ಚಳುವಳಿಯಿಂದ ಪ್ರಭಾವಿತರಾಗಿದ್ದರೆನ್ನುವುದಕ್ಕೆ ದಾಖಲೆಯಿದೆ. ೧೯೫೩-೫೫ರ ಅವಧಿಯಲ್ಲಿ ತಾವೂ ಕಣವಿಯವರು ಜೊತೆಯಾಗಿ ಕುಳಿತೇ ಪಾಶ್ಚಾತ್ಯ ನವ್ಯ ಕೃತಿಗಳನ್ನು ಪರಿಶೀಲಿಸುತ್ತಿದ್ದೆವೆಂದು ಕ.ವೆಂ. ರಾಜಗೋಪಾಲ ತಿಳಿಸಿದ್ದಾರೆ. ೧೯೫೦ರ ಮುಂಬೈ ಸಮ್ಮೇಳನದಲ್ಲಿ ಗೋಕಾಕರು

ಮಾಡಿದ ಭಾಷಣ ಮತ್ತು ೧೯೫೨ರಲ್ಲಿ ಪ್ರಕಟವಾದ ಗೋಪಾಲಕೃಷ್ಣ ಅಡಿಗರ 'ನಡೆದು ಬಂದ ದಾರಿ' ತಮ್ಮ ಸೃಜನಶೀಲತೆಯನ್ನುಳಿಸಿಕೊಳ್ಳಬೇಕೆನ್ನುವ ಎಲ್ಲ ಕವಿಗಳಿಗೂ ಸವಾಲು ಒಡ್ಡಿದವು. ಕಣವಿಯವರ ಕಾವ್ಯದಲ್ಲಿ ಹೊಸ ತಿರುವು ಮೊಟ್ಟಮೊದಲು ಕಂಡುಬಂದದ್ದು **ಆಕಾಶಬುಟ್ಟಿ** (೧೯೫೩)ಯ ಕೆಲ ಕವಿತೆಗಳಲ್ಲಿ. ಈ ಕವನಸಂಗ್ರಹವನ್ನು ವಿಮರ್ಶಿಸಿದ ಅಡಿಗರು ಅವುಗಳನ್ನು 'ಸಂಧಿಕಾಲದ ಪದ್ಯಗಳೆಂ'ದು ಕರೆದು ಬದಲಾವಣೆಯ ಮುಖ್ಯ ಲಕ್ಷಣವಾದ 'ನವ್ಯ ಪರಿಸರದ ಪ್ರಜ್ಞೆ'ಯನ್ನು 'ಬಾಳಕೊರಡು' ಕವಿತೆಯ ಉದಾಹರಣೆಯ ಮೂಲಕ ಗುರುತಿಸಿದರು. ಈ ಕವಿತೆ ರೂಪಕವನ್ನು ಉಪಯೋಗಿಸುವ ನವ್ಯವಿಧಾನವನ್ನು ಒಪ್ಪಿಕೊಂಡೂ ಅದು 'ಹಳೆಯ ಸಂಪ್ರದಾಯದ ಉರುಳಿ'ಗೆ ಸಿಕ್ಕು ತನ್ನ ಕೊನೆಯ ಭಾಗದಲ್ಲಿ ಹೇಗೆ ಶಿಥಿಲವಾಗಿದೆ ಯೆನ್ನುವುದನ್ನು ಅವರು ಎತ್ತಿ ತೋರಿಸಿದರು. ಅಡಿಗರ ಈ ವಿಮರ್ಶೆಗೆ ಕನ್ನಡ ನವ್ಯಕಾವ್ಯದ ಇತಿಹಾಸದಲ್ಲಿ ಮಹತ್ತ್ವದ ಸ್ಥಾನವಿದೆ. ಯಾಕೆಂದರೆ ಅವರು ಇಲ್ಲಿ ಸೂಚ್ಯವಾಗಿ ನವ್ಯಕಾವ್ಯದ ಹಿಂದಿನ ಎರಡು ಮುಖ್ಯ ಪ್ರೇರಣೆಗಳನ್ನೇ ಹೆಸರಿಸಿದ್ದಾರೆ. ಮೊದಲನೆಯದು, ಪ್ರಜ್ಞೆಯ ರೂಪಾಂತರಕ್ಕೆ ಸಂಬಂಧಿಸಿದ್ದು. ಅಮೆರಿಕನ್ ಕವಿ ವಾಲೆಸ್ ಸ್ಟೀವನ್ಸ್ ಹೇಳುವ ಹಾಗೆ ನವ್ಯಕವಿಯ ಉದ್ದೇಶ 'to be nothing more than a poet of the present time'. ಇದನ್ನೇ 'ನವ್ಯ ಪರಿಸರ ಪ್ರಜ್ಞೆ'ಯೆಂದು ಅಡಿಗರು ಕರೆದಿದ್ದಾರೆ. ಇದು ಕೇವಲ ಸಮಕಾಲೀನತೆಯ ಪ್ರಜ್ಞೆಯಷ್ಟೇ ಅಲ್ಲದೆ ವಾಸ್ತವವನ್ನು ಗ್ರಹಿಸುವ ಪ್ರಜ್ಞಾವಿಧಾನವನ್ನೂ ಸೂಚಿಸುತ್ತದೆ. ನವ್ಯಕವಿ ತನ್ನ ಕಾವ್ಯದಲ್ಲಿ ಆಕಾರ ಕೊಡಬಯಸುವುದು ಪ್ರತಿಮೆಗಳಲ್ಲಿ ಮಾತ್ರ ಹಿಡಿಯಬಹುದಾದ ಸಾಕ್ಷಾತ್ಕಾರ ಸ್ವರೂಪದ ಅನುಭವಕ್ಕೆ (immediate experience). ಎಜ್ರಾಪೌಂಡ್ ಕೊಡುವ ಪ್ರತಿಮೆಯ ವ್ಯಾಖ್ಯೆಯ ತಿರುಳೇ ಇದು. ಇಂಥ ಅನುಭವ ಮಾತ್ರ ಇತಿಹಾಸದ ಭಾರದಿಂದ ಮುಕ್ತವಾದ ಭಾವ, ಬುದ್ಧಿಗಳ ಸಂಯುಕ್ತ ಫಲವಾಗಿರುತ್ತದೆ. ಎರಡನೆಯದು ಕಾವ್ಯದ ಸ್ವರೂಪಕ್ಕೆ ಸಂಬಂಧಿಸಿದ ವಿಷಯ. ನವ್ಯಕವಿ ಕಾವ್ಯದಲ್ಲಿ ಶುದ್ಧತೆಯನ್ನು ಬಯಸುತ್ತಾನೆ, ಎಂದರೆ ಕಾವ್ಯಗುಣವಿಲ್ಲದ ಯಾವುದಕ್ಕೂ ಆತ ಆಸ್ಪದ ಕೊಡುವುದಿಲ್ಲ. ಅಡಿಗರ 'ಬಾಳಕೊರಡಿ'ನ ವಿಮರ್ಶೆ ಕವಿತೆಯಲ್ಲಿ ಶುದ್ಧತೆಯನ್ನು ಕಾಯ್ದುಕೊಂಡು ಬರುವುದರ ಮಹತ್ತ್ವವನ್ನೇ ಒತ್ತಿ ಹೇಳುತ್ತದೆ. 'ನಿಷ್ಠುರವಾದ ಆತ್ಮವಿಮರ್ಶೆ ಮತ್ತು ಎರಡಿಲ್ಲದ ಕಲಾಪರಾಧೀನತೆಗಳಿಂದ ಮಾತ್ರ ಇದು ಸಾಧ್ಯ' ಎಂಬ ಅವರ ಮಾತುಗಳ ನವ್ಯತಂತ್ರದ ಬೀಜಮಂತ್ರಗಳಾಗಿವೆ.

'ಈ ಕವಿ ತಂತ್ರವಿನ್ಯಾಸದ ಮಟ್ಟಿಗೆ ಎಂಥ ಸಮನ್ವಯವನ್ನೂ ಸಲೀಸಾಗಿ ಸಾಧಿಸಬಲ್ಲ. ಆದರೆ, ತನ್ನ ಸತ್ತ್ವದಲ್ಲಿ, ಪ್ರತಿಭೆಯ ಪ್ರಭಾವದಿಂದ ಈ ಕವಿ ನವ್ಯರಲ್ಲ. ನವ್ಯ ಇವರಿಗೆ ಸವ್ಯಸಾಚಿತನದ ಒಂದು ಹವ್ಯಾಸ'. ಇದು ಕಣವಿಯವರ ಕಾವ್ಯವನ್ನು ಆಮೂಲಾಗ್ರವಾಗಿ ಪರಿಶೀಲಿಸಿದ ಗೌರೀಶ ಕಾಯ್ಕಿಣಿಯವರು ಹೇಳುವ ಮಾತು. ಆದರೆ ತಂತ್ರವನ್ನು ಕಾವ್ಯದ ಇತರ ಅಂಗಗಳಿಂದ ಬೇರ್ಪಡಿಸುವುದು ಸಾಧ್ಯವಿಲ್ಲ. ಲುಕ್ಯಾಚ್ ಹೇಳುವಂತೆ ಇಂಥ ವಿಧಾನಗಳು ಅಸತ್ಯ ಧ್ರುವೀಕರಣದ ಪ್ರಯತ್ನಗಳಾಗಿವೆ. ಸಾಹಿತ್ಯ ಕೃತಿಗಳಲ್ಲಿ

ಪ್ರಾಮುಖ್ಯವಿರುವುದು ಜೀವನದರ್ಶನಕ್ಕೆ. ಜೀವನದರ್ಶನವನ್ನು ಸಾಕಾರಗೊಳಿಸಲೆಂದೇ ತಂತ್ರ ರೂಪುಗಳ್ಳುವುದರಿಂದ ಆಶಯ, ಆಕಾರಗಳು ಒಂದನ್ನೊಂದು ಬಿಟ್ಟು ಇರುವುದು ಅಶಕ್ಯ. ಕಣವಿಯವರು ತಾಂತ್ರಿಕವಾಗಿ ನವ್ಯತೆಯನ್ನು ಸಾಧಿಸಲು ಶಕ್ತರಾಗಿದ್ದಾರೆ ಎಂದು ಒಪ್ಪಿಕೊಂಡಾಗ ಅವರ ಜೀವನದರ್ಶನದಲ್ಲಿಯೂ ನವ್ಯತೆ ಇದೆ ಎಂದು ಒಪ್ಪಿಕೊಂಡಂತಾಗುತ್ತದೆ. ಇನ್ನು ತಂತ್ರದ ಬಳಕೆ ಕೇವಲ ಯಾಂತ್ರಿಕವಾಗಿದೆ ಎಂದರೆ ಇದಕ್ಕೂ ಜೀವನದರ್ಶನಕ್ಕೂ ಒಮ್ಮೆಲೆ ಎದ್ದು ಕಾಣುವ ಬಿರುಕಿರಬೇಕು. ಇಂಥ ಬಿರುಕು ಕಣವಿಯವರ ಕಾವ್ಯದಲ್ಲಿ ಕಾಣುವುದಿಲ್ಲ.

ಹೊಸ ಕಾವ್ಯಮಾರ್ಗದ ಸ್ವೀಕಾರಕ್ಕೆ ಅನುಕೂಲವಾದ ಎಷ್ಟೋ ಗುಣಗಳನ್ನು ಕಣವಿಯವರು ಆ ಮಾರ್ಗದಲ್ಲಿ ಕಾಲಿಡುವ ಮೊದಲೇ ಬೆಳೆಯಿಸಿಕೊಂಡಿದ್ದರು. ಅವರ ಸಂವೇದನೆಯ ಸ್ವರೂಪವೇ ದೇಶಿಮೂಲವಾದ್ದರಿಂದ ನವ್ಯ ಮನೋಧರ್ಮಕ್ಕೆ ಅವಶ್ಯವಾದ ವಾಸ್ತವತೆ ಅವರಿಗೆ ಹುಟ್ಟುಗುಣವಾಗಿಯೇ ಬಂದಿತ್ತೆಂದು ಹೇಳಬಹುದು. (ಬೇಂದ್ರೆಯವರು ಜಾನಪದ ಭಾಷೆ, ಲಯಗಳನ್ನು ಸಮರ್ಥವಾಗಿ ಬಳಸಬಲ್ಲವರಾಗಿದ್ದರೂ ಅವರ ಸಂವೇದನೆಯ ಸ್ವರೂಪ ಮಾರ್ಗಮೂಲದ್ದು ಎಂಬುದನ್ನು ಇಲ್ಲಿ ಸಾಂದರ್ಭಿಕವಾಗಿ ಲಕ್ಷಿಸಬಹುದು) ಇದರಿಂದಾಗಿಯೇ ರೊಮ್ಯಾಂಟಿಕ್ ಕಾವ್ಯಮಾರ್ಗದ ಕೆಲವೊಂದು ಮಹತ್ವದ ಒಲವುಗಳಿಂದ ಕಣವಿ ದೂರ ಉಳಿದಿದ್ದರು. (ಉದಾಹರಣೆಗೆ, ಬೇಂದ್ರೆ, ಕುವೆಂಪು, ಮತ್ತು ಪು.ತಿ.ನ. ಅವರಲ್ಲಿ ಕಂಡುಬರುವ ಸ್ವಂತದ poetics ನಿರ್ಮಿಸಬೇಕೆನ್ನುವ ಹಂಬಲ ಕಣವಿಯವರನ್ನು ಕಾಡಿಲ್ಲ.) ವಿಮರ್ಶಕರು ಅವರಲ್ಲಿ ಗುರುತಿಸಿದ ಅನುಭಾವ ದೃಷ್ಟಿ ಕೂಡ ಮೊಕಾಶಿಯವರು ಹೇಳುವಂತೆ ಸಹಜ ಅನುಭಾವ ('Natural mysticism') ದ ಪ್ರಕಾರದ್ದಾಗಿತ್ತು. ಎಂದರೆ, ಯಾವುದಾದರೊಂದು ಶಾಸ್ತ್ರೋಕ್ತ ಸಾಧನಾ ಮಾರ್ಗವನ್ನು ಅವಲಂಬಿಸಿ ದೊರಕಿಸಿದ್ದಲ್ಲ. (ಕಾಯಕಿಣಿಯವರು ಮೊಕಾಶಿಯವರನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ದಾರೆಂದೆನಿಸುತ್ತದೆ. ಮೊಕಾಶಿ ಹೇಳುವುದು 'Natural Mysticism'; 'Nature Mysticism' ಅಲ್ಲ.) ಹಾಗೆಯೇ ನವ್ಯಮಾರ್ಗದ ಮುಖ್ಯ ವಿಧಾನವಾದ ಪ್ರತಿಮಾ ಶಕ್ತಿ ಕಣವಿಯವರಲ್ಲಿ ಮೊದಲಿನಿಂದಲೂ ಕಂಡುಬಂದ ಗುಣ. ಇದಲ್ಲದೆ, ಅವರಿಗೆ ಅತ್ಯಂತ ಪ್ರಿಯವಾದ ಸಾನೆಟ್ ಪ್ರಕಾರದಲ್ಲಿನ ಸತತ ಕೃಷಿಯಿಂದ ಕಾವ್ಯ ಶಿಲ್ಪಕ್ಕೆ ಅವಶ್ಯವಿರುವ ಏಕಾಗ್ರತೆಯ ಗುಣವನ್ನೂ ಪ್ರಜ್ಞಾಪೂರ್ವಕವಾಗಿ ಬೆಳೆಸಿಕೊಂಡಿದ್ದರು.

ರೊಮ್ಯಾಂಟಿಸಿಜಂನಂತೆ ನವ್ಯತೆ ಕೂಡ ಒಂದು ಬಹುರೂಪಿಯಾದ ಪರಿಕಲ್ಪನೆ. ಪಾಶ್ಚಾತ್ಯ ಸಂದರ್ಭದಲ್ಲಿಯೇ ಆಗಲಿ ಭಾರತೀಯ ಸಂದರ್ಭದಲ್ಲಿಯೇ ಆಗಲಿ, ಯಾವನೊಬ್ಬ ಕವಿಯಲ್ಲಿ ನವ್ಯತೆಯ ಎಲ್ಲ ಗುಣ, ವಿಧಾನಗಳು ಕಾಣಲಾರವು. ಕನ್ನಡದ ನವ್ಯ ಸಂದರ್ಭವನ್ನೇ ಗಮನಿಸಿದರೂ ಈ ಮಾತು ಸ್ಪಷ್ಟವಾಗುತ್ತದೆ. ಅಡಿಗ, ಶರ್ಮ, ಅನಂತಮೂರ್ತಿ, ದೇಸಾಯಿ-ಎಲ್ಲರೂ ನವ್ಯರೇ ಆಗಿದ್ದರೂ ಅವರಲ್ಲಿ ಭಿನ್ನತೆಗಳಿವೆಯಷ್ಟೇ ಅಲ್ಲದೆ ಕೆಲವೊಂದು ಮಹತ್ವದ ಅಂಶಗಳಲ್ಲಿ ಪರಸ್ಪರ ವಿರೋಧ ಕೂಡ ಕಂಡುಬರುತ್ತದೆ. ಈ ದೃಷ್ಟಿಯಿಂದ ಆಶಯ

ಆಕಾರಗಳೆರಡರಲ್ಲೂ ನವ್ಯತೆ ಕಣವಿಯವರ ಕಾವ್ಯದಲ್ಲಿ ಯಾವ ರೂಪ ತಳೆಯುತ್ತದೆ ಎಂಬುದನ್ನು ನೋಡಬೇಕೇ ವಿನಹ ನವ್ಯತೆಯ ಎಲ್ಲ ಗುಣ, ವಿಧಾನಗಳನ್ನು ಅವರಲ್ಲಿ ಹುಡುಕಿಕೊಂಡು ಹೊರಡಬಾರದು.

ನವ್ಯಜೀವನದರ್ಶನದ ಸಾಮಾನ್ಯ ಲಕ್ಷಣವೆಂದರೆ ಆಧುನಿಕ ನಾಗರಿಕತೆಯ ವಿರೋಧ ಮತ್ತು ತಿರಸ್ಕಾರ. ಇದಕ್ಕೆ ಎರಡು ಮುಖ್ಯ ಕಾರಣಗಳಿವೆ. ಮೊದಲನೆಯದು, ಅದು ನಿಜವಾದ ಅರ್ಥದಲ್ಲಿ ಸಂಸ್ಕೃತಿಗೆ ಮಾರಕವಾಗಿರುವುದು. ಟಿ.ಎಸ್. ಎಲಿಯಟ್‌ನ The Waste Land ಸಂಸ್ಕೃತಿಯ ಅವನತಿ, ಅಪಮೌಲ್ಯಗಳ ಮರೆಯಲಾಗದ ಪ್ರತಿಮೆಗಳನ್ನು ಕೊಟ್ಟಿದ್ದರಿಂದಲೇ ಮಹತ್ತ್ವದ್ದಾಯಿತು. (ಮುಂದೆ The Idea of a Christian Society ಮತ್ತು Notes Towards the Definition of Cultureಗಳಲ್ಲಿ ಆದರ್ಶ ನಾಗರಿಕತೆಯ ತನ್ನ ಕಲ್ಪನೆಯ ರೂಪರೇಷೆಗಳನ್ನು ಆತ ಕೊಟ್ಟಿದ್ದಾನೆ.) ಎರಡನೆಯದು, ಅದರ ಯಾಂತ್ರಿಕ ಮತ್ತು ನಿರ್ಮಾನವೀಕೃತ ಪರಿಸರ ಸೃಜನಶೀಲತೆಗೆ ಒಡ್ಡಿದ ಗಂಡಾಂತರಗಳು. ಇದರಿಂದಾಗಿ, ನವ್ಯ ಕವಿ ಮಾನವನ ಆದಿಮ ಅವಸ್ಥೆಯ (the primitive) ಪುರಸ್ಕರ್ತನಾಗುತ್ತಾನೆ. ಜೈವಿಕ ಕ್ರಿಯೆಯಲ್ಲಿ ಬೇರುಬಿಟ್ಟ ಸತ್ವ (vitality) ಮತ್ತು ಸಹಜಗುಣ (spontaneity) ಅವನು ಸ್ವೀಕರಿಸುವ ಮೌಲ್ಯಗಳಾಗುತ್ತವೆ.

ಈ ವಿಚಾರಗಳ ಹಿನ್ನೆಲೆಯಲ್ಲಿ ಕಣವಿಯವರ ಕಾವ್ಯವನ್ನು ನೋಡಿದಾಗ ಮಹತ್ತ್ವದ ಅನೇಕ ಅಂಶಗಳು ಗೋಚರವಾಗುತ್ತವೆ. ಸಂಸ್ಕೃತಿಯಲ್ಲಿ ಕವಿಗಿರುವ ನಿಷ್ಠೆ ಮೊದಲ ಹಂತದ ಕವನಗಳಲ್ಲಿ ನೇರವಾದ ವಿಷಯವಾದರೆ, ಅದರ ವಿಪರ್ಯಾಸ ಮತ್ತು ಹ್ರಾಸಗಳು ದೀಪಧಾರಿ (೧೯೫೬) ಯಿಂದ ನಗರದಲ್ಲಿ ನೆರಳು (೧೯೭೪) ವರೆಗಿನ ಅವಧಿಯಲ್ಲಿ ರಚಿತವಾದ ಅನೇಕ ಕವಿತೆಗಳಿಗೆ ವಸ್ತುವನ್ನೊದಗಿಸಿವೆ.

ನವ್ಯತಂತ್ರದ ಪ್ರಾಥಮಿಕ ವಿಧಾನವನ್ನು ಟಿ.ಇ. ಹ್ಯೂಮ್ ಈ ರೀತಿ ವಿವರಿಸುತ್ತಾನೆ: 'Two visual images form what one may call a visual chord. They unite to suggest an image which is different to both'. 'ಕಾಲಾತೀತ'ದಲ್ಲಿ ಕಣವಿ ಬಳಸುವ ತಂತ್ರ ಈ ರೀತಿಯದು. ಇದೂ ಸಂಧಿಕಾಲದ ಪದ್ಯವೇ ಆದದ್ದರಿಂದ ಪದ್ಯದ ಕೊನೆಯ ಭಾಗ ವಿವರಣೆಗಿಳಿದು ಶಿಥಿಲವಾಗಿದೆ. ಆದರೆ ಕವಿತೆಯ ಮುಖ್ಯ ಉದ್ದೇಶ ನಗರಜೀವನದ ಪ್ರತಿಮಾ ಸಮೂಹ ಮತ್ತು ಆದಿಮವೆಂದು ಕರೆಯಬಹುದಾದ ಜೀವನದ ಒಂದು ಪ್ರತಿಮೆ ಇವುಗಳನ್ನು ಒಂದೇ ಶಿಲ್ಪದಲ್ಲಿ ಕೆತ್ತುವ ಮೂಲಕ ಹೊಸ ಸಂಕೀರ್ಣ ಪ್ರತಿಮೆಯೊಂದನ್ನು ಸೃಷ್ಟಿಸುವುದು. 'ನಾಗರಿಕ ನಾಗರವು ಮತ್ತು ಕಟ್ಟಿದ ಹಳ್ಳಿ'ಯಿಂದ ಬಂದ ಕವಿಗೆ ನಗರವು ಯಾವಾಗಲೂ ಭಯದ, ಅಸ್ವಸ್ಥತೆಯ ಸಂಕೇತವಾಗುವುದು ಸಹಜ. 'ಕಾಲಾತೀತ'ದಲ್ಲಿ ಬರುವ ನಗರ ಪ್ರತಿಮೆಗಳು ಈ ಭಾವನೆಗಳಿಗೆ ಅರ್ಥಪೂರ್ಣವಾದ ಅಭಿವ್ಯಕ್ತಿಯನ್ನು ಒದಗಿಸುತ್ತವೆ:

'ಬಿಡುವಿಲ್ಲ, ಅರ್ಜಂಟು!' ಟಾರು ಬೀದಿಯ ತುಡಿತ
ಕಾರು ಮೋಟಾರು ಸೈಕಲ್ಲು ಟಾಂಗಾ ಟ್ರಕ್ಕು

ಉಸಿರು ಕಟ್ಟುವ ತೆರದಿ ಬಟ್ಟೆಯಲಿ ಹಾಸು-ಹೊಕ್ಕು.
ಗಡಿಯಾರದೆಡೆಬಿಡದ ಟಿಕ್ಕುಟಿಕ್ಕಿನ ಬಡಿತ
ಆಫೀಸು ಶಾಲೆ ಕಾಲೇಜು ಅಂಗಡಿ ಬ್ಯಾಂಕು
ಎಳೆಯುತಿಹವಯಸ್ಕಾಂತದೊಲು ಜೀವಾಣುಗಳ
ಮೂಗುದಾರವ ಜಗ್ಗಿ, ನೂರು ಗಾಲಿಯ ಕೀಲ
ಸವೆದು ಕಿರುಗುಟ್ಟುತಿವೆ . . . .

ಕವಿತೆಯ ಕೊನೆಯ ಭಾಗದಲ್ಲಿ ಇನ್ನೊಂದು ಪ್ರತಿಮೆ ಬರುತ್ತದೆ;

ಬೀದಿಯಂಚಿನ ಕಾಲುದಾರಿಯಲಿ ದನಗಾಹಿ
ಮಹಿಷವಾಹನನಾಗಿ ಕೊಳಲೂದಿ ಸಾಗಿಹನು. . .

ಭಾವಜೀವಿಯಲ್ಲಿ ಮೊದಲು ಕಾಣಿಸಿಕೊಂಡ ಈ ಪ್ರತಿಮೆ ಮನುಷ್ಯ, ಪ್ರಾಣಿವರ್ಗ, ತನ್ಮಯತೆ-ಆನಂದಾನುಭವಗಳ ಜೈವಿಕ ಸಂಬಂಧಗಳು, ನಾಗರಿಕ ಜೀವನಕ್ಕೆ ಅಪ್ರಸ್ತುತವಾದ, ಕಾಲುದಾರಿಗೆ ತಳ್ಳಲ್ಪಟ್ಟ ಬೇರೊಂದು ಜೀವನಕ್ರಮದ ಸಂಕೇತವಾಗಿದೆ.

**'ಮಣ್ಣಿನ ಮೆರವಣಿಗೆ'**ಯಲ್ಲಿ ಕವಿಯ ನವ್ಯ ಜೀವನದರ್ಶನ ಇದಕ್ಕೂ ಹೆಚ್ಚಿನ ಆಳ-ವ್ಯಾಪ್ತಿಗಳನ್ನು ಸಾಧಿಸಿದೆ. ತಂತ್ರ ಪ್ರಯೋಗವೂ ಹೆಚ್ಚು ಪ್ರಬುದ್ಧವಾಗಿದೆ. ಮೂರು ಭಾಗಗಳಲ್ಲಿರುವ ಈ ಕವಿತೆಯ ಮೊದಲಿನ ಎರಡು ಭಾಗಗಳ ಪ್ರತಿಮಾವಳಿ ಪೃಥ್ವಿಯ ಉಗಮ, ಜೀವರಾಶಿಯ ಹುಟ್ಟು, ಮಾನವನ ಬುದ್ಧಿ-ಭಾವಗಳ ವಿಕಾಸವನ್ನು ಸಂಕೇತಿಸಿದರೆ, ಕೊನೆಯ ಭಾಗದಲ್ಲಿ ಬರುವ ಪ್ರತಿಮೆಗಳ ಮಾನವ ಸಂಸ್ಕೃತಿಯ ಅಧೋಗತಿಯನ್ನು ಚಿತ್ರಿಸುತ್ತವೆ:

ಕುಸಿಯತೊಡಗಿದೆ ಕೆಳಗೆ ನೆಲಗಟ್ಟು, ಮೇಲೆ ಬಿದ್ದಿದೆ ಭಾರ ನೀಗದಷ್ಟು
ಎಷ್ಟು ಮಣ್ಣನು ಹಾಕಿ ಮೆತ್ತಿದರು ಪ್ರತಿವರ್ಷ ಇದರ ಹಾಡೇ ಇಷ್ಟು.
ಮಾಳಿಗೆಯ ಮೇಲೆ ಇರುವೆಗಳ ಸಾಲುದುರ್ಗ
ಜಂತಿಯಲಿ ಇಲಿಗಳೋಡಾಡಿ ದಿನವೂ ಬುಟ್ಟಿ ಬುಟ್ಟಿ ಮಣ್ಣುದುರಿ
ಎಲ್ಲಿ ನೋಡಿದರಲ್ಲಿ ಸುರಂಗ ಮಾರ್ಗ!

ಶರೀಫಸಾಹೇಬರ 'ಸೋರುತಿಹುದು ಮನೆಯ ಮಾಳಿಗಿ' ಪದವನ್ನು ನೆನೆಸಿಕೊಂಡರೆ ಇಲ್ಲಿನ ಪ್ರತಿಮೆಯ ದೇಸಿಸತ್ವದ ಅರಿವಾಗಬಹುದು. ಕವಿತೆಯ ಕೊನೆಯಲ್ಲಿ ಬರುವ ಪರಿವರ್ತನೆಯ ಸಂಕೇತವೂ ಸಾರ್ಥಕವಾಗಿದೆ:

ಚಳಿಗಾಲದಲ್ಲಿ ಮೈಸೆಟೆದುಕೊಂಡಿದ್ದ ತರು
ಬಂದು ನಿಂತಿದೆ ಬೀದಿ ಮಧ್ಯದಲ್ಲಿ ಸಿಂಗಾರಗೊಂಡ ತೇರು.

'ಕಾಲಾತೀತ'ಕ್ಕಿಂತ ಹೆಚ್ಚಿನ ಲಯವೈವಿಧ್ಯ ಮತ್ತು ನಾಟಕೀಯತೆಯನ್ನು ಈ ಕವಿತೆ ಸಾಧಿಸಿದ್ದರೂ ಉತ್ತಮ ನವ್ಯ ಕವಿತೆಯಲ್ಲಿರಬೇಕಾದ ತೀಕ್ಷ್ಣ ವೈಚಾರಿಕತೆ ಮತ್ತು ಅದನ್ನು

ಮೈಗೂಡಿಸಿಕೊಳ್ಳಲು ಬೇಕಾದ ಏಕಾಗ್ರತೆಗಳ ಕೊರತೆ ಇನ್ನೂ ಅದರಲ್ಲಿ ಕಂಡುಬರುತ್ತದೆ. ಆದರೂ ನವ್ಯದರ್ಶನದ ಅಭಿವ್ಯಕ್ತಿಗೆ ಬೇಕಾದ ಆಕೃತಿಯನ್ನು ರೂಪಿಸಿಕೊಳ್ಳುವುದರಲ್ಲಿ ಕವಿ ಯಶಸ್ವಿಯಾಗಿದ್ದಾರೆ ಎಂದೆನಿಸುತ್ತದೆ. ಈ ಆಕೃತಿಯನ್ನು ಇದಕ್ಕೂ ಹೆಚ್ಚಿನ ಪರಿಣತಿಯಿಂದ ಮುಂದಿನ ಅನೇಕ ಕವಿತೆಗಳಲ್ಲಿ ಅವರು ಉಪಯೋಗಿಸಿಕೊಂಡಿದ್ದಾರೆ.

ಶಿಲ್ಪದ ದೃಷ್ಟಿಯಿಂದ ಪರಿಪೂರ್ಣವೆನಿಸದಿದ್ದರೂ 'ಭಾವಕೇಂದ್ರ' ಮಹತ್ವದ ಕವಿತೆ. ಸೃಜನಕ್ರಿಯೆಯ ಮತ್ತು ಅದಕ್ಕೆ ವಿರುದ್ಧವಾದ ವಿಘಟನ ಕ್ರಿಯೆಯ ಸಾರ್ಥಕ ಪ್ರತಿಮೆಗಳ ಕರ್ಷಣದಲ್ಲಿ ಈ ಕವಿತೆಯ ಭಾವಕೇಂದ್ರವಿದೆ.

ಹಬ್ಬಿ ಹರಡಿದೆ ತೋಟ; ಇದೊ ಪುರಾತನ ಬಾವಿ
ನೂರು ಮಡಿಗಳ ತಣಿಸಿ ಹರಿವ ನೀರು;
ಎಂಥ ಬೀಜಕು ಇಲ್ಲಿ ಮೊಳಕೆ ನಾಟುವ ಭಾಗ್ಯ-
ಕಾಡಮಿಕ, ನರಿ ನುಸುಳಿ ಆರು-ಪಾರು.

ಸಮೃದ್ಧಿಯ, ಸೃಷ್ಟಿಯ ಈ ಪ್ರತಿಮೆಯಷ್ಟೇ ಪ್ರಭಾವಿಯಾದ ಪ್ರತೀಕ ಅದನ್ನು ವಿರೋಧಿಸುತ್ತದೆ:

ಹರಿದು ಚೆಲ್ಲಾಪಿಲ್ಲಿ ಎದೆಯ ಮುತ್ತಿನ ಸರವು
ದೊರೆಯಲೊಲ್ಲದು ಎಲ್ಲು ಮೊದಲ ಸೂತ್ರ.

ಕಣವಿಯವರು ಬೇರೊಂದು ಸಂದರ್ಭದಲ್ಲಿ ಇದ್ದಕ್ಕಿದ್ದಂತೆ ಉಪಯೋಗಿಸುವ ಯೇಟ್ಸ್ ಕವಿಯ ಪ್ರಸಿದ್ಧ 'Things fall apart, the centre cannot hold ಸಾಲಿನ ಈ ರೂಪಾಂತರ ತನ್ನ ಸ್ಮಾರಕಶಕ್ತಿಯ ಮೂಲಕ ಸಾರ್ಥಕತೆಯನ್ನು ಹೊಂದಿದೆ.

ಎರಡು ದಡ (೧೯೬೯) ಸಂಗ್ರಹದ 'ಮಂದಿ' ನಗರದ ಯಾಂತ್ರಿಕ ಜೀವನದ ತೀವ್ರವಾದ ಅನುಭವಕ್ಕೆ ಆಕಾರ ಕೊಡುವ ಮೂಲಕ ಮಹತ್ವದ ಕವನವೆನಿಸಿಕೊಳ್ಳುತ್ತದೆ. ಇಲ್ಲಿ ಬರುವ

ದಟ್ಟ ಕಾಡಿನ ನಟ್ಟನಡುವಣ ಗವಿಗೆ ಬ್ಯಾಟರಿ ಬಿಟ್ಟು
ಹಗಲು ಕಾಣದ ಬಾವಿಯಲ್ಲಿ ಮುಳುಗಿ, ಎಚ್ಚರದಪ್ಪಿ
ಬೆಳಗಿನಲಿ ಎದ್ದು ಬ್ಲೇಡಿಗೆ ಮುಖವನೊಡ್ಡಿ ಕನ್ನಡಿ ಹಿಡಿದು
ಇಸ್ತ್ರಿ ಬಟ್ಟೆಯ ತೊಟ್ಟು ಹೊರಡಬೇಕು:
ಬಟ್ಟೆ ಬಟ್ಟೆಯೊಳೆಲ್ಲ ಹೊಟ್ಟೆ ಜಾಲಿಯ ಮುಳ್ಳು

ಪ್ರತಿಮೆ, ಮೊಕಾಶಿಯವರು ತೋರಿಸಿದಂತೆ ಲೈಂಗಿಕ ಕ್ರಿಯೆಯ ಯಾಂತ್ರಿಕ ಭಯಾನಕತೆಯನ್ನು ಸಮರ್ಥವಾಗಿ ಒಡಮೂಡಿಸಿದೆ.

ಇರುವ ದಾರಿಯ ತುಂಬ ನಡೆದಿದ್ದಾರೆ ಮಂದಿ

ನನಗೆಲ್ಲಿ ಬೇರೆ ಹಾದಿ?

ಇಂಥ ಪ್ರಶ್ನೆಗಳು ಪ್ರತ್ಯೇಕತೆ ಮತ್ತು ಅಸಹಾಯಕತೆಗಳ ಅನುಭವದಿಂದ ಹುಟ್ಟುತ್ತವೆಯಲ್ಲದೆ ಸವ್ಯಸಾಚಿತನದ ಹವಣಿಕೆಯಿಂದಲ್ಲ.

'ಅಪರಾವತಾರ' ಮತ್ತು 'ಲಾಗ'ಗಳಂಥ ಕವಿತೆಗಳ ವಿಡಂಬನೆಯ ವಸ್ತು ಕೂಡ ಸಂಸ್ಕೃತಿಯ ಅವನತಿಯೇ ಆಗಿದೆ.

ಅರವತ್ತರ ದಶಕದ ಕೊನೆಯ ಸುಮಾರಿಗೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನವ್ಯ ಮಾರ್ಗದ ಮಿತಿಗಳು ಸ್ಪಷ್ಟವಾಗಿ ಕಾಣತೊಡಗಿದವು. ಕಣವಿಯವರು ಈ ಮಾರ್ಗವನ್ನು ಸಂಪೂರ್ಣವಾಗಿ ಬಿಟ್ಟುಕೊಡಲಿಲ್ಲವಾದರೂ ಅದರ ಬಗೆಗೆ ಅವರಲ್ಲಿ ಅತೃಪ್ತಿಯಿದ್ದಿತೆನ್ನುವುದನ್ನು ಎರಡು ದಡದ 'ವಿನೂತನ ಕವಿಯ ಕೈಫಿಯತ್ತು' ಮತ್ತು ನಗರದಲ್ಲಿ ನೆರಳು (೧೯೭೪) ದ 'ಕೃತಾರ್ಥ' ಸ್ಪಷ್ಟವಾಗಿ ಸೂಚಿಸುತ್ತವೆ. ಅತಿಯಾದ ಆದರ್ಶವಾದದಿಂದ ಕಣವಿಯವರು ದೂರ ಉಳಿದಂತೆ

ಹೋಗು, ನಮ್ಮಂತೆ ಸದಾ ಅಸ್ವಸ್ಥನಾಗು
ಬೇನೆಯಿರದಿದ್ದರೂ ನರಳು;
(ಅದೇ ವಾಸ್ತವದ ಬಾಳು)
ಕೃಷ್ಣಪಕ್ಷದ ಕತ್ತಲಲ್ಲಿ ಮುಳುಗು ತಲೆಕೆಳಗು

ಇಂಥ ನಿರಾಶಾವಾದದ ಕರೆಯನ್ನೂ ತಿರಸ್ಕರಿಸಿದರು. ಬರಬರುತ್ತ ನವ್ಯಕಾವ್ಯ ಜೀವಸತ್ವ, ಸಹಜತೆಗಳಂಥ ಮೌಲ್ಯಗಳನ್ನು ಕಡೆಗಣಿಸಿ ನಿರ್ವೇದಲೋಲುಪವಾದುದು, ಜೀವನ ವಿರೋಧಿಯಾದುದು ಈ ಪ್ರಕ್ರಿಯೆಯ ಹಿಂದಿನ ಪ್ರೇರಣೆಯಾಗಿರಬೇಕು.

ನವ್ಯಕಾವ್ಯದ ಅಗ್ನಿದಿವ್ಯದಲ್ಲಿ ಕಣವಿಯವರ ಕಾವ್ಯ ತನ್ನ ಆಶಯ-ಆಕಾರಗಳ ಮುಗ್ಧತೆಯನ್ನು ಕಳೆದುಕೊಂಡು ಪ್ರಬುದ್ಧತೆಯನ್ನು ದೊರಕಿಸಿಕೊಂಡಿತು. ಸೌಂದರ್ಯ ಪಕ್ಷಪಾತದ ಜೋಲಿಯಿಂದ ಸುಧಾರಿಸಿಕೊಂಡು ಅಸುಂದರವಾದುದರ, ಅಸಹ್ಯವಾದುದರ ಅರ್ಥವಂತಿಕೆಯನ್ನೂ ಗ್ರಹಿಸಿ ಜೀವನವನ್ನು ಸಮಗ್ರವಾಗಿ ನೋಡುವ ಸಂಕೀರ್ಣ ದೃಷ್ಟಿಯನ್ನು ಪಡೆದುಕೊಂಡಿತು. (ಉದಾಹರಣೆಗೆ 'ಹಲ್ಲಿಗಳ ಸಹವಾಸ'ದಂಥ ಕವಿತೆಗಳು). ಆದರೆ ತನ್ನ ಮೂಲ ದ್ರವ್ಯವಾದ ಜೀವಸತ್ವದಲ್ಲಿಯ ಶ್ರದ್ಧೆಯನ್ನಾಗಲಿ ಸೃಜನಶೀಲತೆಯ ಲವಲವಿಕೆಯನ್ನಾಗಲಿ ಅದು ಕಳೆದುಕೊಳ್ಳಲಿಲ್ಲ. ಯಾಕೆಂದರೆ ಇವು ನವೋದಯ, ನವ್ಯಕಾವ್ಯಗಳೆರಡೂ ಒಪ್ಪಿಕೊಳ್ಳುವ ಮೌಲ್ಯಗಳೇ ಆಗಿದ್ದವು.

ಕಣವಿಯವರ ಕಾವ್ಯದ ನವ್ಯೋತ್ತರ ಬೆಳವಣಿಗೆ ಬಹುಮುಖವಾಗಿರುವುದರಿಂದ ಅದನ್ನು ಒಂದು ಸೂತ್ರದಲ್ಲಿ ಹಿಡಿಯುವುದು ಅಷ್ಟು ಸುಲಭದ ಕೆಲಸವಲ್ಲ. ಕೆಲವೊಂದು ಒಲವುಗಳನ್ನು ಮಾತ್ರ ಗುರುತಿಸುವುದು ಶಕ್ಯವಾಗಬಹುದು. ಒಂದು ದೃಷ್ಟಿಯಿಂದ ಅದು ಹೆಚ್ಚು ಹೆಚ್ಚು ಸಮಜಾಭಿಮುಖವಾಗುತ್ತಿದ್ದಂತೆ ಕಂಡರೆ ಇನ್ನೊಂದು ದೃಷ್ಟಿಯಿಂದ

ಮೊದಲಿಗಿಂತ ಎದ್ದು ಕಾಣುವ ರೀತಿಯಲ್ಲಿ ಚಿಂತನಪರನಾಗಿ, ಚಿರಂತನ ಸತ್ಯಗಳ ಶೋಧದಲ್ಲಿ ತೊಡಗಿರುವಂತೆ ಭಾಸವಾಗುತ್ತದೆ. ಹೊಸ ಅಭಿವ್ಯಕ್ತಿ ಕ್ರಮಗಳಲ್ಲಿನ ಅವರ ಆಸ್ಥೆ ಮಾತ್ರ ಕಡಿಮೆಯಾಗಿಲ್ಲ. 'ಧ್ವನಿ-ದನಿ', 'ಹೆಬ್ಬಾವು' ಮೊದಲಾದ ಕವಿತೆಗಳಲ್ಲಿ ರಾಮಾನುಜನ್ ಕಾವ್ಯಕ್ಕೆ ಹತ್ತಿರವೆನಿಸುವ ರೆಟರಿಕ್‌ನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟ ರಚನೆಗಳ ಪ್ರಯೋಗವಿದೆ. ಬೇಂದ್ರೆಯವರು ಬಹಳ ಹಿಂದೆಯೆ ಕಾವ್ಯಾಕ್ಷಿಗೆ ಬರೆದ ಮುನ್ನುಡಿಯಲ್ಲಿ ಗುರುತಿಸಿದ 'ಜೀವಂತಗತಿ'ಯನ್ನು ಅವರ ಕಾವ್ಯ ಕಳೆದುಕೊಂಡಿಲ್ಲವೆನ್ನುವುದಕ್ಕೆ ಇದು ಒಂದು ಉದಾಹರಣೆ.

ಕಣವಿಯವರ ಕಾವ್ಯ ಯಾವ ಐಡಿಯಾಲಜಿಗೂ ಬದ್ಧವಾಗದೆಯೆ ತನ್ನ ಸಂವೇದನಾ ಶೀಲತೆಯನ್ನು ಉಳಿಸಿಕೊಂಡು ಬಂದಿದೆ. ಸಾಮಾಜಿಕ ಅನ್ಯಾಯಗಳನ್ನು ತೀವ್ರವಾಗಿ ಪ್ರತಿಭಟಿಸುವ ರೀತಿ ಅವರದಲ್ಲ. ಸಮಾಜದ ವ್ಯವಸ್ಥೆಯಲ್ಲಿ ಆಮೂಲಾಗ್ರ ಬದಲಾವಣೆ ಯನ್ನು ತರಬೇಕೆನ್ನುವ ಕ್ರಿಯಾಸಂಕಲ್ಪದಿಂದಲೂ ಅವರ ಕಾವ್ಯ ಪ್ರೇರಿತವಾಗುವುದಿಲ್ಲ. ಕಣವಿಯವರ ಸಾಮಾಜಿಕ ಕಾವ್ಯ ಪ್ರಸ್ತುತವಾಗುವುದು ಸಮಾಜದ ಆಗು-ಹೋಗುಗಳಿಗೆ ಪ್ರಾಮಾಣಿಕವಾಗಿ ಪ್ರತಿಕ್ರಿಯಿಸುವುದರ ಮೂಲಕ ಮತ್ತು ಈ ಪ್ರತಿಕ್ರಿಯೆಗಳಿಗೆ ಭಾಷೆಯಲ್ಲಿ ಆಕಾರ ಕೊಡುವುದರ ಮೂಲಕ.

ಕಣವಿಯವರ ಮೊದಮೊದಲಿನ ಸಾಮಾಜಿಕ ಪ್ರತಿಕ್ರಿಯೆಗಳಲ್ಲಿ ಒಂದು ರೀತಿಯ ಮುಗ್ಧತೆ ಕಂಡುಬರುತ್ತದೆ. ಭಾವಜೀವಿಯ ಪ್ರಾರಂಭದಲ್ಲಿ ಬರುವ 'ಮಾದರ ಕೇರಿ' 'ಸುವಿಶಾಲ ಆಲ ಎಲೆವಳ್ಳಿ ತೋಟ'ಗಳ 'ಏನೆಂಥ ನೋಟ'ದಲ್ಲಿ ಸೇರಿಬಿಟ್ಟು ತನ್ನ ಭಯಾನಕತೆಯನ್ನು ಕಳೆದುಕೊಂಡರೂ

ಕೆರವು ಹೊಲಿಯುವ ದೀನ ದಲಿತರ ಮಾದರ ದುರುಗ
'ಮುಟ್ಟಬೇಡಿರಿ ತಂದೆ' - ಎಂಬ ನುಡಿಗೆ
ನನ್ನೆದೆಯ ಕಸವಿಸಿಯ ಹೇಳತೀರದು ಆಗ

ಎಂಬಲ್ಲಿಯ ಮಿಡಿತ ಪ್ರಾಮಾಣಿಕವಾಗಿದೆ. ಹಾಗೆಯೆ,

ಅನ್ನದನ್ಯಾಯದಲಿ ಕರುಳು ಕುದಿದುದೇಳುತಿರೆ
ಸದೆಬಡೆಯಲುದ್ವೇಗ ಕೆರಳುತಿಹುದು

ಇಂಥ ಸಂಕಲ್ಪಿತ ಕ್ರಿಯೆ ಕೂಡ ಪ್ರಗತಿಶೀಲ ನಿಲುವಿನ ಸೂಚನೆಯೆಂದು ಒಪ್ಪಿಕೊಳ್ಳಬಹುದು. ಆದರೆ ಈ ನಿಲುವು ಕಣವಿಯವರ ಕಾವ್ಯದಲ್ಲಿ ಮಿಂಚುವುದು ಕೆಲವೊಂದು ಕ್ಷಣಗಳಲ್ಲಿ ಮಾತ್ರ. ದೀಪಧಾರಿಯ 'ನೆರಳು' ಇಂಥ ಒಂದು ಕ್ಷಣದಲ್ಲಿ ಹುಟ್ಟಿಕೊಂಡ ಒಳ್ಳೆಯ ಕವಿತೆ. ದಾರಿದ್ರ್ಯದ ಅನುಭವದಲ್ಲಿ ಜೀವಂತಿಕೆಯನ್ನೇ ಕಳೆದುಕೊಂಡು ಕೆಲವೊಂದು ಜೆಶ್ಚರ್ಸ್ (gestures) ಮಾತ್ರ ಉಳಿಸಿಕೊಂಡ ಮನುಷ್ಯ ಪ್ರಾಣಿಯ ಅವಸ್ಥೆಯನ್ನು ನೆರಳಿನ ಪ್ರತಿಮೆ ರಾಲ್ಫ ಎಲಿಸನ್ ನಿಗ್ರೋ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ಬಳಸುವ ಅದೃಶ್ಯತ್ವದ ಪ್ರತಿಮೆಯಂತೆ ಪ್ರಭಾವಿಯಾಗಿ ಸಂಕೇತಿಸುತ್ತದೆ.

ನೂಕು ನುಗ್ಗಲಿನಲ್ಲಿ
ತೆವಳಿಕೊಂಡೇ ಬಂದು
ನೆರಳು ಕೈಚಾಚಿತದೊ ಬಾಗಿ ನಿಂದು

ಜೀವಧ್ವನಿಯ 'ಜೋಳದ ಪಾಳಿ'ಯ
ದಯವಿಟ್ಟು ಎಲ್ಲರಿಗೂ ಹಂಚಿ, ಅಡ್ಡ ಬರಬೇಡಿ
ನಾನವರ ದೇವರ ಗುಡಿ

ಅಥವಾ ಕಾರ್ತಿಕದ ಮೋಡದ 'ಕನಸಿನ ಗೊಮ್ಮಟ'ದ
ಸಾವಿರದ ಸತ್ಯ ಸೌಂದರ್ಯದ ಮಹಾ ಮಸ್ತಕಕ್ಕೆ
ಸಾವಿರದೆಂಟು ಕಲಶಗಳ ತುಂಬಿ ತುಂಬಿ
ಹಾಲು ಸುರಿದಾಗ
ಒಂದು ಹನಿಯೂ ಚೆಲ್ಲದಂತೆ ಬಯಲ ಬೊಗಸೆಯಲಿ ಹಿಡಿದು
ದೂರ ದೂರದ ಕಪ್ಪು ಮಕ್ಕಳನೆಲ್ಲ ಕರೆದು
ಬೆಳ್ಳಗೆ ಕುಡಿಸಿದಂತೆ-

ಈ ಸಾಲುಗಳಲ್ಲಿ 'ನೆರಳು' ಕವಿತೆಗಿರುವ ಸಂವೇದನೆಯನ್ನು ಕಲಕುವ ಶಕ್ತಿಯಿಲ್ಲ.

ಸಾಮಾಜಿಕ ಪ್ರತಿಭಟನೆ ಕಾವ್ಯದಲ್ಲಿ ಅಭಿವ್ಯಕ್ತಿಗೊಳ್ಳುತ್ತಿರುವ ಕೆಲವೊಂದು ವಿಧಾನಗಳ ಬಗ್ಗೆ ಕಣವಿಯವರಲ್ಲಿ ಪ್ರಾಮಾಣಿಕವಾದ ಅನುಮಾನಗಳಿವೆ. ಉದಾಹರಣೆಗಾಗಿ 'ಮೃತ್ಯು ಘೋಷಣೆ'ಯ ಈ ಸಾಲುಗಳನ್ನು ನೋಡಬಹುದು:

ನೆಲೆ ನಿಂತವರನ್ನು ನಿಂತ ಕಾಲಮೇಲೆ
ಗುಳೇ ಹೊರಡಿಸುವದು,
ಸನ್ನಿವೇಶದ ತೀವ್ರತೆಗೆ ತಕ್ಕಂತೆ ಹೊಸ ದನಿ ತೆಗೆದು
ಕಿರುಚಿಕೊಳ್ಳುವುದು
(ಪ್ರಸಂಗ ಬಂದರೆ ನುಣುಚಿಕೊಳ್ಳುವುದು)
ಎಲ್ಲ ಮಠಗಳ ಮುಂದೆ ತಮ್ಮದೇ ತೇರು ಎಳೆಯುವುದು,
ಪಟ್ಟಭದ್ರರ ನೆಳಲನ್ನು ಅಳಿಸಿ, ದಿಕ್ಕಿಲ್ಲದ
ಕಂದಮ್ಮಗಳಿಗೆ
ದಾರಿ ತೋರಿಸುವುದು

ಆದರೆ, ಇದರ ಅರ್ಥ ಪುರುಷೋತ್ತಮ ಬಿಳಿಮಲೆ ಅವರು ಹೇಳುವ ಹಾಗೆ (ಸಂಕ್ರಮಣ, ೧೯೪೮-೯೬) ಕಣವಿಯವರು ಹೊಸತನವನ್ನು ನಿರಾಕರಿಸುತ್ತಾರೆಂದು ಆಗುವುದಿಲ್ಲ. ಬಿಳಿಮಲೆ ಉದಾಹರಿಸಿದ 'ಕಾಲ ನಿಲ್ಲುವದಿಲ್ಲ' ಕವಿತೆಯ ಆಶಯ ಕಾಲ ನಿಲ್ಲಬೇಕು (Time must have stop) ಎಂದಲ್ಲ. ಪರಿವರ್ತನೆ ಕಣವಿಯವರ ಕಾವ್ಯದ ಸಂಕಲ್ಪಿತ ಉದ್ದೇಶವಲ್ಲ ವಾದರೂ ಅದಕ್ಕೆ ಅವರ ವಿರೋಧವಿಲ್ಲ. ಅವರು ತುರ್ತು ಪರಿಸ್ಥಿತಿಯಲ್ಲಿ ಬರೆದ ಕವನಗಳನ್ನು ಪರಿಶೀಲಿಸಿ ಚಂದ್ರಶೇಖರ ಪಾಟೀಲರು ಕೊಡುವ ನಿರ್ಣಯ ಹೆಚ್ಚು

ಸೂಕ್ತವಾಗಿದೆಯೆಂದೆನಿಸುತ್ತದೆ. 'ಬರಹವನ್ನು ಮೀರಿದ ಬದುಕಿನಲ್ಲಿ 'ಕ್ರಿಯೆ ಎಂಥದಿರಬೇಕು?' ಎಂಬ ಪ್ರಶ್ನೆಗೆ ಕಣವಿಯವರ ಕಾವ್ಯದಲ್ಲಿ ಉತ್ತರವಿಲ್ಲ, ಎಂದು ಪಾಟೀಲರು ಹೇಳುತ್ತಾರೆ. ಆದರೆ, ತಮ್ಮ ಮನೋಧರ್ಮದ, ಬದುಕಿನ ಮಿತಿಗಳಲ್ಲಿ, ಎಲ್ಲರಿಗಿಂತಲೂ, 'ಚೆನ್ನವೀರ ಕಣವಿಯವರು ಹೆಚ್ಚು ಜೀವಂತವಾಗಿರುವ ಕವಿ' ಎಂಬ ಸತ್ಯವನ್ನೂ ಅವರು ಗುರುತಿಸುತ್ತಾರೆ.

'ಎಲ್ಲಿ ಚಿಂತನೆ, ಸೂಕ್ಷ್ಮತೆ, ನಯ ಬೇಕೋ ಅಲ್ಲಿ ಈ ಕವಿಯ ಕಾವ್ಯ ಯಶಸ್ವಿಯಾಗುತ್ತದೆ' ಎಂಬ ಅಡಿಗರ ಹೇಳಿಕೆಯ ಸಮರ್ಥನೆ ನೆಲ-ಮುಗಿಲು ಮತ್ತು ನಂತರದ ಸಂಗ್ರಹಗಳ ಅನೇಕ ಕವಿತೆಗಳಲ್ಲಿ ದೊರೆಯುತ್ತದೆ. ಇವುಗಳಲ್ಲಿ 'ನೆಲ-ಮುಗಿಲು', 'ನಂಬಿಕೆ', 'ಆಚೆ', 'ನಿನ್ನ ಕರುಣೆಗೆ', 'ಹಿರಿಯರ ಸಾವು', 'ಪ್ರೀತಿ-ಸಂಬಂಧ' ಈ ಕವಿತೆಗಳು ವಿಶೇಷವಾಗಿ ಲಕ್ಷ್ಯ ಸೆಳೆಯುತ್ತವೆ. 'ನೆಲ-ಮುಗಿಲು' ಸತತವಾಗಿ ಕಣವಿಯವರ ಚಿಂತನೆಯ ವಸ್ತುವಾದ ನೆಲ-ಬಾನುಗಳ ರಹಸ್ಯಮಯ ಸಂಬಂಧವನ್ನು ಕುರಿತಾದ ಕವನ. 'ನಂಬಿಕೆ' ಕವಿಯ ನಂಬಿಕೆಯಾದ್ದರಿಂದ ಸಹಜವಾಗಿಯೇ ಕಾವ್ಯಸೃಷ್ಟಿಯ ಅಗಮ್ಯತೆಯನ್ನು ಭೇದಿಸುವ ಬಯಕೆಯುಳ್ಳದ್ದಾಗಿದೆ:

. . . . . ಹಗಲಿರುಳು ಜಾರುವವು
ದಿನದಿನವು ನನ್ನೊಳಗಿಂದ ಏನೊ ಹೀರುವವು; ಮತ್ತೆಲ್ಲೊ
ತಿರುಗಿ, ಪತ್ತೆಯಿಲ್ಲದ ಹಾಗೆ ಜೇನಿಟ್ಟು 'ಬಿಡಿಸಿಕೋ' ಎಂದು
ದುಡಿಸುವವು. ಜೆಂಗೊಡವ ಕಂಡು ಅಚ್ಚರಿಗೊಂಡರೂ
ಅವಸರ ಪಡುವ ಹಾಗಿಲ್ಲ; ದಾಹ ತೀರಿಸಲು ನೀರಲ್ಲ,
ಮತ್ತು ಬರಿಸುವ ಮದ್ಯವಲ್ಲ. ಅಂಗೈಯಲ್ಲಿ ಹನಿಹನಿ
ಹಾಕಿ, ನೆಕ್ಕಿ ನಾಲಗೆ ತುಂಬ ಸವಿದು, ಕಣ್ಮುಚ್ಚಿ
ತೆರೆಯಬೇಕು.

'ಆಚೆ'ಯಲ್ಲಿ ಕಾಲದ ಬಗ್ಗೆ ಗಹನವಾದ ಚಿಂತನೆಯಿದೆ.

ಏರಿಳಿಯಲು ಕಾದಿವೆ ಗಿರಿಕಂದರ; ಅದರಾಚೆ
ಕ್ಷಿತಿಜದ ಗೆರೆಯೆ? ಬೆಳಕಿನ ತೊರೆಯೆ? ಬರಿ ಮಿಂಚೆ?

'ನಿನ್ನ ಕರುಣೆ'ಗೆ ಆಧ್ಯಾತ್ಮಗೀತ. ಮೊದಲಿನ ಎರಡು ಪದ್ಯಗಳ ಭಾವ ನಿರ್ಭರತೆಯ ನಂತರ ಕೊನೆಯದು ಸಾಮಾನ್ಯ ರೂಪಕ- ತಿಳಿವುಗಳಿದುಬಿಡುವುದಾದರೂ ಅನುಭೂತಿಯ ಹೊಸ ಕ್ಷೇತ್ರವೊಂದು ಇಲ್ಲಿ ತೆರೆದಿದೆ. 'ಹಿರಿಯರ ಸಾವು' ಕವಿತೆಯ ವಸ್ತು ಬರಿ ಮೃತ್ಯುವಲ್ಲ. ವೃದ್ಧಾಪ್ಯದ ಒಳನೋಟವೂ ಅಲ್ಲಿದೆ.

. . . ಸಣ್ಣ ಕೋಣೆಯ ಕಣ್ಣು ಎಲ್ಲೆಡೆಗು.

'ಪ್ರೀತಿ-ಸಂಬಂಧ'ದ ಹೊಸತನ ಇರುವುದು ಅಪೂರ್ಣತೆಯ ಸ್ವೀಕೃತಿಯಲ್ಲಿ.

ನಮ್ಮ ಮಾತೇ ನಮಗೆ ಅಸ್ಪಷ್ಟ; ಸಂವಹನ-
ಕೆಲ್ಲಿದೆ ಹಾದಿ? ಶಬ್ದಕ್ಕೆ ತಡಕಾಡಿ, ಮುರಿದ
ಸೇತುವೆ ಕಟ್ಟಿ ದಾಟಿದರೆ ಅಷ್ಟೆ ಸಂಮೋದ....

ಏಕಾಗ್ರತೆ, ಆಮೂರ್ತಕ್ಕೆ ಆಕಾರ ಕೊಡುವ ಮೂರ್ತ ಪ್ರತಿಮೆಗಳ ಸೃಷ್ಟಿ, ವಚನಕಾರರಲ್ಲಿ ಕಂಡುಬರುವ ದರ್ಶನದ ಸ್ಪಷ್ಟತೆ, ನಿರಾಭರಣಸುಂದರವಾದ ಭಾಷೆ, ಲಯದ ನಿಯಂತ್ರಣದಲ್ಲಿ ಹುಟ್ಟಿಕೊಳ್ಳುವ ಅರ್ಥಕ್ರಿಯೆ, ಮೌನ ಹೊರಡಿಸುವ ಶಬ್ದ - ಇವು ಈ ಕವಿತೆಗಳ ಶ್ರೇಷ್ಠ ಗುಣಗಳಾಗಿವೆ. ಈ ಎಲ್ಲ ಕವಿತೆಗಳ ಯಶಸ್ಸಿನ ಮಟ್ಟ ಏಕರೂಪವಾಗಿಲ್ಲವಾದರೂ ಅವು ಕಣವಿಯವರ ಕಾವ್ಯ ಸಾಧಿಸಿದ ಪಕ್ವತೆಯ ಫಲಗಳೆನ್ನುವುದರಲ್ಲಿ ಸಂಶಯವಿಲ್ಲ. ಆದರೆ ಕಣವಿಯವರ ಭವಿಷ್ಯದ ಕವಿತೆಗಳೆಲ್ಲ ಇದೇ ಹಾದಿಯನ್ನು ತುಳಿಯುತ್ತವೆ ಎಂದು ಹೇಳುವ ಹಾಗಿಲ್ಲ. ಅಭಿವ್ಯಕ್ತಿಯ ಹೊಸ ಕ್ರಮಗಳನ್ನು ಶೋಧಿಸುವ ಪ್ರಯತ್ನವನ್ನೂ ಅವು ಮಾಡಬಹುದಾಗಿದೆ. ಈ ಕವಿ ಅಲ್ಪತೃಪ್ತಿಯ ಕವಿಯಲ್ಲವೆನ್ನುವುದಕ್ಕೆ ಜೀವಧ್ವನಿಗೆ ಅವರು ಬರೆದ 'ಎರಡು ಮಾತುಗಳು' ಸಾಕ್ಷಿಯಾಗಿವೆ. 'ಎಷ್ಟೇ ಪ್ರಯತ್ನಪಟ್ಟರೂ ಕವಿ ತನ್ನನ್ನು ಇಡಿಯಾಗಿ ಒಂದು ಕವಿತೆಯಲ್ಲಿ ಅಭಿವ್ಯಕ್ತಿಗೊಳಿಸಿಕೊಳ್ಳುವುದು ಬಹುಮಟ್ಟಿಗೆ ಅಸಾಧ್ಯ'. ಬಹುಶಃ ಇದನ್ನೇ ಬೇಂದ್ರೆಯವರು ಹಳಸದ ವಿನಯವೆಂದು ಕರೆದಿರಬೇಕು. ಹನ್ನೆರಡು ಕವಸಂಗ್ರಹಗಳ ಯಶಸ್ಸಿನ ನಂತರವೂ ವಿನಯವನ್ನು ಉಳಿಸಿಕೊಂಡು ಬಂದ ಈ ಕವಿಯ ಸಾಧನೆಯ ಮೇಲೆ ಈಗಲೇ ತೆರೆ ಎಳೆಯುವಂತಿಲ್ಲ.

* * * * *

ನಾನು ಈ ಪ್ರಸ್ತಾವನೆಯನ್ನು ಬರೆದದ್ದು ೧೯೮೮ ರಲ್ಲಿ. ನಂತರದ ಹದಿಮೂರು ವರ್ಷಗಳಲ್ಲಿ 'ಕಣವಿಸಮಗ್ರ ಕಾವ್ಯ' ಕಾಣಿಸಿಕೊಂಡಿದೆಯಲ್ಲದೆ 'ಶಿಶಿರದಲ್ಲಿ ಬಂದ ಸ್ನೇಹಿತ' (೧೯೯೪) ಹಾಗೂ 'ಬರೆದು ತೀರದ ಬದುಕು' (೨೦೦೦) ಎಂಬ ಎರಡು ಹೊಸ ಸಂಕಲನಗಳು ಪ್ರಕಟವಾಗಿವೆ. ಮತ್ತೊಂದು ಸಂಗ್ರಹಕ್ಕೆ ಸಾಲುವಷ್ಟು ಬಿಡಿ ಕವಿತೆಗಳನ್ನೂ ಕಣವಿಯವರು ಬರೆದಿದ್ದಾರೆ. ಈಗ ಪ್ರಕಟವಾಗಲಿರುವ ಹೊಸ ಆವೃತ್ತಿ ಇವೆಲ್ಲವುಗಳನ್ನೂ ಒಳಗೊಂಡು ಮತ್ತಷ್ಟು ಶ್ರೀಮಂತವಾಗಿದೆ.

ಕಣವಿಕಾವ್ಯದ ಒಂದು ವೈಶಿಷ್ಟವೇ ಆದ ಬದುಕು ಹಾಗೂ ಕಾವ್ಯಗಳಲ್ಲಿಯ ಸಮಾನಶ್ರದ್ಧೆ ಅವರ ಇತ್ತೀಚಿನ ಕವಿತೆಗಳಿಗೂ ತಾತ್ವಿಕತೆಯನ್ನು ಒದಗಿಸಿದೆ. ಆತಂಕದ ಕ್ಷಣಗಳನ್ನು ಅವರು ಅನುಭವಿಸಿಲ್ಲವೆಂತಲ್ಲ. ಆದರೆ ಈ ಶ್ರದ್ಧೆಯನ್ನು ಅವರು ಕಾಯ್ದುಕೊಂಡು ಬಂದಿದ್ದಾರೆ ಹಾಗೂ ಅದು ಅವರನ್ನು ಕಾಯ್ದಿದೆ. ಈ ಕ್ಷಣಗಳಿಗೆ 'ಶಿಶಿರದಲ್ಲಿ ಬಂದ ಸ್ನೇಹಿತ' ಕಾರಣನಾಗಿರಬಹುದು ಅಥವಾ 'ಇಲಿ ಹೆಗ್ಗಣಗಳ ರಾಜ್ಯಭಾರ'ಕ್ಕೆ ಕುಸಿದ 'ನೀತಿ-ನೆಲೆಗಟ್ಟು' ಕಾರಣವಾಗಿರಬಹುದು. ಆದರೆ ಬದುಕಿನ ಲಯವನ್ನು ಸಂತೋಷದಿಂದಲೇ ಸ್ವೀಕರಿಸುವ ಅವರ ಮನೋಧರ್ಮದಿಂದಾಗಿ ಅವರು ಅಸ್ತಿತ್ವವಾದಿ ನಿರಾಸೆಯಿಂದ ಪಾರಾಗಿದ್ದಾರೆ. ಕಣವಿಯವರ ಕಾವ್ಯದ ಸಂದರ್ಭದಲ್ಲಿ ಗಮನಿಸಲೇಬೇಕಾದ ಒಂದು

ಸತ್ಯವೆಂದರೆ ಅವರ ಚಿಂತನೆಯ ಕ್ರಮ ಬದುಕಿನ ಹಾಗೂ ಪ್ರಕೃತಿಯ ಲಯವನ್ನನುಸರಿಸಿದೆಯೇ ಹೊರತು ಬಂದು ಹೋಗುವ ಐಡಿಯಾಲಜಿಗಳನ್ನಲ್ಲ. ಇದರಿಂದಾಗಿ ಅವರ ಕಾವ್ಯ ತನ್ನ ಜೀವನದರ್ಶನದಿಂದಾಗಿಯೂ ಪ್ರಸ್ತುತತೆಯನ್ನು ಕಳೆದುಕೊಳ್ಳುವುದಿಲ್ಲ.

ಒಬ್ಬ ಮನುಷ್ಯನಾಗಿ ಹಾಗೂ ಪ್ರಜೆಯಾಗಿ ಅವರು ಆತಂಕಗಳಿಗೊಳಗಾದಂತೆ ಕವಿಯಾಗಿಯೂ ಸಂದಿಗ್ಧಗಳನ್ನು ಕಂಡಿದ್ದಾರೆ.

ಹಲವು ದಾರಿಗೆ ಹಲವು ಗುರಿ ನೇರ-ವಕ್ರ,
ಅತಿಕ್ರಮಿಸಿದ ವೇಗ ಎಡರು-ತೊಡರಾಗಿ
ಅಪಘಾತ : ಲಯ ತಪ್ಪಿ ಹೋದ ಕವಿತೆ
ಮಾನವ ಭಗ್ನ ಪ್ರತಿಮೆ.

'ಕವಿತೆ'

ಪ್ರತಿಭಾವಂತ ಕವಿಗೆ ಪ್ರತಿಮೆಗಳು ನಾ, ನೀ ಎಂದು ಬಳಿ ಸಾರುತ್ತವೆ ಎಂದು ಭರ್ತೃಹರಿ ಹೇಳುತ್ತಾನೆ. ಭಾಷೆಯ ವಿಷಯದಲ್ಲಿಯೂ ಈ ಮಾತು ನಿಜ. ಆದರೆ ಕವಿ ಶಬ್ದಗಳಿಗಾಗಿ ಧ್ಯಾನಸ್ಥನಾಗಿ ಕಾಯಬೇಕಾಗುತ್ತದೆ. ಕಾಯುವಿಕೆ ವ್ಯರ್ಥವಲ್ಲವಾದರೂ ನೋವಿನದಾಗಬಲ್ಲದು.

ಅಕ್ಷರಕ್ಷರದಲ್ಲಿ ಬೆರೆದು, ಭಾಷೆ
ಕೊಟ್ಟಿದ್ದೀರಿ ಭಾವಕ್ಕೆ
ಹೃದಯ ಸಂವಾದಕ್ಕೆ, ಅನುಭಾವ ಗೀತಕ್ಕೆ
ಈಗ ಏತಕ್ಕೆ ಮೂಕವಾಗಿದ್ದೀರಿ ?

'ಶಬ್ದ-ನಿಶ್ಶಬ್ದ'

ಆದರೆ, ಈ ಆತಂಕದ ಕ್ಷಣಗಳೂ ಕವಿಯ ನಿರಾಸೆಗೆ ಕಾರಣವಾಗಿಲ್ಲ.

ಯೋಗ
ಕೂಡಿ ಬಂದರ ಪಾಡು; ಹಾಡು ಮುಗಿಯೂದಿಲ್ಲ-
ಅವೂ ನಿನ್ನ ಬಿಡೂದಿಲ್ಲ.

'ಮುಗಿಯದ ಹಾಡು'

ಎಷ್ಟೇ ಪ್ರಯತ್ನಪಟ್ಟರೂ ಕವಿ ತನ್ನನ್ನು ಇಡಿಯಾಗಿ ಒಂದು ಕವಿತೆಯಲ್ಲಿ ಅಭಿವ್ಯಕ್ತಿಗೊಳಿಸಿಕೊಳ್ಳುವುದು ಬಹುಮಟ್ಟಿಗೆ ಅಸಾಧ್ಯ; ಎಂದು ಕಣವಿಯವರು ಹಿಂದೊಮ್ಮೆ ಹೇಳಿದರು. ಈ ನವ್ಯ ಸಿದ್ಧಾಂತ ಭಾವಗೀತೆಯ ಮಟ್ಟಿಗೆ ನಿಜವಿರಬಹುದು. ಆದರೆ ಟಿ.ಎಸ್. ಎಲಿಯಟ್‌ನ Four Quartets ದಂಥ ದೀರ್ಘ ಕವಿತೆಯಲ್ಲಿ ಅಥವಾ ಡಾಂಟೆಯ Divine

Comedyಯಂಥ ಮಹಾಕಾವ್ಯಕ್ಕೆ ಅದು ಅನ್ವಯಿಸಲಾರದು. ಇಂಥದೊಂದು ಕಾವ್ಯಕ್ಕೆ ಬೇಕಾದ ಎಲ್ಲ ಸಿದ್ಧತೆಯೂ ಕಣವಿಯವರಲ್ಲಿದೆ. ಅದು ಸಾಧ್ಯವಾದರೆ ಇಪ್ಪತ್ತೊಂದನೆಯ ಶತಮಾನದ ಕನ್ನಡ ಕಾವ್ಯಕ್ಕೆ ಅದೊಂದು ಅನನ್ಯ ಕಾಣಿಕೆಯಾಗುತ್ತದೆ ಎಂಬ ವಿಶ್ವಾಸ ನನ್ನಲ್ಲಿದೆ.

'ಜಾನಕಿ' **ಜಿ.ಎಸ್. ಆಮೂರ**
ನವೋದಯನಗರ
ಧಾರವಾಡ - ೫೮೦೦೦೩
೧೫ ಜನವರಿ ೨೦೦೩

# ನನ್ನ ಮಾತು

ಕಳೆದ ನಾಲ್ಕು ದಶಕಗಳಲ್ಲಿ ನಾನು ಪ್ರಕಟಿಸಿದ ಕವನಸಂಗ್ರಹಗಳೆಲ್ಲ ಒಟ್ಟಿಗೆ ಸೇರಿ [ಹೊಸ ಸಂಗ್ರಹ 'ಜೀನಿಯಾ'ದೊಡನೆ] ಈಗ 'ಹೊಂಬೆಳಕು' ಸಂಪುಟವಾಗಿ ಓದುಗರ ಕೈಸೇರುತ್ತಿದೆ. ಇಂಥ ಒಂದು ಸಂದರ್ಭ ಇಷ್ಟು ಬೇಗ ಒದಗಬಹುದೆಂದು ನಾನು ಎಣಿಸಿರಲಿಲ್ಲ. ಮಾನ್ಯ ಮಿತ್ರರಾದ ಡಾ|| ಹಾ.ಮಾ. ನಾಯಕ ಅವರು ಎರಡು ವರ್ಷಗಳ ಹಿಂದೆ ಯಾವುದೊ ಒಂದು ಪ್ರಸಂಗದಲ್ಲಿ 'ನಿಮ್ಮ ಸಮಗ್ರ ಕಾವ್ಯ ಯಾವಾಗ ಬರೋದು ಸ್ವಾಮಿ?' ಎಂದು ಸಲಿಗೆಯಿಂದ ಕೇಳಿದ್ದರು. ಆ ಬಗ್ಗೆ ಯಾವ ಯೋಚನೆಯೂ ಇಲ್ಲದಿದ್ದ ನಾನು 'ಏನವಸರ ಬಿಡಿ' ಎಂದು ನಕ್ಕು ಸುಮ್ಮನಾಗಿದ್ದೆ. ಕಳೆದ ವರ್ಷ ಡಿಶಂಬರನಲ್ಲಿ ಐಬಿಎಚ್ ಪ್ರಕಾಶನದ ಶ್ರೀ ಜಿ.ಕೆ. ಅನಂತರಾಮ್ ನನ್ನ ಸಮಗ್ರಕಾವ್ಯದ ಪ್ರಕಟನೆಗೆ ಏರ್ಪಾಡು ಮಾಡಿರುವುದಾಗಿ ತಿಳಿಸಿದಾಗ ನನಗೆ ಅಚ್ಚರಿಯಾಯಿತು. ಯಾಕೆಂದರೆ ಅವರು ಅಂಥ ಸುಸ್ಥಿತಿಯಲ್ಲಿರಲಿಲ್ಲ ಎಂಬುದು ಖಚಿತವಾಗಿ ನನ್ನ ಹೃದಯ ತುಂಬಿ ಬಂದಿತು. ಇವರಿಬ್ಬರೂ ತೋರಿದ ಅನನ್ಯ ಆಸಕ್ತಿಗಾಗಿ ತುಂಬ ಕೃತಜ್ಞನಾಗಿದ್ದೇನೆ.

ಆಳವಾದ ಅಧ್ಯಯನ, ವ್ಯಾಪಕವಾದ ವಿದ್ವತ್ತು ಹಾಗೂ ವಸ್ತುನಿಷ್ಠ ದೃಷ್ಟಿಯಿಂದ ಕನ್ನಡದ ಪ್ರಥಮ ವರ್ಗದ ವಿಮರ್ಶಕರೆನಿಸಿಕೊಂಡಿರುವ ಡಾ|| ಜಿ.ಎಸ್. ಆಮೂರ ನನಗೆ ಎಲ್ಲ ದೃಷ್ಟಿಯಿಂದಲೂ ಆತ್ಮೀಯರಾದವರು. ನಾನು ಕೇಳಿದೊಡನೆ ಪರಿಶುದ್ಧವಾದ ಆಶಯದಿಂದ ನನ್ನ ಕಾವ್ಯವನ್ನು ಇಡಿಯಾಗಿ ನೋಡಿ, ಪುನರ್ವಿಮರ್ಶೆಗೆ ಒಳಪಡಿಸಿ ಪ್ರಸ್ತಾವನೆ ಬರೆದು ಉಪಕರಿಸಿದ್ದಾರೆ. ಅವರಿಗೆ ನಾನು ಅತ್ಯಂತ ಋಣಿ.

ಈ ಗ್ರಂಥವನ್ನು ಅಲ್ಪಾವಧಿಯಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟ ತ್ವರಿತ ಮುದ್ರಣದ ಶ್ರೀ ಫ.ಶಿ. ಭಾಂಡಗೆ ಹಾಗೂ ಚಿ|| ಅಶೋಕ ಅವರ ಸಹಕಾರವನ್ನು ಮರೆಯುವಂತಿಲ್ಲ. ಕವಿಮಿತ್ರರಾದ ಶ್ರೀ ಶ್ಯಾಮಸುಂದರ ಬಿದರಕುಂದಿಯವರು ಮುದ್ರಣ ವಿನ್ಯಾಸದಿಂದ ಹಿಡಿದು ಕರಡು ತಿದ್ದುವವರೆಗಿನ ಎಲ್ಲ ಕೆಲಸವನ್ನು ಅಸ್ಥೆಯಿಂದ ನೋಡಿಕೊಂಡಿದ್ದಾರೆ. ಕವನಗಳ ಮೊದಲ ಪಂಕ್ತಿಯ ಅಕಾರಾದಿಯನ್ನು ಸಹಧರ್ಮಿಣಿ ಶಾಂತಾದೇವಿ ಸಹನೆಯಿಂದ ಸಿದ್ಧಪಡಿಸಿಕೊಟ್ಟಿದ್ದಾರೆ. ಸನ್ಮಿತ್ರರಾದ ಡಾ|| ಜಿ.ಎಸ್. ಶಿವರುದ್ರಪ್ಪನವರು ಮುದ್ರಣದ ಪ್ರಗತಿಯ ಬಗ್ಗೆ ಆಗಾಗ ವಿಚಾರಿಸಿ ಆ ಕಡೆಗೆ ನಾನು ತೀವ್ರ ಗಮನಹರಿಸುವಂತೆ ಮಾಡಿದ್ದಾರೆ. ಇವರೆಲ್ಲರ ಆತ್ಮೀಯ ನೆರವು ನನಗೆ ಧನ್ಯತೆಯ ಬಾವವನ್ನು ತಂದುಕೊಟ್ಟಿದೆ.

ನಾನು ಬದುಕಿನಲ್ಲಿ ಕಂಡುಕೊಂಡ ಪ್ರೀತಿ, ಸ್ನೇಹ, ಕರುಣೆ, ವಾತ್ಸಲ್ಯ ; ನಿಸರ್ಗದಿಂದ ಪಡೆದ ನಿರ್ಮಲ ಜೀವನೋತ್ಸಾಹ; ಕಾವ್ಯವಿಕಾಸಕ್ಕೆ ಬೆಳಕು ಬೀರಿದ ನಾಡಿನ ಸಾಂಸ್ಕೃತಿಕ ಪರಂಪರೆ: ಜೀವನದ ಅಗಾಧತೆಯ ಅರಿವಿನೊಂದಿಗೆ ಒಡಮೂಡಿದ ಅನುಭಾವ- ಇನ್ನೂ ಯಾವ್ಯಾವುದರಿಂದ ಹೊಮ್ಮಿದ ಕಿರಣಗಳು ಈ 'ಹೊಂಬೆಳಕಿ'ನಲ್ಲಿ ಪ್ರತಿಫಲಿಸಿರುವವೋ

ಏನೋ! ಅದೆಲ್ಲವನ್ನೂ ಈ ಸಂಪುಟದ ಮೂಲಕ ನಮ್ರತೆಯಿಂದ ನಾಡಿನ ಕಾವ್ಯಪ್ರಿಯರಿಗೆ ಸಮರ್ಪಿಸುತ್ತಿದ್ದೇನೆ.

ಸೆಪ್ಟೆಂಬರ, ೨೩, ೧೯೮೯ ಚೆನ್ನವೀರ ಕಣವಿ

## ಪ್ರಸ್ತುತ ಆವೃತ್ತಿಯ ಸಂದರ್ಭದಲ್ಲಿ

'ಹೊಂಬೆಳಕು' ಪ್ರಕಟವಾದ (೧೯೮೯) ಮೂರು-ನಾಲ್ಕು ವರ್ಷಗಳಲ್ಲಿಯೇ ಪ್ರತಿಗಳು ಮುಗಿದು, ಅದರ ಮರುಮುದ್ರಣಕ್ಕಾಗಿ ಓದುಗರಿಂದ ಒತ್ತಾಯ ಬರುತ್ತಲೇ ಇದ್ದಿತು. ಆದರೆ ಅದು ಸದ್ಯಕ್ಕೆ ಅಸಾಧ್ಯವೆಂದುಕೊಂಡು ನಾನು ಸುಮ್ಮನಾಗಿದ್ದೆ.

ಒಂದು ತಿಂಗಳ ಹಿಂದೆ, ನನ್ನ ಮಿತ್ರರಾದ ಡಾ|| ಎಂ.ಎಂ. ಕಲಬುರ್ಗಿಯವರು ಅದರ ಪ್ರಸ್ತಾಪವೆತ್ತಿ ಕಾವ್ಯ ಸಂಪುಟವನ್ನು ಶಬ್ದಶಃ ಕೈಗೆತ್ತಿಕೊಂಡು ಕಾರ್ಯಪ್ರವೃತ್ತರಾಗಿ ನನ್ನನ್ನು ಅಚ್ಚರಿಗೊಳಿಸಿದರು. ಆತ್ಮೀಯ ಗೆಳೆಯರಾದ ಡಾ|| ಗುರುಲಿಂಗ ಕಾಪಸೆಯವರು ತಾವೇ ಮುಂದಾಗಿ ಕರಡು ತಿದ್ದುವ ಕಾರ್ಯಕ್ಕೆ ಅಣಿಯಾದರು. ಅವರಿಬ್ಬರ ಸಲಹೆಯಂತೆ ಈಚೆಗೆ, ಅಂದರೆ ೧೯೯೪ರಲ್ಲಿ ಪ್ರಕಟವಾದ 'ಶಿಶಿರದಲ್ಲಿ ಬಂದ ಸ್ನೇಹಿತ' ಹಾಗೂ ಹತ್ತು ವರ್ಷದ ಹಿಂದೆ ಅಚ್ಚಾಗಿದ್ದ ಮಕ್ಕಳ ಕವಿತೆ 'ಹಕ್ಕೀಪುಚ್ಚ' ಈ ಎರಡೂ ಹೆಚ್ಚಿನ ಸಂಕಲನಗಳನ್ನೊಳಗೊಂಡು 'ಹೊಂಬೆಳಕು' ನೂತನ ವಿನ್ಯಾಸದಲ್ಲಿ 'ಕಣವಿ ಸಮಗ್ರ ಕಾವ್ಯ'ವಾಗಿ ರೂಪುಗೊಂಡು ಈಗ ಓದುಗರ ಕೈ ಸೇರುತ್ತಿದೆ. ಈ ಇಬ್ಬರೂ ಸ್ನೇಹಿತರ ಪ್ರೀತಿ, ವಿಶ್ವಾಸ, ಅಭಿಮಾನಗಳಿಗೆ ನಾನು ತುಂಬ ಋಣಿಯಾಗಿದ್ದೇನೆ. ಅಲ್ಲದೆ ನನ್ನ ಈವರೆಗಿನ ಎಲ್ಲ ಕವಿತಾ ಸಂಕಲನಗಳನ್ನು ಪ್ರಕಟಿಸಿದ ವಿವಿಧ ಪ್ರಕಾಶಕ ಮಿತ್ರರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನಮ್ಮೆಲ್ಲರ ಅಳವಿಗೆ ಮೀರಿದ ಈ ಸಾಹಸಕ್ಕೆ ಮೂಲ ಪ್ರೇರಣೆ ನೀಡಿದವರು ಬೆಳಗಾವಿ ಶ್ರೀ ನಾಗನೂರು ರುದ್ರಾಕ್ಷಿ ಮಠಾಧ್ಯಕ್ಷರಾದ ಶ್ರೀ ಸಿದ್ಧರಾಮ ಸ್ವಾಮಿಗಳು. ಒಂದು ಉನ್ನತಮಟ್ಟದ ಸಾಂಸ್ಕೃತಿಕ ಸಂಸ್ಥೆಯಾಗಿ ಅವರು ರೂಪುಗೊಳಿಸುತ್ತಿರುವ 'ವೀರಶೈವ ಅಧ್ಯಯನ ಅಕಾಡೆಮಿ'ಯ ಆಧುನಿಕ ಸಾಹಿತ್ಯಮಾಲೆಯಲ್ಲಿ ಈ ಕೃತಿ ಬೆಳಕು ಕಾಣುತ್ತಿರುವುದು ಒಂದು ಸುಯೋಗವೆಂದು ಭಾವಿಸಿ ಅವರ ಔದಾರ್ಯ ಪೂರ್ಣವಾದ ಸಾಹಿತ್ಯಾಭಿಮಾನಕ್ಕೆ ಮನಃಪೂರ್ವಕ ನಮಸ್ಕರಿಸುತ್ತೇನೆ.

ಗ್ರಂಥದ ಮುದ್ರಣ ಕಾರ್ಯವನ್ನು ತಕ್ಷಣ ಕೈಗೆತ್ತಿಕೊಂಡು ಶ್ರದ್ಧೆಯಿಂದ ಪೂರೈಸಿದ ಧಾರವಾಡದ ಅಖಿಲ್‌ಗ್ರಾಫಿಕ್ಸ್‌ನ ಜಯಶ್ರೀ, ಬೆಳಗಾವಿಯ ಯಾರ್ಬಲ್ ಆಫ್‌ಸೆಟ್ ಪ್ರಿಂಟರ್ಸ್‌ನ ಎ.ಎಸ್. ಯರಗಟ್ಟಿಮಠ ಅವರ ಸಹಕಾರವನ್ನು ಅತ್ಯಂತ ಪ್ರೀತಿಯಿಂದ ನೆನೆಯುತ್ತೇನೆ.

'ಚೆಂಬೆಳಕು' ಚೆನ್ನವೀರ ಕಣವಿ

ಕಲ್ಯಾಣನಗರ, ಧಾರವಾಡ - ೭

ಜೂನ್, ೧, ೧೯೯೬

ಕಾರ ಹುಣ್ಣಿಮೆ.

# ಮೂರನೆಯ ಮುದ್ರಣಕ್ಕೆ ಎರಡು ಮಾತು

ಸಮಗ್ರ ಕಾವ್ಯವೊಂದು ಅನತಿ ಕಾಲದಲ್ಲಿ ಮೂರು ಮುದ್ರಣಗಳನ್ನು ಕಾಣುವ ಸುಯೋಗ ಒದಗಿಸಿರುವ ಕನ್ನಡ ಕಾವ್ಯಾಸಕ್ತರಿಗೆ ಮೊದಲು ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

೨೦೦೦ ಇಸವಿಯಲ್ಲಿ ಪ್ರಕಟವಾದ 'ಬರೆದು ತೀರದ ಬದುಕು' ಸಂಗ್ರಹ ಹಾಗೂ ಅಲ್ಲಿಂದ ೨೦೦೫ರವರೆಗೆ ಬರೆದ ಮೂವತ್ತು ಕವನಗಳನ್ನು ಈ ಸಂಪುಟ ಹೆಚ್ಚುವರಿಯಾಗಿ ಒಳಗೊಂಡಿದೆ. ಅಲ್ಲದೆ ಈ ಹಿಂದಿನ ಆವೃತ್ತಿಯಲ್ಲಿ ತಪ್ಪಿಸಿಕೊಂಡಿದ್ದ ಕೆಲವು ಗೇಯ ಕವನಗಳೂ ಇಲ್ಲಿ ಸೇರ್ಪಡೆಯಾಗಿವೆ. ಹೀಗೆ ಇದು ಪರಿವರ್ಧಿತ ಮೂರನೆಯ ಆವೃತ್ತಿಯಾಗಿದೆ.

'ಹೊಂಬೆಳಕು' ಸಮಗ್ರಕಾವ್ಯಕ್ಕೆ (೧೯೮೯) ಬರೆದ ಪ್ರಸ್ತಾವನೆಯಲ್ಲಿ ನನ್ನ ಕಾವ್ಯವನ್ನು ಒಂದು ರೀತಿ ಪುನರ್ವಿಮರ್ಶೆಗೆ ಒಳಪಡಿಸಿದ ಡಾ. ಜಿ.ಎಸ್. ಆಮೂರ ಅವರು, ಆಮೇಲೆ ಪ್ರಕಟವಾದ ನನ್ನ ಹೊಸ ಸಂಕಲನಗಳನ್ನನುಲಕ್ಷಿಸಿ ಅದಕ್ಕೆ ಮತ್ತೆರಡು ವಿಮರ್ಶೆಯ ನುಡಿಗಳನ್ನು ಕೊನೆಯಲ್ಲಿ ಜೋಡಿಸಿ ಉಪಕರಿಸಿದ್ದಾರೆ. ಈ ಸಂದರ್ಭದಲ್ಲಿ ಅವರು ತೋರಿಸಿದ ವ್ಯವಧಾನವನ್ನು ನಾನು ಮರೆಯುವಂತಿಲ್ಲ.

ಈಗ್ಗೆ ೨೩ ವರುಷಗಳ ಹಿಂದೆ 'ಚೆಂಬೆಳಕು' ಅಭಿನಂದನ ಗ್ರಂಥವನ್ನು ಪ್ರಕಟಿಸಿದ ಮೈಸೂರಿನ ವಾಗ್ದೇವಿ ಎಂಟರ್‌ಪ್ರೈಸಸ್‌ನ ಮಿತ್ರರೇ ಸಮಗ್ರ ಕಾವ್ಯದ ಪ್ರಸ್ತುತ ಆವೃತ್ತಿಯ ಹೊಣೆಯನ್ನು ಹೊರಲು ಮುಂದೆ ಬಂದಿರುವುದು ಒಂದು ಯೋಗಾಯೋಗವೆಂದೇ ಹೇಳಬಹುದು. ಮುದ್ರಣವೂ ಶ್ರೀ ರಾಜೇಂದ್ರ ಪ್ರಿಂಟರ್ಸ್ ಅವರದೇ. ಎರಡನ್ನೂ ಅಂದವಾಗಿ ಅಚ್ಚುಕಟ್ಟಾಗಿ ನಿರ್ವಹಿಸಿರುವ 'ಸಂವಹನ' ಪ್ರಕಾಶನದ ಶ್ರೀ ಡಿ.ಎನ್. ಲೋಕಪ್ಪ ಅವರಿಗೆ ನಾನು ತುಂಬ ಋಣಿ.

ಸನ್ಮಿತ್ರರಾದ ಡಾ. ಗುರುಲಿಂಗ ಕಾಪಸೆಯವರು ಎಂದಿನಂತೆ ಈ ಸಂಪುಟದ ಪ್ರಕಟನೆಯ ಬಗೆಗೂ ವಿಶೇಷ ಆಸ್ಥೆವಹಿಸಿದ್ದಾರೆ. ಮೊದಲು 'ಹೊಂಬೆಳಕು' (೧೯೮೯) ಹೊರಬರಲು ಕಾರಣಕರ್ತರಾದ ಡಾ. ಹಾ. ಮಾ. ನಾಯಕ ಅವರನ್ನೂ ನಂತರ 'ಕಣವಿ ಸಮಗ್ರ ಕಾವ್ಯ'ಕ್ಕೆ ಪ್ರೇರಕರಾದ ಡಾ. ಎಂ. ಎಂ. ಕಲಬುರ್ಗಿಯವರನ್ನೂ ಇಲ್ಲಿ ಕೃತಜ್ಞತೆಯಿಂದ ನೆನೆಯುತ್ತ ಈ ಕೃತಿಯನ್ನು ಸಹೃದಯರಿಗೆ ಸಮರ್ಪಿಸುತ್ತೇನೆ.

'ಚೆಂಬೆಳಕು' ಕಲ್ಯಾಣ ನಗರ ಧಾರವಾಡ
೧-೫-೨೦೦೩

ಚೆನ್ನವೀರ ಕಣವಿ

# ಕೃತಜ್ಞತೆಯ ನುಡಿ

ನನ್ನ ಸಮಗ್ರ ಕಾವ್ಯದ ಪ್ರಕಟಣೆಗೆ ಒಂದು ಸಣ್ಣ ಇತಿಹಾಸವಿದೆ. 'ಕಾವ್ಯಾಕ್ಷಿ' (೧೯೪೯)ಯಿಂದ ಜೀನಿಯಾ (೧೯೮೯) ದವರೆಗಿನ ನನ್ನ ಹನ್ನೆರಡು ಕವನ ಸಂಗ್ರಹವನ್ನೊಳಗೊಂಡ 'ಹೊಂಬೆಳಕು' ಸಂಪುಟ ೧೯೮೯ರಲ್ಲಿ ಬೆಂಗಳೂರಿನ ಆಯ್.ಬಿ.ಎಚ್. ಪ್ರಕಾಶನದಿಂದ ಮೊದಲು ಬೆಳಕು ಕಂಡಿತು. 'ಹಕ್ಕೀಪುಚ್ಚ' ಎಂಬ ಮಕ್ಕಳ ಕವನ ಸಂಗ್ರಹ ಹಾಗೂ ಆಮೇಲೆ ಪ್ರಕಟವಾದ 'ಶಿಶಿರದಲ್ಲಿ ಬಂದ ಸ್ನೇಹಿತ' (೧೯೯೪) ಈ ಎರಡೂ ಹೆಚ್ಚಿನ ಸಂಕಲನಗಳನ್ನೊಳಗೊಂಡು 'ಕಣವಿ ಸಮಗ್ರ ಕಾವ್ಯ'ವಾಗಿ ಬೆಳಗಾವಿಯ ವೀರಶೈವ ಅಧ್ಯಯನ ಅಕಾಡೆಮಿಯಿಂದ ೧೯೯೭ರಲ್ಲಿ ಪ್ರಕಟಗೊಂಡಿತು. ಮುಂದೆ 'ಬರೆದು ತೀರದ ಬದುಕು' (೨೦೦೦) ಹಾಗೂ ಅಲ್ಲಿಂದ ೨೦೦೨ರವರೆಗೆ ಬರೆದ ಮೂವತ್ತು ಕವನಗಳನ್ನೂ ಹಿಂದಿನ ಸಂಗ್ರಹಗಳಲ್ಲಿ ಸೇರದಿದ್ದ ಕೆಲವು ಗೇಯ ಕವನಗಳನ್ನೂ ಸೇರಿಸಿಕೊಂಡು ಪರಿವರ್ಧಿತ ಮೂರನೆಯ ಆವೃತ್ತಿಯಾಗಿ ಅದೇ ಹೆಸರಿನಲ್ಲಿ ಮೈಸೂರಿನ 'ಸಂವಹನ' ಪ್ರಕಾಶನದಿಂದ ೨೦೦೫ರಲ್ಲಿ ಓದುಗರ ಕೈಸೇರಿತು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಮಗ್ರ ಸಾಹಿತ್ಯ ಪ್ರಕಟಣೆಯ ಯೋಜನೆಯ ಅಂಗವಾಗಿ 'ನೀವೇ ಪ್ರಮಾಣು' ಸಂಗ್ರಹವನ್ನೂ ಒಳಗೊಂಡು 'ಕಣವಿಕಾವ್ಯ ಭಂಡಾರ'ದ ಎರಡು ಪೂರಕ ಸಂಪುಟಗಳನ್ನು ೨೦೧೯ರಲ್ಲಿ ಹೊರತಂದಿತು. ಹೀಗೆ ಕಾಲಕಾಲಕ್ಕೆ ಕೈಗೂಡಿದ ಈ ಎಲ್ಲ ಪ್ರಕಾಶಕರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ.

ಈ ಸಂಪುಟಗಳ ಪ್ರತಿಗಳೆಲ್ಲ ತೀರಿದ್ದರಿಂದ ನನ್ನ 'ಭೂಮಿ-ಬದುಕು' (೨೦೧೨) ಎಂಬ ಹೊಸ ಕವನಸಂಗ್ರಹವನ್ನೂ ಒಳಗೊಂಡಂತೆ ಒಟ್ಟು ೧೭ ಸಂಕಲನಗಳ 'ಕಣವಿ ಸಮಗ್ರ ಕಾವ್ಯ' ಎಂಬ ಹೆಸರಿನಲ್ಲಿಯೇ ಪ್ರಕಟಿಸಲು ಇದೀಗ ಸಂವಹನ ಪ್ರಕಾಶನದ ಶ್ರೀ ಡಿ.ಎನ್. ಲೋಕಪ್ಪ ಅವರು ಮತ್ತೆ ಮುಂದೆ ಬಂದಿದ್ದಾರೆ. ವ್ಯವಹಾರವನ್ನೂ ಮೀರಿದ ಅವರ ಈ ಸಾಂಸ್ಕೃತಿಕ ಸೇವೆಗಾಗಿ ನಾನು ತುಂಬ ಆಭಾರಿಯಾಗಿದ್ದೇನೆ. ಈ 'ಸಮಗ್ರ ಕಾವ್ಯ'ದ ಕರಡಚ್ಚು ಪ್ರತಿ ತಿದ್ದಿದ ಶ್ರೀ ಜೀನಹಳ್ಳಿ ಸಿದ್ಧಲಿಂಗಪ್ಪ, ಮೈಸೂರು ಇವರಿಗೆ ಕೃತಜ್ಞತೆಗಳು. ಈ ಕಾರ್ಯದಲ್ಲಿ ನನಗೆ ಎಲ್ಲ ರೀತಿಯಿಂದಲೂ ನೆರವಾದ ಆತ್ಮೀಯ ಸ್ನೇಹಿತರಾದ ಡಾ. ಜಿ.ಎಂ. ಹೆಗಡೆಯವರಿಗೆ ತುಂಬು ಹೃದಯದ ಕೃತಜ್ಞತೆಗಳು.

'ಚೆಂಬೆಳಕು' **ಚೆನ್ನವೀರ ಕಣವಿ**
ಕಲ್ಯಾಣ ನಗರ, ಧಾರವಾಡ-೫೮೦೦೦೭
೨೮ ಜೂನ್ ೨೦೧೮

# ಪರಿವಿಡಿ

**೫. ದೀಪಧಾರಿ ೧೯೫೬**



**೬. ಮಣ್ಣಿನ ಮೆರವಣಿಗೆ-೧೯೬೦**



**೭. ನೆಲ-ಮುಗಿಲು-೧೯೬೫**

**೮. ಎರಡು ದಡ-೧೯೬೯**

### ೧೪. ಹಕ್ಕೀಪುಚ್ಚ-೧೯೮೫



### ೧೫. ಬರೆದು ತೀರದ ಬದುಕು-೨೦೦೦

## ೧೬. ನೀವೇ ಪ್ರಮಾಣು ೨೦೦೭



### ಅನುವಾದಿತ ಕವಿತೆಗಳು

**ತಮಿಳು ಕಾವ್ಯ**

# ಕಾವ್ಯಾಕ್ಷಿ

೧೯೪೭-೧೯೪೯

## ತಾಯೆ ನಿನ್ನ ಮಡಿಲೊಳು

೧

ನಿನ್ನ ಬಸಿರೊಳೊಗೆದು ಬಂದು
ಎದೆಯ ಹಾಲು ಕುಡಿದು ನಿಂದು
ತೋಳ ತೊಟ್ಟಿಲಲ್ಲಿ ತೂಗಿ ಲಾಲಿಯಾಡಿದೆ;

ನಿನ್ನ ಕರುಣ ರಸದೊಳಾಳ್ದು
ತೊದಲು ನುಡಿಯ ಜಾಲ ನೆಯ್ದು
ಹಸುಳೆತನದ ಹಾಲುಗಡಲ ಸವಿಯ ನೋಡಿದೆ.

೨

ನಿನ್ನ ಮುತ್ತು ಸವಿಯ ತುತ್ತು
ದೂರಗೊಳಿಸಿತೆಲ್ಲ ಕುತ್ತು
ಎನ್ನನೊಂದು ರೂಪುಮಾಡಿ ಭೂಮಿಗಿಳಿಸಿತು;

ನೀನು ಪೇಳ್ದ ಕತೆಯ ತಂತ್ರ
ಸವಿಯ ಹಾಡಲೊರೆದ ಮಂತ್ರ
ಬಾಳ ಹಣತೆಯಲ್ಲಿ ತಾಯೆ; ಬೆಳಕ ಚಿಮ್ಮಿತು.

೩

ನಿನ್ನ ಲಲಿತ ನುಡಿಯ ತತ್ತ್ವ
ನಡೆಯಲಿದ್ದ ಧೀರ ಸತ್ತ್ವ
ಎನ್ನ ಪ್ರಾಣಪಾತ್ರೆಯಲ್ಲಿ ಬೆರೆತು ಬಂದಿತು;

ಮಮತೆಯಲ್ಲಿ ಮೂರ್ತಿಗೊಂಡ
ಸಮತೆಯಲ್ಲಿ ಸ್ಫೂರ್ತಿಗೊಂಡ
ದಿವ್ಯತೇಜದಲ್ಲಿ ತಾಯೆ, ಕಾವ್ಯ ಮೊಳೆಯಿತು.

೪

ಅಂದು ತೊದಲು ನುಡಿದ ಕಂದ
ಇಂದು ಹಾಡ ಪಡೆದು ಬಂದ-
ನಂತ ಕರುಣೆ ಅನ್ನಪೂರ್ಣೆ ಕೇಳಲಾಪೆಯಾ?

ಪ್ರೇಮಜೀವಿ ಪಟ್ಟ ಪಾಡು
ಕರುಳ ಬಗೆದು ಬಂದ ಹಾಡು
ತಾಯೆ! ನಿನ್ನ ಮಡಿಲೊಳಿಡಲು ಇಂಬುಗೊಡುವೆಯಾ?

## ಒಳದನಿ

ನನ್ನೆದೆಯ ಗೂಡಿನೊಳಗಾವುದೋ ಹಕ್ಕಿಯುಲಿ
ಚಿಲಿಪಿಲಿಸುತಿಹುದಾವ ನಿಮಿಷದಲ್ಲು;
ಜಗದ ಮೊರೆ-ಕರೆಗಳಿಗೆ ಚೆಲುವು ಚಿನ್ನಾಟಕ್ಕೆ
ದನಿಗೂಡಿ ಹಾಡುತಿದೆ ಕನಸಿನಲ್ಲು!

ಹಾಡ ಸವಿಸೊಲ್ಲಿನಲೆ ತೋಡುತಿದೆ ಮತ್ತೊಂದು
ನೋವು ನರಳಾಟಗಳ ವಿಷಮ ಬಿಂದು;
ಮಣ್ಣ ಕಣಕಣದಲ್ಲಿ ಮರದ ಹನಿಹನಿಯಲ್ಲಿ
ಹುಡುಕುತಿಹುದಾವುದನೊ ಮರೆಗೆ ನಿಂದು.

ಎದೆಗುದಿಯೊ, ಹದಗೆಟ್ಟ ಮುದಗೆಟ್ಟ ದನಿಯೊ
ಒಲಿವಿನಲೆಯಲೆಯಿಂದ ತೂರ್ವ ಸೀರ್ಪನಿಯೊ
ಹಲವಾರು ಕೊರತೆ-ಕೊರಕಲಿನ ಸೀಳ್ದನಿಯೊ
ಒಳದನಿಯೆ ಇವಕೆಲ್ಲ ಉಸಿರಾದುದೇನೊ.

# ಕಾವ್ಯಾಕ್ಷಿ

ಆ ಗಿಡಾ, ಈ ಗಿಡಾ
ಒಂದೊಂದೂ ಚೆಂಗೊಡಾ;
ಬಾಂದೇವಿಗೆ
ನೆಲದಾಯಿಯ
ಹೂಗೊಂಡೆಯ ಹೊಂಗೊಡಾ

ಯಾವ ಹಸಿರೊ, ಯಾವ ಹೆಸರೊ
ತರುಲತೆಗಳ ತೋರಣಾ;
ಬಂದುದೆಲ್ಲಿ?
ಬೆಳೆಯಿತೆಲ್ಲಿ?
ನಿಷ್ಕಾರಣ ಕಾರಣಾ

ನೀಲಾಂಗಣ, ತಿರೆ-ಕಂಕಣ
ಕೆಂದಳಿರಿನ ಕಾವಣಾ;
ಅಲ್ಲಿ ಇಲ್ಲಿ
ಎಲ್ಲೆಲ್ಲಿಯು
ಸವಿಹಾಡಿನ ರಿಂಗಣಾ

ಹೂ ಹೂವಿಗೆ ದುಂದುಂಬಿಯ
ಮೈ ಕೈಗಳ ಸ್ಪರ್ಶನಾ;
ಅಪರಂಜಿಯ
ಅನುರಾಗದ
ಮಾಧುರ್ಯದ ಬಂಧನಾ

ಮಾಂದಳಿರಿನ ಮೇಲ್ಮಾಳಿಗೆ
ಮಧುಕೋಗಿಲೆಗಾಸರಾ;
ಎದೆಯುಬ್ಬಿಸಿ
ಕುಕಿಲಿಡುತಿರೆ
ಎಲೆ ಎಲೆಗಳ ಮರ್ಮರಾ

ಅಳಲುಸಿರಿಗೆ ಸುಸಿಲುಸಿರಿನ
ತಂಪಿನ ತಳಿ ಚಿಮುಕಲಾ;
ಹಾಲುಗಳ್ಳಿ
ಜೋಲು ಬಳ್ಳಿ
ತೂಗುಮಂಚ ಚಂಚಲಾ

ಜುಳು ಜುಳು ನದಿ ಕಲ ಕಲ ರುತಿ
ಜೋಗುಳದುಲಿ ಕೇಳಲಾ;
ವಿಶ್ವದೊಡಲ
ತಣಿಸಲೆಂದ
ಹಾಲ್ಜೇನಿನ ಮಳೆಯಲಾ

ತಿರೆಯ ನವಿರು ಹುಲ್ಲುಹಸಿರು
ಮಕಮಲ್ಲಿನ ಮುಸುಗಲಾ
ಮುಗುದೆ ತನ್ನ
ಮನೆಗೆಲಸದಿ
ಗುಣುಗುಣಿಸುವ ಹಾಡಲಾ
ಹಕ್ಕಿಜೋಡಿ ಒಂದುಗೂಡಿ
ಉಲಿಯುತಿರುವ ಹುಮ್ಮಸಾ;
ಬನದೈಸಿರಿ
ಕುಶಲ ಕುಂಚ
ಚಿತ್ರದಂತೆ ಹೊಸ ಹೊಸಾ

*   *   *

ತನಗೆ ತಾನೆ ತಿಳಿಯದಂತೆ
ತುಳುಕಿತಹಹ ಭಾವನಾ
ಕಮ್ಮಲರಿಗೆ
ಕವಿ-ಗಾಳಿಗೆ
ಕಾವ್ಯಾಕ್ಷಿಗೆ ವಂದನಾ

## ಅಮರ ತೇಜಃಪುಂಜಿ

ಓ ತಂದೆ! ನಿನಗಿದೋ ಈ ನೆಲದ ಕಣಕಣವು
ಕಣ್ಣೀರ ಸುರಿಸುತಿದೆ, ಹಲುಬಿ ಹಂಬಲಿಸುತಿದೆ;
ಭಾರತದ ಬೀರಸಿರಿ ನಿನ್ನೊಡನೆ ಸಾಗುತಿದೆ.
ಸತ್ಯತೆಯ ಪಂಜಿಗಿದೆ ನಿನ್ನೆದೆಯ ಪೌರುಷವು,
ವಿಶ್ವದೆದೆಯಾಳವನೆ ಕಡೆದುಂಡ ಕರುಣಾಳು
ಪ್ರೇಮದಮಲಜ್ಯೋತಿ, ಜಗದ ಸುಂದರ ಮೂರ್ತಿ
ಜೀವನದ ಕಿಲ್ಮಿಷವನುರೆತೊಳೆದ ಸತ್ಕೀರ್ತಿ

ಸಚ್ಚರಿತ, ಮಹಿಮಾತ್ಮ, ಹಿರಿಜೀವ, ಹಿರಿಬಾಳು
ನಿನ್ನದಿದೆ ಬಾಪೂಜಿ ಅಮರ ತೇಜಃಪುಂಜಿ!
ಯಾವ ನುಡಿಗಡಣಕೂ ನಿಲುಕದಿಹೆ ಸಿಲುಕದಿಹೆ
ಸದ್ಧರ್ಮ ಬೋಧನೆಯ ಶಾಂತಿಯಲಿ ಕರುಣಿಸಿಹೆ
ತತ್ವನಿಕಷಕ್ಕಿಟ್ಟ ತಾಪಸಿಯೆ ಅಪರಂಜಿ;
ಸಂದೇಶಕಿನಿತಿನಿತು ಕುಂದಿಲ್ಲ ಭಾಸುರಂ
ಮರೆವುದೆಂತೀ ಜಗವು? ನಿನ್ನುಸಿರು ಶಾಶ್ವತಂ.

## ನಮ್ಮ ಬಾಪು

ಮುಟಿಗೆಯಳತೆಯ ಬರಿಯ ಅಸ್ತಿ ಚರ್ಮದಲಿನಿತು
ಔಂಸು ತೂಕದ ರಕ್ತ ಮಾಂಸವೆರಡನು ಬೆರಸು;
ಉಕ್ಕುತಿಹ ಒಲುಮೆ ಕಡಲಗಲದೆದೆಯನ್ನಿರಿಸು;
ಅಂತದಕೆ ಕಡಲಾಳ ನಿಷ್ಪಾಪ ಮನವಿತ್ತು
ಅಂಟಿಸೆರಡಾನೆಕಿವಿ.... ಮಿಳ್ಮಿಳದ ಕಣ್ಣೆರಡು
ತಾಯನಪ್ಪಿದ ಕೂಸಿನೆಳನಗೆಯ ಬಣ್ಣಗೊಡು;
ಹಿಮಶಿಖರದೆತ್ತರದ ಬಿತ್ತರದ ಆತ್ಮವಿಡು;
ಜೇನಿಗೂ ಇನಿದಾಗಿ ನುಡಿವ ನಾಲಗೆ ನೀಡು.

ತಿನಿಸುಗಳೆ? - ಆಡಹಾಲುತ್ತತ್ತಿ ಸಾಬಕ್ಕಿ;
ತುಂಬೀಗ ನೊಂದೆದೆಯ ಕಂಬನಿಯನಂಚುಮಟ;
ಸೆರೆಮನೆಯಲಟ್ಟಿದನು ವರುಷವಿಪ್ಪತ್ತು ದಿಟ;
ಹರಿಜನನು ಮುಗುಚಿಡಲಿ ಸಂಭಾರವನ್ನಿಕ್ಕಿ.
ಕೊಡು ಕೈಗೆ ತೆಲುಗೋಲ, ಮೈಗೆ ಚಿಂದಿಯ ಉಡುಪು;
ಜಗದ ಉದ್ಧಾರಕನು: ಕಾಣೆರಿವನೇ ಬಾಪು.*

## ಬಿನ್ನಹ

ಅಲ್ಲಸಲ್ಲದ ವಿಷಮ ವಿಪರೀತ ಭಾವನೆಯ
ವಿಷಗಾಳಿ ಎನ್ನ ಬಳಿ ಸುಳಿಯದಿರಲಿ;
ಸೊಲ್ಲು ಸೊಲ್ಲಿಗೆ ಪರರನಣಕಿಸುವ ಕೆಣಕಿಸುವ
ಅಶಿವ ನುಡಿ ಎನ್ನ ಕಿವಿ ಸೇರದಿರಲಿ.

* ಶ್ರೀ ಟಿ.ಪಿ. ಕೈಲಾಸಂ ಅವರ 'Recipe'

ಹಿಮಶೈಲದೆತ್ತರಕು ಕತ್ತೆತ್ತಿ ನಿಂತಿರುವ
ಕರ್ತವ್ಯಪಾಲನೆಯ ಬುದ್ಧಿಬರಲಿ;
ಕಾರ್ಮೋಡ ಬಾನನಂಡಲೆವಂತೆ ಸಂಕಷ್ಟ
ಕೊರಚಾಡಿದರು ಎದೆಯು ಅಲುಗದಿರಲಿ.

ದೈತ್ಯದರ್ಪದ ದುರುಳ ದಾರುಣದ ಹೋರಟೆಗೆ
ಎಂದೆಂದು ನನ್ನ ತಲೆ ಬಾಗದಿರಲಿ;
ಸಾತ್ತ್ವಿಕರ ತಾತ್ತ್ವಿಕರ ಹಿರಿಜೀವದೌನ್ನತ್ಯ
ವಿಶ್ವಭಾವಾತ್ಮರಿಗೆ ನಮನವಿರಲಿ.

ಬಾನಿನಂಚಿನ ಮೋಡ ನಮ್ರತೆಯದೆನಗಿರಲಿ
ಮಾನಸದ ತಿಳಿಗೊಳದ ಶಾಂತಿಯಿರಲಿ;
ಮಣ್ಣಹುಡಿಗೂ ಮೆರುಗನಿತ್ತು ಮುದ ತಾಳುತಿಹ
ಹಸುಳೆಯಾಟದ ಮುಗ್ಧ ಹಂಬಲಿರಲಿ.

ಶಿವನ ಕವನವು ಭುವನ, ಲಾಸ್ಯ-ತಾಂಡವ ಮಿಲನ
ಪ್ರಕೃತಿಯೌಪಾಸನೆಯು ನಿತ್ಯವಿರಲಿ;
ನಾನು ಮಿಡಿಯುವ ಭಾವವೀಣೆ ತಂತಿಗಳೆಲ್ಲ
ದೇವ! ಜೀವಾಳದೋಂಕಾರಗುಡಲಿ.

## ಕಾಡ ಮಲ್ಲಿಗೆ

ಮಾಮರದ ಆಸರದಿ ಮೇಲೇರಿ ಕುಡಿಚಾಚಿ
ಬೆಳ್ಳಿ ಹೂಗಳ ಹರವಿ ಅತ್ತಿತ್ತಲಿಣಿಕಿ,
ಮಾಂದಳಿರ ಮುದ್ದಾಡಿ ರೆಂಬೆಯಲಿ ನೇತಾಡಿ
ಸುಳಿಗಾಳಿ ಸುಳುವಿನಲಿ ಜೀಕಿ ಜೀಕಿ-

ನೀಲಗಗನದ ಆಚೆ ನೀಲಿಮೆಯ ಬಳಿ ಸಾರಿ
ಬೆಣ್ಣೆ-ಬೆಟ್ಟದ ಮೋಡಗರ್ಭಗುಡಿ ಸೀಳಿ,
ಗರಿಗೆದರಿ ಎದೆದುಂಬಿ ಚಿಕ್ಕೆಲೋಕವ ಸುತ್ತಿ
ಹಾಡುತಿಹ ಹಕ್ಕಿಗಳ ಇಂಚರವ ಕೇಳಿ-

ಮೋಡಪಡೆ ಮಳೆಗರೆಯೆ ತುಂತುರಿನ ಸೊದೆ ಹೀರಿ
ಬಣ್ಣ ಬಣ್ಣದ ಬುಗ್ಗೆ ಬಿಲ್ಲಿನಂತಾಗಿ,
ಜಗವೆಲ್ಲ ತಿರುಗಾಡಿ ತೆಂಗುಗರಿಗಳ ನಡುವೆ
ತೂರಿ ಮರ್ಮರಗೈವ ಎಲರಿನಿಂ ತೂಗಿ-

ಚಂದಿರನ ಚೆಲುಮೊಗದ ಕಾಂತಿ ಬೆಳುದಿಂಗಳಿನ
ಹಾಲ್ಗುಡಿದು ಹಾಯಾಗಿ ಕಣ್ಣುಗಳ ಮುಚ್ಚಿ,
ಹೊಂಗನಸ ಕಾಣುತ್ತ ಜಿಯ್‌ಗುಡುವ ಹೆಗ್ಗಾಡ
ಜೋಗುಳದ ಲಲ್ಲೆಯಲಿ ಮೈಮರೆತು ಮೆಚ್ಚಿ-

ನಿದ್ರೆಗೈದಿಹ ಕಾಡಮಲ್ಲಿಗೆಯೆ ಕಣ್ಣೊರಸು
ತುಂಬಿ ಗುಂಗುಂಗಾನಗೈದು ಬಂದಿಹುದು;
ಅರಳುಗಳ ನೀಡವ್ವ, ಒಲಿದು ಬಂದಿಹನಾತ
ತುಂಬು-ಹೃದಯದಿ ತುಂಬು ಬೊಗಸೆಯಲಿ ತುಂಬು.

## ಚಂದ್ರೋದಯ

ಪೂರ್ವ ದಿಙ್ಮಂಡಲದಿ ಪುಣ್ಯವವತರಿಸುತಿದೆ-
ಪೂರ್ಣ ಚಂದ್ರೋದಯದ ರೂಪದಲ್ಲಿ;
ಪೂರ್ಣತೆಯು ಸಂಪೂರ್ಣ ಸಾಕಾರಗೊಳ್ಳುತಿದೆ-
ಪೌರ್ಣಿಮೆಯ ಪೂರ್ಣೇಂದು ವೇಷದಲ್ಲಿ.

ಬೈಗುಗೆಂಪಿನ ಬಣ್ಣ ಕಡಲಾಳ ತಳದಿಂದ
ಬುರುಬುರನೆ ಮೇಲೆದ್ದ ಗುಳ್ಳೆಯಂತೆ,
ತಂಗದಿರನುದಯಿಸಿದ, ಶಾಂತಿಮತಿ ಬಿಂಬಿಸಿದ
ತಪಗೊಂಡ ಮೌನವ್ರತಧಾರಿಯಂತೆ.

ಹೊನ್ನ ಕೇದಗೆ ಹುಡಿಯ ಇಡಿಕಿರಿದು ತುಂಬಿರುವ
ಹೊಂಗನಸು ಹೂತಿರುವ ಭರಣಿಯಂತೆ,
ದುಂಡುಮೊಗ ಸುಂದರನು, ಮೂಡಿರುವ ಚಂದಿರನು-
ಬಾನು ಬುವಿಗಳ ಬಯಕೆ-ಹಣ್ಣಿನಂತೆ.

ಆನಂದ ನಂದನನೊ, ಚಂದನದಿ ಮಿಂದವನೊ
        ಉದಯಗಿರಿ ಹೊಂದೇರನೇರಿದವನು;
ನಂದನದ ವನದಲ್ಲಿ ಹೂವಾಗಿ ಬೆಳೆದವನೊ
        ಒಡಲಲ್ಲಿ ಸುಧೆಯನ್ನು ತುಂಬಿದವನು.

ಮಂದಹಾಸದ ಚಂದ್ರಹಾಸ ತನಿವೆಳಕಾಗಿ
        ಮೆಲ್ಲ ಮೆಲ್ಲನೆ ಇಳೆಯನಪ್ಪುತಿಹುದು;
ಬನ, ಬಯಲು, ಗಿರಿಸಾನು, ಊರು, ದೂರದ ಕಾನು
        ಮಧುಕುಡಿದು ಮತ್ತೇರಿ ಮಲಗಿರುವವು.

## ನೆನಸಿನ ಕನಸು

ಹೋದೆ ಹೋದೆನು ದೂರ ನಡೆದೆನು
        ಕನಸು ಕೈಹಿಡಿದಾಚೆಗೆ,
ಊರಿನಾಚೆಗೆ ಗಿರಿಯ ಶೃಂಗಕೆ
        ಚೆಲುವು ಚಿಮ್ಮುವ ಕಾಡಿಗೆ;
ಕಾಡಗಿಡಗಳು ಮುಗಿಲ ಮುತ್ತಿಡೆ
        ಈರ್ಷೆ ತೋರಿಸುವಲ್ಲಿಗೆ,
ಹಚ್ಚ ಹಸುರಿನ ಪಚ್ಚ ಪಯಿರಿನ
        ನಿಚ್ಚಸುಂದರ ಬೀಡಿಗೆ.

ಏರಿ ಗಿರಿಯನು, ಹತ್ತಿ ಶಿಖರದಿ
        ನಿಂತು, ನೋಟವ ಚಾಚಿದೆ;
ಸುತ್ತುಮುತ್ತಿನ ಬೆಟ್ಟದೊತ್ತಿನ
        ತೊರೆಯ ಕಲಕಲ ಕೇಳಿದೆ;
ಗುಬ್ಬಿ, ಗೊರವಂಕ, ಗಿಳಿಯು, ಟಿಂವಕ್ಕಿ
        ಹಾರೆ ಸಾಲುಗೊಂಡು,
ಚಿಗರೆ ಮೊಲಗಳು, ಹುಲಿಯು ಸಿಂಹಗಳು
        ಬರಲು ಹಿಂಡು ಹಿಂಡು.

"ಎಂಥ ರಾಜ್ಯ ಹಗೆತನವೆ ತ್ಯಾಜ್ಯ ಅಹ!"
        ಎಂದು ಹರುಷಗೊಂಡೆ;

ಒಂದಕೊಂದು ಚಿನ್ನಾಟವಾಡೆ, ಹಿರಿ
ಸಾಮ್ಯತನವ ಕಂಡೆ.
ಹುಲ್ಲು ಮೇದು, ಹಾಲ್ಗಾಳು ತಿಂದು, ತಿಳಿ
ನೀರನೀಂಟಲೆಂದು
ತೊರೆಗೆ ಬಂದು ಮಳಲಾಟವಾಡಿದವು-
ಏನ ಹೇಳಲಿಂದು?

ಪಂಜೆಯುಟ್ಟು, ಬಿಳಿಯಂಗಿ ತೊಟ್ಟು
ನನ್ನೆಡೆಗೆ ಧಾವಿಸಿದವು;
ದಿಟ್ಟತನದಲವು ಒಂದಕೊಂದು
ಮುಂದಾಗಿ ಪ್ರಶ್ನಿಸಿದವು;
"ಏನು ನಿಮ್ಮ ನಾಡಿನಲಿ ಕೊಲೆ ಸುಲಿಗೆ-
ಯಾದವಂತೆ ನಿಜವೆ?
ಒಂದೆ ನೆಲದಲ್ಲಿ ನಿಂತ ನಾಡಿಗರು
ಇಂತುಗೈಯೆ ತರವೆ?

ಜ್ಞಾನವಿಹುದೆಂದು ಮೃಗಕು ಮಿಗಿಲೆಂದು
ಜಂಬ ಕೊಚ್ಚಲಿಲ್ಲೆ?
ದೇವ ಕರುಣಿಸಿದ ತಿಳಿವನಿಂತು ನೀವ್
ಹಾಳು ಮಾಡಲಿಲ್ಲೆ?
ಜಾತಿಕೋತಿಗಳ ಜಗಳ ಜಂಜಡವು
ಎಮ್ಮ ಬಳಿಗೆ ಬೇಡ;
ನರನ ಪಾಡಿದುವೆ? ಬಡಿಯದಿರಲಿ, ಚಿಃ
ನಿಮ್ಮ ಗಾಳಿ ಕೂಡ!"

ಹಕ್ಕಿವಿಂಡು ಒಕ್ಕೊರಲಿನಿಂದಲಿದ
ಕೇಳಿ ಹೋದುವಲಲ!
ಚಿಗರೆ ಮೊಲಗಳೂ ಜಿಗಿದು ನೆಗೆದವೊ
ಏನ ಹೇಳಲಳಲ!
ಗುಡುಗಿತ್ತು ಸಿಂಹ, ನಡುಗಿತ್ತು ಭೂಮಿ
ಉಡುಗಿತ್ತು ಎದೆಯು ಕೆರಳಿ,
ಕನಸು ಕರಗೆ, ನೀರಾಗೆ ಮೈಗೆ,
ಓ! ನವಿರು ಬಂತು ಮರಳಿ.

## ಬಾಳಿನ ಬೀಳಿದು . . . .

ಬಾಳಿನ ಬೀಳಿದು, ಕೂಳಿನ ಗೋಳಿದು
ಸಾವಿನ ಸಂತೆಯು ನೆರೆಯುತಿದೆ;
ವೇದ ಪುರಾಣದ ವಾದಕೆ ಸಿಲುಕದ
ವೇದನೆಯೊಂದಿದು ಕೊರೆಯುತಿದೆ.

ಹೊಟ್ಟೆಯು ಹಪ್ಪಳೆ, ಮೈಯೋ ಬತ್ತಲೆ
ಕಣ್ಣಿಗೆ ಕತ್ತಲೆಗಟ್ಟುತಿದೆ;
ಬಡತನ ಶಾಪಕೆ, ಒಡಲುರಿ ತಾಪಕೆ
ಮಸ್ತಕ ಚಿಣ್ ಚಿಟಿಲೆನ್ನುತಿದೆ.

ಚಿಂತೆಯ ಕಾಡಿನ ಎಲುವಿನ ಗೂಡಿನ
ಜೀವನ ಹಕ್ಕಿಯು ನರಳುತಿದೆ;
ಹಾರುತ ಹೋರುತ ಮೇಲಕ್ಕೇರುತ
ಪಕ್ಕ ಸೋತು ನೆಲಕುರುಳುತಿದೆ.

ಎಲುವಿನ ಹಂದರ ಜೀವನ ಮಂದಿರ
ಅದುರಿ ಮುದುರಿ ಕುಪ್ಪರಿಸುತಿದೆ;
ನಾಡಿಯು ಸತ್ತಿಹ ನೆತ್ತರು ಬತ್ತಿಹ
ತೊಗಲುದೇಹವಪ್ಪಳಿಸುತಿದೆ.

ತಾಳದೆ ಬಾಳದೆ ಬೀಳದೆ ಏಳದೆ
ತೆಕ್ಕಿಮುಕ್ಕಿ ಹೊರಳಾಡುತಿದೆ;
ಕಂಡೂ ಕಾಣದೆ, ಕಂಡರು ಕೇಳದೆ
ಬಿಕ್ಕಿ ಬಿಕ್ಕಿ ತೊಳಲಾಡುತಿದೆ.

ಚೀರಲು ಹಲುಬಲು ಬೊಬ್ಬೆಯ ಹೊಡೆಯಲು
ಕರುಳ ಸುರುಳಿ ಹೊಡಮರಳುತಿದೆ;
ಅಕ್ಕಟಕ್ಕಟಾ! ಪ್ರಾಣದ ಸಂಕಟ
ಧಿಂಕಿಟ ಧುಮುಧುಮುಗುಟ್ಟುತಿದೆ.

## ಈ ಘಟಪ್ರವಾಹ

ಬೆಟ್ಟದುದರದಿ ಹುಟ್ಟಿ ದರಿಕಂದರವ ಮೆಟ್ಟಿ
ಮುಳ್ಳುಕೊಂಪೆಗಳಲ್ಲಿ ಬಂಡೆಗಲ್ಲುಗಳಲ್ಲಿ
ಹರಿಹರಿದು ಸುರಿಸುರಿದು ಮೊರೆಮೊರೆದು ಕರೆಕರೆದು
ಬಂದುದೀ ತೊರೆಗೆ ತ್ವರಿತದಿಂದೊಡ್ಡನೊಡ್ಡಿ
ಜಲಸಂಗ್ರಹಿಪೆನೆಂಬಿಚ್ಛೆಯಿಂದದರ ಕೊರಲಿ-
ಗುರುಲು ಬಿಗಿದಿದ್ದರಾ ಬಯಕೆ ಬರುದೊರೆಯಾಗಿ
ಸ್ವಚ್ಛಂದವಹ ಸಲಿಲವಲ್ಲಿಯೆ ಕಲೆತು ಮಲೆತು
ನಿಲುಗಡೆಯ ತಿರುಗಣೆಯಲುರುಳಿ ಹೊರಳುತಿತ್ತು.

ನನ್ನೆದೆಯಂತರಾಳದಂತಃಕರಣವುಕ್ಕಿ
ಬಂಧನವ ಕಡಿದೊಗೆದು ಹೊರಚೆಲ್ಲಿ ಧುಮ್ಮಿಕ್ಕಿ
ಮುಂಬರಿದು, ಮುನ್ನೋಟ ಮುಂದೋಟಗಳ ಗುರಿಯ
ತೆಕ್ಕೆಯಲಿ ಮುನ್ನೀರಿನಾಗರವ ಸೇರಲಿಹ
ಸಹಜ ಜೀವನದಾದಿ ಮಧ್ಯದಂತರ್ದಾಹ
ತಣಿಸಿ ತೀರ್ಚಲಿಕಿದೋ: ಈ ಘಟಪ್ರವಾಹ

## ಎತ್ತು ಮೇಲಕೆನ್ನನು

೧

ಕಾಸಾರದ ಕೆಸರಿನಿಂದ
ಪಾಚಿ ಜೊಂಡು ನೀರಿನಿಂದ
ವಿಮಲ ಕಮಲ ಮೇಲಕೆದ್ದು
ಕೊಳದ ಎದೆಯನಮರಿ ಗೆದ್ದು
ದಲ ದಲ ದಲವರಳುವಂತೆ
ಥಳ ಥಳ ಥಳ ತೊಳಗುವಂತೆ
ಎತ್ತು ಮೇಲಕೆನ್ನನು
ಜೀವಪಥದಿ ಪತಿತನು.

೨

ಮುಳ್ಳು ಬೆಳೆದ ಕಂಟಿಯಲ್ಲಿ
ಅದರ ಹರಿತ ಕೊರೆತದಲ್ಲಿ
ಚೆಂಗುಲಾಬಿ ಚಿಮ್ಮಿಬಂದು
ಹಂಗುದೊರೆದು ಅರಳಿನಿಂದು

ಪಕಳೆ ಪಕಳೆ ತೆರೆಯುವಂತೆ
ಚೆಲುವನೊಲಿದು ಕರೆಯುವಂತೆ
ಎತ್ತು ಮೇಲಕೆನ್ನನು
ಕಂಟಕದಲಿ ನೊಂದನು.

೩

ಕಡಲಿನೊಡಲು ಕಾದು ಕಾದು
ಉಗಿಯ ರೂಪವಾಗಿ ನೆಗೆದು
ಮೋಡವಾಗಿ ಬಾನನಲೆದು
ಬಂಧವಿರದ ಲೀಲೆ ಮೆರೆದು
ಮಿಂಚಿ, ಗುಡುಗಿ, ಹನಿಯುವಂತೆ
ಮಳೆಯಬಿಲ್ಲು ತಳೆಯುವಂತೆ
ಎತ್ತು ಮೇಲಕೆನ್ನನು
ಜಾಡ್ಯದಲ್ಲಿ ಸುಪ್ತನು.

೪

ಗಗನದಲ್ಲಿ ಹಕ್ಕಿ ಹಾರೆ
ಪುಚ್ಛವೊಂದು ತಿರೆಗೆ ಜಾರೆ,
ಸಿಳ್ಳುಗಾಳಿ ಸುತ್ತಿ ಸುಳಿಯೆ
ಗರಿಯು ಮತ್ತೆ ಜೀವತಳೆಯೆ
ಭೋಂಕನೆದ್ದು ಹಾರುವಂತೆ
ಮುಗಿಲಿಗಿದಿರು ಸಾರುವಂತೆ
ಎತ್ತು ಮೇಲಕೆನ್ನನು
ನಿಸ್ಸಹಾಯನೀತನು.

೫

ಬೀದಿಬದಿಯ ಧೂಳಿನಲ್ಲಿ
ಗೆಳೆಯರೊಡನೆ ಮೇಳದಲ್ಲಿ
ಮನೆಯ ಮರೆತು ಆಡುತಿರಲು
ಮತ್ತೆ ನೆನಸಿ ಅಳುತಲಿರಲು
ತಾಯಿ ಕೂಸನೆತ್ತುವಂತೆ
ಮುದ್ದು ಮೆದ್ದು ಅಪ್ಪುವಂತೆ
ಎತ್ತು ಮೇಲಕೆನ್ನನು
ಮೋಹಗೊಂಡ ಮರುಳನು.

## ಬಿಡುಗಣ್ಣ ಬಾಲೆ

ಬಿಡುಗಣ್ಣ ಬಾಲೆ ನೀನಾವ ಬೆಳುದಿಂಗಳನು
ಬಂಧಿಸಿಹೆ ಕಣ್ಣ ನುಣ್ಬೊಗರಿನಲ್ಲಿ?
ಹೂಬಟ್ಟಲಿಂದ ಹಿಂದಿರುಗುತಿಹ, ಝೇಂಕಾರ
ಗೈಯುತಿಹ ಭೃಂಗ ಕಣ್ಣಾಲಿಯಲ್ಲಿ.

ಅಮಿತ ಸುಖ ಸೂಸುತಿದೆ ನವನವೋನ್ಮೇಷದಲಿ
ನೋಟ ನಿಬ್ಬೆರಗಿನಲಿ, ನೀರವದಲಿ;
ದಿವ್ಯ ಬಯಕೆಯ ಹಣ್ಣು ಹಾಲಾಗಿ ಜೇನಾಗಿ
ಸುರಿಯುತಿದೆ ನುಣ್ಗದಪಿನಾಸರೆಯಲಿ.

ಕಣ್ಣೆವೆಗಳೆತ್ತುತಿರೆ: ನವಿಲುಗರಿ ಛಾಯೆಯೋ
ಮೇಣದರ ಮಾಯೆಯೋ, ಲಾಸ್ಯವೇನೊ;
ತಂಗೊಳದ ತಡಿಯಿಂದ ತೂರಿಬಹ ತಂಬೆಲರೊ
ಎದೆಗಲಂಪಿನ ಪೆಂಪ ಪೂಸುತಿಹುದು.

ಲಾಲಿತ್ಯ ಲತೆಯಾಗಿ ತುಟಿಗಳಲಿ ಪಲ್ಲವಿಸಿ
ಗಲ್ಲದಲಿ ಹೂವಾದ ರೂಹಾಗಿದೆ;
ಇಲ್ಲದಿರೆ ಲಾವಣ್ಯದಗ್ಗಳಿಕೆಯೆರಕದಲಿ
ಚೆಲುವಿಕೆಯ ಚಿರಸುಧಾಮೂರ್ತಿಯಾದೆ.

ಬಿಡುಗಣ್ಣ ಕಡೆಯಂಚಿನಂಚಿನಾಕಡೆಯಲ್ಲಿ
ಏನಿಹುದು! ಏನಿಹುದು? ಬಲ್ಲರಾರು;
ಬಾಳ ತೊಳೆತೊಳೆದು ಬೆಳಬೆಳಗಿಸುವ ಕಾಂತಿಯೋ
ಧೃತಿಗೆಡದ ದೀಧಿತಿಯೊ, ಪಡೆದರಾರು?

## ಹಗಲುಗನಸು

ನಡುವಗಲ ಪೊಳ್ತು; ಬೆಂಬಿಸಿಲಾಳುತಿದೆ ಜಗವ.
ಗಿರಿಸಾನು ಪೇರಡವಿ ದಿಙ್ಮೂಢವಾಗಿಹವು;
ಬೇಲಿಪೊದೆ ಸಾಲಿನಲಿ ಕೀಟಗಳ ನಸು ಸುಳಿವು;
ಮೇಲೆ ನೀಲಾಂಬರದಿ ನುಸುಳಿ ಮೆಲ್ಲಡಿಯಿಡುವ
ತೇಲು-ಮೋಡದ ಕೂಸು; ಹುಲ್ಲುಗಾವಲದಲ್ಲಿ
ಹೆಸರಿರದ ಚಿತ್ರಮಯ ಹೂಗಳೊಡನಾಡುತಿದೆ
ಏಕಾಂಗಿ ಚಿಟ್ಟೆ; ಅಲುಗುತಿವೆ ಎಲೆ ರವುದೆ

ಗಾಳಿ ತಣ್ಣನೆ ಬೀಸೆ, ಮೌನದೇಕಾಂತದಲಿ
ನಲ್ಲ ಕಿವಿಯಲಿ ಮೆಲ್ಲನುಸುರಿ ಸೈತಿಡುವಂತೆ.
ತಳಿರಿಡಿದ ಜೊಂಪದಲಿ ಮೈಹುದುಗಿ ಕುಳಿತಿಹುದು
ತಂದ್ರಿಯಲಿ ಹೊಂಬಕ್ಕಿ; ಬಿಸಿಲ ಕೋಲನು ಹಿಡಿದು
ನಲಿದಾಡುತಿದೆ ಮನಸು ಹಸುಳೆ-ಹಂಬಲದಂತೆ-
ಈ ಇರವನೊಂದು ಚಣ ಮರೆತು ಬಹುದೂರದಲಿ
ಹಗಲುಗನಸಿನ ಸ್ವರ್ಣಮಂದಿರದ ಛಾಯೆಯಲಿ.

## ಉಷಾ

ಜಗದ ನಿದ್ರಾಲೋಲ ಮೊಗದ ಮೇಲುದವೆತ್ತಿ
ಇರುಳ ಸವಿಗನಸಿನಾಮೋದದಲಿ ಮೈಮರೆದು
ಮೆಲ್ಲಮೆಲ್ಲನೆ ಲಲ್ಲೆಗೈದು ಕಣ್ಣೆವೆದೆರೆದು
ಹೂ ತುಟಿಗೆ ಮುತ್ತಿಟ್ಟು, ಹಕ್ಕಿಗಳನೆದೆಗೊತ್ತಿ
ಮೈದಡವಿ, ಮಂಗಳದ ಗೀತಗಳನುಕ್ಕಿಸುತ
ತಂಬೆಲರಿನುಸಿರ ನರುದಂಬುಲವ ಸ್ವೀಕರಿಸಿ
ತುಂಬಿಗಳ ಜುಮ್ಮೆನಿಪ ಗುಂಗಿನಲಿ ಸಂಗಳಿಸಿ,
ಚಿಗುರು ಚೆಂಗುಡಿಗಳಿಗೆ ಪನ್ನೀರ ಚಿಮುಕಿಸುತ
ಮೂಡಣದ ಹೊಸತಿಲಿಗೆ ಹೊಂಬಣ್ಣ ನೀರಿನಲಿ
ಸಾರಣೆಯ ಕಾರಣೆಯಗೈದು, ಕುಂಕುಮದಿಂದ
ಬೊಟ್ಟಿಟ್ಟು ತಳತ್ಥಳಿಸಿ, ಸಂತಸ ಶುಭೋದಯದ
ಝಣಿರ್ಝಣಿರು ಚಕಮಕಿತ ಭೂನಭೋರಂಗದಲಿ
ಉನ್ಮತ್ತರಾಗಿಣಿಯು, ಜಗದುದಯ ಕಾರಿಣಿಯು
ಚೆಲುವೆ, ಶುಭದರ್ಶಿನಿಯು-ಹೋ! ನರ್ತಿಸಿದಳುಷೆಯು.

## ಹುತಾತ್ಮ

ನೂರಾರು ವರುಷಗಳ ಭೀರುನೊಗವನ್ನಿಳುಹಿ,
'ಬಿಳಿಯರಾಳಿಕೆಗಿಂದು ಕೊನೆಗಾಲ ತಂದಪೆವು
ಸಾಕು ಸಾಕೀಗೋಳು ದಾಸ್ಯ ಹಾಸ್ಯದ ಬಾಳು'-
ಎಂಬ ನುಡಿ ಕಿಡಿಗೊಂಡು ಬತ್ತಿದೆದೆಯಲಿ ಹೊತ್ತಿ

ಹಳ್ಳಿದಿಳ್ಳಿಗು ಮುತ್ತಿ ನಾಡ ಗಡಿಯಂ ಸುತ್ತಿ
ಪಂಜಾಯ್ತು! ಪರರಡಿಯಲುರುಳುತಿಹ ನರಳುತಿಹ
ಭಾರತದ ನರಕೋಟಿ ಸಿಡಿದೆದ್ದು ಗುಡುಗಿತೋ:
ಮಾಡಿರಿಲ್ಲವೆ ಮಡಿಯಿರೆಂಬುದಕೆ ತಲೆಬಾಗಿ.
ಇಂಥ ಪಡೆಗಧಿಪತಿಯು ಕಡುಚಾಗಿ ನೀನಾಗಿ
ಸರ್ವ ಸುಖಭೋಗಕ್ಕೆ ಗಡ ತಿಲಾಂಜಲಿಯಿತ್ತು
ತಾಯ ಪಾದಕ್ಕೆಂದು ರಕ್ತಾಂಜಲಿಯನಿತ್ತು
ತೆರಳಿದೆಯ? ಇಲ್ಲಿಲ್ಲ ! ನೆಲದ ಮಕ್ಕಳ ಎದೆಯ
ಕ್ರಾಂತಿಸೆಲೆಯಾಗಿರುವೆ ಮಹದೇವ ಮೈಲಾರ,
ಓ, ಸ್ಫೂರ್ತಿಗೊಡು ಕಂನಾಡಿನೇಕಾಂಗಿ ವೀರ.

## ನೆನೆವುದೊಂದಗ್ಗಳಿಕೆ

ಓವೋ, ಹುತಾತ್ಮರಿರ! ಬಂಧಮುಕ್ತಿಯ ದೀಕ್ಷೆ
ಬೀರಕಡಗವ ತೊಟ್ಟು, ನಿಮ್ಮೆದೆಯ ಬಿತ್ತರದಿ
ಟೆಂಟೆಣಿಪ ಎಲುವುಗಳ ತೇದು ಕೆನ್ನೆತ್ತರದಿ
ಭಾರತಿಯ ಭಾಗ್ಯನಿಧಿಗಾತ್ಮಾರ್ಪಣದ ರಕ್ಷೆ-
ಗೈದವರೆ, ನುಡಿಯಲೇಂ? ಹೋಲಿಸಲ್ಕೆಣೆಯಿಲ್ಲ.
ಬಲಿದಾನದಿತಿಹಾಸ ರಕ್ತಸಂಪುಟಮಾಗಿ
ನಿಮ್ಮ ಪೆಸರೊಂದೊಂದು ಪೆರ್ಮೆತಾರಗೆಯಾಗಿ
ಹೊಳೆದಿಹಿರಿ; ಕಲ್ಪಂಗಳುರುಳಿದರು ಕೇಡಿಲ್ಲ.
ಫಲವಿತ್ತು ಮರೆಯಾದ ಪುಷ್ಪಗಳ ಮರೆಯುವರೆ?
ನಮ್ಮ ಕೈಗಿತ್ತಿರುವ ನಾಡಗುಡಿ ತೊರೆಯುವೆವೆ?
ಹೆಂಬೇಡಿಯಾಗಿ ನಮ್ಮೀ ಬದುಕ ಹೊರೆಯುವೆವೆ?
ಇಲ್ಲಿಲ್ಲ! ನವಯುಗದ ಭೀಮ ಸತ್ಯಕಾಮರೆ;
ದಾರಿದೋರಿರಿ ನಾಡ ಸಂತುಷ್ಟಿಸಂಪದಕೆ,
ಹೆಜ್ಜೆಹೆಜ್ಜೆಗೆ ನಿಮ್ಮ ನೆನೆವುದೊಂದಗ್ಗಳಿಕೆ.

## ಸ್ಫೂರ್ತಿ

ಅರಿವಿನಾಳದ ಭಾವ ಕಲ್ಪನೆಯುದಾತ್ತತೆಗೆ
ಜೀವದುಸಿರಾಡಿಸುವ ಸ್ಫೂರ್ತಿಕನ್ನೆ,
ನಿನ್ನ ದರ್ಶನಫಲಕೆ, ಸ್ಪರ್ಶನದ ಚೇತನೆಗೆ
ದೇಹ ರೋಮಾಂಚಿತವು ಎದೆಯ ರನ್ನೆ.

ಬರಡು ಬಾಳಿನ ಕೊರಡು ಚಿಗುರೊಡೆದು ತೊನೆಯುವುದು
ಕುಡಿದು ಜೊನ್ನದ ಸೆಲೆಯ ಅಮೃತವನ್ನೆ;
ಬೇರಿಂದ ಕೊನೆವರೆಗು ರಸವೀಂಟಿ ಹಬ್ಬುವದು
ನಿನ್ನ ಪ್ರೇರಣೆ ಕರುಣೆ-ಕಣ್ಣಸನ್ನೆ.

ನಿನ್ನ ಕಣ್ಣೆರಡರಲಿ ಸೃಷ್ಟಿ ಮರುಬಿಂಬಿಸಿದೆ
ಬೆಳಕಿನೈಸಿರಿಯಲ್ಲಿ ಸೆರೆಯಾಗಿದೆ;
ಮುತ್ತುರತ್ನದ ಕಾಂತಿ, ಬಾನ ನೀಲಿಮೆ- ಶಾಂತಿ
ನವಿಲುಗರಿ ಎವೆಗಳಲಿ ಮರೆಯಾಗಿದೆ.

ಶಶಿಕಾಂತ ಮೇಘದೊಲು ಕವಿಬದುಕ ಸಿಂಗರಿಸಿ
ಎದೆಯೊಲುಮೆ ತಂಪೆರೆಯೆ ಸಮ್ಮೋಹದಿ,
ಅವನ ಬಾಳಿನ ನೋವು ನಲಿವುಗಳೆ ಹಾಡಾಗಿ
ಜೇನಾಗಿ ಪುಟಿಯುವವು ನವರಾಗದಿ.

ಅವನ ಪ್ರತಿಭೆಯ ಹೂವನರಳಿಸುವ ಬೆಳಕಾಗಿ
ಅವನ ದುಃಖದ ಕಡಲ ನಾವೆಯಾಗಿ,
ಅವನ ನೈರಾಶ್ಯದಾಕುಂಚನಕೆ ಮಿಂಚಾಗಿ
ಅವನದೆಲ್ಲಕು ನೀನೆ ಸ್ಫೂರ್ತಿಯಾಗಿ-

ನಿನ್ನ ಬಿಗಿಯಪ್ಪುಗೆಗೆ ದ್ವೈತಭಾವವನುಳಿದು
ನಿನ್ನಧರ ಜೇನುಂಡು ಮತ್ತನಾಗಿ,
ಭಾವರತಿ ಸೌಖ್ಯಪೀಯೂಷರಸವಶನಾಗಿ
ವಿಶ್ವಗೀತವನುಲಿವ ಹಕ್ಕಿಯಾಗಿ.

ಎಂದಾದರೊಮ್ಮೆ ನೀ ಬಂದು ಮರೆಯಾಗುತಿಹೆ
ಸಂಜೆ ಮುಗಿಲಿನ ಸ್ವರ್ಣವರ್ಣದಂತೆ;
ಬಂದೆದೆಯ ಕದ ತೆರೆವೆ, ಚೇತರಿಸಿ ಹಾಡಿಸುವೆ
ಕಳೆಗೊಡುವೆ ಹೊಸಮಳೆಯ ಸೆಳಕಿನಂತೆ.

ಹೂತಳೆದ ಬಳ್ಳಿಗೊನೆ, ನಳಿನಳಿಪ ಅರಳಿಯೆಲೆ
ಗಾಳಿಯೂದಲು ತಾನೆ ಪಟಪಟಿಸುವಂತೆ,
ನಿನ್ನ ಬರವಿಗೆ ಹೃದಯ ವೀಣೆ ತಂತಿಗಳೆಲ್ಲ
ಮಿಡಿದು ನುಡಿಗೊಳ್ಳುವವು ಎಂದಿನಂತೆ.

ಭಾವಗಡಲಿನ ತೆರೆಗಳೋಳಿಯಲಿ ಕಲ್ಪನೆಯ
ಕಿರಣನಟಿ ಕುಣಿದು ಕುಪ್ಪಳಿಸುತಿರಲು
ರಾಗರಸಪಾಕದಲಿ ಛಂದೋವಿಲಾಸದಲಿ
ಕಮನೀಯ ಕವಿತೆ ತಾ ಕಣ್ದೆರೆವಳು.

ಲಕ್ಷನಕ್ಷತ್ರಗಳ ಥಾಳಥಳ್ಯವ ಹಿಡಿದು
ಬಿರುಗಾಳಿ ಜಲಪಾತದಬ್ಬರವ ಸೆಳೆದು,
ಜೀವನದ ಕುಲಿಮೆಯಲಿ ಕಿಲ್ಮಿಷಾಮಿಷ ಸುಟ್ಟು
ರನ್ನಪುತ್ಥಳಿಯಾಗಿ ಎರಕಹೊಯ್ದು-

ಸುಖದುಃಖ ಆಸೆ ಆಕಾಂಕ್ಷೆಗಳ ಜೇವೊಡೆದು
ಬಾಳಹೊಂಗನಸಿನಲಿ ರೂಹುವಡೆದು,
ಮೋಡಗಳ ಕರುಮಾಡದಲ್ಲಿ ದಿವ್ಯಾತ್ಮದಲಿ
ಕರೆಯುವನು ಕವಿ ಜನದ ಮೇಲ್ಮೆವಡೆದು.

ಸ್ಫೂರ್ತಿಸುಂದರಿ ರಸೋನ್ಮಾದಿನಿಯು, ಚಂಚಲೆಯು
ಕಟ್ಟುಕಟ್ಟಳೆಗೆಲ್ಲ ಸಿಲುಕದವಳು;
ಜೀವನದ ವಿವಿಧಾಂಗ ರಂಗದಲಿ ಮೈಮರೆತು
ನಿಂತಿರಲು ಅರಿಯದೆಯೆ ಮಿಂಚಿ ಬಹಳು.

## ಕೋಗಿಲೆ

೧

ಈಗ ತಾನೆ
ಬಂದಿತೇನೆ
ಮಧುರ ಕಂಠ ಕೋಗಿಲೇ?
ಜಗದ ಬಿನದ
ನಿನ್ನ ಮುದದ
ಗಾನವಾಯ್ತೆ ಒಮ್ಮೆಲೇ!

೨
ಕೆಂಪು ತಳಿರು
ಕಂಪಿನಲರು
ಸೂಸುತಿಹುದು ಮಾಮರಾ
ಅಲ್ಲಿ ಕುಳಿತು
ಎಲ್ಲ ಮರೆತು
ಉಲಿಯುತಿರುವೆ ಸುಮಧುರಾ

೩
ಗಾನ ಕೇಳಿ
ಮೌನ ತಾಳಿ
ಮೂಕವಾಯ್ತು ಭಾವನಾ;
ಮನುಜಲೋಕ
ದಿವಿಜನಾಕ
ಗೈದ ಕುಹೂ ಕೂಜನಾ.

೪
ಎದೆಯು ಮಿಡಿದು
ತಾಳ ಹಿಡಿದು
ಕುಣಿಯುತಿಹುದು ಈ ಚಣಾ;
ರಸದ ಕಡಲು
ಹಿಗ್ಗಿನೊಡಲು
ತರತರಂಗ ಬಾಜನಾ.

೫
ರಸದ ಚಿಲುಮೆ
ಹರಿಸಿ, ಒಲುಮೆ
ಸುಧೆಯ ನೀಡು ಕೋಗಿಲೇ
ಮೌನ ಧ್ಯಾನ
ನಿನಗೆ ಊನ
ಕುಕಿಲು ಜಾಣ ಕೋಗಿಲೆ.

## ಮಾಯಾ ಕೋಲಾಹಲ

ಮಮಕಾರ ಮೋಹಿನಿಯರೊಸೆದಿಟ್ಟ ಮೂರ್ತಿಯೆನೆ
ಚೆಲುವು ಮೈವೆತ್ತಂತೆ, ರತಿಯ ಪುತ್ಥಳಿಯಂತೆ
ಜನಿಸಿರ್ದ ಮಾಯೆ ಕಳೆಯೇರಿ ಬಗೆಗೊಳ್ಳುತಿರೆ,
ವಿಧ ವಿಧದ ಹಾವಭಾವಂಗಳಲಿ ಭಣಿತೆಯಲಿ
ಎಸೆದಿರಲು, ಜ್ಞಾನಿ ನಿರಹಂಕಾರರಮಿತ ತಪ-
ಸೂನು ಶಿವರೂಪಾದ ಅಲ್ಲಮಂ ಮಧುಕೇಶ
ಗುಡಿಯಲ್ಲಿ ನುಡಿಸುತಿರೆ ಮದ್ದಳೆಯ ಸೊಲ್ಲಿಗನು-
ಮೋದಿಸುತ ಮೋಹಿಸಿದಳಾ ಮಾಯೆ ಕಾಮಿನಿಯು!

ಪಾರ್ವತಿಯ ತಾಮಸದ ಗುಣಗಳಿಕೆ ಮಾಯೆಯಲಿ
ಮದನಾಗ್ನಿ ಹೊತ್ತಿತೆನೆ ಬೇಟವಟಮಟಿಸುತಿರೆ,
ಅಲ್ಲಮನು ಕಂಗಳಿಗೆ ಮಿಂಚುತಿರೆ, ಚುಂಬನಕೆ
ನಿಲುಕದಿರೆ, ಅಪ್ಪುಗೆಗೆ ಸಿಲುಕದಿರೆ, ಬರಿ ಬಯಲು
ಚಪ್ಪರಿಸಿ ಮೈ ಸೋತ ಮಾಯೆ ಚಿಂತಾಕುಲಂ
ಭಾವಿಸಲು ನಿರ್ವಯಲು ಮಾಯೆ ಕೋಲಾಹಲಂ.

## ತಂಗಿಯ ಓಲೆಯನ್ನೋದಿ . . . .

"ಒಂದೆ ಮನೆತನದಲ್ಲಿ ಜನಿಸಿದ್ದರೊಳಿತಿತ್ತು"
ಎಂಬ ಮುತ್ತಿನ ಸಾಲು ತಂಗಿಯೋಲೆಯೊಳಿತ್ತು;
ಓದುತೋದುತಲಿರಲು ಕಣ್ಣು ಹನಿಗೂಡಿತ್ತು;
ಕಿವಿಗವಿಗಳಲ್ಲಿ ಆ ನುಡಿಯೆ ಪಡಿ ನುಡಿದಿತ್ತು;
ಮೈ ನವಿರೊಳದ್ದಿತ್ತು; ಎದೆಯ ಬಟ್ಟಲಿನಲ್ಲಿ
ಧನ್ಯತೆಯ ವಿಮಲಜಲ ತುಂಬಿತುಳಾಕಾಡಿತ್ತು.

ಅವಳಂತರಂಗದೆಳವಳ್ಳಿ ದಾಂಗುಡಿಯಿಟ್ಟು
ಕೃತಕತೆಯ ಕಟ್ಟಳೆಯ ಮೀರಿ ಮಮತೆಯ ತೋರಿ
ಎನ್ನೆದೆಯನಾವರಿಸಿ ಕರುಣೆ ಹೂ ತಳೆದಿತ್ತು;
ತಿಳಿಯೊಲವು ನರುಗಂಪ ಸೂಸಿತ್ತು; ಪೂಸಿತ್ತು.

ಬಾಳಕೊಳಗುಳದಲ್ಲಿ ನೋವಿನೆಳೆದಾಟದಲಿ
ಆಶೆಯಾಕಾಂಕ್ಷೆಗಳು ಹುಡಿಗೂಡುವನಿತರಲಿ
ಗಾಸಿಗೊಂಡಿಳೆಗೊರಗಿ ಕಣ್ಣೆವೆಯು ಜಡಮಾಗಿ
ಬದುಕಿರುವ ಜೀವಿಗಿಹುದದುವೆ ತಣ್ಣೆಳಲಾಗಿ.

## "ಗೆಲುವೆನೆಂಬುವ ಭಾಷೆ"

ಸಂಸಾರ ದಂದುಗದ ಹುರಿಹಂಚಿನಲಿ ಬೆಂದು
ಹುರುಪಳಿಸಿ ತಡಬಡಿಸಿ ನಾಣುಗೆಟ್ಟೋಡುತಿಹ
ಅಳಿಮನದಿ ತಲ್ಲಣಿಸಿ, ನಂಬದಿಹ ನಚ್ಚದಿಹ
ಡಾಂಭಿಕದಲಂಕಾರ ತೊಟ್ಟ ಜೀವವೆ, ಎಂದು

ಎಂದು ನಿನ್ನಯ ಬಾಳಿಗೊಂದು ನಿಲುಗಡೆ ಸಂದು
ಕಲ್ಯಾಣಮಾದಪುದು, ಶಾಂತಿ ನೆಲೆಗೊಳ್ಳುವುದು?
ಭಾವಶುದ್ಧಿಯ ಪಡೆದು ಮಿಥ್ಯತೆಯ ಕನಸೊಡೆದು
ಸತ್ಯಶಿವ ಸೌಂದರ್ಯಗಳನರಿತು ಹಾಡುವುದು?

ಶರಣ ಸಂದೇಶದಪರಂಪಾರ ಜಲಧಿಯಲಿ
ಮುಳುಗಿ ಕಾಣಲ್ಲಿಹುದು ವಚನ ರತ್ನದ ರಾಶಿ;
ಬೆಳಗಿನೊಳಗಿನ ಮಹಾ ಬೆಳಗಿನಿಂದುದ್ಭವಿಸಿ
ಘೋಷಿಸುವದೊಂದು ನುಡಿ ನವಖಂಡ ಪೃಥ್ವಿಯಲಿ:

"ಎಲೆ ದೇವ ನಿನ್ನದಿದೆ ಕೊಲುವೆನೆಂಬುವ ಭಾಷೆ
ಆದರಿದೊ ಭಕ್ತನದು ಗೆಲುವೆನೆಂಬುವ ಭಾಷೆ."

## ಮೇಘೋಪಾಸನೆ

ಎಂದಿನಿಂದಲೋ ಬಾನಬಟ್ಟೆಯಲಿ ಮೋಡ ಓಡುತಿಹವು!
ನೋಡ ನೋಡುತಿರೆ ಕಾಡುಮೇಡುಗಳ ದಾಟಿ ಸಾಗುತಿಹವು;
ಗಾಳಿ-ಗೆಳೆಯನೊಡನಾಟವಾಡಿ ಬೇಸರವ ನೀಗುತಿಹವು.
ಹಸುಳರಂತೆ ನಸುನಕ್ಕು ಅಂಬೆಗಾಲಿಕ್ಕಿ ನಡೆಯುತಿಹವು.

ಹಂಸ ಕುರಿಯಮರಿ ಆನೆ ಒಂಟೆ ಹಸು ಪ್ರಾಣಿರೂಪ ತಳೆದು
ತಾಗಿ ತುರುಗಿ ದಿಗ್ವಿಜಯಕೆಯ್ದುವಾ ಸೈನ್ಯದಂತೆ ನಡೆದು;
ಉಣ್ಣೆಯಾಗಿ ಮಿದುಬೆಣ್ಣೆಯಾಗಿ ಹಿಂಜಿರುವ ಅರಳೆಯಾಗಿ
ತೊಟ್ಟಿಲಾಗಿ ತೂಗುವವು ಮೋಡಪಡೆ ನಡೆವ ಬೆಟ್ಟವಾಗಿ.

ಕ್ಷಿತಿಜದಂಚಿನಲಿ ಸಂಚುವೆತ್ತು ಮುಂಜಾವು ಮೌನವಾಂತು
ತಲೆಯ ಬಾಗಿ ನಿಂತಿರಲು ಬಾಲರವಿ ಕಿರಣಕೈಗಳೋತು,
ಉಬ್ಬಿ ತಬ್ಬಿ ಚೆಂಬೆಳಕನುಣಿಸಿ ಹೊಂದೊಡವ ತೊಡಿಸಿ ಮುಡಿಸಿ
ರಮಿಸಲಾಗಿ ನಿಬ್ಬಣದ ಬೀಗರೆನೆ ಹರುಷ ಗರುವವೆರಸಿ-

ನೀಲಗಗನದಲಿ ತೇಲಿಬಹವು ಸಿಂಗಾರಗೊಂಡು ಮುದದಿ
ಅಂತರಿಕ್ಷದಲಿ ಯಕ್ಷಕನ್ನೆಯರ ಬಿನದ ಲೀಲೆ ತೆರದಿ;
ವ್ಯೋಮರಂಗದಲಿ ಗಾಳಿಸಂಗದಲಿ ನಲಿದು ನೃತ್ಯವಾಡಿ
ಮುಗಿಲಯುಗಲಗಳು ಮುಂದೆ ಸಾಗುವವು ಬಂದ ದಾರಿ ನೋಡಿ.

ಹೊತ್ತುಮೀರಿ ನಡುನೆತ್ತಿಗೇರಿ ಬರೆ ಬಿಸಿಲಹಣ್ಣನುಂಡು
ಮೆಲ್ಲಮೆಲ್ಲನೇ ಕಲ್ಲುಬಂಡೆಯೊಲು ನಿಲ್ಲುವುದನು ಕಂಡು,
ಮೂರು ದಾರಿ ಕೂಡಿರುವ ಧೂಳಿಯೊಡನೆದ್ದು ಗಾಳಿ ಬೀಸೆ
ಎತ್ತಲೆತ್ತಲೋ ಕತ್ತನೆತ್ತಿ ಸಾಗುವವು ಜೀವ ರೋಸೆ.

ಯಾವ ಹರಕೆಯನು ಹೊತ್ತು ಹಡೆದಳೋ ಕಡಲರಾಣಿ ಇವನು!
ನಿಮಿಷ ನಿಮಿಷಕೂ ಭ್ರಮಿಸುತಿರುವ ಕ್ರಮವರಿತ ತ್ರಿಪುರ ಹವಣು.
"ನಿಂತ ಬಾಳು ಬಾಳಲ್ಲ, ಮಲೆತು ನಿಂತಿರುವ ನೀರು ನೋಡ"
ಎಂದು ಜಗದ ಜಂಗುಳಿಗೆ ಅರುಹಲಿಕೆ ಬಂದವೇನೊ ಮೋಡ!

ಕಾದು ಸೀದು ನೆಲ ಮೋದಗೆಟ್ಟು ಬಾಯ್ಬಿಟ್ಟು ಹಲುಬುತಿರಲು
ತಾರವಾದ ತಿರೆ ಪ್ರಾಣತಂತುವೊಲು ತಂಪು ಗಾಳಿ ಹುಗಲು
ಕರುಣೆ ಕರಗಿ ನೀರಾಗಿ ಸುರಿವ ತೆರ ಮೋಡದೊಡಲಿನಿಂದ
ಮಳೆಯು ಬೀಳೆ ಹೊಸ ಕಳೆಯು ಹೊಮ್ಮುವದು ಇಳೆಯ ಬಸಿರಿನಿಂದ.

ತಂಪು ಸೊಂಪು ಏನಿಳೆಯ ಕಂಪು! ಸುರಿಮಳೆಯ ತಳಿಯ ಸೆಳಕು
ಮೋಡ ಸರಿಸಿ ಕಣ್ಣಾಡಿಸಿರಲು ರವಿ, ಹೊನ್ನ ಬಿಸಿಲ ಥಳಕು.
ನರಿಯ ಮದುವೆ ನಡೆದಿರಲು ಮುತ್ತುಹನಿ ಚೆಲ್ಲವರಿದ ಸೊಗವು.
ತಡೆದರಿಲ್ಲ ಚಣ ಮಾಯವಾಗುವುದು ಮುಗಿಲಕಾಂತಿ ಹರವು.

ಆಹ! ನೋಡ ಮಳೆಬಿಲ್ಲ ಮೋಡ ಹನಿಯಂಬನೆಸೆಯುತಿಹುದು
ಏಳು ಬಣ್ಣಗಳ ಮೇಳದಲ್ಲಿ ಕಾರಂಜಿ ಪುಟಿಯುತಿಹುದು.
ಬಾನು ಬುವಿಯ ಅಂತರವನಳೆದು ಮಳೆಬಿಲ್ಲ ಸೇತು ನಿಲಿಸಿ
ಮೆರೆಯುತಿಹುದು ಸಿರಿ ಸಗ್ಗದಪ್ಸರೆಯ ಸೆರಗ ಬೆರಗೊ ಎನಿಸಿ.

ಅಸ್ತಗಿರಿಗೆ ರವಿ ತೆರಳುತಿರಲು ಓ, ಬಾನ ತುಂಬ ಹಬ್ಬ!
ಬಣ್ಣದೋಕುಳಿಯ ಮಿಂದ ಮೇಘಪುರ ಬಾನಿನೆದೆಯ ಕಬ್ಬ.
ಸಂಜೆಯಾಗಸದಿ ಕಪ್ಪು ಮೋಡವೂ ಹೂವಿನಂತೆ ಅರಳಿ
ಬಾಳು ಒಳ್ಳಿತೆನೆ ಕಣ್ಣಸೆಳೆಯುವದು ಬಿಟ್ಟು ಬಿಡದೆ ಮರಳಿ.

ಇರುಳಿನಾಳದಲಿ ತೆಪ್ಪಗಾಗಿ ತಿರೆ ನಿದ್ರೆಗೈಯುತಿರಲು
ಕಾರಮುಗಿಲು ತೇರ್ಗೈಸಿ ಬರಲು ಜಗ ಕಪ್ಪು ತಿಮಿರ ಕಡಲು;
ಮಿಂಚು ಗೊಂಚಲಲಿ ಬೆಳಕ ಚಿಮ್ಮುತಲಿ ಹೊಸತು ಮಾಯೆ ಎನಿಸಿ
ಹೊಂಚು ಹಾಕಿ ಧಡಧಡಿಸಿ ಗುಡುಗೆ ಘನಘೋರ ಮಳೆಯಸುರಿಸಿ.

ಚಿಕ್ಕೆ ಚಂದ್ರಮಾ ಏನು ಸಂಭ್ರಮಾ ಮನದ ಭ್ರಮೆಯ ಹರಿಸಿ
ಮನುಜಲೋಕ ಮಂದಾರನಾಕವಾಗಿರುವುದೇನೋ ಸ್ಮರಿಸಿ;
ತಿರುಕರಂತೆ ಸೋಮಾರಿಯಂತೆ ತುರುಮೋಡ ತಿರುಗುತಿರಲು
ಚಂದ್ರನೆದೆಯ ಚೆಲ್ವೆಳಕ ನೀಡುವನು ಸ್ನೇಹಕಾಗಿ ಬರಲು

ಚಂದ್ರಕಾಂತಶಿಲೆಯಂತೆ ಮೋಡ ಬೆಳುದಿಂಗಳನ್ನು ಕುಡಿದು
ಬಾನದೇಗುಲದಿ ಬೆಳ್ಳಿ ತೇರಿನೊಲು ಮಂದವಾಗಿ ನಡೆದು-
ಸಾಲುಗೊಂಡು ಕೆಲ ಮೋಡದಂಡು ಗಿರಿಶಿಖರದಲ್ಲಿ ತಳುವಿ
ಬೆಳ್ಳಿಬಟ್ಟಲದ ಸುಧೆಯ ಕಾಯುವವು ಆಗದವರ ತರುಬಿ.

ಏಸು ರಾಜ್ಯದಲಿ ಅಲೆದರೂನು ನೆಲೆಯಿಲ್ಲದಾಯಿತಿವಕೆ
ಏಸೊ ಜನದ ಮತ್ತೇಸೊ ಬನದ ಸಿರಿಕಾಂಬ ಕಣ್ಣೊ ಇವಕೆ!
ಸುತ್ತುತಿರುವ ಧರೆ ಸುತ್ತು ತಿರುಗುತಿವೆ ತಲುಪಲಿಲ್ಲ ಕೆಲಕೆ;
ಸುರಿಯಬೇಕು ಸರಿ, ನೀಗಬೇಕು ಉರಿ- ಎಂಬ ಬಯಕೆ ಇವಕೆ.

ಮುಗಿತವಿಲ್ಲದಿಹ ಗಗನದಲ್ಲಿ ಹಗಲಿರುಳಿನಲ್ಲು ಪಯಣ
ಬೆಂದ ನೆಲಕೆ ಕಣ್ಣೀರ ಕರೆಯೆ ಅದೆ ಸಾರ್ಥಮಾಯ್ತು ಹರಣ.
ದಿಗ್ದಿಗಂತಗಳ ಹಂತವೇರಿ ಅಗ್ಗಲಿಸುತಿಹವು ಕಣ್ಣ,
ಬಾನದಿಬ್ಬಣದಿ ಬಣ್ಣತಿಣ್ಣದಲಿ ನುಣ್ಣಗಾದುವಣ್ಣ.

ಬಾಲ್ಯದಿಂದಲೂ ಮುಗಿಲ ಕಂಡು ಮೈಮರೆತ ದಿನಗಳೆನಿತು!
ಅವುಗಳಾಟದಲಿ ಮೈಯಮಾಟದಲಿ ಜೀವ ತುಂಬಿ ಬಂತು.
ಗಾಸಿಗೊಂಡ ಎದೆಯಾಸೆ ಕನಸುಗಳನಲ್ಲಿ ನೇಯುತಿಹೆನು
ಹಕ್ಕಿ ಮೋಡದೆಡೆ ಹಾರಿ ಹಾಡುವೊಲು ಕರೆಯ ಕೇಳುತಿಹೆನು.

ಮೇಘಮಂಡಲವು ಜಗದ ಜನದ ಮನದಾಸೆ ಗೋಪುರಹುದು
ಗತಿಸಿ ಹೋದ ಹಿರಿಜೀವರುಗಳ ಹಿರಿ ತತ್ವ ಸಾರುತಿಹುದು;
ಧೀರ ಪೌರುಷದಿ ಬಾಳ ಬಿತ್ತರಿಸಿ ಮಿಂಚಿರೆಂಬ ಉಲುಹು
ಇಷ್ಟವಿರದ ಕಡುಕಷ್ಟವಡಸಿದರು ಮೊಳಗಿರೆಂಬ ಬಲುಹು.

ಗಾಳಿಗೂಡಿ ಕಿರುಮೋಡವಾಗಿ ಬಾನೆಲ್ಲ ಅಲೆಯುವಾಸೆ,
ಬಾನದೇಗುಲದಿ ನಮ್ರವಾಗಿ ಮೈದುಂಬಿ ನಿಲ್ಲುವಾಸೆ,
ಮಳೆಯಬಿಲ್ಲ ಮೈದೊಡವ ಧರಿಸಿ ಮಣಿಹನಿಗಳಾಗುವಾಸೆ,
ಚಂದ್ರನೆದೆಯ ತಿಳಿಯೊಲವನುಂಡು ಶ್ರೀಕಾಂತಿಪಡೆಯುವಾಸೆ.

ನೋಡೆ ನೋಡೆ ಎನಿತೆನಿತೊ ಆಸೆ ಅದಕಾದಿ ಅಂತ್ಯವಿಲ್ಲ;
ಹಿಂದು ಹಿಂಡಿನಲಿ ತೋರಿ ಮೆರೆಯುತಿವೆ ಏಕೊ ಯಾವ ಬಲ್ಲ;
ಹಿರಿದು ಮನಸು ಹಿರಿದಾದ ಭಾವ ಮುಗಿಲಗಲವಾಗಬೇಕು
ಮೋಡನೋಡಿ ದಿಙ್ಮೂಢನಾಗಿ ಮೈಮರೆವೆನಲ್ಲ ಸಾಕು.

## ಒಳ್ದುರಿಗೆ

೧

ನೀಲ ನೀಲ ನಿರ್ವಿಕಾರ ನಿರುತ ಬಾನಲಿ
ತಾಳಗೆಟ್ಟ ತಿರೆಯ ಬಾಳಿನಾಚೆ ಬಯಲಲಿ
ತಿಳಿಯ ಬೆಳಕು ಚೆಲ್ಲವರಿದನಂತ ಪಟದಲಿ
ಬರೆದೆನಯ್ಯ ಗುರಿಯ ಚಿತ್ರ ಎದೆಯ ಕುದಿಯಲಿ.
ಒಳಿತು ಕೆಡಕು
ಮನದ ಮಿಡುಕು
ಮೇರೆ ಮೀರಿ ಹಾತೊರೆದಿರೆ
ದೇಹವೆಲ್ಲ ತತ್ತರಿಸಿರೆ

ಕಿರಣಕಂಡೆನು
ಹರುಷಗೊಂಡೆನು;
ಆದರೇಕೊ ಶಾಂತಿ ಬಾರದಯ್ಯೊ ಮನಸಿಗೆ
ಉರುಳುತಿಹುದು ಜೀವಝುರಿಯು ಅಳಲ ಕಡಲಿಗೆ.

೨

ಕಲ್ಲು-ಮುಳ್ಳು ತುಳಿದು ದಾರಿ ಸಾಗುತಿರುವೆಡೆ
ಹೆಜ್ಜೆಗೊಂದು ಬಿಜ್ಜೆನುಡಿಯ ನೆನಪು ಬರುವೊಡೆ,
ನಂಬಿದಂಥ ಬಿಂಬ ಕಣ್ಣ ಸೂರೆಗೊಂಡೊಡೆ
ಒಲವಿನೊಂದು ಸೂತ್ರವಿಡಿದು ಬರುವೆ ನಿನ್ನೆಡೆ.
ನನ್ನದೇನು?
ನಾನೆ ನಾನು!
ಉಳಿದ ಒಡವೆ ವಸ್ತುವಿಲ್ಲ
ಅದರ ಬಯಕೆ ನನಗೆ ಹೊಲ್ಲ;
ಇದುವೆ ಪಂಥವು
ನನ್ನ ಹಂತವು.
ಬಾಡುತಿಹುದು ಎದೆಯ ಮುಗುಳು ಬೆಳಕಿನಾಸೆಗೆ
ಉರುಳುತಿಹುದು ಜೀವಝುರಿಯು ಅಳಲ ಕಡಲಿಗೆ.

೩

ಬಿಡುವಿನೆಡೆಗೆ ಸಾಗಲೆಂದೆ; ಇಲ್ಲ ಬಿಡುಗಡೆ
ಬಯಸಿದನಿತು ಬಿಗಿಯುತಿಹುದು ಬಂಧವೊಂದೆಡೆ.
ಎನ್ನಪಾಡಿಗೆನ್ನಬಿಡದು, ಎಲ್ಲಿ ನಿಲುಗಡೆ?
ಬೇರೆಯೊಂದು ಶಕ್ತಿ ಎಳೆಯುತಿಹುದು ತನ್ನೆಡೆ.
ಸಾಗಲೇನು,
ನೀಗಲೇನು?
ಎದೆಯು ಮಿಡಿದು ಕಾತರಿಸಿರೆ
ಬಾಳಿನಾಸೆ ಪೂತ್ಕರಿಸಿರೆ
ಕಣ್ಗೆ ಕತ್ತಲು
ಸುತ್ತು ಮುತ್ತಲು,
ಗಾಢತಮದ ಗೂಢ ನಿಬಿಡ ಕಾಡಿನೊಡಲಿಗೆ
ಉರುಳುತಿಹುದು ಜೀವ ಝುರಿಯು ಅಳಲ ಕಡಲಿಗೆ.

೪

ನನ್ನ ನಿನ್ನ ನಡುವೆ ನೂರು ಕೋಟೆ ಕೊತ್ತಲ,
ಇದ್ದರೇನು, ಇಲ್ಲವೆನಿಸಿಬಿಡುವ ಹಂಬಲ.
ಮತಿಯು ಕಲಕದಿರಲಿ, ಆಗದಿರಲಿ ಚಂಚಲ
ಸೋಲು-ಗೆಲುವು, ನೋವು-ನಲಿವು ನೆಳಲು ಬೆಳಕಲ;
ಬಿಗಿದ ಮುಷ್ಟಿ
ನೆಗೆದ ದೃಷ್ಟಿ
ಕಲ್ಲಿಗಿಂತ ಕಲ್ಲಾಗಿರೆ
ಉಕ್ಕಿಗಿಂತ ಉಕ್ಕಾಗಿರೆ
"ಸಿಡಿಲ ಹಿಡಿವೆನು!
ಕಡಲ ಕುಡಿವೆನು!"
ಅಂತರಂಗ ನುಡಿವುದಿಂತು ಬಾರಿ ಬಾರಿಗೆ
ಉರುಳುತಿಹುದು ಜೀವಝರಿಯು ಅಳಲ ಕಡಲಿಗೆ.

೫

ಬಾನ ಗುರಿಯ ಬೆಳ್ಳಿ ಚಿಕ್ಕೆ ಮಿನುಗು ಮಿನುಗೆಲೆ
ನೊಂದ ಬೆಂದ ಜೀವಿಗಿನಿತು ಬೆಳಕ ತೋರೆಲೆ
ಪಂದೆಯಾಗಿ ಜೀವಿಸುವದು ಬೇಡ ಬೇಡೆಲೆ
ಮುಂದಿನೊಳಿತು ಬಟ್ಟೆಯಲ್ಲಿ ಜೀವ ತೇಯೆಲೆ.
ಇಂದಿನಿಂದ
ಗಂಧ ಚೆಂದ
ಕೀಳು ಬಾಳಿನಿಂದ ನೀನು
ಮೇಲಕೆತ್ತಲಾರೆಯೇನು?
ಹೇಳು ಒಳ್ಗುರಿ,
ತಾಳೆ ಬಾಳುರಿ
ನನ್ನದೆಲ್ಲವನ್ನು ಧಾರೆಯೆರೆಯೆ ಮಹಾದರ್ಶಕೆ
ಉರುಳುತಿಹುದು ಜೀವಝರಿಯು ಅಳಲ ಕಡಲಿಗೆ.

## ನಂಜುಂಡನಾಗಿ ಬಾಳು

೧

ನಿಮಿನಿಮಿಷಕೂ ಹಿಂಡುಹಿಂಡಾಗಿ ಬರುತಲಿವೆ
ನೈರಾಶ್ಯದಭ್ರಂಗಳು;
ಬಾಳ ಬಾಂದಳದಲ್ಲಿ ತೊತ್ತಳಂದುಳಿಯುತಿವೆ
ಬೆಳಕೆಲ್ಲಿ? ಬರಿಯ ಇರುಳು!
ಒಂದಾದರಿನ್ನೊಂದು ಮುಂಬರಿದು ಕಂಗೆಡಿಸಿ
ಕಾಳುಗೆಟ್ಟೋಡಿಸುವವು;
ಬೆಂದೊಡಲ ಕಡಲಾಳ ಹಿರಿಯಾಸೆ ವೀಚಿಗಳು
ದಂಡೆಗಪ್ಪಳಿಸುತಿಹವು.
ದನಿಯು ಮರುದನಿಗೊಂಡು ಸೋಲುಗಳು ಸಾಲ್ಗೊಂಡು
ತಾಂಡವಂಗೈಯುತಿಹವು,
ಎದೆಯಟ್ಟ ನಿರಿನಿಟಿಲು; ಹೂಗಿಡಕೆ ಬರಸಿಡಿಲು
ಬಡಿಯುತಿರೆ ಬಾಳ್ವುದೆಂತು?

೨

ಸಂಜೆಯಾಗಸದಲ್ಲಿ ಹೊಂಬೆಳಕು ಚಿಮುಕಿರಲು
ಕಾರ್ಮೋಡ ಹೂವಾಗದೆ?
ಜೀವನದ ಕಣದಲ್ಲಿ ಆ ಬೆಳಕು ಮೂಡಿಬರೆ
ಹೆದ್ದಾರಿ ತೋರಬಹುದೆ?
ಉತ್ತಿಬಿತ್ತಿದ ಬೀಜ ಮೊಳಕೆಯಲಿ ಹೊರಬಂದು
ಚಿಗುರಾಗಿ ಚೆಲ್ವರಿದಿರೆ,
ಹೂವಾಗಿ ಮಿಡಿಯಾಗಿ ಪಾಡಾಗಿ ಹಣ್ಣಾಗೆ
ಕಷ್ಟವೆನಿತನುಭವಿಸಿರೆ!

೩

ವಿಧಿಮಾಟದೇರಾಟ ಹೋರಾಟಗಳಿಗೆಲ್ಲ
ಎದೆಗೊಟ್ಟು ನಿಲ್ಲು ಜೀವ;
ಕಲ್ಲುಕಲ್ಲಾಗಲೆದೆ ಸಂಕಷ್ಟ ಸಂತತಿಗೆ
ಅಣಿಗೊಂಡ ವಜ್ರಾಯುಧ.
ಕುದಿಕುದಿದು ಬೆಂದು ಬೇಗುದಿಗೊಂಡ ನಿನ್ನಾಸೆ
ಹೊರಚೆಲ್ಲಿ ಹರಿಯದಿರಲಿ;

ಬಂದಡರಿಡೆಡರು ತೊಡರುಗಳೆಲ್ಲ ಹೊಸಹೊಸೆದು
ಬತ್ತಿಗೈ ಸೊಡರಾಗಲಿ.
ನಿನ್ನೊಡಲ ಕಡಲ ಕಡೆ. ಬರುವಮೃತ ವಿಷಗಳನು
ಜೊತೆಯಾಗಿ ಕುಡಿಯುತಿರಲು,
ಬರಿಯ ವಿಷ ಕಾರದಿರು, ಲೋಕ ತಲ್ಲಣಿಸೀತು-
ನಂಜುಂಡನಾಗಿ ಬಾಳು.

## ಏಕಿನಿತು ಮರುಗುತಿಹೆ?

ಏಕಿನಿತು ಮರುಗುತಿಹೆ, ಕೊರಗಿ ಸಣ್ಣಾಗುತಿಹೆ
ಬಯಕೆ-ನಂದನ ಮುಳ್ಳು ಬೇಲಿಯಾಯ್ತೆ?
ಎದೆಯ ತಿಳಿಗೊಳದಮಲ ಕಮಲ ದಲ ಹಾಸಿನಲಿ
ಅಣಕು ನುಡಿಗಳ ವಿಕಟ ನಾಟ್ಯವಾಯ್ತೆ?

ಜೀವನದಗಾಧಮಯ ಹೋರಾಟದಲ್ಲೊಂದು
ಬಾಣ ನಟ್ಟಿರೆ ಅದಕೆ ನರಳಬಹುದೆ?
ಇದಕಿಂತಲೂ ಘೋರ ಎಡರೆದ್ದು ಬಡಿಯಲಿವೆ
ನೊಣೆಯಲಿವೆ, ಅದನರಿಯದೇನು ಬಗೆದೆ?

ಒಮ್ಮೆ ತಲೆಗೊಟ್ಟಿರಲು ಹಿಂಜರಿಯದಿರು ಮನವೆ
ದೋಷ ನೂರಾರದಕೆ ಅಪ್ಪಳಿಸಲಿ;
ಗೋಡೆಗೊಗೆದಿಹ ಚೆಂಡು ಹಿನ್ನೆಗೆದು ಬರುವಂತೆ
ಹುಸಿಯಾಟ ಗೆಲ್ಲುವದೆ ಬಾಳಿನಲ್ಲಿ?

ನಿನ್ನ ದಾರಿಯ ನೀನು ಹುಡುಕುತಿರು ಪಯಣದಲಿ
ಹಲವು ಮನಗಳ ತಣಿಪ ಆಸೆ ಬೇಡ;
ನಿನ್ನ ಗುರಿಯದೊ ದೂರ, ಸೇರಲೆಳಸುವ ಧೀರ
ಕರ್ತವ್ಯಚ್ಯುತನಾದರಯ್ಯೊ ಕುರುಡ.

ಬಾಳು ಚಕ್ರವ್ಯೂಹ ಕೋಟೆಗಿಂತಲು ಕಠಿನ
ಜೇಡಬಲೆಯಂತೆ ಬಲು ಜಟಿಲಕುಟಿಲ;
ಆ ಬಲೆಗೆ ಅಂಟಿರುವ ಮಂಜುಹನಿಯೊಲು ತೊಳಗು
ನೊಣವಾಗಿ ನುಗ್ಗಿದರೆ ಜೀವ ವಿಫಲ.

ಏಳು ಮೇಲೇಳು ತಿಳಿವೆಳಕಿನೆಡೆ ಕೈ ನೀಡು
        ನಿನ್ನ ಬಗೆ ಬೊಗಸೆಯಲಿ ಒಲವು ಸುರಿದು
ಮೊಗದ ದುಗುಡದ ಮೋಡ ಮಿಂಚು ನಗೆ ತಳೆಯುವದು
        ತಣಿಸುವದು ಎದೆಗುದಿಗೆ ಮಳೆಯನೆರೆದು.

## ತಾಳ್ಮೆ

ಬಾಳಕೊಳಗುಳದಲ್ಲಿ ಚೀರಾಡಿ ಬೋರಾಡಿ
        ಬಡಬಡಿಸಿ ಅಟ್ಟುಂಡುದೇನು ಜೀವ?
ದಿನಬೆಳಗು ಅವರಿವರ ಬಾಯಮಾತಿನ ಕಂತೆ
        ಮೋಡಿಯಲಿ ಕಳೆದರೇನೆದೆಯ ನೋವ?

ತಲೆಗೊಂದು ನುಡಿಯುವರು, ಪಂಥವನೆ ಹೂಡುವರು
        ತಾವೆ ಅತಿರಥರೆಂದು ಸಾರುತಿಹರು;
ಅರೆಗೊಡದ ಬುಡುಬುಡಿಕೆ ಅಲ್ಪತೆಯ ತೋರ್ಪಡಿಕೆ
        ತಥ್ಯವಿಲ್ಲದ ಹೊಟ್ಟ ತೂರುತಿಹರು.

        ಗಂಭೀರ ಗಿರಿಯೆದುರು ಬಿರುಗಾಳಿ ಗುಲ್ಲು.
        ತುಂಬಿದಂಬರದಲ್ಲು ಶಾಂತಮಯ ಸೊಲ್ಲು.
        ಮೌನ-ಗಾನ-ಧ್ಯಾನ-ತವಸಿಯಂತಾಗು
        ಬಾಳಿನುಯ್ಯಾಲೆಯನು ತಾಳ್ಮೆಯಲಿ ತೂಗು.

## ಚಂದಿರ

ನೀಲ ನಿರ್ಮಲದಾಗಸದಿ ನಿಶ್ಚಿಂತನಾಗಿಹ ಚಂದಿರ
        ಬಾನು ತೊಳಗಿದೆ, ಬುವಿಯು ಬೆಳಗಿದೆ ಶುದ್ಧ ಪಳುಕಿನ ಮಂದಿರ.

ನಿನ್ನ ನಗೆ ತನಿವೆಳಕ ತುಳುಕಿಸಿ ಸೂರೆಯಾಗಿದೆ ಸುಂದರ
        ನಿನ್ನ ದಯೆ ಸುಧೆಯಾಗಿ ಸುರಿದಿದೆ ಬೆಳ್ಳಿಗಿರಣದ ಹಂದರ.

ಚಿಕ್ಕೆ ಚಕ ಚಕ ಜೊನ್ನ ಪೂರದಿ ತೇಲಿಮುಳುಗಿವೆ ಮೋಹನ
        ಜಗದ ಜಡ ಬಡ ಜೀವಗೇಹದಿ ಶಾಂತಿಯಮೃತದ ಸೇಚನ.

ಬಾನ ಮೂಲೆಯ ಮೋಡಪಡೆ ಮುದಗೊಂಡು ಬರುತಿದೆ ತೇಲುತ
ಮದುಮಗನ ಸ್ವಾಗತಿಸೆ ನಿಬ್ಬಣ ಹೊರಟ ಸಂಭ್ರಮ ಹೋಲುತ.

ಶಾಂತಿ ಬೆಳುದಿಂಗಳಿನ ಹಾಲಲಿ ಕರಗಿದಂತಿದೆ ತಿಂಗಳ
ಸುಯ್ಯೆಲರು ಹಾಯಾಗಿ ತೀಡಿದೆ ಹದುಳವೆನೆ ಶುಭಮಂಗಳ.

ದೂರದಿಂದಲಿ ಕೇಳಬರುತಿದೆ ಕೊಳಲ ಕೊರಳಿನ ಗಾಯನ
ಸುಗ್ಗಿಯಲಿ ಹಿರಿಹಿಗ್ಗಿ ರಿಂಗಣಗುಣಿದು ಹಾಡಿದೆ ಜನಮನ.

ಇಂಥ ಸಮಯದಿ ಹಂಬಲದಿ ಬಾಯ್ದೆರೆದ ಸಿಂಪಿದು ಭಾವನ
ತರಗೆಲೆಯು ಗಿರುಕೆನಲು ಮೌನವೆ ಬಿಕ್ಕಿದೊಲು ಬರಿ ಕಲ್ಪನ.

## ಹೋರು ಬೀಳ್ವನ್ನೆಗಂ

ಅರರೆ! ನರಜೀವಿ ನರನನಿರಿಯುವದಿದೊಳ್ಳಿತೆ?
ಜಾತಿಮತ ಪಂಥಗಳ ಕೊಳಚೆಯಲಿ ಕಚ್ಚಾಡಿ
ಸೋದರತೆ ಮಾನವತೆ ದಾನವತೆಯಂ ಕೂಡಿ
ಪಾಳ್ಗೈದುದೇನಿದುವೆ ಸುಸಂಸ್ಕೃತಿಯ ಘನತೆ?
ನಾಡು ನಿಂತಿಹುದಿಂದು ಬಿಡುಗಡೆಯ ಹೊಸತಿಲಲಿ
ಕಳಚಲಿದೆ ಕೈ ಬೇಡಿ, ಮಿಡಿಯಲಿದೆ ಹೊಸ ನಾಡಿ
ಧುಮುಕಲಿದೆ ಬಿಸಿರಕುತ ಜಯ ಜಯವೆನ್ನಿ ಪಾಡಿ.
ನಲುಮೆ ನೆಮ್ಮದಿ ತುಷ್ಟಿ ಕುಟ್ಟಿಮದ ಪೀಠದಲಿ
ಸ್ನೇಹ ಸೌಹಾರ್ದತೆ ವಿಶ್ವಬಂಧುತ್ವದಿಂದ
ಪೂಜಿಸಿರಿ ಮಾತೆಯನು, ನವಜಗವಿಧಾತೆಯನು
ಚಂಡಿ ಚಾಮುಂಡಿಯನು, ಭೈರವಿ ಭಾರತಿಯನು.
ಎದ್ದೇಳಿ ಯುವ ಜನವೆ ಗೂಡು ಬೀಡುಗಳಿಂದ
ಜನುಮ ಜನುಮದ ದಾಸ್ಯ ಹರಿತರಿಯುವನ್ನೆಗಂ
ಶಿರವರಿದು ಪೋದೊಡಂ ಹೋರು ಬೀಳ್ವನ್ನೆಗಂ.

## ಬಂಧದಿಂ ಬಿಡುಗಡೆಗೆ

(ಅಗಸ್ಟ ಹದಿನೈದು)

ನಾಡಿನೆದೆಯಲ್ಲಿಂದು ಹರುಷ ಉಕ್ಕೇರುತಿದೆ
ಫಲಿಸಲಿದೆ ಬಹು ದಿನದ ಹಿರಿಯ ಬಯಕೆ;
ನಿಶೆಯಿಂದ ಉಷೆಯೆಡೆಗೆ, ಬಂಧದಿಂ ಬಿಡುಗಡೆಗೆ
ಜನಕೋಟಿ ಸ್ವಾತಂತ್ರ್ಯ ತೀರದೆಡೆಗೆ

ಸಾಗಿಹರು; ನೀಗಿಹರು ಹಾಳು ಕೊಳೆ ನೆನಹುಗಳ-
ಬಳಿಸಾರಿ ಬಂದಿಹುದು ಸೌಖ್ಯಸುದಿನ;
ಬಾಗಿಹರು ಹೊಸ ನಾಡ ನಾಯಕರ ಹೇಳಿಕೆಗೆ-
ಕೈಗೂಡಲಿಹುದವರ ಭವ್ಯಯಾನ.

ಸುಲಿಗೆ ಮೋಸ, ಸಭ್ಯತೆಯ ವೇಷ, ಸತ್ಯತೆಗೆ ಬಂದ ಹ್ರಾಸ
ಚಿನ್ನದಂಥ ನಾಡಿನಲಿ ಕನ್ನ ಕೊರೆದಂಥ ಕಳ್ಳ ಸಾಸ.
ಹಿಂದು ಮುಸ್ಲಿಮರ ಬಂಧುಬಾಂಧವರ ಭೇದಬೀಜವೆರಸಿ
ರಕ್ತದೋಕುಳಿಯ ಚೆಲ್ಲಿಸಿದರು ಕಣ್ಣೀರ ಕೋಡಿ ಹರಿಸಿ.

ದೇಶಭಕ್ತರನು ಸರ್ವಶಕ್ತರನು ಸೆರೆಯ ಕಾಳಕಿಳಿಸಿ
ಲಾಠಿ ಗುಂಡು ದುರ್ದಮ್ಯಶಿಕ್ಷೆ ಮರ್ದನೆಗೆ ರೂಪುಗೊಳಿಸಿ,
ಜನತೆಯುಸಿರ ಹತ್ತಿಕ್ಕಲೆಂದು ಸುತ್ತಾಡಿತಲ್ಲಿ ದಂಡು
ಅರಸುತನಕೆ ಓಗೊಟ್ಟುದಿಲ್ಲ ಎದೆಗೆಟ್ಟುದಿಲ್ಲ ಬಂಡು.

ಹಡೆದ ತಾಯ್ತಂದೆ, ಮಡದಿ ಮಕ್ಕಳನು, ಮನೆಯ ಮೋಹವನ್ನು
ತೊರೆದು ಬಂದು ಹೋರಾಟಕೆಂದು ನೀಗಿದರು ಪ್ರಾಣವನ್ನು
ಅವರು ಸುರಿದ ಕೆನ್ನೀರಧಾರೆ ಮುನ್ನೀರಿನಂತೆ ತೋರೆ
ಸ್ವಾತಂತ್ರ್ಯ ರವಿಯು ಮೂಡಿದನು; ಮುಖಕೆ ನೆತ್ತರಿನ ಕಲೆಯು ಬೇರೆ.

ಬಂತು ಬಂತು ಬಿಡುಗಡೆಯು ಬಂತು, ನಿಲುಗಡೆಯ ಹಾಡ ಬಂತು;
ಬಸವಳಿದ ಜನಕೆ ಯಶಕೋರಿ ಬಂತು, ಸಾಮ್ಯತೆಯ ಸುಧೆಯ ತಂತು.
ನರಳಿಕೆಯ ನೋವ, ಬಳಲಿಕೆಯ ಸಾವ ಮೆಟ್ಟಿಕ್ಕಿ ಉಕ್ಕಿ ಬಂತು.
ಅಮರತೆಯ ಹೀರಿ, ಸಮರಸತೆ ಬೀರಿ ಹೊಂದೇರನೇರಿ ಬಂತು!

ಇಂದಿಲ್ಲ ನಾಳೆ ಹೋಳಾದ ನಾಡು ಬೆಸೆದೀತು ಭಯವದೇಕೆ?
ಹಿಂದಾದ ಸಿರಿಯು ಎಂದಾದರೊಮ್ಮೆ ಮುಂದಿನ್ನು ಬಾರದೇಕೆ?
"ಭಾರತವು ಒಂದು, ಭಾರತಿಯು ತಾಯಿ, ಕುಲವೊಂದೆ ಭರತಕುಲವು"
ಎಂದೆಂಬ ಘೋಷ ಕೊರಲುಕ್ಕಿ ಬರಲಿ ಬಂದಂತೆ ಹಿರಿಯ ಹೊನಲು.

ಆಳುವವರ ಕುಟಿಲತೆಗೆ ಇನ್ನು ಮುನ್ನಿಲ್ಲವಿಲ್ಲಿ ತಾಣ,
ಸಾಮ್ರಾಜ್ಯಶಾಹಿ ಹೆಡೆಯೆತ್ತದಿನ್ನು ವಿಷಕಾರಲಾರದಣ್ಣ.
ಬೆಂದವರ ಬಳಿಗೆ, ನೊಂದವರ ಕೆಲಕೆ ಮಮತೆಯಲಿ ಬಂದುನಿಂದು
ಅಭಯತೆಯ ನೀಡಿ, ಮಂಗಲವ ಹಾಡಿ ಭಾರತಿಗೆ ನಮಿಸಿರಿಂದು.

ಭರತ ಭೂಮಿಯುದ್ದಾಮಕೀರ್ತಿ
ಧವಳತೆಯ ಶಿಖರವೇರಿ-
ಯುಗಯುಗದ ನಿದ್ರೆ ತಾಮಸದ ಮುದ್ರೆ
ಕಡಿದೊಗೆದು ದೂರ ತೂರಿ.

ಸಾವಿನೊಡನೆ ಸೆಣಸಾಡಿ ಗೆದ್ದೆವೋ
ಇನ್ನಿಲ್ಲ ಸಮರ ಮಾರಿ;
ನಾಲ್ವತ್ತು ಕೋಟಿ ನರಕುರಿಗಳಲ್ಲ
ಕೇಸರಿಗಳೆಂದು ಸಾರಿ,
ಜನಮನದ ರೂಢಿ ಮೌಢ್ಯತೆಯ ಸೀಳಿ
ಮಾರ್ಮೊಳಗುತಿಹುದು ಭೇರಿ!

ಅಣ್ಣತಮ್ಮದಿರ ಅಕ್ಕತಂಗಿಯರ ಹಿರಿಯ ಜೀವಗಳಿರ,
ನಾಡಿನೊಲುಮೆಯಲಿ ಒಲುಮೆಗೊಂಡ ದಿವ್ಯಾತ್ಮ ತೇಜಗಳಿರ
ಈ ದಿನದ ದಿವ್ಯದೋಜಸ್ಸಿನಲ್ಲಿ ತೇಜಸ್ವಿಯಾದ ಮನವು
ಬೆಳಬೆಳಗಲಿನ್ನು ಜಗದಗಲವಾಗಿ ಮಿಗಿಲಾದ ತನ್ನತನವು!

## ನಾವು ನಾಲ್ವತ್ತು ಕೋಟಿ

ಹಿಮಶೈಲದುತ್ತುಂಗ ಶಿಖರದಿಂದೀ ಸೇತು-
        ವರೆಗೆ ಹಬ್ಬಿದ ನಾಡು ಭಾರತವಲಾ; ಗಂಗೆ
        ಗೋದಾವರಿಯು, ಸಿಂಧು ಕಾವೇರಿಯರು, ತುಂಗೆ
ನರ್ಮದೆಯು, ಕೃಷ್ಣೆ ಓ, ಬಿಡುಗಡೆಯ ಹಾಡಾಂತು
ಹರಿಯುತಿವೆ. ವಿಂಧ್ಯಾದ್ರಿ ಸಹ್ಯಾದ್ರಿ ಗಿರಿಸಾನು

ಪೌರುಷದಿ ಮಲಗಿದೀ ಬಿತ್ತರದ ನಾಡಿನಲಿ
ಜೀವಿಸುವ ಜೀವಿಗಳ ಕುಲವೊಂದೆ; ಬಾನಿನಲಿ
ಅಲೆವ ಬಾವುಟವೊಂದೆ; ಭಾರತ ಪಿತಾಮಹನು
ಏರಿದಾ ಮೇರುಗಿರಿ ತತ್ತ್ವಶಿಖರದ ಬೆಳಕು
ಎಲ್ಲೆಡೆಗು ಬೆಳಗಿರಲು, ಇಬ್ಬಣದ ದಿಬ್ಬಣದಿ
ಮೆರೆವ ಸಾಹಸವೇಕೆ? ಇಡಿಯ ಬಾಳಿನ ಜಸದಿ
ಜೀವಿಸುವದೆಮ್ಮ ಗುರಿ, ದ್ವೇಷದುರಿ ಸಾಕು.
ಭಾರತದ ಧವಲಮಯ ದೀಧಿತಿಗೆ ಆವ ಸಾಟಿ?
ಕೋ, ಎಲ್ಲರೊಂದೇ ನಾವು ನಾಲ್ವತ್ತುಕೋಟಿ.

## ಅಖಂಡ ಕರ್ನಾಟಕ

ಅಖಂಡ ಕರ್ನಾಟಕವೆ! ವಿಶ್ವಾತ್ಮರೂಪಕವೆ!
ಎಚ್ಚರಿಸು ನಿದ್ರೆಯಿಂ ಮುದ್ರಿತರ, ಮತ್ತಿತರ
ಆಳಿಕೆಗೆ ಮೈಗೊಟ್ಟು ಸೋತವರ, ಬೀತವರ-
ಇಲ್ಲದಿರೆ ಎಂದೆಂದು ಈ ಪತನ ಈ ನೋವೆ.
ಹುಟ್ಟಳಿಸು ದೂಷಕರ, ನಾಶಕರ, ಸಟೆವೇಷ-
ಧಾರಕರ, ಮಾರಕರ, ಜಾತಿಮತ ಲುಬ್ಧಕರ.
ನೀನೊಮ್ಮೆ ಸಿಡಿಲಾಗಿ ಗರ್ಜಿಸಲು ಅಂತಹರ
ಪಾಡೇನು? ನಿನ್ನ ಮೊಗ ಮಗುದೊಮ್ಮೆ ಸಂತೋಷ
ಲಹರಿಯಲಿ ತೇಲುವುದ ಕಾಂಬೆವೇ? ನವವೇಷ
ಧಾರಿಣಿಯೆ, ನುಡಿ ಶಿಲ್ಪ ಸಂಸ್ಕೃತಿಯ ರೂಪಿಣಿಯೆ
ಕವಿವರ್ಯ ಧರ್ಮಾತ್ಮ ಧೀರಗುವರರ ತಾಯಿ
ಉಕ್ಕುತಿಹುದಿಂದಿದೋ ಒಕ್ಕೊರಲಿನುದ್ಘೋಷ;
ಎಂದು ಸಿರಿಗನ್ನಡದ ನಾಡಿನೇಕೀಕರಣ-
ಅಂದು ನವಭಾರತದ ಬಾಗಿಲಿಗೆ ತೋರಣ.

## ಚೆನ್-ಬೆಳಕು

ಕನಸಿನಾ ನಿದ್ದೆಯಲಿ ಒದ್ದೆಯಾಗಿವೆ ಕಣ್ಣು
ಮುದ್ದೆಯಾಗಿದೆ ಜೀವ ನೋವನುಂಡು;

ಏಳುವೆನೊ ಬೀಳುವೆನೊ, ತಾಳುವೆನೊ ಬಾಳುವೆನೊ
ಬೇಳುವೆನೊ-ಏನೊಂದನರಿಯೆ ನಾನು.
ಬಾಂದಳದ ಪೆಂಪಿನಲಿ ಕಂಡೆ ನೀನು;
'ಉದಯವಾಯಿತು' ಎಂದುಕೊಂಡೆ ನಾನು.

ನಿಶೆಯ ಮುಸುಕನು ತೆರೆದು, ಉಷೆಯ ಕನ್ನಡಿ ಹಿಡಿದು
ಉಣ್ಣೆ ಮುಗಿಲಿಗೆ ಹೊನ್ನ ಬಣ್ಣವೆರಚಿ,
ಅಳಿದ ಆಶಾಂಕುರಕೆ ಒಲವಿನಂಜಲಿಯೆರೆದು
ದಯಮಾಡು, ಓ ಬೆಳಕೆ! ದಿಕ್ಕು-ಸೂಚಿ;
ಬಂದುಬಿಡು, ಎದೆಯ ಕದ ತೆರೆದಿರುವೆನು
ಮೈಯೆಲ್ಲ ನವಿರೆದ್ದು ನಿಂತಿರುವೆನು.

ನಸುಕಿನಲಿ ಮೂಡಣದ ನೆಲಬಾನಿನಂಚು - ತುಟಿ
ಚುಂಬಿಸಿಹ ಬಿಂಬಿಸಿಹ ಚೆಲ್ವ ಬೆಳಕೆ,
ಅಚ್ಚ ನೀಲಿಯ ಬಾನ ಕೆನ್ನೆಯಲಿ ರಾಜಿಸಿಹ
ಚೆಂಬೆಳಕೆ ಬಾ ಬಾರ ಬೆಂಬಲಕ್ಕೆ-
ಕಣ್ಣ ಕೋರಯಿಸಿರುವ ದಿವ್ಯ ಬೆಳಕೆ
ಹಾರಯಿಸಿ ಹಾರಯಿಸಿ ಕಂಡ ಬೆಳಕೆ.

ಮಗುವಿನೆಳನಗೆಯಲ್ಲಿ, ಮುಗುದೆಯರ ಕಣ್ಣಿನಲಿ
ಮಾಮಹಿಮರೆಂಬುವರ ಮುಖಬಿಂಬದಿ,
ಒಲಿದ ಎದೆಯೊಲವಿನಲಿ, ಚಿಕ್ಕೆಗಳ ಮಿನುಗಿನಲಿ
ಹುಣ್ಣಿಮೆಯ ಚಂದಿರನ ಮಧುಹಾಸದಿ-
ನಿನ್ನ ಆನಂದವನೆ ತೇಲಿಸಿರುವೆ,
ನಿನ್ನಮಿತ ಕಾಂತಿಯನೆ ಕೀಲಿಸಿರುವೆ.

ಬಾಳಜಾಜಿಯ ಬಳ್ಳಿ ಕುಡಿಚಾಚಿ ಹಂದರವ
ಬಳಸಿ ಮೇಲೇರುತಿದೆ ಸೊಗವ ಬಯಸಿ;
ಮೊಗ್ಗೆ ಕೈಮುಗಿದಿಹವು, ಹೂವರಳಿ ನಗುತಿಹವು
ಮೆಲ್ಲೆಲರ ಮೈಗೆ ನರುಗಂಪ ಪೂಸಿ.
ಏನಿದೇನಿದು ಹೂವು ಜಗುಳಿತೇಕೆ?
ಹೂವ ಹುಳು ಕೊರೆಯುತಿರೆ ಬಾಳಲೇಕೆ?

ಇಂತಿಂತು ಮಂಪರದಿ ತಲ್ಲಣಿಸುತಿರೆ ಮನವು
ತಾನೆ ತನ್ನಳವಿನಲಿ ಮುದುಡಿ ಕೂತು,
ಚಂಚಲದ ಮಂಚದಲಿ ಕುಳಿತಿರುವ ಚಿತ್ತವಿದು
ಗಾಳಿಯಲಿ ಹರಿಬಿಟ್ಟ ಊರ್ಣ ತಂತು-
ಚಿತ್ತದಲಿ ಮೊಳೆಸು ನೀ ಸ್ವ-ತ್ವ ಬೀಜ,
ಮತ್ತೆ ಹೊರಹೊಮ್ಮುವುದು ಸುಪ್ತ ತೇಜ.

ಎಣ್ಣೆ ತೀರಿದ ಮೇಲೆ ಆರಿ ಹೋಗುವ ದೀಪ
ಕಣ್ಣ ಮಿಟುಕಿಸುವಾಟ ಹೊಲ್ಲ ಸಾಕು;
ಯುಗಯುಗಾಂತ್ಯದ ವರೆಗೆ ಜಗವ ಬೆಳಗಿಸಬಲ್ಲ
ಎಲೆ ಚಿರಂತನ ಬೆಳಕೆ! ನೀನೆ ಬೇಕು.
ತಿಮಿರ ದೋಷಗಳೆಲ್ಲ ಹಿಂದಾಗಲಿ
ನಿನ್ನ ಭವ್ಯತೆಯರಿವು ಇಂದಾಗಲಿ.

ಹೃದಯದಲಿ ಝಗಝುಗಿಸಿ, ಕಿಲ್ಮಿಷವ ಸುಟ್ಟುರಿಸಿ
ಬದುಕ ಸಿಂಗರಿಸ ಬಾ ನಿಜದ ಬೆಳಕೆ,
ಮನ್ಮನೋಮಂದಿರಕೆ ಓ ಪರಾತ್ಪರ ಬೆಳಕೆ
ತುಂಬಿ ಬಾ ಸಚ್ಚಿದಾನಂದ ಬೆಳಕೆ-
ಕಣ್ಣಿದ್ದು ಕಾಣದಿಹ ಜೀವ ಪಥಕೆ
ಅವತರಿಸು ಸರ್ವ ಮಂಗಳದ ಬೆಳಕೆ.

## ಪ್ರಾರ್ಥನೆ

ಇವು ನನ್ನ ಹಾಡೆಂಬ ಹಗರಣದಿ ಮೈಮರೆತು
ಅಹಮಿಕೆಯ ದರ್ಶನವ ಮಾಡಲೇಕೈ ದೇವ;
ನೀನಿತ್ತ ಸಂಪದವ, ನಿನ್ನಾಣತಿಗೆ ಮಣಿವ
ಅಣುರೇಣು ಜೀವಾಣು ನಿನ್ನ ಚರಣವನೋತು
ಚೆಲುವಿನೊಲವಿನ ವಿವಿಧ ವಿನ್ಯಾಸಗಳನಾಂತು
ಹೆಜ್ಜೆಯಿಡುತಿರಲದರ ಹಲವಾರು ಹವಣಿಕೆಯ
ಕರಣಿಕನು ನಾನಾಗಿ ನುಡಿಯುತಿರೆ, ಚೆಲುವಿಕೆಯ
ಸತ್ಯತೆಯ ದಾಸಾನುದಾಸನೆಂಬೀ ಮಾತು
ಎನ್ನೆದೆಯ ಹೊಕ್ಕು ನಿಚ್ಚಳವಾಗಿ ಪಡಿನುಡಿದು-

ಸೊಗದ ಸಿರಿ ಹೊಗರೇರಿ, ತನ್ನ ತನ ಗುರಿದೋರಿ
ಹೊಂಬಿಸಿಲ ಹೂಮಳೆಯ ಮುತ್ತು ಹನಿ ಸೊದೆಬೀರಿ
ಮತ್ತೆ ನಿನ್ನಡಿಗಳೆಡೆ ಭಕ್ತಿಯಲಿ ಬಲವಂದು-
ಅಕ್ಷಯದ ಪಾತ್ರೆಯಿಂದೆರಡು ಹನಿ ತನಿರಸವ
ನೀಡೆಂದು ಪ್ರಾರ್ಥಿಸುವದೆನ್ನ ಕವನದ ಭಾವ.



# ಭಾವಜೀವಿ

## ೧೯೪೯-೧೯೫೦

### ಭಾವಜೀವಿ

ಪ್ರಕೃತಿ ಮಾತೆಯ ಮಡಿಲ ಹಸುರು ಕುಸುರಿನ ಮೃದುಲ
ತಲ್ಪದಲಿ ಹಾಯಾಗಿ ಮೈಚಾಚಿರೆ,
ಪಡುವಣದ ಬಾನದೇಗುಲದೆದುರು ಕಿರುಮೋಡ
ಮೌನದಲಿ ತಲೆಬಾಗಿ ಕೈಮುಗಿದಿರೆ,-

ಪೊಂಜೊಡರು ತೂಗಿದೊಲು ನೆಲ ಬಾನ ತಳ್ಕೆಯಲಿ
ನೇಸರನು ಬಿಡುಗಣ್ಣನಾಗುತಿರಲು,
ಸಿಂಗರದ ಬಂಗಾರದಂಗಾರ ಹರಡಿದೊಲು
ಹೊಂಬೆಳಕು ಹೊಡಕರಿಸಿ ಹೊಮ್ಮುತಿರಲು-

ಮನಸಿನೇಕಾಂತದಲಿ ಹಗಲುಗನಸಿನ ಸ್ವರ್ಣ-
ಮಂದಿರದ ಛಾಯೆಯೊಲು ಬೆಟ್ಟ ಕಾನು;
ಗಂಭೀರ ಗುಂಭದಲಿ ಮೈದುಂಬಿ ನಿಂತಿಹವು-
ಎನಿತಲ್ಪ ಜೀವಿಗಳೊ ನೀನು-ನಾನು!

ತನಿವಣ್ಣ ತಿರಿದುಂಡು ಗಿಳಿವಿಂಡು ಹಾರುತಿದೆ
ಮುಗಿಲಲ್ಲಿ ತೇಲುತಿಹ ಬಳ್ಳಿಯಂತೆ,
ಬೆಳ್ಳಕ್ಕಿ ಬಳಿವಿಡಿದು ಓರಣದಿ ಸಾಗಿಹವು
ಮಾರುಗೈಯಲಿ ಮುಗಿಲನಳೆಯುವಂತೆ.

ನೆಲದೆದೆಯ ಕಂಪುಂಡ ತಂಗಾಳಿ ಮೈದಡವಿ
ತೀಡುತಿದೆ ನಲ್ಮೆಗೈ ಹರಸುವಂತೆ,
ಲೋಕಾಭಿರಾಮದಲಿ ಹಾಡಿ ಹಾರಾಡುತಿವೆ
ಹಕ್ಕಿ ತಿರೆಯಾನಂದ ಸಾರುವಂತೆ.

ಬಣ್ಣ ಬಣ್ಣದೊಳಿಂತು ಸಂಜೆ ರಂಜಿಸುತಿರಲು
ಬಂಜೆ ಮೆದುಳಿಗು ಬಣ್ಣವೇರುತಿಹುದು;
ಸಂತೆ ಗದ್ದಲದಲ್ಲಿ ಬಳಲಿ ಬೆಂಡಾಗಿರುವ
ಮನವು ರಸ ಸೇಚನೆಯ ಪಡೆಯುತಿಹುದು.

ಆ ಮಾತು ಈ ಮಾತು ಹಾಗಾಯ್ತು ಹೀಗಾಯ್ತು
ಏನಾಯ್ತು? - ಮನ ಬೀತು ಬಂಜರಾಯ್ತು;
ಹಗಲೆಲ್ಲ ಹೈರಾಣ, ಮಾತೆಂಬುದೇ ಮರಣ
ಅಂದಂದಿಗೇ ಮೌನ ಬೇಕಾಯಿತು.

ಕೀಟಲೆಯ ಕೋಟಲೆಗೆ ತಾಳಲಾರದ ಮನವು
ಶಾಂತಿಯರಸುತ ದಿನವು ಇಲ್ಲಿ ಬಹುದು;
ಯುಗಯುಗಾಂತಗಳನ್ನೆ ಈ ಬಗೆಯ ಏಕಾಂತ-
ದೆಡೆಯಲ್ಲಿ ಮನವಾರೆ ಕಳೆಯಬಹುದು.

ಒಡುಕು ಬಾಯಿಯ ಸಿಡುಕು ಕೆಡುಕು ನುಡಿ ಮಾರ್ನುಡಿಯ
ತಡಕಾಟ ಪರದಾಟವೆನಿತುವರೆಗೆ?
ನನ್ನ ನಾನೇ ತಿಳಿದು, ನನ್ನೊಳಗನೇ ಹಿಳಿದು
ಎಂದು ನಾ ನಾನಾಗಿ ಬರುವೆನೊರೆಗೆ?

ಹುರುಳೆನಿತು ತಿರುಳೆನಿತು ಕಸರು ಕಡ್ಡಿಗಳೆನಿತು
ಜರಡಿ ಹಿಡಿಯಲು ತಾನೆ ತಿಳಿವುದಲ್ಲ!
ನನ್ನ ನಾನೇ ಅಳೆದು ಕಳೆದು ನೋಡಲು ಬೇಕು
ಎಂದು ಪೀಡಿಸದಿರುವ ದಿನವದಿಲ್ಲ.

ಅದಕಾಗಿ ಪ್ರಕೃತಿಮಾತೆಯ ಮಡಿಲಿನಾಸರೆಗೆ
ಆಸತ್ತು ಬೇಸತ್ತು ಬಂದೆನಿಂದು;
ಶಾಂತಿ ಬಯಸಿ ನಿತಾಂತ ಏಕಾಂತಕೇ ನೋಂತ
ಮನಕೆಂದು ದೊರಕೀತು ಅಮೃತಬಿಂದು?

ಅಂತರಂಗದ ನಿಸ್ತರಂಗ ತಿಳಿಗೊಳದಲ್ಲಿ
ಲಲಿತಾರವಿಂದಗಳ ಮಕರಂದವು.
ಅಂತು ನೆನಹಿನ ಗಂಧದರಮನೆಯ ಹೊಕ್ಕಂದು
ಅಲ್ಲೇನು?- ಸ್ಮೃತಿಫಲದ ಮಾಕಂದವು!

ನಾಗರಿಕ ನಾಗರವು ಹುತ್ತುಕಟ್ಟದ ಹಳ್ಳಿ-
ಯಲ್ಲಿ ಬಳೆದಿಹ ಪರಿಯದಾವ ಸೊಗಸು!
ಭಾವದುನ್ಮಾದದಲಿ ಬೆರಗು ನಿಬ್ಬೆರಗಿನಲಿ
ವರುಷಗಳು ಹರುಷದಲಿ ಕಂಡ ಕನಸು.

ಚಿಕ್ಕಂದು ಯಾರಾದರೊಂದು ಬಿರುನುಡಿಯಾಡೆ
ಕಂಬನಿ ಕಪೋಲಗಳ ತೊಯಿಸುತಿತ್ತು.
ಹುಡುಗಾಟ ನಗೆಯಾಟ ಹೊಗೆಯಾಟವಾಗುತಿರೆ
ತಾರತಮ್ಯವನರಿಯದಾಗುತಿತ್ತು.

ತಂದೆ ತುಸ ಸಿಡುಕಾಡೆ ಮಿಡುಕಾಡಿ ಮನವೆಲ್ಲ
ಮನೆತುಂಬ ತಾಯ ಬೆಂಬಳಿವಿಡಿಯುತ
ಸಾಂತ್ವನದಿ ಅಕ್ಕ ಅಣ್ಣಂದಿರೊಡನಾಡುತಲಿ
ಚಿಕ್ಕ ಗೆಳೆಯರ ರೆಕ್ಕೆಯಲ್ಲಿ ಸತತ.

ಬರಬರುತ ಜನರ ಗುಂಪೆಂದೊಡನೆ ಮನವೇಕೊ
ಬಸವನಾ ಹುಳದಂತೆ ಮುದುಡುತಿತ್ತು;
ಊರ ಹೊರಗಿನ ತೋಟ-ಬೇಲಿ ಪಾತರಗಿತ್ತಿ
ಕಾಡ ಗಿಡಗಂಟಿಗಳ ಸಂಗವಾಯ್ತು.

ಆಟ ಬಯಲಾಟದಲಿ, ಕೋಲು-ಕುಣಿತಗಳಲ್ಲಿ
ಹಂತಿ ತಿರುಗುತ ಸುಗ್ಗಿ ಮೊದಲಾಗಿರೆ,
ಮುಕ್ಕು ಮುಕ್ಕಿಗೆ ಬೀಸುಗಲ್ಲ ಜೊತೆಹಾಡುಗಳ
ಸುರಿಮಳೆಯು ಜನಪದವ ಪ್ರೇರಿಸುತಿರೆ.

ನಮ್ಮೂರ ಗುಡ್ಡದೋರೆಯ ಬದಿಯ ಕಿರುಹಳ್ಳ
ಸುವಿಶಾಲ ಆಲ, ಎಲೆವಳ್ಳಿ ತೋಟ
ಈಶ್ವರನ ಗುಡಿ, ಕಲ್ಲುಕಟ್ಟೆ, ಮಾದರ ಕೇರಿ
ಕೆಮ್ಮರಡಿ- ಏನೆಲ್ಲ ಎಂಥ ನೋಟ!

ಗುಂಡು ಗಜಗವನಾಡೆ, ಚಿಣ್ಣಿಕೋಲನು ತೂರೆ
ಮನೆಯವರ ಕಣ್ಮರೆಸಿ ಓಡಾಟವು;
ಬೆಲ್ಲವತ್ತದ ಕಾಯ ಬುಗುರಿಯಲಿ ಜಾಳಿಗೆಯ
ಸುತ್ತಿಬಿಚ್ಚಲು ನಾದ ಭೋಂಕಾರವು.

"ಬಿಟ್ಬಿಟ್ಟೆ ಬೆಳಗಾತು ತಟ್ಟಿಮನಿ ಹಾಳಾತು
ಹಾಳುಗೋಡೆಯ ದೆವ್ವ ಬಂದು ಬಡಿತು"-
ಕಣ್ಣುಮುಚ್ಚಾಡುತ್ತ ಗೊಂಬೆ-ಮದುವೆಯ ಹೂಡೆ
ಹಂಚು ಹರಳುಗಳಾಗ ಹವಳ ಮುತ್ತು.

'ತಾಂಡೆ'ಯಿಂದಲಿ ಬರುವ ಲಂಬಾಣಿ ಹೆಂಗಸರ
ಉಡುಪು ತೊಡಪೇನವರ ಮಾತೆ ಬೇರೆ-
"ಲಂಬಾಣಿ ಗಿಲ್‌ಗಿಲ್ . . . ನಾ ಬಂದೆ ನಿಲ್‌ನಿಲ್ . . .
ಕಟಿಗಿ ಹೊರಿ ಚೆಲ್‌ಚೆಲ್ . . . ಏ ಏಡಿರೆ"

ಅಣಕವಾಡನು ಕಟ್ಟಿ ಅವರ ಕುಣಿತಕೆ ಹಾಡಿ
ಆನಂದಪಟ್ಟುದನು ಮರೆಯಬಹುದೆ?
ಸುಡುಗಾಡಸಿದ್ಧ ತಾನೊಂದು ಸಲ ಹೆದರಿಸುತ
ಜೋಳಿಗೆಯ ಬಾಯ್ದೆರೆಯಲತ್ತುಕರೆದೆ.

ಜೋಳದಾ ಪಯಿರು ಹೊಡೆಹಾಯ್ದು ಹೊಂದಲೆದೂಗೆ
ಅಕ್ಕಡಿಯ ಬಳ್ಳಿಗಳು ಹುಲುಸಾಗಿರೆ,
ಬನ್ನಿಗಿಡದಡಿಯಲ್ಲಿ ತತ್ರಾಣಿ ತಣ್ಣೀರ
ಕುಡಿದು ಬುತ್ತಿಯನುಂಡು ಸೊಂಪಾಗಿರೆ,

ಕೊಲ್ಲಾರಿ ಚಕ್ಕಡಿಗೆ ಹೂಡಿರುವ ಎತ್ತುಗಳ
ಕೊರಳ ಗೆಜ್ಜೆಯ ಸರವು ಟಿಂಟಿಣಿಸಲು
ಮೂಕೆಯಲಿ ಕುಳಿತಿರುವ ಆಳು ಲಾವಣಿ ಹಾಡೆ
ಕಿವಿಗೊಟ್ಟು ಕೇಳುವವು ಬಾನು ಬಯಲು.

ರಾಜರಾಣಿಯರ ಕತೆ, ದೇವ-ದೆವ್ವಗಳ ಕತೆ
ಎಂಥವೆಂಥವೊ ನೂರು ಕತೆಯ ಕೇಳಿ
ಸೆಟ್ಟಿಕತೆ ಕಟ್ಟುಕತೆಗೆಲ್ಲದಕು ಹೂಂಗೊಟ್ಟು
ತಲೆಯಾಡಿಸಿರೆ ಮತ್ತೆ ಕತೆಯ ಹೋಳಿ.

ಚಂದ್ರ-ಚಿಕ್ಕೆಗಳಲ್ಲಿ, ಮೋಡ-ಕಾಡುಗಳಲ್ಲಿ
ಬಾಲ್ಯದಿಂದಲು ಪ್ರೀತಿ ಬಲಿಯಿಸಿತ್ತು;
ಸತ್ತವರ ಕಂಡಾಗ ಮನವೆಲ್ಲ ಹೌಹಾರಿ
ಏನೇನೊ ಪ್ರಶ್ನೆಗಳ ಹೆಣೆಯುತಿತ್ತು.

ಮಳೆಯು ಬಂದರೆ ಹಿಗ್ಗಿ ಮೈತೊಯಿಸಿಕೊಳ್ಳುವದೆ
ನೀರಾಟವಾಡುವದೆ ಆಗ ಸೊಗಸು,
ಕಾಲುವೆಯ ನೀರಿನಲಿ ಕಾಗದದ ದೋಣಿಗಳ
ತೇಲಬಿಡೆ ಮುಳುಮುಳುಗಿ ಹೋದವೇಸು?

ನಾವು ಸಾಕಿದ ಬೆಕ್ಕು ತೀರಿಕೊಂಡಿರುವಾಗ
ಬೋರಾಡಿ ಅತ್ತಿರುವುದೆನಗೆ ನೆನಪು;
ಅದನೊಯ್ದು ಹೊಲದಲ್ಲಿ ಮಣ್ಣು ಗೊಟ್ಟೈತರಲು
ಮನಸಿಗಾಯಿತು ಏಕೊ ನಸುವೆ ತಣಿಪು.

ಕಮ್ಮಾರ ಮಾನಪ್ಪ ಕೆಂಗುಲಿಮೆ ತಿದಿಯೊತ್ತೆ
ಕಬ್ಬಿಣವು ಕೆಂಗೆಂಡದಂತಾಗಿರೆ,
ಅಡಿಗಲ್ಲ ಮೇಲಿರಿಸಿ ದೊಡ್ಡ ಸುತ್ತಿಗೆ ಪೆಟ್ಟ
ಹಾಕುತಿರೆ ಸುತ್ತೆಲ್ಲ ಕಿಡಿ ಸೂಸಿರೆ,

ಅಬ್ಬಬ್ಬ ಕಬ್ಬಿಣವ ಮೇಣದಂದದಿ ಮಿದ್ದೆ
ಆಜಾನುಬಾಹುಗಿಹುದಾವ ಚದುರು?-
ಎಂದು ಅಚ್ಚರಿಗೊಂಡು ಯೋಚಿಸಿರೆ ಯಾಚನೆಯ
ದಾರಿಯಲಿ ಬರಲಿಲ್ಲ ಹರಿಕಾರರು.

ಅರಲು ತುಳಿಯುತ ಮಿದ್ದಿ ಹದಗೊಳಿಪ ಕುಂಬಾರ
ಮಲ್ಲಣನ ತಿಗುರಿಯೇ ಕಮ್ಮಟವೆನೆ
ನೋಡನೋಡುತ ಗಡಿಗೆ ಮಡಕೆಗಳ ಸಾಲುಗಳು-
ನಮ್ಮೂರಿಗವನದೆಯೆ ಹಂಚಿನ ಮನೆ!

ಕೆರವು ಹೊಲಿಯುವ ದೀನ ದಲಿತ ಮಾದರ ದುರುಗ
"ಮುಟ್ಟಬೇಡಿರಿ ತಂದೆ"- ಎಂಬ ನುಡಿಗೆ
ನನ್ನೆದೆಯ ಕಸಿವಿಸಿಯ ಹೇಳತೀರದು ಆಗ
ಬಾಲಕರಿಗೆಲ್ಲಿಯದು ಮಡಿ ಮೈಲಿಗೆ?

ದನವ ಕಾಯುವ ನಿಂಗ ಮಹಿಷವಾಹನನಾಗಿ
ಕೊಳಲನೂದುತ ಮನೆಗೆ ಹಿಂದಿರುಗಲು
ಅವನ ಕಿಸೆ ತುಂಬೆಲ್ಲ ಕಾರಿಬೋರೆಯ ಹಣ್ಣು
ಇಪ್ಪಿ ಚಪ್ಪರ ಬದನೆ ಮಾಂಗಾಯ್ಗಳು.

ಕೆಲಸಿಗರ ಕೆಂಚನನು ಕಂಡರೀಗಲು ಭಯವು-
ಒಡೆದ ಕನ್ನಡಿ ಮುರಿದ ಮೊಂಡುಗತ್ತಿ;
ಅವನ ಕಟಕಟಿಯಿಂದ ತಲೆಯೊಮ್ಮೆ ಪಾರಾಗೆ
ಮರುಜನ್ಮ ಪಡೆದಂತೆ ಉರಿವ ನೆತ್ತಿ!

ಹರಿವ ಹಳ್ಳದ ದಂಡೆಗಿರುವ ಮಾಸತಿ ಕಲ್ಲು
ಬಾವಿಕಟ್ಟೆಯ ಬಳಿಯ ವೀರಗಲ್ಲು
ಎಣ್ಣೆಯುಣ್ಣುತ ಪೂಜೆಗೊಳ್ಳುವುದ ಕಂಡಿದ್ದೆ
ಹೊಲದ ಬದುವಿನ ಸಣ್ಣ ಗುಂಡುಕಲ್ಲು.

ಭಕ್ತಿಯೋ ಭೀತಿಯೋ ಹಳ್ಳಿಗರ ಬಾಳಿನಲಿ
ದೇವತಾರಾಧನೆಯು ಮೆರೆವುದಷ್ಟೇ?
ಅಂದಿನಿಂದಿಂದುವರೆಗೆನ್ನ ಮನದೊಳು ಮಾತ್ರ
ಮೂರ್ತಿಪೂಜೆಯ ಮಾತು ಅಷ್ಟಕಷ್ಟೆ.

ತಂದೆ ನಸುಕಿನೊಳೆದ್ದು ಅನುಭವಾಮೃತ ಓದೆ
ಸಕ್ಕರೆಯ ನಿದ್ದೆಯಲಿ ಸವಿಯುತಿದ್ದೆ;
ಮುಂಜಾವ ತನ್ನ ಗುಂಜಾರವದಿ ಕಿವಿತುಂಬೆ
ನಾದಲಹರಿಯ ನೂಲನೆಳೆಯುತಿದ್ದೆ.

"ಅವರವರ ಭಾವಕ್ಕೆ ಅವರವರ ಅರ್ಚನೆಗೆ
ಅವರವರಿಗೇ ದೇವ ನೀನೊಬ್ಬನೆ"
ಮುಪ್ಪಿನ ಷಡಕ್ಷರಿಯ ಅನುಭಾವದಲೆಯೊಂದು
ಜಂಗಮನ ತಂಬೂರಿಯಲ್ಲಿ ಸಸಿನೆ.

ಕೇಳಕೇಳುತ ಎದೆಯಲಾವುದೊ ಭಾವನೆಯ
ಹುಚ್ಚು ಹೊಳೆ ಹೊರಚೆಲ್ಲಿ ಮೊರೆಯುತಿತ್ತು;
ತಲ್ಲೀನವಾದ ಮನ ಚಿಂತನೆಗೆ ತೊಡಗಿರಲು
ಅಕ್ಕಪಕ್ಕದ ಜನವು ನಗುತಲಿತ್ತು.

ಸುವ್ವಿ ಬಾ ಚೆನ್ನಯ್ಯ ಸುವ್ವಿ ಬಾ ಲಿಂಗಯ್ಯ
ಸುವ್ವಿ ಬಾ ಎನ್ನುತ್ತ ಸಾರುವಯ್ಯ -
ಇರುಳಿನಲಿ ಕಂದೀಲ ಬೆಳಕಿನಲಿ ಬರುವಂತೆ
ಬಾಲ್ಯದನುಭವ ಮರಳಿ ಕರೆವುದಯ್ಯ.

ನಾನು ಹುಟ್ಟಿದ ಹಳ್ಳಿ ತೊರೆದು ಬೇರೂರಲ್ಲಿ
ನೆಲಸುವಾ ಸಮಯಬರೆ ಸೋತು ಹೋದೆ
ಆ ಗೆಳೆಯರಾ ಎಳೆಯರಾನೋಟವಾಕೂಟ
ನೆನೆದು ಕಣ್ಣೀರ್ಮಿಡಿದು ಖಿನ್ನನಾದೆ.

ಇಂತಿಂತು ಈವರೆಗು ಹಳ್ಳಿ 'ಬೆಳ್ಳಿ'ಯ ತೆರದಿ
ಮಮ ಚಿದಂಬರದಲ್ಲಿ ಮಿನುಗುತಿಹುದು;
ನನ್ನ ಬಾಳಿನಲೊಂದು ಮೈಲುಗಲ್ಲಾಗಿಹುದು
ನೆನೆದವರ ಮೈಮರೆಸಿ ಮೆರೆಯುತಿಹುದು.

ಕನ್ನಡದ ಶಾಲೆಯಲಿ ಓದು ಮುಗಿಯುತ ಬರಲು
ಮುನ್ನಡೆವ ಹಂಬಲವು ಒಡಮೂಡಿರೆ
ನಿರ್ಧಾರದುಯ್ಯಾಲೆ ಸ್ತಿಮಿತಕ್ಕೆ ಬಾರದಿರೆ
ಅಂತು ಇಂತೂ ಕೊನೆಗೆ ನಿಶ್ಚಯಿಸಿರೆ,

ಹತ್ತು ವರುಷಗಳಾಚೆ ನಮ್ಮೂರ ಬಿಡುವಂದು
ಕತ್ತು ಬಿಗಿಬಿಗಿದಿತ್ತು ನೋವ ಸಹಿಸಿ,
ಅಗಲಿಕೆಯ ಅನುತಾಪ ಅನುಭವಿಸಲಸದಳವು
ಅದಕಿಂತ ಮರಣವೇ ಸ್ವಲ್ಪ ವಾಸಿ.

ಹಾಗೂ ಹೀಗೂ ಧಾರವಾಡಕೆನ್ನಯ ಪಯಣ
ನೀರ ತಪ್ಪಿದ ಮೀನ ತೊಳಲಿದಂತೆ-
ಆವುದೋ ಹೊಸ ಜಗದ ಹೊಸ್ತಿಲಲಿ ಕಾಲಿರಿಸಿ
ನಡೆಯುತಿರೆ ದಿನಕೊಂದು ಚಂದದಂತೆ.

ಬಾಳ ಸಂಪುಟದಲ್ಲಿ ಬಾಲ್ಯವೆಂಬುವದೊಂದು
ಅಳಿಸಲಾರದ ಮಧುರ ಭಾವಗೀತ;
ಮುಂದೆಬಹ ಅನುಭವದ ಕಹಿ ಫಲವನುಣ್ಣುತಿರೆ
ಮರುಕಳಿಸಿ ನೆನೆಯುವದೆ ನಮ್ಮ ಸ್ವಾರ್ಥ!

ವಿದ್ಯೆಯನು ಬೆಲೆಗೊಟ್ಟು ಕೊಂಬ ಕಾಲವಿದಯ್ಯ
ಎಲ್ಲಿ ಕಣ್ಣಿಡಲಲ್ಲಿ ಸಿರಿಯ ಲಾಸ್ಯ-
ಬಡತನದ ಬವಣೆಯಲಿ ಬಗೆಹರಿಯಲಾರದೆಯೆ
ನಿಟ್ಟುಸಿರು ಕಂಬನಿಗಳೆನಿತಸಹ್ಯ!

ಬೆರಳ ಮಧ್ಯದ ಬಿಳಿಯ ಬತ್ತಿ ಹೊಗೆಯಿಡುತಿರಲು
ವಿವಿಧ ರೂಪದ ಸುರುಳಿ ಗಾಳಿಯಲ್ಲಿ
ಕುಣಿದು ಕಣ್ಮರೆಯಾಗೆ ಗಾಳಿಯಲೆಯಲೆಯೊಡನೆ-
ಕೊನೆಗಾವ ಗುರಿಯಿಹುದೊ ಬಾಳಿನಲ್ಲಿ!

ಜಾತ್ರೆಯಲ್ಲಿ ನೆರೆದ ಜನ ತೇರನೆಳೆಯುವ ಭರದಿ
ನುಗ್ಗಿರಲು ಮೈನುಗ್ಗು ಬೇರೆಯಿಲ್ಲ;
ದೂರದಲ್ಲಿಯೆ ನಿಂತು ಹಣ್ಣು ಕಾಯ್ಗಳನಿತ್ತು
ಕೈಮುಗಿವ ಜನರೆಷ್ಟು ನಮ್ಮೊಳಿಲ್ಲ?

ಕನ್ನಡ ಸರಸ್ವತಿಯ ಚೆಲು ರಥೋತ್ಸವ ಕಂಡು
ಮನದೊಳೇನೋ ಮಿಂಚಿದಂತೆ ಭಾಸ!
ಅವಳ ರಸಗಂಗೆಯಲಿ ಈಸಿ ಬಹ ಹಂಬಲದಿ
ನೋವ ನುಂಗುತ ಪಡೆದೆ ಮಧುಸುಹಾಸ.

ಕಾವ್ಯ-ಕಲೆ-ಸಂಸ್ಕೃತಿಯ ಹೊಳಹು ತೆರೆಹೊಡೆದಂತೆ
ಭಾವಜೀವಿಯ ಮನವು ಮುಂದೋಡಿತು.
ಮೂಡಣದ ಚೆಂಬೆಳಕು ಉಷೆಯ ದರ್ಶನವೀಯೆ
ಎದೆಯ ಬಟ್ಟಲು ತುಂಬಿ ತುಳುಕುತಿತ್ತು.

ಸೌಂದರ್ಯದರ್ಶನಕೆ ದೀಪ್ತವಾಗಿಹ ಮನವು
ಪ್ರಕೃತಿಯೌಪಾಸನೆಯ ಕೈಕೊಂಡಿತು.
ಚೆಂಗುಲಾಬಿಯ ಪಕಳೆ ಅಕಳಂಕವಾಗಿರುವ
ಭಾವವೀಣೆಗೆ ಬೆರಳನಾಡಿಸಿತ್ತು.

ಹೊನ್ನ ರಾಶಿಯ ಸುರಿದು ಕೊಂಡುಕೊಳ್ಳಲುಬಹುದೆ?
ಚೆಲುವಿಕೆಯು ತಾನಲ್ಲ ಪಣ್ಯವಸ್ತು;
ದೇವ ದೇವನ ತೇಜದೋಜೆ ಪೂಜೆಗೆ ಸಂದು
ಸೃಷ್ಟಿಯಲಿ ಮೈದೋರೆ ನುಡಿ "ನಮೋಸ್ತು".

ವಿಶ್ವಮುನ್ಮೀಲಿಸುವದಾವ ತೇಜಃಪುಂಜ
ಆ ಗಭಸ್ತಿಯ ಗರ್ಭಗುಡಿಯು ಲೋಕ;
ಒಳಗಣ್ಣಿನೆದುರಿನಲಿ ಮೂಡಬಹುದಾ ಬಿಂಬ
ಅದಕೆ ಶರಣಾಗಿರಲು ಅದುವೆ ನಾಕ.

ಅಣುಕಣದ ಸೌಂದರ್ಯ ಬರಿಮಾತ ಜಳ್ಳಲ್ಲ
ಹಿರಿದು ಕಿರಿದೆಂಬುವದು ಅಲ್ಪಬುದ್ಧಿ;
ಅಂತರಂಗದ ಶುದ್ಧಿ ಬುದ್ಧಿಗದು ಹೆದ್ದಾರಿ
ಓದುವಾದಗಳೆಲ್ಲ ಕಲಿತ ಬುದ್ಧಿ.

ತಾರುಣ್ಯದಾಹ್ಲಾದ ಗಾಳಿಯಲಿ ಎದೆಹಿಗ್ಗಿ
ಸುಕುಮಾರ ಸೌಂದರ್ಯ ತೆರೆಯುತಿತ್ತು.
ನಂಬುಗೆಗೆ ಇಂಬಿರದ ಮೌಢ್ಯ ಜಾಡ್ಯಗಳನ್ನು
ಜಳ್ಳು ಕಾಳುಗಳಂತೆ ತೂರುತಿತ್ತು.

ಒಳಗಿನೊಳಗಿನ ನೋವು ಸಂತಸವ ಕಬಳಿಸುತ
ಒಮ್ಮೊಮ್ಮೆ ಧೀಂಕಿಟ್ಟು ಕೊರಚಾಡಿಸೆ
ಮನೆಯ ಸಂಕಷ್ಟವೇ? ನಂಬಿದರನಿಷ್ಟವೇ?
ಒಲವಿನಿಷ್ಟವೆ?- ತಿಳಿಯದದರ ಭಾಷೆ.

ಲಾಸ್ಯಹಾಸ್ಯದ ಜೊತೆಗೆ ತಾಂಡವವು ನಡೆದಿಹುದು
ಜೀವಿ ಜೀವಿಯ ನುಂಗಿ ಬದುಕುತಿಹುದು.
ಇರುಳೇನು ಬೆಳುದಿಂಗಳೇನು ಕಾರ್ಮೋಡದಲಿ
ಮಿಂಚು ಝಳಪಿಸಿ ಸೃಷ್ಟಿ ಸಾಗುತಿಹುದು.

ಉಳ್ಳವರ ನಿರ್ದಯದ ಕಲ್ಲುಗಾಣದ ಹೀನ
ಕೃತ್ಯದಲಿ ನಿರಿನಿಟಿಲು ಬಡವರೆದೆಯು;
ಕ್ಷಾಮಡಾಮರ ಭೀಮಗದೆಯನಪ್ಪಳಿಸುತಿರೆ
ನಿತ್ರಾಣವಾಗುತಿದೆ ದಲಿತ ಜನವು.

ಅನ್ನದನ್ಯಾಯದಲಿ ಕರುಳು ಕುದಿದೇಳುತಿರೆ
ಸದೆಬಡೆಯಲುದ್ವೇಗ ಕೆರಳುತಿಹುದು;
ವಿಧಿ ನಿಷೇಧದ ಕಟ್ಟುಕಟ್ಟಳೆಯ ಹುಟ್ಟಳಿಸಿ
ಹೊಸ ಸಮಾಜವ ಕಟ್ಟಿ ತೋರಬಹುದು.

ಸಂಸಾರವೆಂಬ ಹೆಣ ಬಿದ್ದಿರಲು ತಿನಬಂದ
ನಾಯ ಜಗಳವ ಕಂಡು ನಕ್ಕ ಪ್ರಭುವು.
ನಾಯ ಜಗಳವ ಕಂಡು ಹೆಣವೆದ್ದು ನಗುತಲಿಹ
ಕಟು ವಿಡಂಬಕ ರೂಪ ನಮ್ಮ ಇರವು.

ವೇದಿಕೆಯ ಪೀಠದಲಿ ಉಪದೇಶ ಪಾಂಡಿತ್ಯ-
ಡಾಂಭಿಕತೆಯೇ ನಮ್ಮನಾಳುತಿಹುದು.
ಒಬ್ಬರೊಬ್ಬರ ಕಂಡು ಗುರ‍್ರೆಂಬ ಮಾತ್ಸರ್ಯ
ಮೌನದೊಡಲಿಗೆ ಬೆಂಕಿಯಿಡುತಲಿಹುದು.

ಏಸೊ ಈಶರು ದಾಸರಾಗಿ ಕೈಂಕರ್ಯದಲಿ
ಜನದ ಬದುಕನು ತಿದ್ದಿ ಹಸನುಗೊಳಿಸಿ,
ಮೌನ ಶರಧಿಯ ತಳದಿ ಮುತ್ತಾಗಿ ಮಲಗಿಹರು-
ನಾವು ನೊರೆ ತೆರೆಗಳೋ ಜೊಂಡು ಪಾಚಿ.

ಹಲವೆಲ್ಲ ಹಂಬಲಿಸಿ ಹದುಳಗಾಣದ ಮನವು
ಹುದುಗಿಹುದು ತನ್ನೊಳಗೆ ಮೌನವಾಗಿ;
ಸುಪ್ತ ಜ್ವಾಲಾಮುಖಿಯ ತೆರದಿ ಕೊಳ್ಕುದಿಸುತಿರೆ
ಎಂದು ಸಿಡಿದೇಳುವದೊ ಕಿಡಿಯು ತಾಗಿ!

ಇರಲಿ, ಲೋಕದ ಡೊಂಕ ತಿದ್ದುವಾಸೆಯು ಬೇಡ
ನನ್ನೊಡಲ ಬ್ರಹ್ಮಾಂಡ ನನ್ನ ಲೋಕ-
ಇಂದ್ರ ಚಂದ್ರಾದಿಗಳು ಕವಿ ಕಾಮಧೇನುಗಳು
ಅನುಭಾವಿಗಳ ಸಂಗದಲ್ಲಿ ಏಕ.

"ಸತ್ತವರ ಸಂಗದಲಿ ಹೊತ್ತು ಹೋಗುವದೆನಗೆ"
ಎಂಬ ಕವಿ ನುಡಿ ನನ್ನ ದಿನದ ಸತ್ಯ,
"ನೀತಿ ಶಾಸ್ತ್ರದ ಗೂಢ ಪ್ರೀತಿಯಲ್ಲಿದೆ" ಎಂಬ
ಆ ಮಹಾ ಷೆಲ್ಲಿ ಕವಿ ವಾಣಿ ನಿತ್ಯ.

ನಮ್ಮ ಬಾಳಿಗೆ ಪರಮ ಪ್ರೀತಿಯೇ ನೆಲಗಟ್ಟು
ಪ್ರೀತಿಯೇ ಚೌಕಟ್ಟು ಬೇರೆಯಿಲ್ಲ;
ಪ್ರೇಮಕಾಗಿಯೆ ನವೆವ ಸತ್ಯಕಾಮರು ನಾವು
ಸತ್ಯವಾನ್ ಸಾವಿತ್ರಿಯಲ್ಲದಿಲ್ಲ.

ಸ್ವಾರ್ಥವಿರದಿಹ ಪ್ರೇಮ ನಿಸ್ಸೀಮದಾರಾಮ
ಹೋಮಾಗ್ನಿಯಂತಿಹುದು ಪ್ರೇಮಾಗ್ನಿಯು;
ಪತನ ಹೊಂದುವ ಆ ಪತಂಗದಂತಿದೆ ಕಾಮ
ಪ್ರೇಮ ಚಿನ್ನವ ಸುಡುವ ದಿವ್ಯಾಗ್ನಿಯು.

ಚೆಲುವೆ ಗುಣವತಿಯಾಗೆ ಪ್ರೇಮ ಸಾಕ್ಷಾತ್ಕಾರ
ಹೃದಯದೊಲವೇ ಪರಂಜ್ಯೋತಿಯಯ್ಯ;
ಗುಣವಿರದ ಬರಿ ರೂಪ ಬಿಸಿಲು ನಂಜಿನ ತಾಪ
ಮನಸೆಳೆವ ವಿಷಕನ್ನೆ ಮಾಟ ಹೇಯ.

ಹೆಣ್ಣ ರೂಪವ ಕಂಡು ಕಣ್ಣು ಮಂಜಾಗುವದು
ಬುದ್ಧಿ ಮಂಕಾಗುವದು ಸಹಜವೇನೋ;
ಸೌಂದರ್ಯಯೋಗಿಯೊಲು ಕಾಮವಾಸನೆ ತ್ಯಜಿಸಿ
ನೋಡುತಿರೆ ಬೇರೊಂದು ಹೊಳೆಯದೇನು?

ನಿಚ್ಚಳದ ನೋಟದಲಿ ಅಚ್ಚಳಿಯದಂತಿರುವ
ಸಚ್ಚಿದಾನಂದವೂ ಚೆಲುವಿಗಿಹುದು;
ಚೆಲುವಿನಾರಾಧನೆಗೆ ನಿಜ ಕಲೋಪಾಸನೆಗೆ
ದರ್ಶನವಿಶುದ್ಧಿಯೇ ಮೂಲವಿಹುದು.

ಇಲ್ಲಿ ಭಾವನೆ ಮೊದಲು, ಬುದ್ಧಿಯದರಡಿಯಾಳು
ಮೊದಲ ನೋಟಕೆ ರತಿಯು ಸೌದಾಮಿನಿ;
ಪ್ರೇಮಿಗಳ ಹೃದಯಾಂತರಾಳದಲಿ ಮೌನದಲಿ
ಗುಪ್ತಗಾಮಿನಿ ಪ್ರೇಮ ಮಂದಾಕಿನಿ

ಹೆಣ್ಣು ಮನುಕುಲದೊಂದು ಪುಣ್ಯದಾ ಬನದಲ್ಲಿ
ಕಕುಲಾತಿಯರಳಿಸಿದ ಮಧುರ ಹೂವು.
ಎದೆಯ ಹೊಂಬಟ್ಟಲಲಿ ಪ್ರೇಮ ಪೀಯೂಷವಿರೆ
ಒರ್ಕುಡಿತೆಯನು ಕುಡಿದರಿಲ್ಲ ಸಾವು.

ಅಂಥ ತಿಳಿಯೊಲವಿಂಗೆ ಬಾಯಾರಿ ಕುಳಿತಿರಲು
ಮೋಡಗಳ ಕರುಮಾಡದಿಂದಳೊರ್ವ
ಯಕ್ಷಕನ್ಯೆಯು ಇಂದ್ರಚಾಪವನು ಕರಗಿಸುತ
ಹನಿಯಾಗಿ ಸುರಿಸಿದಳು ಓ ಅಪೂರ್ವ!

ಸರಳತೆಯು ಸೌಜನ್ಯ ಮುಗ್ಧತೆಯು ಮಾಧುರ್ಯ
ಅವಳ ಚೆಲುಮೊಗದಲ್ಲಿ ಗುಡಿಗಟ್ಟಿರೆ,
ಜಗದಣ್ಪುನುಣ್ಪುಗಳು ನವನವ ವಿಲಾಸಗಳು
ಕೇಂದ್ರ ಬಿಂದುವಿನಂತೆ ಮನಮುಟ್ಟಿರೆ,

ಕುಸುಮ ಕೋಮಲೆ ಲಲಿತೆ ಸುರಲೋಕ ಸುಂದರಿಯು
ಚೈತ್ಯಾಕ್ಷಿ ಕಣ್ದೆರೆಯೆ ಅರುಣೋದಯ!
ಒಂದೆ ಚಣದಲಿ ತಟಿಲ್ಲತೆ ತೆರಂಬೊಳೆವಂತೆ
ಆನಂದದೂರ್ಮಿಯಲಿ ಕರುಣೋದಯ.

ಅವಳ ನಗೆಮಲ್ಲಿಗೆಯ ಮಕರಂದದೌತಣಕೆ
ಕಣ್ಗೊಂಬಿಯೊಗುಮಿಗುವ ವಿಸ್ಫುರಣಕೆ,
ಕೊರಳು ಕೋಗಿಲೆಯಂತೆ ಸುರಿವ ಜೇನಿಂಚರಕೆ
ಮಂತ್ರಮುಗ್ಧನ ಮಾಡೆ ಚಿನ್ಮಾತೃಕೆ.

ಆದರಾವುದೋ ತೆರೆಯು ಜೊತೆಬಾಳನಗಲಿಸಲು
ರೂಢಿರಾಕ್ಷಸ ಮಿಂಚುಗೈಯ ಚಾಚೆ,
ಮನವು ತಬ್ಬಿಬ್ಬಾಗಿ ಚೈತನ್ಯವಡಗಿರಲು-
ಈ ಸಮಾಜವೊ ನಿಂತ ನೀರು ಕೊಳಚೆ.

ಬೆಳದಿಂಗಳಿರುಳಲ್ಲಿ ರಾತ್ರಿರಾಣಿಯ ಹೂವು
ನಾಲ್ದೆಸೆಗು ಅಚ್ಚ ಸೌಸವ ಬೀರಿರೆ,
ಅವಳ ಧ್ಯಾನದಲಿರುಳು ಹಗಲಾಗಿ ಹಗಲೊಂದು
ಇರುಳಾಗಿ ಮರುಳಾಗಿ ತೊಳಲುತ್ತಿರೆ,

ಕಾದಲೆಯ ಮುಖಬಿಂಬ ಮೋಡದಲ್ಲಡಗಿರಲು
ಮತ್ತ ಮಧುಪನ ಚಿತ್ತವತ್ತಿಹಣ್ಣು.
ಸಂಜೆ ಮುಗಿಲಿನ ರಂಗು ಭಂಗಿಯಲಿ ಕಂಡಂತೆ
ಹಕ್ಕಿ ಹಾಡಿಗೆ ತೆರೆವೆ ಕಿವಿಯು ಕಣ್ಣು.

ಪ್ರೇಮವೆಂಬುವ ಆರದಾರತಿಯ ಹಿಡಿದಿರುವ
ಚಿಕ್ಕೆಗಳ ಬಳಗದಲಿ ಕಾಂಬೆನೇನು?
ಸಪ್ತರಂಗದ ಬಿಲ್ಲು ಸುಪ್ತವಾಗಿರುತಿರುವ
ಪ್ರೇಮಕುದ್ದೀಪನಂಗೈವುದೇನು?

ಮದರಂಗಿಯುಗುರಿನಲಿ ಸಾರಂಗಿ ಬಾರಿಸುತ
ಬೋರಂಗಿ ಚಿತ್ರಾಂಗಿ ಭೋರಿಡುತಿರೆ,
ವಿಸ್ಮೃತಿಯ ಕಡಲಲ್ಲಿ ರಾಗಾನುರಾಗಗಳ
ತೆರೆ ಎದ್ದು ತೆರೆ ಬಿದ್ದು ಹೊಯ್ದಾಡಿರೆ-

ಸುಳಿಗಾಳಿಯೊಡನೊಮ್ಮೆ ಸಂದೇಶ ಕಳಿಸುವೆನೆ
ಚಂದ್ರಕಿರಣಗಳಲ್ಲಿ ಓಲೆ ಬಹವೆ?
ಹೂ-ಪಕಳೆಯಲಿ ಹೊಳೆವ ಮಂಜುಹನಿ ಮಣಿಮಾಲೆ
ಕೊರಳ ಕಂಠಿಕೆಯಿಂದ ಜಗುಳಿರುವವೆ?

ಮರೆಯಲಾಗದ ಚಿರಸುಧಾಕರೆಯು ಎನ್ನದೆಯ
ಒಲವನೆಂತೋ ಏನೊ ಕೆರಳಿಸಿದಳು,
ನಾನು ಕವಿಯೆಂಬುದನು ನನಗೆ ತೋರಿಸಿಕೊಟ್ಟು
ಮೌನವೀಣೆಯನಿಂತು ಮಿಡಿಸುತಿಹಳು.

ಸಖ್ಯವಿಲ್ಲದ ಜೀವ ಲಕ್ಷ್ಯವಿಲ್ಲದ ಬಾಣ;
ಜೊತೆಯಿಲ್ಲದಾ ಬಾಳ ಗೋಳರಿದೆನು;
ಸನ್ಮತಿ ಸುವಾಸಿನಿಯ ಪ್ರೇಮ ಸೀಮಂತಿನಿಯ
ಜೊತೆ ಬೇಕು ಬೇಕೆಂದು ಅಲ್ಪರಿದೆನು.

ನನ್ನ ಬಗೆಗೇ ನಾನು ಚಿಂತೆ-ಚಿತೆಯೇರುತ್ತ
ಒಳಗೊಳಗೆ ಕುದಿಕುದಿದು ಹಣ್ಣಾಗಿರೆ,
ಪರರೆದುರು ಎದೆಯಳಲ ತೋಡಿಕೊಳ್ಳುವ ವೃತ್ತಿ
ಇರದೆ ಇರಲಾರದೆಯೆ ಸಣ್ಣಾಗಿರೆ,

ಏಕಾಂತವಾಸದಲಿ ಏಕಾಕಿ ಜೀವಕ್ಕೆ
ಏಕತಾರಿಯು ದೊರೆಯಲೆನಿತು ಹರುಷ!
ಕಾವ್ಯದೌಪಾಸನೆಯಲಂತು ಒಂದಾಗಿರಲು
ರಸಗಂಗೆಯಲಿ ತೇಲೆ ವರುಷ ವರುಷ-

ಮಧುರಯಾತನೆಯಲ್ಲಿ ಕಾಲಯಾಪನೆಗೈಯೆ
ಬಂತು ಗೆಳೆತನ ಪುಣ್ಯಪಾಕದಂತೆ,
ಹೇಗೊ ಹೇಗೋ ಹೆಗಲುಗೊಟ್ಟು ಬಂದಿರೆ ಗೆಳೆಯ-
ರೊಂದೆ ಕೊಂಬೆಯ ಹಲವು ಹೂಗಳಂತೆ.

ಮೋಟುಮರ ಚಿಗುರೊಡೆದು ಫಲಫಲಿಸಿತೆನ್ನುವೊಲು
ಗೆಳೆತನವು ರಸಧಾರೆ ಧಾರೆಯಾಗಿ
ಸುರಿದು ಸಂಜೀವನವನಿತ್ತು ಚೇತನಗೊಳಿಸಿ
ರೂಪಿಸಿರೆ ನಾನಾದೆ ಸಖ್ಯಯೋಗಿ.

ಜಾನಪದ ಕವಿಯೊರ್ವ ದೇಸಿ ಚೆಲುವನು ನೀಡೆ
ದೊಡ್ಡ ಮನಸಿನ ಮಹಾದೇವನಂತೆ,
ಕತೆಗಾರನಿನ್ನೊರ್ವ ಕೆಚ್ಚೆದೆಯ ಕಲಿತನವ-
ನೂಡಿಸಲು ಮೈಕೊಡವಿ ಮೇಲಕೆದ್ದೆ.

ಕಲ್ಪನೆಯ ಕಲ್ಪಗಳ ಪದ್ಮಸೇತುವೆ ರಚಿಸಿ
ಮಗುದೊಬ್ಬ ದಯೆಯ ಹೂಮಳೆಗರೆದಿರೆ,
ಅವರೂಪದಲೇನೊ ಕಾವ್ಯಪೂರ್ಣೆಯು ಮತ್ತೆ
ಮನವನಿಮ್ಮೈಗೊಳಿಸಿ ಹಾಡಿಸುತಿರೆ,

ನನ್ನ ದುಃಖವ ತನ್ನ ದುಃಖದಲಿ ಸಮನಿರಿಸಿ
ನನ್ನಂತರಂಗದಲಿ ನಿಜವ ನಿಲಿಸಿ,
ತಂಗಿಯೊರ್ವಳು ಪರಮ ಕಾರುಣ್ಯದಾಯಿನಿಯು
ಒಡಹುಟ್ಟಿಗಿಂತಲೂ ಮಿಗಿಲಾಗಿಸಿ.

ನಿರ್ಮಲಾಂತಃಕರಣಕೆನ್ನಮತಿಯನುಗೊಳಿಸಿ
ಸಂತವಿಸೆ, ಶ್ರದ್ಧೆಯಲಿ ತಲೆಬಾಗಿದೆ;
ಭಾವಶುದ್ಧಿಯ ಪಡೆದು ಬಳಗ ಬಳ್ಳಿಯ ತೆರದಿ
ಹಬ್ಬುತಿರೆ ನೂರೆಂಟು ನೋವ ಮರೆದೆ.

ಮಾತರಿವ, ಕವಿ, ರಸಿಕ, ಗಾಯಕರ ಮೇಳದಲಿ
ಮಾತು ಗೀತದ ರೂಪ ಪಡೆಯುತಿಹುದು;
ಮುಂಜಾವಿನಲಿ ನೂರು ಹಕ್ಕಿಗಳ ತರತರದ
ಸ್ವರದಲ್ಲಿ ಏಕತೆಯು ಮೂಡುತಿಹುದು.

ಜ್ಞಾನಸಿಂಧುವಿನೆದುರು ಮೌನವಾಗಿಯೆ ನಿಂದು
ಕಡೆಹಾಯಿಸುವರಾರು ಕಾಣೆನೆಂದೆ;
ಸರ್ವಸಮಭಾವದಲಿ ಕಿರುದೋಣಿಯನ್ನೇರಿ
ಯಾನಗೈದೆವು ಕಡಲಿನಗಲಕಂದೆ.

ಗೆಳೆಯರೊಲವಿನೊಳಿಂತು ಆಕಾಶ ಗಂಗೆಯಲಿ
ಮಿಂದು ಬಾನುದ್ದಕೂ ಈಸಬಹುದು,
ಅಂಬರದಿ ತುಂಬಿರುವ ಗಂಭೀರ ನಾದವನು
ಇಂಬುಕಯ್ಯುತ ಬಾಳ ಜಯಿಸಬಹುದು.

ದುಃಖದುಗುಡಗಳನ್ನು ಮಿಕ್ಕುಮೀರಲುಬಹುದು
ದರ್ಪಸರ್ಪದ ವಿಷವ ಹಿಳಿಯಬಹುದು,
ಬಂಧುಭಾವದೊಳಿಂತು ಒಂದುಗೂಡುತ ಬಾಳ
ಆನಂದದರಮನೆಯ ಗೈಯಬಹುದು.

ಬಹುದು-ಗಿಹುದೇನಯ್ಯ ಅಹುದಾದರಹುದೆನ್ನು
ಕಂಡುಂಡ ಮಾತನ್ನೆ ನಿರವಿಸಿರುವೆ;
ನೂರು ಜಂಜಾಟಗಳು ಹೆಡಮುರಿಗೆ ಕಟ್ಟಿದರು
ಗೆಳೆತನವೆ ಬಾ ಬಾರ ಎಂದುಸುರುವೆ.

ಧಾರವಾಡದ ನೆಲದ ಗುಣವೇನೊ ಋಣವೇನೊ!
ಕವಿ-ಗಾಳಿ ಸವಿಗಾಳಿ ತೀಡುತಿಹುದು.
ಧಾರವಾಡದ ತಾಯ ಮಡಿಲಲ್ಲಿ ಮೊರೆಯಿಟ್ಟ
ದತ್ತವಾಣಿಗೆ ಎದೆಯು ಕೋಡುತಿಹುದು.

ಜನದ ಪರಿಯಂತಿರಲಿ; ನೆಲದಾಯ ಕಾರುಣ್ಯ
ಹಸಿರು ಸಾಮ್ರಾಜ್ಯದಲಿ ಕುಸುಮಿಸಿಹುದು;
ಕಂಡ ಕಣ್ಮನಗಳಲಿ ರಸಭಾವ ಸಂಚಾರ
ಕಿರುವಕ್ಕಳೂ ಕವಿಗಳಾಗಬಹುದು.

ಮಳೆಬಂದು ನಿಂದಾಗ, ಬನದೇವಿ ಮಿಂದಾಗ
ತಂಬೆಲರ ತಂದಾಗ ಸವಿಯಬೇಕು.
ಸೋನೆವಳೆ ಸುರಿವಂದು ನೀರ್ವೊನಲು ಹರಿವಂದು
ಬಿಸಿಲು-ಮಳೆಯಂದವನು ಕಾಣಬೇಕು.

ಹೂಬಿಸಿಲು ಹೊಂಬಿಸಿಲು ಚೆಂಬಿಸಿಲು ಚುಂಬಿಸಲು
ಎದೆಯನ್ನೆ ತುಂಬಿಸಲು ಬಿಂಬಿಸುತಿರೆ,
ಅಚ್ಚ ಬಂಗಾರವನೆ ಮೋಡಗಳು ಹುಡಿ ಮಾಡಿ
ಸುರಿಸಿ ಸಿಂಗರಿಸಿದವೋ ಎನುವಂತಿರೆ!

ಗಿಡಬಳ್ಳಿ ಚಿಗುರಿಡಲು ಹೊಗರೇರಿ ಹೂಬಿಡಲು,
ನತ್ತಿಡಲು ಮುತ್ತಿಡಲು ತುಂಬಿ ಬಹವು;
ಕೋಗಿಲೆಯ ಪಂಚಮದ ಇಂಚರವನಿಮ್ಮಡಿಸಿ
ಹಿಗ್ಗಿನಲಿ ಹಾಡುವದು ಕವಿ ಬಳಗವು.

ಕಾಲೇಜಿನಟ್ಟದಲಿ ನಿಂತು ನಾಲ್ದೆಸೆಗಳಲಿ
ಸೃಷ್ಟಿರಮಣೀಯತೆಯ ಕಂಡಿರುವೆನು,
ಕ್ಷಿತಿಜದಂಚಿನ ಮಿಸುನಿ ರೇಖೆ-ವಿನ್ಯಾಸವನು
ಬೆಟ್ಟಕಾನಿನ ಬೆಡಗ ಸೆರೆವಿಡಿದೆನು.

ವಾಯವ್ಯದೆಡೆಯಿಂದ ಕಂದರದ ಮರೆಯಿಂದ
ತೂರಿ ಬಹ ರೈಲು ಕಾಳಾಹಿಯಂತೆ-
ಶಾಂತನಿದ್ರೆಯಲಿರುವ ಹಸುರು ಬಯಲಿಂದೊಮ್ಮೆ
ಸಿಳ್ಳು ಹೊಡೆವುದು ಮಾಯಕಾರನಂತೆ.

ಸಂಜೆ ಮುಂಜಾವುಗಳ ಕಣ್‌ಬೆಳಕು ರಂಜಿಸಿರೆ
ನವಿಲೂರ ದಾರಿಯಲಿ ಸುಖವಿಹಾರ;
ಎಡಬಲದ ನೂರಾರು ತರುಮರಾದಿಗಳಲ್ಲಿ
ಹೂವ ಬಾಸಿಗ; ನೆಲಕೆ ಹೂ ತುಷಾರ.

ಪೇರಲದ ತೋಟಗಳ ಹಳದಿಬಣ್ಣದ ಹಣ್ಣು
ಗಿಣಿಗಡಕ ಹಣ್ಣುಗಳ ಕೆಂಪು ತೋರೆ,
ಬುಟ್ಟಿಯಲಿ ಅಡಕಲೇರಿಸಿ ತರುವ ಹೆಂಗಸರು
ಹಣ್ಣು ಮಾರಲು ಬರುವ ಠೀವಿ ಬೇರೆ.

ಕೋಲುಮಲ್ಲಿಗೆ ಹೂವ ಕೋಲುಗಳನೆಸೆಯುತಿಹ
ಗಿಡವಲ್ಲಿ ಗಿಡವಿಲ್ಲಿ ಅಭ್ರಂಕಷ;
ಹಲುಗಲದ ಟೊಂಗೆಯಲಿ ಹೂತಿರುವ ಹೊಂಗೆಯಲಿ
ಮುಳ್ಳುಕಂಟಿಗಳಲ್ಲಿ ಸ್ವರ್ಣಕಲಶ.

"ಹೂವಿನೊಳು ಹುದುಗ್ಯಾನ ಮಾಲ್ಯಾಗ ಮಲಗ್ಯಾನ
ಮೊಗ್ಗ್ಯಾಗ ಕಣ್ದೆರೆದು ಲಿಂಗಯ್ಯನು"-
ಜಾನಪದ ಕವಯಿತ್ರಿ ಭವ್ಯದರುಶನ ನೆನೆದು
ಬಾಷ್ಪದಲಿ ಪುಲಕದಲಿ ನಲಿದಿರುವೆನು.

ಸೂಕ್ಷ್ಮತಮ ಹೂವಿನೊಲು ಚೆಲು ಚಮತ್ಕೃತಿಯಾಗಿ
ಹೃತ್ಕಮಲವರಳುವದೆ ನನಗೆ ಮೆಚ್ಚು;
ಮನುಕುಲವು ಹೂವಾಗಿ ಜಗವು ಜೇಂಗೊಡವಾಗಿ
ಮನವು ತನಿವಣ್ಣಾಗಲೆಂಬ ಹುಚ್ಚು.

ಬಂದ ದಾರಿಯ ಹಿಡಿದು ಮರಳಿ ಐತರುವಾಗ
ತಲೆಯಲಾವುದೊ ತುಂಬಿ ಗುಂಯ್‌ಗುಟ್ಟಿರೆ,
ಮೊರೆವ ನಾದದ ಗುಂಗಿನಲ್ಲಿ ಕಾವ್ಯವಿತಾನ
ಚಿತ್ಕಳೆಯ ಚಿನ್ನಾದದಲ್ಲಿ ತೋರೆ,

ದೇಹಭಾನವ ಮರೆಸಿ ಒಳಗಣ್ಣಿಗವತರಿಸಿ
ಕಾವ್ಯಾಕ್ಷಿ ಮಿಂಚುಣಿಸಿ ಕವನಿಸುವಳು;
ರೋದೋಂತ ಪರ್ಯಂತ ದಿವ್ಯತೆಯ ಏಕಾಂತ
ಸಾಕಿನ್ನು ಲೋಕಾಂತವೆನ್ನಿಸುವಳು.

ಸುಖದ ಮಿಂಚಿನ ಹಿಂದೆ ದುಃಖ ಗುಡುಗಾಡುತಿರೆ
ಮತ್ತೆ ಸುತ್ತಣ ಬಾಳು ಅಣಗಿಸುವದು;
ಮನವು ಹುರಿಹಂಚಾಗಿ ತನುವೆಲ್ಲ ಉರಿದೆದ್ದು
ಕಂಡದ್ದು ಕಾಣದ್ದು ಜಣುಗಿಸುವದು.

ಹಾಡಲೆಳಸುವ ಜೀವ ಓಡಲೆಳಸುವುದಾಗ
ಗೂಢ ತತ್ವದ ತಿರುಳನರಿಯಲೆಳಸಿ,
ಬಲ್ಲಿದರ ಒಡನಾಟ ಸರಸ ಸಜ್ಜನಿಕೆಗಳು
ಸಂತವಿಸಿ ಕಾಯುವವು ಶಾಂತಿ ಪೂಸಿ.

ನಿಲ್ಲು ನಿಲ್ಲೆಲೆ ಮನವೆ ಎಲ್ಲಿಗೋಡುವೆ ನೀನು
ವಿಫಲಚಪಲವದೆಲ್ಲ ವಾಲಜಾಲ;
ನಿನ್ನ ನೆರಳಿಗೆ ಅಂಜಿ ಮುದುರಬೇಡೆಲೊ ಮುಗುದ
ಅಂತರಂಗದ ವಾಣಿ ಇಂತು ಕೇಳ;

ಬಂದಿರುವ ಬರಲಿರುವ ಸಂಕಷ್ಟವೆಣಿಸುವರೆ?
ನುರಿವೋಗು ಸ್ಥಿರವಾಗು ಸವ್ಯಸಾಚಿ!
ಅಳ್ಳಿರಿವ ಕೊಳ್ಳಿದೆವ್ವಗಳೆಂದು ಅಂಜುವರೆ
ನಿನ್ನಾತ್ಮಕೆಚ್ಚಿನೆದುರಾವ ಭೀತಿ?

ಎಲ್ಲಿ ಒಳಿತಿನ ಶಕ್ತಿ ವ್ಯಕ್ತಿಯಲಿ ಅಡಗಿಹುದೊ
ಎಲ್ಲಿ ವಿಶ್ವಪ್ರೇಮ ಚಿರ ಉದಾರ,
ಅಲ್ಲಿ ಭಾವಂದೀವಿ ಮನದೀವಿ ನಮನವಿಡು
ಅದುವೆ ಬೆಳತಿಗೆಗಣ್ಣ ಜಾಳಂಧರ.

ಬಾನಿನಂಗಣದಲ್ಲಿ ಎನಿತು ಕಾಲದವರೆಗೆ
ಗರಿಗೆದರಿ ಹಾರೀತು ಹಾರೀತವು?
ಹಕ್ಕೆಯರಸುತ ಮತ್ತೆ ಬಿಕ್ಕಿ ಬಳಲುತ ಬಂದು
ಅಕ್ಕರೆಯ ಪಾನಕವ ಗುಟುಕಿಸುವವು.

ಆಕಾಶಗಂಗೆಯಲಿ ಮಿಂದು ಇಂಚರಗೈವ
ಗಾನವಕ್ಕಿಯ ಹುರುಳನರಿಯಲಿಲ್ಲ-
ಸಕಲ ಜೀವರುಗಳಿಗೆ ಮಂಗಲವ ಪಾಡುತಿಹ
ಸದ್ಭಾವಕಿನಿತು ದಯದೋರಲಿಲ್ಲ.

ಎತ್ತೆತ್ತ ಹಾರಿದರು ಅತ್ತತ್ತ ಬೆಂಬತ್ತಿ
ಕಲ್ಲೆದೆಯ ಕಟುಗಿಡುಗ ಹೊಂಚುತಿಹುದು;
ಬಣ್ಣಬಣ್ಣದ ಗರಿಯ ರೋಮಗಳ ಕಿತ್ತೆಸೆದು
ನಿರ್ದಯದಿ ನೆತ್ತಿಯನು ಕುಕ್ಕುತಿಹುದು.

ಚಂದ್ರಮನ ಶೀತಸುಧೆ ಮನದಾಳಕಿಳಿಯುವದೆ
ಅರೆಜೀವ ಬರಿಸಾವು ಕೊನೆಗೊಳ್ವುದೆ?
ಶಾಂತಿರಸ ಎದೆಗೋತು ಎದೆಯನ್ನೆಯಾಗುವಳೆ
ವಿಶ್ವದಂತಃಕರಣ ಬದುಕಿಸುವದೆ?

ತಲೆತುಂಬ ಪಾಂಡಿತ್ಯ-ಒಲವಿನರ್ಥಕೆ ಶೂನ್ಯ-
ರಾಗಿ ಬಾಳ್ವರ ಕಂಡರೆನಗಾಗದು;
ಮಾತುಮಾತಿಗೆ ಮೋಸ, ಪರರ ಛಿದ್ರಾನ್ವೇಷ
ಇವರ ಆಳವನಿಲ್ಲೆ ಅಳೆಯಬಹುದು.

ಬೇಡವಿನ್ನೀ ಬಯಕೆ ಕೊಟ್ಟಣದ ಕುಟ್ಟುವಿಕೆ
ತಲೆಚಿಟ್ಟು ಓಕರಿಕೆ ಬಂದಿರುವದು;
ತೆಗಳಿಕೆಯ ತಳಮಳಿಕೆ, ಹೊಗಳಿಕೆಯ ಬುಡುಬುಡಿಕೆ
ಕಾಲದೊರೆಗಲ್ಲಿನಲಿ ತಿಳಿಯಬಹುದು.

ಆತ್ಮಾನುಸಂಧಾನಕೆನ್ನನೆಳಸೈ ತಂದೆ
ಸರ್ವಾತ್ಮ ಸಾಕ್ಷಿಯಲಿ ನೀ ಬೆಳಗುತ,
ಮರ್ತ್ಯವನು ಗೆದ್ದ ಮೃತ್ಯುಂಜಯೋಜ್ವಲನವೆ
ಎನ್ನೊಡಲ ಕಾಳಿಕೆಯ ಸುಟ್ಟುರಿಸುತ.

ನನ್ನ ಉಪಕಾರವಿದು ಎಂಬಹಂಕಾರವೇ?-
ಅಂಥ ಅಹಮಹಮಿಕೆಯು ಮೊದಲಿಗಿಲ್ಲ;
ನಮ್ರತೆಯು ಜಿಜ್ಞಾಸೆ ನನಗೆ ಸುಖವಿತ್ತಿಹವು
ಜಂಭ ಬಡಿವಾರ ಕೈವಾರವಲ್ಲ.

ಲೆಕ್ಕವಿಲ್ಲದ ಜನರ ಹೊತ್ತು ತಿರುಗುತ್ತಿರುವ
ನೆಲದ ಹುಡಿಯಲ್ಲಿ ನಾನೊಂದು ಕಣವು;
ಬಾನ್ನೆಲವ ಸುತ್ತಿ ನೆರೆಮುತ್ತಿ ಘೂರ್ಮಿಸುತಿರುವ
ಬೆಂಗಾಡ ಬಿರುಗಾಳಿಯೊಂದು ಅಣುವು-

ಭುಲ್ಲವಿಸಿ ಬಲ್ದೆರೆಗಳೆದ್ದು ಹೊಯ್ದಾಡುತಿಹ
ಕಡಲಾಳದಲ್ಲಿ ನಾನೊಂದು ಹನಿಯು;
ಇಕ್ಕೆಲದಿ ಎಕ್ಕೆಕ್ಕಿ ಗಜರಿ ಗರ್ಜಿಸುತಿರುವ
ನೀರ್-ಬೀಳಿನಲಿ ಸಿಡಿವ ಜಿನುಗು ಹನಿಯು.

ದಟ್ಟೈಸಿ ಹಳು ಬೆಳೆದ ಕಟ್ಟರಣ್ಯದ ನಡುವೆ
ತರುಗುಲ್ಮಗಳಲಿ ನಾನೊಂದು ಎಲೆಯು;
ಅಂತವಿಲ್ಲದ ಗಗನ ವಿಸ್ತೀರ್ಣದಲಿ ತೇಲಿ
ಲೀನವಾಗುವ ಮೋಡದೊಂದು ಎಳೆಯು.

ಜಗದೆಲ್ಲ ಜನರ, ಮಿಗ, ಹಕ್ಕಿಗಳ, ಕೀಟಗಳ
ಗಜಬಜೆಯ ಗದ್ದಲದಲೊಂದು ದನಿಯು;
ಮದ ಮೋಹ ಮಾತ್ಸರ್ಯ ಕೋಪ ತಾಪಂಗಳಿಗೆ
ಹತಿಗೊಂಡ ಖತಿಗೊಂಡ ಸೀಳು ತಲೆಯು.

ಇಲ್ಲದ್ದು ಇದ್ದದ್ದು ಎದ್ದೆದ್ದು ಬಡಿಯುತಿರೆ,
ಕಾಲ ರಣಹದ್ದಿನೊಲು ಚಂಚು ತಿವಿಯೆ,
ನಾನೆಲ್ಲಿ ನನ್ನ ಪರಿಸರವೆಲ್ಲಿ ತೆರವೆಲ್ಲಿ
ಇರವೆಲ್ಲಿ ಹೋಹುದೋ ಅರಿಯೆ ಅರಿಯೆ.

"ಓದು ವಾದಗಳೆಲ್ಲ ಶಕ್ತಿಯುಕ್ತಿಗಳೆಲ್ಲ
ಮುಗಿದು ನಿಜ ನಿಂತದ್ದೆ ಭಾವ ಮುಕ್ತಿ"-
ಮಧುರಚೆನ್ನರ ಮಧುರ ನುಡಿಯ ಮರ್ಮವನರಿತು
ಮಾರುಹೋಯಿತು ನನ್ನ ಭಾವ ಭಕ್ತಿ.

ಒಂದಿಲ್ಲ ಒಂದು ದಿನ ಸಾನಂದ ಸುಂದರನು
ಎದೆಯ ಪೀಠಕೆ ಬಿಜಯಗೈಯಬಹುದು;
ಭಾವಜೀವಿಯ ವಿಮಲ ಭಾವಾನುಭಾವದಲಿ
ಒಳನಿಧಾನದ ಪರಿಯ ತೋರಬಹುದು.

ಆವರೆಗು ಅನಿಸಿಕೆಯ ನೆನಸಿಕೆಯ ತುಂಬಿರುವ
ಚಿತ್ಸೂರ್ಯ ಕಿರಣಗಳನಾಯುತಿಹೆನು.
ಹಗಲುಗಳ್ಳರು ನನ್ನ ಮನವ ಹಾಡೇ ಹಗಲು
ಹೊಕ್ಕಿರಲು ಮೊದಲವರ ಓಡಿಸುವೆನು.

ಪಂಚೇಂದ್ರಿಯಗಳುಣುವ ಪಂಚಕದ ಪರಮಾನ್ನ
ನೀರಡಿಸಿ ನೆನೆಗುದಿಗೆ ಬಿದ್ದಿರುವುದು;
ಬೇವು ತಿಂದರು ಬೆಲ್ಲ ತಿಂದಂತೆ ಸವಿಯಾಗಿ
ರುಚಿಸುವರೆಗೂ ರಸನೆ ಕಾದಿರುವುದು.

ರಸವಂತಿ ವಾಸಂತಿ ಗುಣವಂತಿಯಾದಂದು
ಕೋಗಿಲೆಗು ಸವಿಹಾಡ ಕಲಿಸಬಹುದು;
ಕೊರಳ ಕೊಂಕಿಸಿ ಗರಿಯ ನೂರು ಕಂಗಳ ಹರಹಿ
ಕುಣಿವ ನವಿಲಿಗೆ ಕೇಕೆ ಹೊಡೆಯಬಹುದು.

ಕವಿಯ ಭಾವದ ಮೋಡ ತಂಗಾಳಿ ಸಖ್ಯದಲಿ
ಸುರುಚಿರಾಮೃತ ವರ್ಷ ಸುರಿಸಬಹುದು;
ಯಾತರದೊ ಯಾತನೆಯ ಕಾತರದಿ ಕುಳಿತಿರುವ
ಚಾತಕವು ಆತುರದಿ ಈಂಟಬಹುದು.

ಅಲೆವ ಗಾಳಿಯ ಹಿಡಿದು ತಂತಿಗಳ ಹೆಣೆಹೆಣೆದು
ವೀಣೆಯಂದದಿ ಝಣತ್ಕರಿಸಬಹುದು,
ದೇಶ ದಿಗ್ದೇಶಗಳ ಒಡಪಿನೊಡಗತೆಗಳನು
ಗಾಳಿ ಮೂಲಕ ಕೇಳಿ ಬಿಡಿಸಬಹುದು.

ಸೂರೆಪಾನದ ಹೂವ ಪುಷ್ಪಕ ವಿಮಾನದಲಿ
ಕುಳಿತು ಬಾಂದಳದಲ್ಲಿ ಏರಬಹುದು;
ಅಲ್ಲಿ ಗ್ರಹ ತಾರೆಗಳ ಮಂಚದಲಿ ಮಂಡಿಸುತ
ಚಂದ್ರನೊಡ ಚದುರಂಗವಾಡಬಹುದು.

ಇಳೆಯ ಬಾಳಿನ ಹಂತ ಮುಗಿಲುಗಳ ಪರ್ಯಂತ
ಎತ್ತರಿಸಿ ಬಿತ್ತರಿಸಿ ಬಾಳಬಹುದು;
ಪ್ರೇಮಮೂರ್ತಿಯು ನಮ್ಮ ರಾಜರಾಜೇಶ್ವರಿಯು,
ನೀತಿ ಸಮತೆಯು ನಾಡ ಬೆಳಗಬಹುದು.

ಭಾವಜೀವಿಯು ನಾನು, ನನ್ನೆದೆಯ ನಂಬಿರುವ
ತುಂಬಿರುವ ಕನಸುಗಳೆ ಕಲ್ಪವೃಕ್ಷ!
ಯಾವುದಾದರು ಏನು ಕೃತಿಯಲ್ಲಿ ಬರುವನಕ
ಕನಸಲ್ಲವೆ?- ಅಲ್ಲವೆನಲು ರುಕ್ಷ.

ಮನೆಯ ಕಟ್ಟುವ ಮೊದಲು ನಕ್ಷೆಯನು ತೆಗೆವಂತೆ
ಭಾವ ಕಾಣುವುದದನು ಕನಸಾಗಿಸಿ,
ಆಮೇಲೆ ಕಲ್ಲು ಇಟ್ಟಿಗೆ ಗಚ್ಚು ಗಾರೆಯಲಿ
ಭದ್ರಗೊಳಿಸುವರದನು ರೂಪುಗೊಳಿಸಿ.

ನನ್ನ ಬಗೆಯನೆ ಬಗಿದು ಹೊಗುವ ಭರದಲ್ಲಿರಲು
ಬಗೆಬಗೆಯ ಅನುಭವವು ಬಂದುದುಂಟು;
ಅದರ ತಿಳಿಯೊಂದಿನಿತು ನನ್ನ ನುಡಿಯೊಳಗಿಳಿದು
ಬಂದಿರಲು ಜೀವಕ್ಕೆ ಹರುಷವುಂಟು.

ಮಿಡಿಗಾಯನೊತ್ತಿಟ್ಟು ಹಿಸುಕಿ ಹಣ್ಣಿಸಬಹುದೆ?
ಹಸಿಬಿಸಿಯು ರಸಪಾಕವಾಗಬಹುದೆ?
ಉಂಡ ಅನ್ನವು ಅರಗಿ ಮೈಗೂಡಿಕೊಳ್ಳದಿರೆ
ದೇಹಕೆನಿತಾದರೂ ಸೌಖ್ಯವಿಹುದೆ?

ಎದೆಯ ಗುಹೆಯೊಳಗಿರುವ ಗುರು ಗುಹೇಶ್ವರನರಸಿ
ಕಂಡುದನು ಮನದಲ್ಲಿ ಕಂಡರಿಸುತ,
ಮನುಜನೊಳಗಿನ ಮಹೇಶ್ವರನುದಿಸಿ ಕರುಣೆಯಲಿ
ಬಂದಂದು ಲೋಕಕ್ಕೆ ಸುಖದ ಸ್ತೋತ.

"ಅನುಭಾವವೆಂಬುವದು ಅಂತರಂಗದ ರತ್ನ
ಶಿಶು ಕಂಡ ಕನಸು ತಾನಾತ್ಮ ವಿದ್ಯೆ-
ನಿಜನಿವಾಸದಲಿರಿಸಿ ತನ್ನರಿವ ತೋರುವದು
ಅನುಭಾವ ತಾನಲ್ಲ ಶಾಸ್ತ್ರ ವಿದ್ಯೆ!" ೫೮೦



# ಆಕಾಶಬುಟ್ಟಿ

೧೯೫೦-೧೯೫೩

## ಆಕಾಶಬುಟ್ಟಿ

೧

ಹೊಗೆ ತುಂಬಿ
ನಗೆ ತುಂಬಿ
ಬಣ್ಣಬಣ್ಣದ ನವಿರು ಕಾಗದದ ಬುಟ್ಟಿಯಲಿ
ಜೀವ ತುಂಬಿ,
ದೂರ ಹಾರುವದೆಂಬ ಭರವಸೆಯ ನಂಬಿ,
ನಮ್ಮ ಹಿರಿಯಾಸೆಗಳ ಉರಿವ ಕಕ್ಕಡವಿಟ್ಟು,
ಉತ್ಸಾಹ ಸಾಹಸಕೆ ರೂಪುಗೊಟ್ಟು
ಮೇಲುನಾಡಿಗೆ ತೇಲಬಿಟ್ಟೆವಿದೊ ಚೈತನ್ಯದಾಕಾಶಬುಟ್ಟಿ!
ಏರುವದೊ
ಇಳಿಯುವದೊ
ಗಾಳಿಯಾಘಾತದಲಿ ಜೋಲಿ ಹೊಡೆದುರುಳುವದೊ?
ಮೈ ಸುಟ್ಟುಕೊಳ್ಳುವದೊ,
ಕಾಣಲಾರದ ಕೊಳ್ಳದಾಳದಲಿ ಬೀಳುವದೊ-
ಆರು ಕಂಡಿಹರಿದನು?

ತಿಳಿಯಲಾರದ ಹದನು!
ಆದರೂ ಆದರೂ ಹಾರಿಸಿದೆವಿದನು!
ಹುಡುಗತನದುತ್ಸಾಹ ಕೊನೆಬಲ್ಲುದೇನು?

೨

ಆಕಾಶದ ಪ್ರಕಾಶದಲಿ ಎದೆಯ ತೆರೆದು
ಇಳೆಯ ಬಾಳಿನ ಹಂಗು ನೂಲು ಹರಿದು
ಮೇಲೆ ತೇಲಾಡುವುದ ಕಣ್ಣಾರೆ ಕಂಡು
ನನ್ನ ಬಗೆಯಾಶೆಗಳು ರೆಕ್ಕೆಗೊಂಡು
ಅಂಧಂ ತಮಸ್ಸಿನಲು ಬೆಳಕನುಂಡು
ಮುಗಿಲಲ್ಲಿ ಬಿತ್ತಿರುವ ಮುತ್ತುಗಳ ಬೆಳೆಯ
ಹಾಲುಗಳನು ಬಯಸಿ ಹಾರುತಿವೆ ಗೆಳೆಯ!
ಅದೊ! ನೋಡು ನೋಡು
ಚಿಕ್ಕೆಗುರಿ ಬೆಂಬತ್ತಿ ಸಾಗಿರುವ ಕಿರುದೀಪಕಾವ ಕೇಡು?
ಇಳೆಯ ಬಾಳರಳಿ ಬಂಗಾರ ಭರಣಿಯು ತೇಲಿ
ಬೆಳ್ಳಿ ಚಿಕ್ಕೆಗೆ ತೆಕ್ಕೆ ಹಾಕಿಹುದು ನೋಡು!
ಬೆಳಕು ಬೆಳಕಿಗೆ ಮುತ್ತು ಕೊಟ್ಟಿಹುದು
ಆ ಪ್ರೀತಿ ಸೌರಭವೆ ತೋಳಬಂದಿ!
ಸೌಂದರ್ಯದಾನಂದವಿಲ್ಲಿ ಬಂದಿ.

೩

ದೀನ ಮಾನವ ರಚಿತ ಆಕಾಶಬುಟ್ಟಿ
ದಾನವರ ಬಿರುಗಾಳಿ ದಾಳಿಯನು ಮೆಟ್ಟಿ
ಬಾನವರನಪ್ಪಿ ಒಂದಾಗಿಹುದು ನೋಡು!
ನೋಡಿದೆಯ ಕವಿಯೆ?
ಊರ್ಧ್ವಮುಖಿಗಲ್ಲದಿದು ಉಳಿದವರಿಗಳವೆ?
ಆತ್ಮಬಲದೆದುರು ಮೇಣುಳಿದ ಬಲವೆ?
ಆಕಾಶಬುಟ್ಟಿಯೊಲು ಏಕಾಕಿಯಾದರೂ
ಎದೆಗೆದೆಯ ಹೊಂದೀಪ ಉದ್ದೀಪನಂಗೊಂಡು
ಬಾಳದ್ವೀಪವ ಬೆಳಗುವಂತೆ ಹಾಡು
ಎಂದೆಂದು ನೀನಿಂಥ ಹಾಡ ಹಾಡು!

## ಹೊಸ ಬಾಳು ನಮ್ಮದಿದೆ

ಹೊಸ ಜಗವು ರೂಪುಗೊಂಡಿಹುದೀಗ; ಹೊಸ ಬಾಳು
ನಮ್ಮದಿದೆ, ಹೊಸತೆಲ್ಲ ನಮ್ಮದಿನ್ನು!
ಹಳೆಯ ಕಾಲದ ರೂಢಿ-ಜಡಮತೀಯರನೆಲ್ಲ
ಬಿಟ್ಟು ಬಿಡಿ ಅವರವರ ಪಾಡಿಗಿನ್ನು-

ಯುವ ಜನಾಂಗವೆ ಬನ್ನಿ ನವರಂಗಕೆ
ಹೊಸ ಪಾತ್ರಧಾರಿಗಳ ಹೊಸ ಕುಣಿತಕೆ;
ಮೂಲೆಯಲ್ಲವಿತವಗೆ ಬರಿ ಕತ್ತಲು
ಸತ್ವತಮ ಸಾಹಸಕೆ ಯಶವೆತ್ತಲು!

ಹೊಸ ಮಳೆಯ ಧಾರೆಯಲಿ ಇಂದಿನೀ ಜೀವನಕೆ
ಬಂದಿದೆ ಮಹಾಪೂರ, ಬತ್ತದಿನ್ನು!
ಹಳೆ ಕೊಳೆಯ ತತ್ತ್ವಗಳು ಸಂಕುಚಿತ ಭಾವಗಳು
ಕೊಚ್ಚಿ ಹೋಗಿವೆ, ತಿರುಗಿ ಬಾರವಿನ್ನು-

ಮುಂಬಾಳ ಮುಂಜಾವು ನಗೆಯ ಬೀರಿ
ಕೊರಳೆತ್ತಿ ಹಾಡುತಿದೆ ಜಯವ ಕೋರಿ;
ಮರೆತು ಬಿಡಿ ಹಿಂಗತೆಯ ಹೀನತೆಯನು
ಕೊಟ್ಟು ಬಿಡಿ ಆ ವ್ಯಥೆಗೆ ತರ್ಪಣವನು!

ಎಂದಿನಿಂದಲೊ ನಿಮ್ಮ ಎದೆಗಳಲಿ ಹುದುಗಿಹುದು
ಹೊಸ ಸಮಾಜದ ರೂಪ-ರೇಷೆ ಬಯಕೆ;
ನಿಮ್ಮ ಹೊಂಗನಸುಗಳ ಕಂಡರಿಸಲೆಂದೀಗ
ಹದಗಾಲ ಬಂದಿರಲು ಮುದುರಲೇಕೆ?

ಬಾಳವೃಕ್ಷದ ಜೀರ್ಣ ಪರ್ಣಂಗಳುದುರಿ
ಹೋಗುತಿವೆ ಚಿಗುರೆಲೆಗೆ ಹೊಗರು ಬೀರಿ,
ಜೋಲು ಮೊಗ ಯುವಕರಿಗೆ ಸಲ್ಲ ಹೊಲ್ಲ;
ನಗುತ ಮುಂಬರಿಯುತಿರೆ ಬಹುದು ಗೆಲ್ಲ!

ಬಡವ ಬಲ್ಲಿದರೆಂಬ ಜಾತಿಗೀತಿಗಳೆಂಬ
ವಿಷಮತೆಯ ನಂಟೇಕೆ ಹೊಸ ಬಾಳಿಗೆ?
ಹೆಣ್ಣೆಂದು ಹೀಗಳೆವ ಕುನ್ನಿತನವಿನ್ನೇಕೆ?
ಕಸವೇಕೆ ನಳನಳಿಪ ಹುಲುಸು ಬೆಳೆಗೆ?

ಒಡಕು ಬಾಳಿನಲಿಲ್ಲ ಚೆಲುವು ಮೋದ
ಒಡಕು ತಂಬೂರಿಯಲಿ ಒಡಕು ನಾದ;
ಮಣ್ಣು ಮಣ್ಣೇ ಹೊನ್ನ ಬೆಳೆಯಬಹುದು
ನಮ್ಮ ದೃಢ ಮುಷ್ಟಿಯಲಿ ಸಗ್ಗವಿಹುದು.

ಮುಗಿದು ಹೋಯಿತು ಬಾಲ್ಯ, ಮುಂದೆ ಬಾರದು ಹರೆಯ
ಚಣಚಣಕು ಆಯುಷ್ಯ ಸವೆಯುತಿಹುದು;
ಕಾಲಗತಿಯೊಡನೆ ಸಮರಸವಾಗಿ ಸಾಗುವದೆ
ಜೀವನ ಪ್ರವಾಹಕ್ಕೆ ದೊರೆತ ಗುರಿಯು.

ನಮ್ಮ ಅನುಭವಗಳೇ ನಮ್ಮ ಗಳಿಕೆ,
ಕಾಲದೊರೆಗಲ್ಲಿನಲಿ ನಿಂತ ಬಾಳ್ಕೆ;
ನೊರೆಗೆ ಮರುಳಾಗುವದೆ ಹೇಡಿ ಬದುಕು
ಮುತ್ತು ಪಡೆವರೆ ಆಳ ಮುಳುಗಬೇಕು.

ನಿಮ್ಮೆದೆಯೊಳಿದೆ ಛಲವು, ನಿಮ್ಮ ಕೈಗಿದೆ ಬಲವು
ಆದರೇತಕೊ ಹಿಂದೆ ಸರಿಯುತಿಹಿರಿ-
ಅವ್ಯಕ್ತ ತೇಜಗಳೆ, ಅಮೃತಪುತ್ರರು ನೀವು
ಪ್ರತಿಗಾಮಿ ಶಕ್ತಿಗಳ ಸದೆಬಡೆಯಿರಿ.

ಜ್ಞಾನವೃದ್ಧರು ತಿಳಿವನೆರೆಯುತಿರಲಿ
ಬೇಡವೆಂದವರಾರು- ಅವರು ಬರಲಿ;
ಹುಮ್ಮಸಕೆ ತಣ್ಣೀರನೆರಚದಿರಲಿ
ಹೊಸ ಸಮಾಜದ ಗುರಿಯು ನೇರವಿರಲಿ.

ಹೊಸ ಜಗವು ರೂಪುಗೊಂಡಿಹುದೀಗ; ಹೊಸ ಬಾಳು
ನಮ್ಮದಿದೆ, ಹೊಸತೆಲ್ಲ ನಮ್ಮದಿನ್ನು!
ಹಳೆಯ ಕಾಲದ ರೂಢಿ ಜಡಮತೀಯರನೆಲ್ಲ
ಬಿಟ್ಟು, ಬಿಡಿ ಅವರವರ ಪಾಡಿಗಿನ್ನು!

ಹೊಸ ಬಾಳು ರಸಬಾಳನಪ್ಪುತಿಹುದು
ಸಮತೆ-ಸಾಮಾನ್ಯತೆಗೆ ಒಪ್ಪುತಿಹುದು;
ಹೊಸ ಗಂಧ ತಂದಿಹನು ಮಂದಾನಿಲಂ
ಹೊಸ ಕಾಲದುದಯ ರವಿ-ಸುಸ್ವಾಗತಂ.

## ಸಾವುದೆಲ್ಲಾ ಸತ್ತು .........!

೧

"ಸಾವುದೆಲ್ಲಾ ಸತ್ತು ಬಾನಾಳ್ಕೆ ಪೂಣ್ಗೆ!"
ಭೂಭಾರಮಾದ ಕೊಳೆಬೆಳೆಯೆಲ್ಲ ಮಾಣ್ಗೆ!
ಒಳಿತಿದನು ಅರಿತು ಆಚರಿಪಂಗೆ
ದಿಟವೆಂದು ನಂಬುವಗೆ,
ಹಂಬಲಿಸಿ ಹರಿದೋಡುವಂಗೆ,
ಶೋಕಕೆದೆಗೊಟ್ಟವಗೆ,
ಲೋಕಹಿತಗೈವಂಗೆ
ಜಗಕೆ ಹೊಸ ಬಗೆಯ ನಲ್ ಕಾಣಿಕೆಯನೀವಂಗೆ!
ಹಿರಿಯಾಸೆ ಹೊದ್ದವಗೆ
ಬಿದ್ದು ಎದ್ದವಗೆ,-
ಮುಂದೋಡಿ ಹಿಂದೆ ನೋಡಿ, ಕೈಬೀಸಿ ಕರೆದು ಬೇಡಿ
ಕತ್ತೆತ್ತಿ ಮುನ್ನಡೆವ ಧೀರನೆ ಧುರೀಣ!
ಸಣ್ಣತನ ಸ್ವಾರ್ಥ ದಿಗ್ಬಂಧನವನುಚ್ಚಳಿಸಿ
ಎಸೆಯೊ ಪೊಸಮಸೆಯ ಬಾಣ
ಅದರಾಚೆ ನಮ್ಮ ತಾಣ,
ಸುವಿಶಾಲ ಪರಿಧಿ ಕಾಣ!

೨

ದೇಶದಿಗ್ದೇಶಗಳ ಹೊಸ ಗಾಳಿ ಬೆಳಕು
ತನುಮನವನೆಚ್ಚರಿಸಿ ಬಾಳ ತೊಳೆಯುವ ಸೆಳಕು

ಇಂದಿಂದೆ ಬೇಕು
ಬಲಗೊಳಲಿ ಬದುಕು,
ಈಸು ದಿನ ಬೆದರಿ ಬೆದರಿ, ತನ್ನಲ್ಲೆ ಮುದುರಿ ಮುದುರಿ
ಬೂದಿಯಲಿ ಉರುಳಿ ಹೊರಳಿ
ತನಿಗೆಂಡದಂತೆ ನರಳಿ

ಮಲಗಿರುವ ಹೆಬ್ಬಯಕೆ ಮೈಕೊಡವಿ ಮೇಲೆದ್ದು
ಮೇರುಗಿರಿ ಗೆಲ್ಗೆ!
"ಸಾವುದೆಲ್ಲಾ ಸತ್ತು ಬಾನಾಳ್ಕೆ ಪೂಣ್ಗೆ!"

## ಕೊನೆಯ ಎಚ್ಚರಿಕೆ !

೧

ಏಸುಕ್ರಿಸ್ತ ಏಸು ಬುದ್ಧ
ಏಸು ಬಸವ ಬಂದರೂ,
ತಮ್ಮ ಅಂತರಂಗವನ್ನೆ
ಲೋಕದೆದುರು ತೆರೆದರೂ
ನಶ್ವರದಲಿ ಈಶ್ವರನನು
ಕಂಡು ಜಗದ ಕಲ್ಯಾಣಕೆ
ಎದೆಯ ಪ್ರಣತಿ ಜ್ಯೋತಿಯಲ್ಲಿ
ದಯೆಯ ತೈಲವೆರೆದರೂ,
ಪುಣ್ಯ ಪುರುಷ ಗಾಂಧಿ ತಂದೆ
ನೆತ್ತರಲ್ಲಿ ನಾಂದರೂ

ನೀನು ಮಾತ್ರ ಬೋರ್ಕಲ್ಲೆಲೆ ಪೆಡಂಭೂತನಂತಿಹೆ!
ಮತ್ತೆ ಹೊಲಸು ಕೆಸರಿನಲ್ಲೆ ಮತ್ತನಂತೆ ಬಿದ್ದಿಹೆ;
ತೊಳೆದು ಹೋಗಲಿಲ್ಲವಿನ್ನು ನಿನ್ನ ಮನದ ಮೈಲಿಗೆ
ಬರುವದಿಲ್ಲೆ ನಾಚಿಗೆ?
ಮೇಲೆ ಅಹಾ! ಥಳಕು ಬೆಳಕು
ಒಳಗಸಹ್ಯ ಕೊಳಚೆ ಕೊಳಕು
ದುರಾಚಾರ ದುರುದ್ದೇಶ
ದುರ್ನೀತಿಯ ಹೊಲೆಯಿದೆ;
ಡಾಂಭಿಕತೆಯ ಮುಸುಗಿನಲ್ಲಿ
ಬೂಟಾಟಿಕೆಯಾಟವಲ್ಲಿ;
ನೀತಿಯೆಂಬ ಹೆಸರಿನಲ್ಲಿ
ಹುಚ್ಚು ಹೊಳೆಯ ಹಸುರಿನಲ್ಲಿ
ಅಹಂಕಾರ ಹೂಂಕಾರವ-
ಗೈವ ದುರುಳ ಕರುಳಿನಲ್ಲಿ
ಮೋಸವಲ್ಲಿ ನೆಲಸಿದೆ!
ಬಲ್ಮೆ ಸುಲಿಗೆ ನಡೆಸಿದೆ!
ಗುಣವಿಹೀನ ನಿನ್ನ ರೂಪ
ಬಿಸಿಲ ತಾಪ, ವಿಷದ ಕೂಪ
ರೊಚ್ಚಿಗೆದ್ದು ಕೊಡಲು ಶಾಪ
ಅಯ್ಯೊ ಪಾಪ ಎನಿಸಿದೆ.

ನಗುವ ಹುವ ಹೊದರಿನಲ್ಲಿ ಹಾವು ಹುತ್ತ ಕಟ್ಟಿದೆ
ವಿಷದ ಹೊಗೆಗೆ ದೀನ ಜನರ ಉಸಿರು ಕಟ್ಟಿ ಬಿಟ್ಟಿದೆ
ಎತ್ತ ನೋಡಿದತ್ತ ಕುತ್ತು ಕಾಲು ಕೆದರಿ ನಿಂತಿದೆ
ಕರುಣೆಯೊಡಲು ಕುಸಿದು ಬಿದ್ದ ಜ್ವಾಲಾಮುಖಿಯಂತಿದೆ!

೨

ದೊಡ್ಡ ಜನರ ದೊಡ್ಡಿಸ್ತಿಕೆ
ಹೊಗಳು ಭಟರ ಡಬಡ್ಡಳಿಕೆ
ಅನ್ಯಾಯದ ದಬ್ಬಾಳಿಕೆ
ಹೇಳು ಕ್ರೂರಿ ಏತಕೆ?
(ಸ್ವಲ್ಪ ಜನರ ಸಂತೋಷಕೆ!)
ನರಗೆ ನರನ ರಕ್ತ ರುಚಿಯೆ?
ಶೋಷಣೆಯಿದು ನಿನಗೆ ಶುಚಿಯೆ?
ಹೇ! ಸಮಾಜಪಾತಕಿ
ಕಪಟ ವೇಷ ನರ್ತಕಿ!
ನಿನ್ನ ಲಾಸ್ಯ ಹಾಸ್ಯದಲ್ಲಿ
ಕುಡಿತ ಮೆರೆತ ಕೇಕೆಯಲ್ಲಿ
ಉದರಭರಣಕಾಗಿ ಹರಣ
ಕೊಡುವ ಈ ದುರಂತ ಮರಣ
ಚರಮ ಗೀತ ಕೇಳದೆ?

ಅಂಜುಬುರುಕರೆಂದು ಕಪ್ಪೆ ಚೆಲ್ಲಿ ಮೋಜು ನೋಡುವೆ
ಮುಗ್ಧ ಕುಸುಮಕೋಮಲೆಯರ ರುಂಡಮಾಲೆ ಸೂಡುವೆ!
ನಿಷ್ಕಲ್ಮಷ ಎದೆಗಳನ್ನೆ ಹತ್ತಿ ತುಳಿದು ಹಿಂಡುವೆ
ಧೀರರೆಂದು ಕಂಡು ಬರುವ ಮೊದಲೆ ಜೀವ ಹೀರುವೆ!

ಕೈಯ ತುತ್ತು ಕಸಿಯುವೆ
ಮತ್ತೆ ಹಲ್ಲು ಮಸೆಯುವೆ
ಪದೇ ಪದೇ ಅದೇ ರೀತಿ
ಅದೇ ನೀತಿ ಎನ್ನುವೆ,
ಹಳಸಿ ಹೋದ ತತ್ತ್ವಗಳನೆ
ಮೆದುಳಿನಲ್ಲಿ ತುರುಕುವೆ,
ಎಂದಿನಂತೆ ನಿನ್ನ ಭೂಮ
ಹೊಟ್ಟೆ ಹೊರೆದುಕೊಳ್ಳುವೆ!

೩

ಹಗಲು ಇರುಳು ಅರಳು-ಮರಳು
ಇದ್ದು ಬಿದ್ದ ಜೀವಕುರುಲು!
ನಿನಗೆ ಹಿಡಿದ ಒಳರೋಗಕೆ
ಸೂಜಿ ಮದ್ದು ಸಾಲದು!
ಬೇಕು ಅದಕೆ ಮಾಚಿಕಿತ್ಸೆ
ಒಲ್ಲೆನೆಂದರಾಗದು!
ಉಸ್ಸೆನ್ನುವ ಜನದುಸಿರಿಗೆ
ಬುಸ್ಸೆನ್ನುತ ಹೆಡೆಯನೆತ್ತಿ
ಕಚ್ಚಿ ವಿಷವ ಕಾರುವೆ!
ಹಾಲನುಣಿಸಿ ಹಿತದ ಮಾತ
ಹೇಳಿದವರ ಮರೆಯುವೆ.
ಧರ್ಮಾಂಧರ ಹಣವಂತರ
ಬೆನ್ನು ಕಟ್ಟಿ ಗುಣವಂತರ
ಬಡಿವ ಭೂತ ಬೆಂತರ!
ರಕ್ತ ಕೋಡಿ ಹರಿಸಿದೆ,
ಮಂತ್ರದರ್ಥವರಿಯದಯ್ಯೊ
ಮೂಢ ಸಂತೆ ನೆರೆದಿದೆ!
ಮಡಿಯ ಮಾಡಿ ಉಡುವೆನೆಂದು
ಬೊಗಸೆ ನೀರು ಸುರುವಿ ಕೊಳಕು
ಪಂಚೆ ತೊಳೆದ ಮಾತ್ರಕೆ
ಅಚ್ಚ ಹಸನುಗೊಳಿಸದಿರಲು
ಮನಕೆ ಶುಭ್ರವೆನಿಸದಿರಲು
ಮಡಿಯಾಯಿತೆ ಪೂಜೆಗೆ?
ಅದರೊಳುಳಿದ ಜಿಡ್ಡಿನಂತೆ
ನೀನು ಕೂಡ ಮಡ್ಡನಂತೆ,
ತಿಳಿಯೊ ಮೊದಲು ತತ್ತ್ವವ
ಅದರ ಮೂಲ ಸತ್ತ್ವವ!

೪

ಅಧಿಕಾರದ ಅಮಲಿನಲ್ಲಿ
ಮೂಢ ಜನರ ಬೆಂಬಲದಲಿ
ಹೆಸರು ಪಡೆವ ಹಂಬಲದಲಿ

ಅರಿಯದಂಥ ಕುನ್ನಿಗಳನು
ನುಂಗಿ ನೀರು ಕುಡಿದಿಹೆ!
ತೀರಲಿಲ್ಲ ಆ ಪಿಪಾಸೆ
ಟೊಣೆಯುತಿರುವ ಈ ದುರಾಶೆ-
ವಿಶ್ವಪ್ರೇಮ ದಿವದ ಬಯಕೆ-
ಗೆಲ್ಲ ಕೀಲಿ ಜಡಿದಿಹೆ!
ನೊಂದರೂನು ಕರುಣೆ ಬಂದು
ಪರಿಪರಿಯಲಿ ಹೇಳುವೆ;
ಕೇಳಲಾರೆಯಾದರಿನ್ನು
ಭೀಮಗದೆಯನೆತ್ತುವೆ!
ನೂರು ದೂರು ಕೇಳುತಿರುವೆ
ನಿತ್ಯ ನಾನೆ ನೋಡುತಿರುವೆ

ಇನ್ನು ಬರಿದೆ ತಾಳಬಹುದೆ ಇಂಥ ನರಕಯಾತನೆ
ಕಣ್ಣಮುಂದೆ ನಡೆಯುತಿರಲು ಋತದ ಶಿವದ ಭರ್ತ್ಸನೆ!
ಎನಿಸು ಕಾಲ ನಡೆಸಬಹುದು ಘೋರ ಆತ್ಮವಂಚನೆ
ಅದಕೆ ಕೊಡುವೆನಿಂದು ಕೊನೆಯ ಎಚ್ಚರಿಕೆಯ ಸೂಚನೆ;

ಹರೆಯದೇರು ಗರುವದಲ್ಲಿ
ಉದ್ರೇಕದ ಮಬ್ಬಿನಲ್ಲಿ
ಕೈಲಾಗದ ಕನಸನುಂಡು
ಮೈಯನೆಲ್ಲ ಪರಚುತಿರುವ
ಕನಲಿ ಕೆಂಡವಾಗುತಿರುವ
ಅಪ್ರಬುದ್ಧ ಬುದ್ಧಿಹೀನ-
ನೆಂದು ಹಳಿಯಬಹುದು, ತುಳಿಯಬಹುದು ಆದರೆ-
ಅರಿವು ಮರವೆಯಾದರೂ
ನಾವು ನೀವು ಅಳಿದರೂ
ಉಳಿದೆವೆಂದು ತಿಳಿದರೂ

ಸತ್ಯವೊಂದು ನಿತ್ಯವಾಗಿ ಗೆಲ್ಲುವದೋ ಬಾಳನು!
ಪಂಜು ಹಿಡಿದು ಹೊರದೆಗೆವುದು ಕೆಟ್ಟ ಕೀಳು ಕಿಲುಬನು!
ಪಾಳ್ಮಸಗಿದ ನೆಲದೊಳಂದು ಮಾಮಸಕವೆ ನಡೆವುದು
ಭೂತ ವರ್ತಮಾನ ನಡೆದ ಕಥೆಯನೆಲ್ಲ ಪೇಳ್ವುದು.

ಹೊಸತು ಬಾಳ ಹೊಸತಿಲಲ್ಲಿ ಅದೋ ಯುವಕ ವೃಂದವು
ಕೋಟಿ ಹೃದಯ ನಾಟಿ ತಂತ್ರಿ ಮೀಟಿ ಬರುವ ಬಯಕೆಯು
ಒಳಗೆ ಕುದ್ದು ಕುದ್ದು ಅದನೆ ಮೆದ್ದ ಉಗಿಯ ಶಕ್ತಿಯು

ಬೆಂಕೆಯಾಗಿ ಚಿಮ್ಮಿ ನಿನ್ನ
ಜ್ವಾಲೆಯಾಗಿ ಸುಡುವ ಮುನ್ನ
ಒಳಗು ಹೊರಗನೆಲ್ಲವಿಂದೆ
ತೊಳೆದುಕೋ ಸಮಾಜವೆ!
ಧ್ಯೇಯವಾದಿಗಳನು ತುಳಿಯೆ
ನಿನ್ನ ನೀನೆ ಕೊಂದುಕೊಳುವೆ
ಸುಟ್ಟು ಬೂದಿಯಾಗುವೆ!

ಕೆಲವು ಕಾಲ ಮೆರೆಯಬಹುದು ನಿನ್ನ ಉಬ್ಬಿದಬ್ಬರ
ಇಂದು ಕಟ್ಟು ಕಟ್ಟಳೆಗಳ ನಿಗಳ ಕಳಚು ಚಚ್ಚರ!
ಮಸೆದ ಗಂಡುಗೊಡಲಿ ಕೆರಳಿ ಕೊಟ್ಟ ಕೊನೆಯ ಎಚ್ಚರ!
ಏನಿತೊ ಕಾಲ ಮೆಣಸನರೆದ ತಲೆಯ ತಿಂದ ಬೆಂತರ!

## ರೈಲು ಬಂಟ

"ಹಿಂದಿನಳಲ ಮರೆತುಬಿಡು
ಇಂದು ಅಡಿಯ ಮುಂದಕಿಡು
ಇಡು, ಇಡು ಇಟ್ಟುಬಿಡೂ"

ಎನುತ ಗಾಡಿ ಓಡುತಿಹುದು ಓಡುತಿಹುದು ಮುಂದಕೆ
ಮುಂದಕಿಟ್ಟ ಹೆಜ್ಜೆಯಿನಿತು ಸರಿಸದಂತೆ ಹಿಂದಕೆ!
ತಂತಿ ಕಂಬ
ಗಿಡದ ಸಾಲು
ದಾಟಿ ನುಗ್ಗುತಿಹುದು ರೈಲು
ದಾರಿ ಸವೆಯೆ ಮೈಲು ಮೈಲು

ಕಣ್ಗೆ ತಂಪನೀಯುತಿಹುದು ಹಸುರು ಹುಲ್ಲುಗಾವಲು
ಮೋಹವೆರಚಿ ಬಿಸಿಲ್ಗುದುರೆ ಕುಣಿಯುತಿರಲು ಸುತ್ತಲು,
ಅಲ್ಲಿ ಮೇವ ದನದ ಹಿಂಡು
ಓಡಿ ಬರುವ ಗಾಡಿ ಕಂಡು

ಮೃತ್ಯು ಕುಣಿದು ಬಂದಿತೆಂದು ಚಂಗನೆದ್ದು ನೆಗೆದಿವೆ!
ದೂರದಲ್ಲಿ ಶೈಲ ಶಿಖರ
ಬುಗುರಿಯಂತೆ ತಿರುಗಿದೆ;
ಅದರ ಮೇಲೆ ನೆಳಲು ಬಿಸಿಲ ಕೈಯ ಹಿಡಿದು ಸಾಗಿದೆ.
ಕವಿಯ ಭಾವ ಕಾವುಗೊಂಡು
ಕವಿತೆಯಲ್ಲಿ ಮುಕ್ತಿ ಪಡೆದು
ಶಾಂತ ನಿದ್ರೆಗೈಯುವಂತೆ ಮೋಡ ಹಾಗೆ ತೇಲಿದೆ.
ದುಡುಂ ದುಡುಂ
ಬೀಳ್ವೊಡಂ
ಗಾಳಿ ಮಳೆಯು ಪೊಯ್ವೊಡಂ
ನೆಲವನಗಿದು ಬಗಿಯುವಂತೆ
ಬೃಹದ್ ಬಯಲು ಬಿರಿಯುವಂತೆ
ಕ್ಷಿತಿಜದಂಚನಿರಿಯುವಂತೆ
ಬಿಡುಗಡೆಗೆದೆ ತುಡಿಯುವಂತೆ
ಕಿಡಿ ಕಿಡಿ ಕಿಡಿ ಕಾರುತ!
ಸಿಡಿ ಸಿಡಿ ಸಿಡಿದೇಳುತ!

ರೈಲು ಯಂತ್ರ ಕ್ರಾಂತಿ ಮಂತ್ರ ಘೋಷಿಸುತ್ತ ಸಾಗಿದೆ!
ತನ್ನ ಬೆನ್ನು ಬಿದ್ದ ಜನಕೆ ಅಭಯ ಹಸ್ತ ನೀಡಿದೆ.
ಲೋಹದೆರಡು ಹಳಿಗಳುದ್ದ
ಗಾಲಿಯುರುಳಿ ಉರುಳುತಿರಲು
ನೆಲದ ಎದೆಯು ನಡುಗುತಿರಲು
ನಿಮಿಷಕೊಂದು ನೂರು ಹೆಜ್ಜೆ
ಇಡುವಕಾಂಡ ತಾಂಡವ!
ಮೂರ್ತಿವೆತ್ತ ಭೈರವ!

ದಿಕ್ತಟಗಳ ಬಿರಿಸುತಿಹುದು ಇದರ ರೌದ್ರ ಆರವ!
ಗುರಿಯ ನೇರ ದಾರಿಗುಂಟ
ನುಗ್ಗುತಿಹನು ರೈಲು ಬಂಟ
ದುಡಿಮೆ ದುಡಿಮೆ ದುಡಿಮೆಯೆಂದು
ಹೊಟ್ಟೆ ಹೊಟ್ಟೆ ಬಡಿದುಕೊಂಡು
ಕಲ್ಲಿದ್ದಲಿ ನುಂಗಿಕೊಂಡು

ನಿಟ್ಟುಸಿರಿನ ಕರ್ಬೊಗೆಯದು ಕಾಳೋರಗವಾಗಿರೆ
ತಿದಿಯೊತ್ತುತ ಪೂತ್ಕರಿಸುತ ಗಾಳಿಯ ಮೇಲ್ವಾಯ್ದಿರೆ

ಸಿಡಿಗುಂಡಿನ ಸೇಡಿನಂತೆ
ಬಿಲ್ಲಾಣನ ಬಾಣದಂತೆ
ರೈಲುಬಂಟನೋಡುತಿಹನು ಓಡುತಿಹನು ಮುಂದಕೆ
ಕರ್ತವ್ಯದ ಭಾರವಿಳಿಸೆ ನಿಲ್ದಾಣದ ಸನಿಹಕೆ
ನಾವು ನೀವು ಅಗಲಿ ಕೂಡಿ ಅತ್ತು ನಗುವ ತಾಣಕೆ!

## ಅಂಚೆಯಾಳು

೧

ಅಂಚೆಯಾಳು ಬಂದನೇನು?
ತಂದನೇನು ಓಲೆಯ?
ಮನವ ಕೊಂಡು ಕೊನೆವ ಒಲವು ಸಮೆದ ನುಡಿಯ ಮಾಲೆಯ?
ಕಳುಹಲಿಲ್ಲವೇನು ಗಾಳಿಯೊಡನೆ ಬಯಲಿನಾಲಯ?
ಅವನ ಬರವ ಹಾರೈಸುತ
ಯೋಚನೆಯೊಡನೋಲವಿಸುತ
ಬಂಧು ಬಳಗವೆಲ್ಲವಿಲ್ಲೆ ಎದೆಗೆ ಬಿಜಯಗೈಸುತ
ದೂರ ಸಾರಿ ಹೋದ ಗೆಳೆಯರೊಲವಿಗಿಂತು ತಪಿಸುತ
ಖಿನ್ನನಾಗಿ ಬಿನ್ನನಾಗಿ ಮುದುಡಿಕೊಂಡು ಕುಳಿತಿಹೆ;
ನನ್ನ ನಾನೆ ಮರೆತಿಹೆ!

ನೆನಹು ಕೋದ ಜಪಮಣಿಯನು
ಎಣಿಸುತಿರುವ ವಿರಹಿಣಿ
(ತಾನೆ ತನ್ನ ಅರಗಿಣಿ!)
ಎಂತುಟಾಸೆವಟ್ಟು ಮೂಗವಟ್ಟು ಕುಳಿತು ನೆನೆವಳೊ
ಅಂತುಟಾಸೆ ನನಗೆ ಅಂಚೆಯವನದೇಕೆ ಬಾರನೊ!
ಸುದ್ದಿಯೊಂದ ತಾರನೊ!

೨

ಬಾಲ್ಯದೊಂದು ಚಿಕ್ಕ ಕೃತಿ
ಅದರ ಮಧುರ ವಿಸ್ಮೃತಿ;
ಅಂಚೆಮನೆಯು ಇರದ ಹಳ್ಳಿ
(ಸುತ್ತಮುತ್ತು ಡಬಗಳ್ಳಿ)
ಅಲ್ಲಿ ವಾರಕ್ಕೊಮ್ಮೆ ಬಂದು

ಮುದ್ರಾಂಕಿತ ಪತ್ರ ತಂದು
ಹಂಚುತಿದ್ದ ಅಂಚೆಗಾರ;
ನಮ್ಮ ಊರಿಗವನು ದೇವದೂತ ವಿವಿಧ ಸುದ್ದಿಸಾರ-
ಖಾಕಿ ಚಣ್ಣ,
ಬಗಲ ಚೀಲ,
ಹೆಗಲಿನಿಂದ ಜೋತ ಕೊಡೆ,
ದೊಡ್ಡ ಹೆಜ್ಜೆ, ಬೀಸು ನಡೆ,-
ಅವನ ನಗೆಯ ಬಗೆಯ ಕಂಡು
ಕೈಯ ಚಾಚಿ ಪತ್ರ ಕೊಂಡು
ಓದುತಿರಲು, ಮನೆಯ ತುಂಬ ಹರುಷದೊಂದು ಹಬ್ಬವು!
ಅಂದಿನಂದ ಬಿಸವಂದದ ದಿನಗಳಿನ್ನು ಬಾರವು.

೩

ಇಂದು ಯಾವ ಆಸರ?
ಶಾಂತಿಗಾಗಿ ಬಾಯಾರಿದೆ; ಬೇರೂರಿದೆ ಬೇಸರ!
ನಿದ್ದೆಯಿರದ ಆಕಳಿಕೆ
ಎತ್ತಲೂನು ಮಗ್ಗಲೂರಗುಡಲಾರದ ಬಳಲಿಕೆ!
ನನಗೆ ಮರಹು ಅಲಸಿಕೆ
ಎಡೆಗೊಂಡಿದೆ; ನಡುವೆ ಮೌನವೆಳೆದಂತಿದೆ ಜವನಿಕೆ.
ಗೆಳೆಯರೆಲ್ಲ ಶಪಿಸಿ ಬರೆಯಲವರ ಕೋಪತಾಪಕೆ
ಸಣ್ಣದೊಂದು ಓಲೆ ಕೂಡ ಬರೆಯೆನವರ ಶಮನಕೆ.
ಹೊತ್ತನೆಲ್ಲ ವ್ಯರ್ಥಗಳೆವ ಅರ್ಧಮರ್ಧ ಸಾಹಸಿ
ಅಯ್ಯೊ ನಾನು ಆಲಸಿ!
ಇನ್ನು ನನ್ನ ಮನ್ನಿಸಿ.
ಆದರೂನು ಕಾಯುತಿರುವೆ,
ಯಾರದಾದರೊಂದು ಓಲೆ
(ಇರಲಿ ಬರಿಯ ಎರಡು ಸಾಲೆ)
ಬಾರದೇನು? ತಾರದೇನು ಸ್ನೇಹಗೊಂಡ ಸೂತ್ರವ?
ಕಣ್ಣ ಮುಂದೆ ಕುಣಿಸದೇನು ಬಣ್ಣಗೊಂಡ ಪಾತ್ರವ?
ಲಿಪಿಯೋದ್ಭವರಾಗಿ ಇಳಿಸರೇನು ಮೌನಭಾರವ?
ಎಂದಿಗೇನು?
ಅಂದು ಇಂದು
ಅಂಚೆಯಾಳು ನನ್ನ ಬಂಧು.

ನನ್ನ ಆಸೆ ಒಂದೆ ಒಂದು;
ಓಲೆ ಬರಲಿ
ಬಾರದಿರಲಿ
ಅಂಚೆಯವನು ಮಾತ್ರ ದಿನವು
ನನ್ನ ಕಣ್ಣಿನೆದುರು ಬಂದು ನಕ್ಕಾದರು ಹೋಗಲಿ.

## ಶ್ವೇತಪುತ್ರಿ

ಗಾಳಿಯ ಬೆರಳಿಗೆ ಬೆಳ್ಳಿಯ ಉಂಗುರ
ತೊಡಿಸುತ ಬರುತಿಹ ಒಯ್ಯಾರಿ!
ಹೊಗೆಯ ಸುರುಳಿಗಳ ಅರಳಿನ ಮಾಲೆಯ
ಕೊರಳಿಗೆ ಸೂಡುವ ಸುಕುಮಾರಿ!

ಬಿಳಿಯ ಪತ್ತಲದ ತೆಳ್ಳನೆಯುಡುಗೊರೆ
ಕೆಂಗಿಡಿ ಕೆಂಬರಳಿನ ನತ್ತು,
ನಿರಾಭರಣ ಸುಂದರಿ ಸುವಿಲಾಸಿನಿ
ಕಲಿಸಿದರಾರೀ ಹೊಸ ಗತ್ತು?

ಸುಳಿಗಾಳಿಗೆ ಬಲು ಬಳುಕುತ ನಟಿಸುವ
ಒಪ್ಪಿಡಿ ನಡುವಿನ ಹೊಗೆ ರಾಣಿ!
ಒಂದೇ ಸೆಳೆತಕೆ ತುಟಿಗಳ ಮುದ್ರಿಕೆ
ನಿನ್ನಯ ಹೆಸರೇ "ಜೇನುಹನಿ".

ಮೊದಮೊದಲಿಗೆ ಹಿರಿಕಿರಿಯರಿಗಂಜುತ
ಕಟ್ಟೇಕಾಂತದಿ ನೀನೊಲಿದೆ;
ಕಿತ್ತಿಳೆ ತೊಳೆ-ತುಟಿ ಮಧುರಿಮೆ ಹೀರಲು
ಮುತ್ತಿನ ಸತ್ತಿಗೆ ನೀನಾದೆ!

ಎಂದಾದರು ನೀನಿರದಿರೆ ಬರದಿರೆ
ವಿರಹದಿ ಕೊರಗುವೆನೇಕಾಕಿ;
ಜುರಿಯೊಂದೆಳೆತಕೆ ಯೋಚನೆ ಮಾಲಿಕೆ
ಭಾವೋದ್ರೇಕವು ಧೂಮಾಕ್ಷಿ!

ಚಿತ್ರವಿಚಿತ್ರದ ಹೊಗೆಗೆರೆ ಮೂಡಿಸಿ
ಸೂತ್ರದ ಗೊಂಬೆಯನಾಡಿಸುವಿ,
ಬಯಲೊಳು ಧೂಮಸ್ತೂಪವ ನಿಲ್ಲಿಸಿ
ಬಾನ್ನೆಲವನ್ನಾಲಿಂಗಿಸುವಿ!

ಧೂಮ್ರಪಾನದೀ ಧೂಪಾರತಿಯೊಳೆ
ಜ್ಞಾನೋಪಾಸನೆಗೆಯ್ಯಿಸುವಿ
ಧ್ಯಾನದಿ ಮನನದಿ ವೈನತೇಯನೊಲು
ಅಮೃತಾಚಲವನ್ನೈದಿಸುವಿ!

ಗುರಿನಿರಿಯಿಲ್ಲದ ಗರಿಗರಿ ಮೋಡದ
ಸರಿದೊರೆಯಾಗಲು ಹೆಣಗುತಿಹೆ;
ಸುಂಟರಗಾಳಿಯ ಬಂಟನ ದಾಳಿಗೆ
ಕಂಟಣಿಸುತ ಕರಕರಗುತಿಹೆ!

ಮೋದದಿ ಸೇದಲು ಸೊದೆಯನು ಕುಡಿಸುವೆ
ಎದೆಯುರಿ ಸಹಿಸುತ ಕಲ್ಯಾಣಿ,
ಬಿಳಿ ಹೊಗೆ ಬೆಳ್ಗೊಡೆ ಚಾಮರದಡಿಯಲಿ
ಹಾಡಿ ಹರಸುವಳು ಗೀರ್ವಾಣಿ!

ಶಿವ ಶಿವ ಶಂಭೋ ಚಿಲುಮೆಯ ತುಂಬೋ
ನಾನೆ ಸ್ವಯಂಭೂ ಇನ್ನಿಲ್ಲ;
ಬಾರಿಸು ಡಮರುಗ, ಕುಣಿಯಲಿ ಭೃಂಗಿಯು
ಕೈಲಾಸದ ಸುಖ ಬೇರಿಲ್ಲ!

## ಕಿತ್ತೂರ ಕೋಟೆಯನ್ನು ಕಂಡು

ಭೂತಕಾಲದ ಗರ್ಭದಲ್ಲಡಗಿ, ಮೈಯುಡುಗಿ,
ಗಹಗಹಿಸಿ ನಗುವ ಕಾಲನತ್ಯದ್ಭುತ ದವಡೆ-
ಯೊಲು ತೋರುತಿದೆ ಕಿತ್ತೂರ ಬಲ್‌ಕೋಟೆ ಗೋಡೆ!
ಅಲ್ಲಲ್ಲಿ ಬೆಳಕಳಿದ ಬೆಳಕಿಂಡಿಯಲಿ ನುಗ್ಗಿ,
ಗೋಳಿಡುವ ಅಪಸ್ವರದಂತೆ ಬಿಸುಸುಯ್ಯುತಿದೆ
ಗಾಳಿ, ವೈತಾಳಿ! ಗಿಡಗಂಟಿ ಕೊನ್ನಾರದಲಿ
ಗೂಡು ಕಟ್ಟಿಹ ಹಕ್ಕಿ ರಣಗುಡುವ ಬಿಸಿಲಿನಲಿ

ಗತಕಾಲವನು ಕುರಿತು ಬಿಕ್ಕಿ ಬಡಬಡಿಸುತಿವೆ!
ಕಾರ್ಮೋಡದೊಲು ನುಗ್ಗಿ ಬೇಟೆಯಾಡಿದ ವೈರಿ
ಸೈನ್ಯದಲಿ ಮುಂಗಾರ ಮಿಂಚಿನೊಲು ರಣತೇಜಿ-
ಯನ್ನೇರಿ, ಕಾವೇರಿ, ಅಮಮ! ಚೆನ್ನಮ್ಮಾಜಿ
ತುಡುಕುತಿರಲರರೆ! ಏನಾಯಿತಾಯಿತು ಪಿತೂರಿ!
ಪುಟ್ಟದಿರಲಿನ್ನುಮೀ ನಾಡಿನಲಿ ವಂಚಕರ್,
ನರಕುನ್ನಿ ಪಾತಕರ್, ವಿಶ್ವಾಸ ಘಾತಕರ್!

## ಕಿತ್ತೂರಿನ ಕಿಡಿಗಳು

ಗುಣದಲ್ಲಿ ಗೌರಿ, ಕೆಚ್ಚೆದೆಯಲ್ಲಿ ಚಾಮುಂಡಿ,
ಕ್ರೂರ ದಬ್ಬಾಳಿಕೆಗೆ ಬಿಚ್ಚುಗತ್ತಿಯ ಹಿಡಿದು
ಕಿತ್ತೂರ ರಾಣಿ, ಬಜ್ಜರದ ಕಿಡಿ! ಮಾರ್ಪೊಳೆದು
ಭೀರು ಭೀರುಗಳೆದೆಗೆ ಬೀರ ಚೇತನೆಯೂಡಿ
ಉಬ್ಬರಂಬರಿದು ಬಡಿದೆಬ್ಬಿಸಿದ ಕಾವಿನಲಿ
ಮೈದುಂಬಿ ಮೇಲೆದ್ದ ಯೋಧಪಡೆ,- ಸಂಗೊಳ್ಳಿ
ರಾಯಣ್ಣ ನಾಯಕಂ! ಇಕ್ಕಿದರು ಕೆಂಗೊಳ್ಳಿ
ಆಕ್ರಮಣಶೀಲರ್ಗೆ! ಕೌಟಿಲ್ಯ ಜಾಲದಲಿ
ಸೆರೆಯಾಗಿ, ಸಾವಿಗೀಡಾಗಿ, ಶೂಲಕ್ಕೇರಿ
ನಗುನಗುತ ಹರಣಮಂ ತೊರೆವ ಕೊನೆ ನಿಮಿಷದಲಿ
ಅವರ ತೇಜದ ಬೀಜ ಕನ್ನಡದ ಮಣ್ಣಿನಲಿ
ಮೊಟ್ಟ ಮೊದಲಿಗೆ ಮೊಳೆಯಿತ್ತೈ ಬಾವುಟವನೂರಿ!
ಮೊದಲು ನೆನೆಯಿರಿ ಅವರನಾ ಪರಾಕ್ರಮಿಗಳಂ
ನಾಡಗುಡಿ ಕೀರ್ತಿ ದುಂದುಭಿ ನಿನದ ಪಾತ್ರರಂ.

## ಕ್ರಾಂತಿಕಲಿ

ಮುಗಿಲ ಮರೆಗಿರುವ ಮಿಂಚಿನಬಳ್ಳಿ ಗಗನದಂ-
ಚಿಗೆ ತನ್ನ ಕುಡಿನಾಲಗೆಯ ಚಾಚಿ ಕತ್ತಲೆಯ
ತುತ್ತುವೊಲು, ಸಾಮಾನ್ಯದಲ್ಲು ಅಸಮಾನತೆಯ
ಕಿಡಿಯೊಂದು ಅರಿಯದೊಲು ಅಡಗಿಹುದು ಕೃತುಬಲಂ!

ಜನಜೀವನದ ಉಗ್ರ ಜಾಗ್ರತಿಯ ಬಿರುಗಾಳಿ
ಬೀಸಲದೆ ಪ್ರಜ್ವಲಿಸಿ, ಕ್ರಾಂತಿಕಲಿಗಳ ಕೈಯ
ಪಂಜಿನೊಲು ಪರಿಸರವ ಪ್ರತಿನಿಧಿಸಿ, ಹೆಗ್ಗುರಿಯ
ತೋರುವುದು! ಭಾರತದ ಬಿಡುಗಡೆಯ ಬವರದಲಿ
ಕನ್ನಾಡ ವೀರ ವಾಲಿಯ ದಂಡು ಕಾಳೆಗದ
ಮುಖದಲ್ಲಿ ಮಸಗಿದುದು- ಕಣ್ಣೆವೆಯ ಮುಚ್ಚಿ ತೆರೆ-
ವನಿತರೊಳೆ ಅಚ್ಚರಿಯ ಕೃತಿ ನೂರು ಬೆಟ್ಟದೊರೆ!
ಪಡೆವಳನಸೀಮ ಸಾಹಸ ನಾಡ ಬಾವುಟದ
ಹೆಮ್ಮೆ; ಧೃತಿಗೆಡದ ಕೃತಿವೀರನೇಗಳು ಗೆಲ್ಗೆ!
ನಾಡಸೇವೆಯಲಿಂತು ಉತ್ಸಾಹದಿಂ ಬಾಳ್ಗೆ.

## ಪ್ರಜಾಪ್ರಭುತ್ವ

ಮುಳುಗುತಿಹ ನೇಸರನು ಮುದಿಸಿಂಹನಂತಾಗಿ
ಪಶ್ಚಿಮಾದ್ರಿಯ ಗವಿಯ ಸೇರುತಿಹನು;
ತನ್ನ ಸರ್ವಾಧಿಕಾರತ್ವ ಕೊನೆಗೊಳ್ಳುತಿರೆ
ಲೋಗರೆಡೆ ಕೆಕ್ಕರಿಸಿ ನೋಡುತಿಹನು!

ಸಂಜೆ ಕಕ್ಕರಮಬ್ಬು ಗಗನ ಸಿಂಹಾಸನದಿ
ಕಪ್ಪು ಬಾವುಟವೆತ್ತಿ ತೋರಿಸಿಹುದು-
ಪಕ್ಷಿಸಂಕುಲ ಕೆಲೆದು ಬಿಡುಗಡೆಯ ಹಿಗ್ಗಿನಲಿ
ಹಾಡಿ ಜಯಜಯಕಾರ ಗೈಯುತಿಹುದು.

ಹಗಲ ಉರಿವಿಸಿಲ ಸಾಮ್ರಾಜ್ಯಶಾಹಿಯು ಉರುಳಿ
ಪಡುವ ಕಡಲಿನ ಹಡಗವೇರುತಿರಲು
ಸಂಧ್ಯಾ ಸಮೀರನದೊ ಸ್ವಾತಂತ್ರ್ಯ ಸಂದೇಶ
ಹೊತ್ತು ನಾಲ್ದೆಸೆಗಳಲಿ ಹರಡುತಿಹನು.

ಬಿತ್ತರದ ಬಾನಿನಲಿ ಮತ್ತೆ ಜನತಾ ರಾಜ್ಯ
ಮೆರೆಯುತಿದೆ ಚಿಕ್ಕೆಯ ಪ್ರಜಾಪ್ರಭುತ್ವ-
ವ್ಯಕ್ತಿ-ಶಕ್ತಿಯ ಗುಣವಿಕಾಸ ಪ್ರಕಾಶದಲಿ
ಜಗವ ಬೆಳಗುವುದದರ ಮೂಲತತ್ತ್ವ.

ಆಕಾಶಗಂಗೆ ಶಾಸನ ಸಭೆಯನೇರ್ಪಡಿಸಿ
ಮಂತ್ರಿಮಂಡಲವನ್ನು ನಿರ್ಮಿಸಿಹುದು;
ಬುಧ ಬೃಹಸ್ಪತಿ ಶುಕ್ರ ಶನಿ ಮಂಗಳಾದ್ಯರನು
ವಿವಿಧ ಮಂತ್ರಿಗಳಾಗಿ ನೇಮಿಸಿಹುದು.

ಕೃತ್ತಿಕೆಯು ಮೃಗಶಿರವು ಸಪ್ತರ್ಷಿ ಮಂಡಲವು
ರಾಜಕೀಯದ ಪಕ್ಷಪಂಗಡವೆನೆ
ದಕ್ಷಿಣೋತ್ತರ ಧ್ರುವದ ರಾಯಭಾರಿತ್ವದಲಿ
ಮುಖ್ಯಮಂತ್ರಿಯು ಚಂದ್ರನಾಗಿರುವನೆ?

ಬಿಡುಗಡೆಯ ಸೌಭಾಗ್ಯ ಪಡೆದ ಬಾನಿನೊಳಿಂತು
ಶಾಂತಿ ಸಮದರ್ಶಿತ್ವ ತಂಪಿನಿರುಳು-
ಬಡವ ಬಲ್ಲಿದರೆನದೆ ಸಮತೆಯಲಿ ತಣಿಸಿಹುದು
ಸರ್ವರಿಗೂ ಸಮಪಾಲು ಬೆಳದಿಂಗಳು.

## ಕ್ಷಣಬಂಧುರ

'ಸೋ' ಎಂದು ಸುರಿವ ಮಳೆ
ಉನ್ಮಾದಗೊಂಡ ಇಳೆ!
ಸೀಯೆನೆ ಸೊದೆಯನೀಂಟಿ ಓಲಾಡುತಿರುವ ಬೆಳೆ
ತೋರ ಮುತ್ತಿನ ಹನಿಯ ಝಲ್ಲರಿಯ ಮಾಲೆ.
ತರುಮರಾದಿಗಳಲ್ಲಿ ಗಾಳಿ ನಿಶ್ಶಬ್ದ,
ಮನೆಮಾರು ಗಿರಿದರಿಗಳಲ್ಲಲ್ಲೆ ಸ್ತಬ್ಧ,
ಎಲ್ಲವೂ ಬಿರುಮಳೆಯ ಮಂತ್ರದಲಿ ಮುಗ್ಧ.
ಕೊಳೆಯನೆಲ್ಲವ ಕೊಚ್ಚಿ ತೇಲಿಸಿದೆ ಹೊನಲು
ಗಾಳಿಯೂ ಕರಕರಗಿ ನೀರಾಯಿತೆನಲು
ದಂಡೆತ್ತಿ ಬರುತಿರುವ ಮೋಡಗಳ ಸಾಲು
ಸೋತವರ ಸೊತ್ತೆಲ್ಲ ಗೆದ್ದವರ ಪಾಲು!
ಒಂದೆ ಚಣ:
ಮಾಯೆ ಬೀಸಿದುದತ್ತ ಇಂದ್ರಜಾಲ!
ಬಾನಿಳೆಯ ಉನ್ಮತ್ತ ಬೆಸುಗೆ ಹಿಲ್ಲೋಲದಲಿ
ಜನಮನವು ಸ್ವಪ್ನಲೋಲ.

ಮತ್ತೊಂದೆ ಚಣ:
ಮಳೆಯು ನಿಂದತ್ತು
ಸಡಿಲಿತ್ತು ನೆಲ ಜಲದ ಗಾಢಮಿಲನ!
ಮೂಡಿತ್ತು ತಿಳಿನಗೆಯು ಆಗಸದ ಮೊಗದಿ
ಮಾತಿರದ ಮೃದು ಮಧುರ ಮೌನಾವಲೋಕನದಿ
ಸೃಷ್ಟಿಯಲಿ ಹೊಮ್ಮಿತ್ತು ಚಿಮ್ಮುಗಾಲ!
ವರ್ಷ ಋತು
ಹರ್ಷ ಋತು
ಮನುಜ ದುಃಖದಿ ಬೆರೆತು
ತೇಲಿತ್ತು ಮುಳುಗಿತ್ತು ಅನಂತಕಾಲ.

## ಕನಸಿನಲ್ಲಿ

ಕರ ಕರ ಕರ ಕೊರೆವ ಚಳಿ
ಕೋಳೀಮರಿ ಕುಯ್ದು ಹಾಗೆ;
ಮರ ಮರ ಮರ ಮರವಟ್ಟಿತು
ಥರ ಥರ ಥರ ಧರೆ ನಡುಗಿತು
ಇರುಳು ಕೆರಳಿ ಹೊಡಮರಳಿತು!
ತಾರೆಯೊಂದು ತಿರೆಗುರುಳಿತು.
ಏನಾಯಿತು! ಏಕಾಯಿತು?
ಎನುತಿರೆ ಓ ರೈಲು ಬಂತು!

ಗಡ ಗಡ ಗಡ ಮೈ ನಡುಗಿಸಿ
ಕಂದರದಲಿ ಕಣ್ಣು ಮುಚ್ಚಿ
ಕಂಬಿ ತಪ್ಪಿ ಉರುಳಿತು,
ಮೂರು ಸಾರೆ ಹೊರಳಿತು!

ಅಬ್ಬಾ, ಅಯ್ಯಯ್ಯೊ ಎಂದು
ನಿಂತ ನಾಲ್ಕು ಜನರು ನಾವು
ಗಾಡಿಯನ್ನು ಮೇಲಕೆತ್ತಿ
ಹಳಿಯ ಮೇಲೆ ಬಿಟ್ಟೆವು.

ಜನರಿಲ್ಲದ ಮಾಲುಗಾಡಿ
ಕೈಬಿಟ್ಟೊಡೆ ಕೈಕೊಟ್ಟಿತು
ಎಲ್ಲಿ ಎಲ್ಲಿ, ನಿಲ್ಲು ನಿಲ್ಲು
ಎನಲು ನಮ್ಮ ಗುಲ್ಲು.

ಹಲ್ಲು ಮಸೆದು ಹೊಟ್ಟೆ ಹೊಸೆದು
ಓಡಿತಯ್ಯ ರೈಲು!

## ತೀರ್ಪು

"Judge not that ye be not judged"
-Jesus Christ

ಒಂದು ಸಂಜೆ ಪಿಂಜರಿತ ಮೇಘ ಪಡುವಣದ ಬಾನಿನಲ್ಲಿ
ಶ್ರೀ ಸ್ವಯಂಭು ಸ್ವಚ್ಛಂದ ಮನದಿ ಕುಳಿತಂತೆ ಲೀಲೆಯಲ್ಲಿ
ಶೋಭಿಸಿರಲು, ಕಣ್ದಿಟ್ಟಿ ಹರಿವವರ ಹಬ್ಬಿದಂಥ ಕಡಲು
ತೆರೆಯನಟ್ಟಿ ತೆರೆ ತೂರುತಿತ್ತು ಹುಡಿ ಚಿನ್ನದಂಥ ಮಳಲು.

ಕಡಲಿನಂಚಿನಲಿ ಸೂರ್ಯಬಿಂಬವಿನ್ನೇನು ಮುಳುಗುತಿತ್ತು
ಕಿರಣರಹಿತ ಕೆಂದಳಿರ ಹಾಸಿದೊಲು ನೀರು ಮಿರುಗುತಿತ್ತು
ಮಂದಗಾಮಿ ತಂಗಾಳಿ ರಯ್ಯನೊಯ್ಯಾರದಿಂದ ಬಂದು
ಮುಟ್ಟಿ ಮುಟ್ಟದೊಲು ತೀಡುತಿತ್ತು ತೆರೆ-ಚುಂಬನಕ್ಕೆ ಸಂದು.

ಯೇಸುಕ್ರಿಸ್ತ ಅಸ್ವಸ್ಥ ಮನದಿ ಕುಳಿತಿದ್ದ ಮಳಲ ತಡಿಗೆ
ಕೆನ್ನೆಗೈಯು ಅರೆದೆರೆದ ಕಣ್ಣು ನಸುಬಾಗು ಮೊಗದ ಬಗೆಗೆ;
ನೂರು ಯೋಚನೆಯ ಗಾಣದಲ್ಲಿ ಮನ ಸಿಕ್ಕು ಗಾಸಿಗೊಂಡು
ಲೋಕಹಿತದ ಚಿಂತನೆಗೆ ತೊಡಗೆ ತನ್ನಲ್ಲಿ ನಿಜವ ಕಂಡು:

ಮತದ ಮೌಢ್ಯ ಕಟ್ಟಳೆಯ ನಿಗಳ ದ್ವೇಷಗಳ ಕಳೆವುದೆಂತು
ಫರಿಸಾಯರವರ ದುರ್ನಡತೆ ನೀಗಿ ಜನ ನೇರಿತಾಗಲೆಂತು?
ಲೋಕದಿಚ್ಛೆ ನಾ ನುಡಿದು ಸತ್ಯ ಧ್ವಜವೆತ್ತಿ ಹಿಡಿಯಲೆಂತು?
ಒಬ್ಬರೊಬ್ಬರನು ಅರ್ಥ ಮಾಡಿಕೊಳ್ಳದಿರೆ ಏನು ಬಂತು?

ಇಂತು ಚಿಂತೆಯಲಿ ಮುಳುಗಿ ಯೇಸು ಪ್ರಾರ್ಥಿಸಿದನಾಗ ಮನದಿ:
"ತಂದೆ ತಂದೆಯೇ ಜನರಿಗೊಳ್ಳೆಯದ ತಿಳಿವ ಬುದ್ಧಿ ಭರದಿ
ಬೆಳೆದು, ಸತ್ಯ ಧರ್ಮಾನುಚರಣೆ ಬೇರೂರಿ ಕರುಣೆಯಲ್ಲಿ
ಕೊನೆಗೆ ಎಲ್ಲ ಲಯ ಹೊಂದಲಲ್ಲಿ ವಿಶ್ವಾತ್ಮ ಪ್ರೇಮದಲ್ಲಿ".

ಅದೇ ಸಮಯ ಫರಿಸಾಯರೇಸುಗವಮಾನ ಮಾಡಲೆಂದು
ಹೊತ್ತು ಕಾದು ನವಯುವತಿ ಮುಡಿಯ ನಿಡುಗೂದಲನ್ನು ಹಿಡಿದು
ಹುಲಿಯು ಚಿಗುರೆಯನು ಎಳೆವ ತೆರದಿ ದರದರನೆ ಎಳೆದು ತಂದು
ಕಲ್ಲು ಮುಳ್ಳಿನಲಿ ಹಾಸಿಬೀಸಿ ಯೇಸುವಿನ ಮುಂದೆ ಬರಲು-

ಊರು ಮಗ್ದಲಾ, ಹೆಸರು ಮೇರಿ, ಏನೆಂಥ ರೂಪರಾಶಿ!
ಕಪಟರಹಿತೆ ದೀನಾಸ್ಯೆಯಾಗಿ ಪಾಷಂಡಿಗಳಿಗೆ ರೋಸಿ
ಚಿಂದಿ ಬಟ್ಟೆ, ಮೈಯೆಲ್ಲ ಘಾಯ, ಚೀರಿಡುವ ಗೋಳು ಕೇಳಿ
ಕರಗಲಿಲ್ಲ ಎದೆ ಮರುಗಲಿಲ್ಲ ಮನ ಅವರಿಗದುವೆ ಹೋಳಿ.

ಪ್ರಾಣಸಂಕಟದಿ ಕೆಡೆದು ಬಿದ್ದ ಮಗ್ದಲದ ಕುವರಿ ಮೇರಿ
ಹಿಂದೆಯೊಮ್ಮೆ ಕಂಡಿದ್ದಳವನ ಆ ಸ್ವಾಮಿ ಗುಡ್ಡವೇರಿ
ಜನರ ಗುಂಪಿಗುಪದೇಶಗೈವ ದಿನ ತಾನು ನಿಂತು ಕೇಳಿ
ತೃಪ್ತಿಹೊಂದಿ ಹೋಗಿದ್ದಳಂದು ಇಂದೂನು ಧೈರ್ಯ ತಾಳಿ,

ಇಂಥ ಸಮಯದಲಿ ಮತ್ತೆ ಅವನಿಗೆಯೆ ಶರಣು ಹೊಗುವೆನೆಂದು
ರಕ್ತಸಿಕ್ತ ದೇಹವನು ಎಳೆದು ಶ್ರೀಪಾದದೆಡೆಗೆ ಬಂದು
ತಲೆಯನಿರಿಸುತಿರೆ ಸುತ್ತು ನಿಂತ ಮತಿಗೆಟ್ಟ ಜನರ ಗುಂಪು:
ಮರುಳರಂತೆ ಹೋಯೆಂದು ನಕ್ಕು ಮೂದಲಿಸಿ ನುಡಿದರಿಂತು:

"ದೇವಸುತನು ನಾನೆಂದು ನುಡಿಯುತಿಹ ಎಲವೊ ಮೂರ್ಖ ಮರಿಯೆ
ನ್ಯಾಯ ಮತ್ತೆ ಅನ್ಯಾಯಗಳನು ಪರಿಕಿಸುವೆನೆಂಬ ಕುರಿಯೆ
ಸತ್ಯಪ್ರೇಮಗಳ ಬಿತ್ತಲಿಹೆಯ ಉನ್ಮತ್ತ ಮತಿಗಳೊಡೆಯ
ಈಗ ಹೇಳು ಈ ಯುವತಿ ನಡತೆಯಲಿ ಇಹುದು ಯಾವ ನ್ಯಾಯ?

"ಇವಳು ಪಾಪಿ ವ್ಯಭಿಚಾರಿಯೆಂದು ಇದೊ ನುಡಿವರೆಲ್ಲ ಸಾಕ್ಷಿ
ಕಣ್ಣಾರೆ ಕಂಡು ಆರೋಪ ಹೊರಿಸಿ ಎಳೆದಿಹರು ಇಲ್ಲಿ ನೂಕಿ
ಹೇಳು ನಿನ್ನ ತೀರ್ಪೇನು ಇಲ್ಲಿಯೇ ನಿಂತ ಕಾಲ ಮೇಲೆ
ಮೂರ್ಖ ಮಂದಿ ನೀನೊಬ್ಬ ಶ್ರೇಷ್ಠ ಗುರು ಎಂದು ಸಾರಲಿಲ್ಲೆ?"

ಚುಚ್ಚುಮಾತುಗಳನೆಸೆಯುತಿರಲು ಪುಂಖಾನುಪುಂಖವಾಗಿ
ಶಾಂತ ಚಿತ್ತದಲಿ ಸೌಮ್ಯಭಾವದಲಿ ಕೇಳುತಿದ್ದ ಯೋಗಿ
ತಲೆಯ ಬಾಗಿ ನಿಟ್ಟುಸಿರನಿಟ್ಟು ಸೈತಿಟ್ಟು, ಕ್ರಿಸ್ತಸ್ವಾಮಿ
ತನ್ನ ಕಾಲಬಳಿ ಬಿದ್ದ ಮುಗ್ಧೆಯನು ಕಂಡ ವಿಶ್ವಪ್ರೇಮಿ.

ಕತ್ತನೆತ್ತಿ ಯೇಸುವಿನ ಮೊಗವ ನೋಡಿದಳು ಮೇರಿ ತಣಿಯೆ
ಎದೆಯ ದೈನ್ಯ ಕಣ್ಣಿನಲಿ ಬಂದು ಕಂಬನಿಗಳಾಗಿ ಹರಿಯೆ
ತನ್ನ ದುಃಖವನು ತೋಡಿಕೊಳ್ಳುವರೆ ಮಾತು ಬಾರದಿತ್ತು
ಮೂಕಶೋಕದಲಿ ಒಡಲ ಭಾಂಡ ಒಳಗೊಳಗೆ ಕುದಿಯುತಿತ್ತು!

ಆದರವಳ ಜೀವಾತ್ಮ ಶೋಕ ಪರಮಾತ್ಮನೆದೆಯ ಸೇರಿ
ಮೌನವೀಣೆ ಮಿಡಿದಂತೆ ತಂತಿ ಸಿಡಿದಂತೆ ದನಿಯ ಬೀರಿ:
"ನನ್ನ ಸ್ವಾಮಿ ಓ ಯೇಸುಕ್ರಿಸ್ತ ಪ್ರಭು, ಕರುಣೆಸೆನ್ನ ತಂದೆ
ನಾನು ಮಾತ್ರ ಅರಿಯದೆಯೆ ಗೈದ ಅಪರಾಧ ಮನ್ನಿಸೆಂದೆ"

ಎಂದು ನೊಂದು ಪರಿತಪಿಸಿ ಆತ್ಮ ನೈವೇದ್ಯ ನೀಡಲಾಗಿ
ಅವನ ಕಣ್ಣಿನಲಿ ಕ್ಷಮೆಯು ರಮಿಸಿ ಬರೆ ಶಾಂತಚಿತ್ತಳಾಗಿ
ಮತ್ತೆ ಮತ್ತೆ ಆ ದಿವ್ಯ ಮೊಗದ ಸಂಪದವ ನೋಡಿ ನಂಬಿ
ಕಣ್ಣು ತುಂಬಿ ಎದೆ ತುಂಬಿ ತಲೆಯ ಬಾಗಿದಳು ಜೀವ ತುಂಬಿ.

ತಲೆಯನೆತ್ತಿ ಕಣ್ದೆರೆದು ಯೇಸು ನೋಡಿದನು ನೆರೆದ ಜನವ
ಧೈರ್ಯವಾಗಿ ಗಂಭೀರನಾಗಿ ಪ್ರಶ್ನಿಸಿದನವರ ಮನವ:
ನಿಮ್ಮ ಧರ್ಮಶಾಸ್ತ್ರದಲಿ ಇದಕೆ ಪ್ರತಿಶಿಕ್ಷೆಯಾವುದೆನಲು
ಕಲ್ಲು ಹೊಡೆದು ಸಾಯಿಸುವದೆಂಬ ಉತ್ತರವು ಕೇಳಿ ಬರಲು-

"ನಿಮ್ಮ ಧರ್ಮಶಾಸನಕೆ ನಾನು ಪ್ರತಿಮಾತನಾಡುತಿಲ್ಲ
ಹೆಣ್ಣಿನಂತೆ ಗಂಡಸಿಗು ಶಿಕ್ಷೆ ಕಟ್ಟಳೆಯದೇಕೆ ಇಲ್ಲ-
ಎಂಬ ಯೋಚನೆಯ ಮಾಡುತಿದ್ದೆ ಸರಿ; ನಿಮ್ಮ ಶಾಸ್ತ್ರಕೋತು
ನೀವು ನಡೆಯುತಿರೆ ನಿಮ್ಮ ಇಷ್ಟವದು, ಆದರೊಂದು ಮಾತು:

"ಇಲ್ಲಿ ನೆರೆದ ಜನರಲ್ಲಿ ಯಾರು ಈ ಮೊದಲು ಒಂದು ಕೂಡ
ಪಾಪಗೈಯದಿಹರವರು ಮೊದಲು ಕಲು ಹೊಡೆಯಬೇಕು ನೋಡ;
ದುಷ್ಟ ಕೃತಿಯ ಮುಚ್ಚಿಟ್ಟುಕೊಂಡು ಉತ್ತಮಿಕೆಯನ್ನು ನಟಿಸಿ
ಕೊಂದ ಪಾಪ ಅವರನ್ನೆ ತಿಂದು ತೇಗುವದು ಪೀಡೆಗೊಳಿಸಿ"

ಎಂದು ನುಡಿಯೆ ನೆರೆದಿದ್ದ ಜನತೆ ತಳಮಳಿಸಿ ತಮ್ಮತಮಗೆ
ಅವರು ಇವರ ಮುಖ ನೋಡಿ ಆತ್ಮವಂಚಕರು ತೆಪ್ಪಗಾಗೆ
ಒಬ್ಬರೊಬ್ಬರೂ ಕಲ್ಲನೆತ್ತಿ ಹೊಡೆಯಲಿಕೆ ಧೈರ್ಯವಿರದೆ
ಬಂದ ದಾರಿಯನು ಹಿಡಿದು ಸಾಗಿದರು ನಿಲ್ಲಲಿಷ್ಟ ಪಡದೆ.

ಮೇರಿ ಯೇಸುವಿನ ಚರಣ ತೊಳೆಯುತಿರೆ ಕಣ್ಣಧಾರೆಯಿಂದ
ಪಾದಪದ್ಮಗಳ ತಬ್ಬಿ ಹಿಡಿದು ತನ್ನೆರಡು ಕೈಗಳಿಂದ:
"ಪಾಪವೆಂಬ ತಿಳುವಳಿಕೆ ಆಗ ನನಗಾಗಲಿಲ್ಲ ತಂದೆ
ಇದಕೆ ಅವರು ಅಪರಾಧವೆನಲು ನಾನರಿಯದೇನೆ ಗೈದೆ.

"ನನ್ನ ಊರಿನೆಡೆ ಇನ್ನು ಹೋಗೆ ನನಗಾರು ಇಲ್ಲವಲ್ಲಿ
ನಿನ್ನ ಮಗಳು ನಾ ನಿನ್ನ ತಂಗಿ ತಾಯಿಯೊಲು ಇರುವೆನಿಲ್ಲಿ.
ಅನುಗ್ರಹಿಸು ಓ ಗುರುವೆ ನಿನ್ನ ಆಜನ್ಮ ಸೇವೆಯೊಂದು"
ಎಂದು ದುಃಖ ತಾಪದಲಿ ಕರುಣಕಥೆ ತೋಡಿಕೊಂಡಳಂದು.

ಪವಿತ್ರಾತ್ಮ ಪರಮಾತ್ಮ ವರದ ಕರ ಚಾಚೆ ಕರುಣೆ ಹೊನಲು
ಹರಿದು ಘಾಯಗಳ ಸವರಿ ಮೆಲ್ಪಿನಲಿ ಯೇಸು ಸಂತವಿಡಲು
ಮೈಯನೋವಿನುರಿ ಮಾಯವಾಗಿ ತಂಪಾಗಿ ಸೌಖ್ಯವೊದಗಿ
ಆತ್ಮಶಾಂತಿಯಮೃತದಲಿ ತೇಲೆ ಆನಂದಲೋಲೆಯಾಗಿ.

ತಂಪು ಗಾಳಿ ನಿಷ್ಕಂಪಮಾದ ಸಾಗರದಿ ತೀಡುತಿರಲು
ಕ್ರಿಸ್ತನಮರಸಂದೇಶ ಪೊತ್ತು ಸಮತೆಯಲಿ ಹಂಚುತಿರಲು
ಅಮೃತ ಕಿರಣನುದಯಿಸಿದ ಇಳೆಯ ಬೆಳದಿಂಗಳಲ್ಲಿ ತೊಳೆದು
ತೇನೆ ಹಕ್ಕಿ ಮಂಗಲವ ಪಾಡಿ ಹಾರಿತ್ತು ನಭವನಳೆದು.

## ಮಾತಂಗ ಬೆಟ್ಟದಿಂದ

೧

ದುಂಡಾದ ಬಂಡೆಗಳ ಮೇಲುರುಳಿ, ನುಣ್ಣನೆಯ
ಹಾಸುಗಲ್ಲಲಿ ಜಾರಿ, ಅಲ್ಲಲ್ಲಿ ಮಡುಗಟ್ಟಿ,
ಚಕ್ರ ತೀರ್ಥವ ರಚಿಸಿ, ಬೆಟ್ಟದಡಿಗಳ ಮುಟ್ಟಿ
ಪಂಪಾನಗರಿಗಿಂಬುಗೊಟ್ಟ, ತುಂಗಭದ್ರೆಯ

ಜಲತರಂಗದಿ ಮಿಂದು, ಶ್ರೀ ವಿರೂಪಾಕ್ಷಂಗೆ
ಕೈಮುಗಿದು, ಭುವನೇಶ್ವರಿಗೆ ನಮಿಸಿ, ಸಂಪೂಜಿತ
ವಿಜಯ ವಿದ್ಯಾರಣ್ಯರಂ ನೆನೆದು, ಅತಿ ವಿಕೃತ-
ಗೊಂಡು ಹಾಳು ಸುರಿಯುವ ಹಂಪೆಕೊಂಪೆಯಲಿ ಬಗೆ-
ಗೆಟ್ಟಲೆದು, ಸ್ವಪ್ನಸಾಮ್ರಾಜ್ಯದಿಂದೀ ನಗರ-
ಕವತರಿಸಿ ಮಂಕಾಗಿ, ಭವ್ಯ ರಮಣೀಯತೆಯ
ರುದ್ರ ಶಾಂತಿಯೊಳಿಳಿದು, ಒಂದಿನಿತು ನೆಮ್ಮದಿಯ
ಬಯಸಿ ಮಾತಂಗ ಬೆಟ್ಟವನೇರಿ, ಕನ್ನಡರ
ಕರ್ಮಕತೆಯನು ನೆನೆದು ಕುಳಿತೆ ನಾಂ ಮೌನದಲಿ
ಕವಿಗೆ ಕವಿ ಮಣಿವಂತೆ ಮೂಕ ಶಿಲೆಸಂಗದಲಿ.

೨

ದಟ್ಟೈಸಿ ನಿಂದಿರುವ ಬಂಡೆಗಲ್ಲಿನ ದಂಡು
ಸಹಜ ನಿರ್ಮಿತ ಕೋಟೆ ಕೊತ್ತಳೆನೆ ನಸುಬಾಗಿ
ತಮಗೆ ತಾವೇ ಅಡಕಲೇರಿ ಮಂಟಪವಾಗಿ
ಮೂಡಿಹವು. ಪರಿಕಾಲ್ಗಳಿಂ ತಿಳಿಯ ನೀರುಂಡು
ನಳನಳಿಸಿ ಬೆಳೆದು ಹೊಂದಲೆದೂಗಿ ಕಂಗೊಳಿಸಿ
ನಲಿವ ಬತ್ತದ ಗದ್ದೆ, ಕಬ್ಬು ಬಾಳೆಯ ತೋಟ
ಕೊಬ್ಬಿ ಗರಿ ಹೊಡೆಯುತಿವೆ; ಏನಿದೆಂತಹ ನೋಟ-
ವೆಂದು ಮನ ಜೋಂಪಿಸಿರೆ ಹಿಂಗತೆಯು ಮರುಕಳಿಸಿ
ದುಸ್ವಪ್ನದಲಿ ತೋರಿ ಮೀರಿ ಅಸ್ತವ್ಯಸ್ತ-
ವಾಗಿಹುದು ಅಂದಿನಂದಿನ ಇಂದ್ರನಾಸ್ಥಾನ!
ಕನ್ನಡ ರಮಾರಮಣರಾಳಿ ಬಾಳಿದ ತಾಣ!
'ಏಳು ಸಾಯಣ ಕಟ್ಟು' ಎಂಬ ಯತಿ ಧ್ಯಾನಸ್ಥ-
ನಾಗಿ ಕುಳಿತಿಹನಿಂದು ಹಕ್ಕಬುಕ್ಕರ ನೆನೆದು
ಇಂದಿನವರಭಿಮಾನಶೂನ್ಯ ಮೌನಕೆ ಮುನಿದು.

೩

ಗೋಪುರಕೆ ಗೋಪುರವನೆತ್ತಿ ಕಲೆ ಬಿತ್ತರಿಪ
ಮುರುಕು ಮಂಟಪ, ಪಾಳು ಪೌಳಿ, ವಿಗ್ರಹವಿರದ
ವಿಠ್ಠಲನ ಗುಡಿ, ಭಗ್ನ ನರಸಿಂಹ, ನೆಲಸಮದ
ಆಸ್ಥಾನ ಮಂಟಪಂ, ಸೊಂಡಿಲೊಡೆದಿಹ ಗಣಪ
ಒಂದೆರಡೆ? ಶಿಥಿಲ ಸೌಂದರ್ಯದಲಿ ಮುಕ್ಕಾದ

ನೂರಾರು ಮೂಕಶಿಲೆ! ಕಾಲತಾಂಡವ ಪದಕೆ
ಹತಿಗೊಂಡು ಬೇನೆ ಬಿದ್ದಿಹ ಕಲೆಯ ನರಳುವಿಕೆ!
ತುಂಗಭದ್ರೆಯು ಸಾಕ್ಷಿ ನುಡಿದಂತೆ, ಎಚ್ಚರದ
ಗಂಟೆಬಾರಿಸಿದಂತೆ ಮೊರೆಯಿಡುತ ಹರಿದಿಹಳು.
ಉದಯಾಸ್ತಮಾನದಲಿ ಮತ್ತೊಮ್ಮೆ ಜೀವಕಳೆ
ಬಂದಂತೆ ಮಿನುಗಿ ಹಂಪೆಯ ಪೆಂಪು ಕಣ್ಣು ತೊಳೆ-
ವುದು ವಿಭವ ರಾಗದಲಿ; ಮರುಗಳಿಗೆಯಲಿ ಹಾಳು!
ತೊಟ್ಟುಳಿದು ಕಳಚುತಿರೆ ಮುಗಿಲ ಬೆಳಕಿನ ಹಣ್ಣು
ಕುಂಕುಮವನಳಿಸಿರುವ ವಿಧವೆಯೊಲು ಇಳೆವೆಣ್ಣು.

## ಗೋಳಗುಮ್ಮಟ

ಬ್ರಹ್ಮಾಂಡಮಂ ನಿರ್ಮಿಸಿದ ಕರ್ತಾರನದಟು
ಬಿಡಿಸಲಾಗದ ಒಗಟು; ಆ ಗೂಢತಮ ತಮೋ
ವಿಸ್ತೀರ್ಣದಲಿ ಬೆಳಕಿನರಿಲುಗಳ ಸೋದಿಸಿಹ
ಧುರಧರನು ವಿಜ್ಞಾನಿ; ಪೂರ್ಣತೆಯನರಿಯನೈ
ಸೃಷ್ಟಿಕರ್ತಾರನಾಡುಂಬೊಲದ ಕಮ್ಮಟಕೆ
ಧೀಂಕಿಡುವ ಮನುಜಕೃತಿ ಗೋಳಗುಮ್ಮಟವೈಸೆ?
ಮುಗಿಲನಿಲ್ಲಿಯೆ ನೆಲಕೆ ಎಳೆದು ತಂದಿಹ ಶಿಲ್ಪಿ
ಭವ್ಯತೆಗೆ ಗುಮ್ಮಟ ಕಿರೀಟವನೆ ತೊಡಿಸಿಹನು.

ಅಡಿಯಿಂದ ಮುಡಿಯನಿಟ್ಟಿಸೆ ಎದೆಯ ಮೇಲುರುಳಿ
ಬೀಳ್ವ ತೆರ! ಹಮ್ಮು ಬಿಮ್ಮಿನ ಸೊಮ್ಮು ಹಮ್ಮದಂ-
ಬೋಗುತಿದೆ! ಇದರ ಗರ್ಭದಲಿ ಪರಬೊಮ್ಮ ಗುರು
ಗುಮ್ಮ; ಬಯ್, ಹೊಗಳು, ನಗು, ಅಳು, ಹಾಡು, ಚೀರಾಡು
ಯಾವೆಲ್ಲವೇಳು ಸಲ ಪಡಿನುಡಿದು ಗುಪ್ತವೆನಿ-
ಸುವದಿರವು: ಇದು ಜಗದ ಬಗೆ, ದೃಷ್ಟಿಯೊಲು ಸೃಷ್ಟಿ.

## ಗೆಳೆತನ

ಗೆಳೆತನದ ಸುವಿಶಾಲ ಆಲದಡಿ ಪಸರಿಸಿಹ
ತಣ್ಣೆಳಲ ತಂಪಿನಲಿ ತಂಗಿರುವೆನು;
ಜೀವನದನಂತ ದುರ್ಭರ ಬವಣೆ ನೋವುಗಳ
ಕಾವುಗಳ ಮೌನದಲಿ ನುಂಗಿರುವೆನು.
ಗೆಳೆತನವೆ ಇಹಲೋಕಕಿರುವ ಅಮೃತ
ಅದನುಳಿದರೇನಿಹುದು - ಜೀವನ್ಮೃತ!

ನಲ್ಲನಲ್ಲೆಯರೊಲವು, ಬಂಧುಬಳಗದ ಬಲವು
ತನ್ನಿಚ್ಛೆ ಪೂರೈಸುವವರ ಛಲವು
ಎಳ್ಳಿನೇಳನಿತಾದರೂ ಸ್ವಾರ್ಥ ಹೊಂದಿಹವು
ಎತ್ತಿ ಕಟ್ಟುವರದಕೆ ಮಮತೆ-ತೊಡವು.
ಗೆಳೆತನದ ಒಳತಿರುಳ ಬಲ್ಲ ಧರ್ಮಿ
ಕೇಳು: ನಿಜ ಗೆಳೆಯ ನಿಷ್ಕಾಮಕರ್ಮಿ!

ಇಲ್ಲಿ ವಂಚನೆಯಿಲ್ಲ, ಚಂಚಲತೆಯಿನಿತಿಲ್ಲ
ಮೇಲು ಕೀಳುಗಳೆಂಬ ಭೇದವಿಲ್ಲ;
ಅಹಮಿಕೆಯ ನೆವಮಿಲ್ಲ, ದ್ವೇಷ ಗುಣಮಣಮಿಲ್ಲ
ಸಣ್ಣತನ ಸಂಕೋಚ ಮೊದಲಿಗಿಲ್ಲ.
ಮನವು ಬಾನಗಲ, ಎದೆ ತಿಳಿಗೊಳದೊಲು
ಭಾವ ಶುದ್ಧ ಸ್ಫಟಿಕ - ಬೆಳದಿಂಗಳು!

ಉಪ್ಪಿಗಿಂತಲು ರುಚಿಯು ತಾಯಿಗಿಂತಲು ಬಂಧು
ಇಲ್ಲೆಂಬ ಗಾದೆ ನುಡಿ ಕೇಳಿರುವೆನು,
ಗೆಳೆತನದ ಶುಚಿ ರುಚಿಯು ಇದಕು ಮಿಗಿಲಾಗಿಹುದು
ಎಂಬ ಸಾಹಸ ಮಾಡೆ ದೋಷವೇನು?
ಕಂಡಕಂಡವರೇನು ಬಲ್ಲರಿದನು
ಉಂಡವನು ಕಂಡಿಹನು ಇದರ ಹದನು.

ಹೇಗೊ ಹೇಗೋ ಹೆಗಲುಗೊಟ್ಟು ಬಂದಿಹ ಕೂರ್ಪು
ಆಗು ಹೋಗುಗಳಿಂಗೆ ಬಾಗದಂತೆ,
ಸುಖಕೆ ಸಂತಸಬಟ್ಟು, ದುಃಖದಲಿ ಸಹಭಾಗಿ-
ಯಾಗೆ ಜೀವನ ರಸದ ಪಾಕದಂತೆ-
ಸರಸ ವಿರಸವನೆಲ್ಲ ಅಪ್ಪುಕಯ್ದು
ಬಾಳುವರು ಗಂಧದೊಲು ಜೀವ ತೆಯ್ದು!

ಬಾಳ ಪಾರಾವಾರದಲ್ಲಿ ಸಾರಾಸಾರ
ಸುವಿಚಾರ ದೋಣಿಯಲಿ ಯಾನಗೈದು
ತತ್ತ್ವನಿವಹದ ದ್ವೀಪ-ದೀಪಮಾಲೆಗಳಂತೆ
ಕೆಳೆಯರೊಲವಿನ ಬೆಳಕು ಸೂರೆಗೈದು
ಸೂಳ್ನುಡಿಯ ಸೈಪಿನಲಿ ಕರುಣೆಯೆರೆದು
ಹಿತವ ಕೋರುವರಂತರಂಗ ತೆರೆದು.

ಇನಿವಿರಿದು ಗೆಳೆತನದ ಗುಟ್ಟಿಹುದು ನಲ್ ಗೆಳೆಯ
ಬಿನ್ನಣದ ನುಡಿಯಲ್ಲ, ಎದೆಯ ಮೀಟ
ಜೀವ ಜೀವಕೆ ಇಂಬುಕಯ್ವವರು ನಾಲ್ವರಿರೆ
ಚತುರಂಗ ಬಲವಿದಕೆ ಯಾವ ಸಾಟಿ?
ಗೆಳೆತನವೆ ಚಿರಬಾಳ ಸಂಜೀವಿನಿ
ವಿಶ್ವದಂತಃಕರಣ ಮಂದಾಕಿನಿ!

ಮೆಲುಪು ತಣ್ಪಿನ ಕಂಪು ಮಲ್ಲಿಗೆಯ ಮೆಲ್ಲೆದೆಗೆ
ಒಲವು ರೇಶಿಮೆಯೆಳೆಯ ಪೋಣಿಸಿಹೆವು;
ಎನ್ನಿನಿಯ ಗೆಳೆಯರೆದೆ ಶೂನ್ಯ ಸಿಂಹಾಸನದಿ
ಬೆರಸಿ ಬೇರಿಲ್ಲದಿಹುದೊಂದೆ ಸೊಗವು-
ಹಿಂದುಮುಂದಿನ ಎಣಿಕೆ ಬೇರೆ ಇರಲಿ
ಇಂದಿಗಿದೆ ಸಿದ್ಧಾಂತ ಜೀವನದಲಿ.

## ಮಾತು

ಮುಂಜಾವದಲಿ ಹಸಿರು ಹುಲ್ಲ ಮಕಮಲ್ಲಿನಲಿ
ಪಾರಿಜಾತವು ಹೂವ ಸುರಿಸಿದಂತೆ,
ಮುಟ್ಟಿದರೆ ಮಾಸುತಿಹ ಮಂಜುಹನಿ ಮುತ್ತಿನಲಿ
ಸೃಷ್ಟಿ ಸಂಪೂರ್ಣತೆಯ ಬಿಂಬಿಪಂತೆ,

ಮೆಲ್ಲೆದೆಯ ಸವಿಯೊಲುಮೆ ಕರಗಿ ಕಂಬನಿಯಾಗಿ
ಹೆಣ್ಣ ಕಣ್ಣಂಚಿನಲಿ ತುಳುಕುವಂತೆ,
ಸುಳಿಗಾಳಿಯೊಂದಿನಿತು ಸೂಸಿ ಬಂದರು ಸಾಕು
ಮರವನಪ್ಪಿದ ಬಳ್ಳಿ ಬಳುಕುವಂತೆ,-

ನಾವು ಆಡುವ ಮಾತು ಹೀಗಿರಲಿ ಗೆಳೆಯ
ಮೃದುವಚನ ಮೂಲೋಕ ಗೆಲ್ಲುವುದು ತಿಳಿಯ;
ಮೌನ ಮೊಗ್ಗೆಯನೊಡೆದು ಮಾತರಳಿ ಬರಲಿ
ಮೂರು ಗಳಿಗೆಯ ಬಾಳು ಮಗಮಗಿಸುತಿರಲಿ.

## ಶ್ರೀಮುಖ

ತಾಯ ಶ್ರೀಮುಖ ಕಂಡು ಮನವು ನೆಮ್ಮದಿಗೊಂಡು
ಎದೆ ಹಿಗ್ಗಿ ಸಂತಸದಿ ಹಾಡುತಿಹುದು;
ಅವಳ ಕರುಣೆಯ ಕೊಂಡು ವಾತ್ಸಲ್ಯ ಸವಿಯುಂಡು
ಮಮತೆಯಲಿ ಅದನಿದನು ಬೇಡುತಿಹುದು.

ಇಲ್ಲಿ ಎದೆಗುದಿಯಿಲ್ಲ ಕವಡುಗಂಟಕವಿಲ್ಲ
ಭಾವ ಪಾವನ, ಲಾಲಿ ಹಾಲಿನೊಡಲು;
ಅಕ್ಕರದಿ ಮೈದಡವಿ ತಕ್ಕೈಸಿ ಮುದಗೊಂಡು
ಹದುಳದಲಿ ಹರಸುತಿಹ ತಾಯ ಮಡಿಲು.

ತಪ್ಪಿರಲಿ ಒಪ್ಪಿರಲಿ ಸೆರಗಿನಲಿ ಮುಚ್ಚಿ,
ದುಗುಡವಿರೆ ನಗೆಯ ಬೆಳದಿಂಗಳವ ಹೊಚ್ಚಿ,
ಕಂಟಕವ ದೂರಿಟ್ಟು ಸಂತವಿಸಿ ಕಾಯೆ,
ಎಂಟೆದೆಯ ಬಂಟನಾಗುವ ತೆರದಿ ತಾಯೆ!

## ಉರುಳುರುಳು ಕಂಬನಿಯೆ!

ನನ್ನೆಲ್ಲ ಹಂಬಲವನೊಂದು ಬಿಂದುವಿನಲ್ಲಿ
ಬಿಂಬಿಸಿಹ ಕಂಬನಿಯೆ! ಹೇಳಕೇಳದೆ ಹೊರಟು
ನಿಂತಿರುವ ಅತಿಥಿಯೊಲು ಕಣ್ಣ ಹೊಸತಿಲ ದಾಟು-
ತಿರಲು ನಾನಿನ್ನೇವೆ? ಉರುಳುರುಳು ಎದೆಯಲ್ಲಿ
ಕುದಿವ ಕಡಲೊಂದಿರಲು, ಶೋಕವಾಹಿನಿ ಹರಿದು
ಮನದ ಮಲಿನತೆ ಕಳೆದು, ಅಮೃತವಾಹಿನಿಯಾಗಿ
ಚಿಮ್ಮಿ ಬರುವನ್ನೆವರ; ಮಳೆಬಿದ್ದು ಹೊರಪಾಗಿ

ತೊಳೆದ ಬಾನಿನ ಮೊಗದಿ ಹಗಲುಗಣ್ಣೆವೆದೆರೆದು
ನೋಡುತಿರೆ ಸೃಷ್ಟಿ ಮಹಿಮಾಪೂರ್ಣಮಾದಂತೆ

ಋತಚಿತ್ತಿನಲಿ ವ್ಯೋಮ ಭೂಮ ಪುರುಷಾಕಾರ
ನೆಲೆಗೊಂಡು, ಕ್ಷಾಂತಿ ಶಾಂತಿಯು ಎದೆಯನಪ್ಪುವರ

ಉರುಳುರುಳು ತೆರಳು ಕಂಬನಿವೊನಲೆ ಓರಂತೆ!

ಸದ್ದಿರದೆ ಸಾಗುವದೆ ಜೀವನದಿ ತೀರ್ಥಯಾತ್ರೆ
ಕಡೆಮುಟ್ಟಿ ಪಡೆವ ಸುಖಕೀ ದುಃಖ ಪಾನಪಾತ್ರೆ.

## ಕಂಬನಿಗೆ

ಕಂಬನಿಯೆ, ನೀನೀಸು ದಿನವೆಲ್ಲಿ ಹುದುಗಿದ್ದೆ
ಯಾವ ಹೃದಯದ ತಳವ ಸೋಸುತಿದ್ದೆ?
ನಾನು ನೀನೂ ಅವಳಿ-ಜವಳಿಯೆಂಬುದ ಮರೆತು
ಯಾರ ನಿಟ್ಟುಸಿರೊಡನೆ ಬೆರೆಯುತಿದ್ದೆ?

ಇಂದು ನಾನಾಗಿಯೇ ಕರೆವೆ ಕನಿಕರಿಸಿ ಬಾ
ಇಳಿಸು ನನ್ನೆದೆ ಭಾರ ದುಃಖಪೂರ!
ಮರಮಳೆಗೆ ಕೆರೆ ತುಂಬಿ ಕೋಡಿ ಬಿದ್ದಾಕ್ಷಣದಿ
ಕೊಚ್ಚಿಕೊಂಡೊಯ್ವತೆರ ಮಲೆತ ನೀರ!

ಕಂಬನಿಯೆ, ಅನುಭವದ ಖಣಿಯ ಮಣಿಯೆ!
ಬಾಳುದ್ದಕೂ ನಾನು ನಿನಗೆ ಋಣಿಯೆ?
ಕಂಡವರಿಗೆಲ್ಲ ನೀ ಸಿಕ್ಕಬಹುದೆ?
ನೀನಿರದ ಸುಖ ಜಗಕೆ ದಕ್ಕಬಹುದೆ?

## ಕಂಬನಿಯೆ ಸಾಕು!

ಎಂದು ಇಲ್ಲದ ವಿರಸವಿಂದು ಕೂರಸಿಯಾಗಿ
ಮಾತು ಮಾತಿನ ಮೊನೆಯ ಮಸೆಯಿತೆಂತು?
ನಿನ್ನೆದೆಯ ಸಂತಾಪವಿಂತು ಹರಿಯಿತೆ ಪಾಪ!
ಮೌನದೇವತೆ ಶಾಪವಿತ್ತಳೆಂತು?

ಜಗದ ವ್ಯವಹಾರಿಕತೆಗೇಕೆ ವ್ಯಥೆ ಕಿಂಕರತೆ?-
ಪ್ರೀತಿ ಅಂತಃಕರಣ ನಿನ್ನದಿದೆಕೊ!
ಅದನುಳಿದರೇನುಂಟು? ಬರಿಯ ಗಾಳಿಯ ಗಂಟು!
ತೆರೆದ ಹೃದಯದೊಳದನೆ ಬರಮಾಡಿಕೊ!

ಬಿಡಿಸಿದಷ್ಟೂ ಬಾಳು ಬರಿ ಗುಂಜು ತೊಡಕು
ಕಂಡಕಂಡೆಡೆಯಲ್ಲಿ ಕರುಣೆಯನೆ ಹುಡುಕು;
ಅವರಿವರ ಅಲ್ಪತನಕಿನ್ನೇನು ಬೇಕು?
ನಿನ್ನ ನೋವಿಗೆ ನಿನ್ನ ಕಂಬನಿಯೆ ಸಾಕು!

## ಬಾಳಕೊರಡು

೧

ಇದು ಬಾಳಕೊರಡ ಮುಡಿ-
ಮೇಲೆ ಕಾಣದ ಕೈಯ ಕರಗಸವು
ರೌರವದಿ ಕೊರೆಯುತಿದೆ
ಕೊರಡಿನೆದೆ ಬಿರಿಯುತಿದೆ
ಕಂದರದಿ ಧಡಧಡಿಸಿ ನುಗ್ಗುತಿಹ ರೈಲಿನೊಲು
ಮೇಲೆ ಕೆಳಗೋಡುತಿದೆ ಕರಗಸದ ಹಲ್ಲು!
ಅದರ ಬಿರುಕಿನ ಕ್ಷೀಣ ಸ್ವರವೊಂದು ಬೇಸರದಿ
ಮೊರೆಯುತಿದೆ ಬಯಲಿನಲ್ಲಿ
ಕಾಲನೊಡ್ಡಿಹ ತುಮುಲ ಜಾಲದಲ್ಲಿ!
ಚಟಚಟಕೆ ಕಟ್ಟಿಗೆಯ ಅಟ್ಟಹಾಸವು ಅಡಗಿ
ಅವನ ಕೈಮೆಗೆ ಓರೆಕೋರೆ ಹುಡಿ ಹೊಟ್ಟಾಗಿ
ಒಟ್ಟೈಸಿ ಉದುರುತಿದೆ ರಾಶಿಯಾಗಿ
ಬಾಳೆಲ್ಲ ಗಾಸಿಯಾಗಿ

೨

ತೀಡುತಿದೆ ಉಜ್ಜುಗೊಡು
ಮೂಡುತಿದೆ ಹೊಸತು ಕೊರಡು

ಪೊಳ್ಳು ಪೊದರಿನ ಪದರು
ಬೆದರಿ ಚದುರುತ್ತಿಹವು
ಉರುಳುರುಳಿ ಸುರುಳಿಯಾಗಿ
ತನ್ನ ಬಲಹೀನತೆಗೆ ತಾನೆ ಬಾಗಿ.
ಮತ್ತೆ ಕೆತ್ತಿಹವಲ್ಲಿ ಹೂವು ಬಳ್ಳಿ
ಕೊರಡು ಕೊನರಿಸಿತೆಂಬ ಭ್ರಾಂತಿಯಲ್ಲಿ.

೩

ಯಾವ ಮಂದಿರದ ಆಧಾರಸ್ತಂಭಕೊ ಕಾಣೆ
ಇಂತು ಜೀವಸ್ತಂಭ ಸಿದ್ಧವಾಗಿ
ನಿಂತಿಹುದು ಕರ್ತವ್ಯಬದ್ಧವಾಗಿ!
ಹೊತ್ತ ತಲೆಭಾರದಲಿ
ಕತ್ತು ತತ್ತರಿಸದೊಲು
ಯಾವ ಶಕ್ತಿಯು ನೆರವು ನೀಡಲಿಹುದೊ,
ಇಲ್ಲ, ಬೇರೆಯ ತೆರವು ಬೇಡಲಿಹುದೊ!

## ಬರುವುದೆಲ್ಲ ಬರಲಿ ಬಿಡು

ಬರುವುದೆಲ್ಲ ಬರಲಿ ಬಿಡು-
ಏಕೆ ಅದರ ಚಿಂತೆ?
ದುಃಖ ಸುಖವು ನಗೆಯು ಹೊಗೆಯು
ಎಲ್ಲ ಅಂತೆ ಅಂತೆ.

ನಾವು ಗೈದ ಒಳಿತು ಕೆಡಕು
ಜೀವ ಪಡೆವ ಭೋಗ;
ನಮ್ಮ ನುಡಿಯ ನಡೆಯ ಒಡಲ
ಕಡೆದ ಬೆಣ್ಣೆ ಯೋಗ!

ಕಣ್ಣು ಕಟ್ಟಿ ಬೆನ್ನು ತಟ್ಟಿ
ಓಡಿಸುವನು ಕಾಲ,
ಇವರ ಬಿಟ್ಟು ಇವರು ಯಾರು?-
ಎಂಥ ಮೋಹ ಜಾಲ!

ಮಿಡುಕನುಳಿದು ಹುಡುಕಬೇಕು
ಅದುವೆ ಬಾಳ ಮೂಲ,
ಪಡೆಯದಿರಲು ಕಣ್ಣ ನೀರ
ಕರೆವುದಲ್ಲ ಶೀಲ.

ಬಟ್ಟಬಯಲ ತುತ್ತತುದಿಗೆ
ತಿರುಗುತಿಹವು ಗೋಲ-
ಕೊಟ್ಟು ತೀರಲಿಲ್ಲ ಜನುಮ
ದೇವನಿತ್ತ ಸಾಲ.

ಏಸೊ ಕಡಲ ಈಸಿ ಬಂದು
ಬೀಸುತಿಹುದು ಗಾಳಿ;
ಗಾಸಿಗೊಂಡ ಭೂಮಿತಾಯಿ
ನರಳುತಿಹಳೆ ಹೇಳಿ.

ಮುಗಿಲಜೇನನರಸುತಿರುವ
ತುಂಬಿ ಭಾವದುಂಬಿ,-
ಹುಟ್ಟುಹರಿಯೆ ಮುಂದುಗೆಟ್ಟ
ಓಟ ಎತ್ತೊ ಎಂಬಿ.

ಶಿಖರಕೊಂದು ಹೆಜ್ಜೆಯಿಟ್ಟು
ಗಾಳಿದೇರನೇರಿ,
ಬಾಳಕನಸು ಕರೆಯುತಿಹುದು
ಯಕ್ಷ ಲೋಕ ಸೇರಿ.

ಏನು ಮಾಟ! ಏನು ಮೋಡಿ!
ಚಣದ ನೋಟ ಬೇಟ;
ಹೀಗೆ ಸಾಗುತಿಹುದು ನಮ್ಮ
ನೆಳಲು ಬೆಳಕಿನಾಟ!

## ವಿಶ್ವಕವಿಯ ದೃಶ್ಯಕಾವ್ಯ

ಬಯಲಿನಲ್ಲಿ ನಿರ್ವಯಲನಾಗಿ ದಿಗ್ವಲಯ ಮೀರಿ ನಿಂದೆ
ಗಗನ ಮಕುಟ ಭೂಲೋಕ ದೇಹ ಪಾತಾಳ ಪಾದದಿಂದೆ.
ಸೂರ್ಯ ಚಂದ್ರ ಕಣ್ಣಾಲಿಯಾಗಿ ಆ ಮೂಡು ಪಡುವಲಿಂದೆ
ವಿಶ್ವದಾಟವನು ನೋಡುತಿರುವೆ ನೀ ನಿರ್ನಿಮೇಷದಿಂದೆ.

ಉದಯ ಪುಣ್ಯವೆನೆ ಹಗಲು ಜ್ಞಾನ, ಮುಚ್ಚಂಜೆ ಮುಕ್ತಿಯಂತೆ
ಕೋಟಿ ತಾರೆಗಳು ಮುತ್ತು ಸತ್ತಿಗೆಯ ಬೆಳಕನೆತ್ತಿದಂತೆ
ಗಾಳಿಯುಸಿರಿನಲಿ ಮೆಲ್ಲನೂದುತಿಹೆ ಪ್ರಾಣವಾಯುವನ್ನೆ
ಬೂದಿ ಹಾರಿ ತನಿಗೆಂಡ ತೋರಿ ತೊಳಗಿರುವುದಾತ್ಮವನ್ನೆ!

ಮೇಘದೋಲೆಯಲಿ ಮಿಂಚುಬಳ್ಳಿ ರುಜುಮಾಡಿ ಬರೆಯುತಿರುವೆ
ಅರ್ಥವಾಗದಿದೆ, ಆದರೂನು ಕನಿಕರದಿ ಮಳೆಯ ಸುರಿವೆ!
ಉಷಾಸಂಧ್ಯೆಯರ ಸುಂದರಾಂಗದಲಿ ನಿಂದ ನಿಲವದೇನು?
ಕನಸು ಕೋದ ಕೋದಂಡದಂತೆ ಮಳೆಬಿಲ್ಲ ಚೆಲುವದೇನು!

ಗಿರಿಯ ಬಾಹುಗಳ ಚಾಚಿ ತಬ್ಬಿರುವೆ ಸಸ್ಯಶಾಮಲೆಯನು
ಹಣ್ಣು ಹೂವುಗಳೆ ಭಾರವಾಗಿ ಬಳುಕಿರುವ ಕೋಮಲೆಯನು.
ಗುಡುಗು ಸಿಡಿಲು ಭೋರ್ಗರೆವ ಕಡಲು ಮತ್ತೇಕೆ ಇಂಥ ಕೋಪ?
ಆಗ ಈಗ ಭೂಕಂಪ ಬೇರೆ ಮನುಕುಲಕೆ ಕೊಟ್ಟ ಶಾಪ!

ಮಹಾ ಕಾವ್ಯವೀ ಭವ್ಯಸೃಷ್ಟಿ ಇದನೋದಿದನಿತು ರಮ್ಯ
ಮಹಾಕವಿಯ ವಿದ್ವದ್ವಿಭೂತಿ ಅನುಭಾವಿ ಹೃದಯ ಗಮ್ಯ-
ಅರುಹಲಿದನು ಅವತಾರವೆತ್ತಿ ತಂತಾನೆ ಭಾಷ್ಯ ಬರೆದ
ಪೂರ್ಣ ಯೋಗಿ ವಿಜ್ಞಾನಿಯಾಗಿ ಇದರಂತರಂಗ ತೆರೆದ.

## ಪ್ರಕೃತಿಯ ಮಡಿಲಲ್ಲಿ

"Earth has not anything to show more fair!"
-Wordsworth

(ಕರ್ನಾಟಕ ಕಾಲೇಜಿನ ಅಟ್ಟದಿಂದ ಕಾಣುವ ನಾಲ್ಕೂ ಹೊತ್ತಿನ ನೋಟ)

ಮೂಡಣದ ಬಾನಿನಲಿ
ಮುಗಿಲು ನೆಲ ಮಿಲನದಲಿ

ಕ್ಷಿತಿಜ ಕಂಕಣದಲ್ಲಿ
ಉಷೆಯ ನಸುನಗೆಯಂತೆ
ಬಣ್ಣಬಣ್ಣದ ಸಂತೆ
ಬಾಂದಳವ ಸಿಂಗರಿಸಿ
ಬಗೆಯಲ್ಲಿ ಬಿತ್ತರಿಸಿ
ಚೆಲುವು ಮೈದೋರುತಿರೆ
ಎದೆ ಹಿಗ್ಗಿ ತೆರೆಯುತಿರೆ
ದುಂಡಾಗಿ ಚೆಂಡಾಗಿ
ಕುಂಕುಮಾಂಕಿತನಾಗಿ
ಸುಕುಮಾರ ಸುಂದರನು
ಮೂಡಿದನದೊ!

ಗಿಡಮರದ ಸಂದಿಯಲಿ
ಹಸುರಿಡಿದ ತೋಪಿನಲಿ
ಹೊಂಗಿರಣ ನುಗ್ಗಿ ಬರೆ
ಸುಳಿಗಾಳಿ ತೇಲಿಸಿರೆ,
ಹುಲ್ಲಿನೆಸಳುಗಳಲ್ಲಿ
ಮಂಜುಹನಿ ಮುತ್ತಿನಲಿ
ಕೆತ್ತನೆಯ ನಿರ್ಮಿಸಿರೆ,
"ಕುಹೂ ಕುಹೂ ಹಾ ಹೂ
ಚಿಂವ್ ಚುಕ್ ಚುಕ್ ಟಿವೂ"
ನೂರಾರು ಹಕ್ಕಿಗಳ
ಸ್ವಚ್ಛಂದ ರಾಗಗಳ
ತಾಳ ಹಿಮ್ಮೇಳದಲಿ,
ಬಂಚರದ ಇಂಚರದ
ಗಾನ ಮಧುಪಾನದಲಿ
ವಿದ್ಯಾಲಯದ ಬಯಲು
ತುಂಬಿ ತುಳುಕಾಡಿರಲು
ಕಿವಿದೆರೆದು ಮೌನದಲಿ
ಆಲಿಸಿಲ್ಲಿ!

ಬಳ್ಳಿಗಳ ಗೊಂಚಲಲಿ
ದಾಂಗುಡಿಯ ಜೋಕಾಲಿ,
ಹುಲುಗಲದ ಟೊಂಗೆಯಲಿ

ಕೊನರಿರುವ ಹೊಂಗೆಯಲಿ
ಚೆಂದಳಿರ ಮಾವಿನಲಿ
ಚಿಗುರೊಡೆದ ಹುಣಿಸೆಯಲಿ
ರಾಜಿಸಿರೆ ಹೂಜಲ್ಲಿ
ಸೂಸಿರುವ ನೆಲದಲ್ಲಿ
ತುಂಬಿಗಳ ಝೇಂಕಾರ-
ಬನದೆದೆಯ ಓಂಕಾರ!
ಹಾರುತಿದೆ ಮಮಕಾರ
ಸೌಂದರ್ಯ ಸಾಕಾರ-
ಗೊಂಡು ಕಂಗೊಳಿಸಿಹುದು
ಕಂಡು ಕಂಗಳ ಬರವು
ಹಿಂಗುತಿಹುದು!

ಇದರಾಚೆ ನೋಡಲ್ಲಿ!
ಹೆಬ್ಬಾವಿನಂದದಲಿ
ಹಬ್ಬಿರುವ ನಗರದಲಿ
ಪೊಗೆದಳೆದ ಮಬ್ಬಿನಲಿ
ನಿದ್ದೆಯಲಿ ಮುಸುಕಿನಲಿ
ಇಂತಿರುವ ನಸುಕಿನಲಿ
ನೀರವದ ಬೀದಿಯಲಿ
ನಿಚ್ಚಳದ ಹಾದಿಯಲಿ,
ಒಂದೆರಡು ಮೂರಾಗಿ
ಹತ್ತಾಗಿ ಹಲವಾಗಿ
ಜನವೆದ್ದು ನಡೆದಿಹುದು,
ವಾಹನವು ಓಡಿಹುದು;
ಎದ್ದಿರುವ ಧೂಳಿಯಲಿ
ಗದ್ದಲದ ಹೋಳಿಯಲಿ
ಶಾಂತಿ ಕಾಲ್ದೆಗೆಯುತಿದೆ
ನೆಮ್ಮದಿಯು ಕದಡುತಿದೆ
ನಿತ್ಯ ವ್ಯವಹಾರದಲಿ
ನಗರದಲ್ಲಿ.

ಹೊತ್ತು ನಡುನೆತ್ತಿಯಲಿ
ಕೆಂಡವನು ಕಾರುತಿರೆ

ನಿಟ್ಟುಸಿರು ಜಾರುತಿರೆ
ಮೈಬೆವರು ಹನಿಯುತಿರೆ,
ನೀಲಗಣಿ ಬಾನಿನಲಿ
ಗಾಜು ಕೊಪ್ಪರಿಗೆಯಲಿ
ತುಂಡು ಮೋಡದ ದಂಡು
ಉಂಡಾಡಿಗರ ಹಿಂಡು
ಅತ್ತಿತ್ತ ಸರಿದಾಡೆ
ತಿಳ್ಳಿಯಾಟವನಾಡೆ,-
ಮೇಣಿಲ್ಲಿ ತಿರೆಯಲ್ಲಿ
ಬಿತ್ತರದ ಬಯಲಿನಲಿ
ಬಿಸಿಲುಗುದುರೆಯನೇರಿ
ಕಣ್ದಿಟ್ಟಿ ಹೌಹಾರಿ
ಹಗಲು ದಿಗಿಲಾಗಿಹುದು!
ಗಾಳಿ ಮಾತಾಡಿಸದೆ
ಎಲೆಯನಲುಗಾಡಿಸದೆ
ಮರದ ತಣ್ಣೆಳಲಲ್ಲಿ
ನಿರ್ವಿಣ್ಣ ಮೌನದಲಿ
ವಿಶ್ರಾಂತಿ ಪಡೆಯುತಿದೆ
ಸದ್ದಿಲ್ಲದೆ!

ದೂರ ಕಾನನದಲ್ಲಿ
ಏಳೆ ಸುಂಟರಗಾಳಿ
ಮುಗಿಲುದ್ದ ಕೆಂಧೂಳಿ-
ಯಲ್ಲಿ ತರಗೆಲೆ ತೇಲಿ
ಎಳೆ ಹರಿದ ಪಟದಂತೆ
ವಿಚ್ಛಿನ್ನ ಮನದಂತೆ
ಮರವಟ್ಟು ಸುತ್ತುತಿದೆ
ಗಿರಗಿರನೆ ತಿರುಗುತಿದೆ
ಭೂವ್ಯೋಮ ಮಧ್ಯದಲಿ
ಶೂನ್ಯದಲ್ಲಿ!

ಗಾಡಿ ಸಿಳ್ಳನು ಹೊಡೆದು
ಮೌನ ಮುದ್ರೆಯನೊಡೆದು,
ಗಿರಿಯ ಕಿಬ್ಬದಿಯಿಂದ

ಕಂದರದ ಮರೆಯಿಂದ
ಧೀಂಕಿಟ್ಟು ಹೊರಬಂದು
ವಿಧವಿಧದ ಪಯಣಿಗರ
ಹೊತ್ತು ಮನ ಬೇಸತ್ತು
ಚೀರಿ ಬುಸುಗುಟ್ಟುತ್ತ
ಕರ್ಬೊಗೆಯ ಕಾರುತ್ತ
ಧಾವಿಸಿದೆ ರಭಸದಲಿ
ಕಾರ್ಯ ಮುಗಿತಾಯಕ್ಕೆ
ನಿಲ್ದಾಣಕೆ!

ಪಡುವಣದ ಮಡಿಲಲ್ಲಿ
ರವಿ ನಿದ್ದೆಗೈವಂದು,
ಹೊಂಗಿರಣಗಳ ಚಾಚಿ
ಬಾಂದೇವಿ ತಲೆಬಾಚಿ
ಬಣ್ಣದೆಣ್ಣೆಯ ಪೂಸಿ
ತೊಟ್ಟಿಲಲಿ ಪಟ್ಟಿರಿಸಿ
ಬಾನಲ್ಲಿ ಬುವಿಯಲ್ಲಿ
ಬನದಲ್ಲಿ ಬಯಲಲ್ಲಿ
ಗುಡಿ ಚರ್ಚು ಗೋಪುರದಿ
ಕಾಲೇಜಿನಂಗಳದಿ
ಹೊಂಬೆಳಕು ಹರಡುತಿರೆ
ಕವಿಗಾಳಿ ತೀಡುತಿರೆ
ಕಲಕಂಠನುಲಿಯುತಿರೆ
ಗಿಳಿವಿಂಡು ಹಾರುತಿರೆ
ಬೆಳ್ಳಕ್ಕಿ ಬಳಿವಿಡಿದು
ಬಿಳಿಚುಕ್ಕಿ ಗರಿಯೊಡೆದು
ಬಾಂದಳವನಲೆವಂತೆ
ಉಡ್ಡಾಣಗೈಯುತಿರೆ
ದನಕರದ ಕೊರಳಿಂದ
ಗಂಟೆಗಳ ಟಿಂಟಿಣಿಯು
ಕೊಳಲಿಂದ ಇನಿದನಿಯು
ಮಂದ ಮಂದಾನಿಲನ
ಬೆನ್ನೇರಿ ಬಳಿಸಾರೆ,
ಲಾಲಿ ಕಿವಿ ತಟ್ಟುತಿರೆ

ಚಿನ್ಮಯಾನಂದದಲಿ
'ನಾನು' ಬಯಲಾಗುತಿರೆ
'ನೀನು' ಮೈದುಂಬುತಿರೆ
ರೋಮ ರೋಮಂಗಳಲಿ
ನಾದದುನ್ಮಾದದಲಿ
ಚೈತನ್ಯ ಹರಿಯುತಿರೆ
ಮಾನಸ ಸರೋವರವು
ತೊಳೆದ ಕನ್ನಡಿಯಾಗೆ
ಹೃದ್ರಂಗದಲಿ ಭಾವ
ಚಿಲುಮೆ ಪುಟಿದೇಳುತಿರೆ
ಜೇನ್ಗೊಣದ ಹುಟ್ಟಿನಲಿ
ಗಜಬಜೆಯು ಹುಟ್ಟುತಿರೆ
ಜೇಂಬನಿಯು ಜಗಳುತಿರೆ,
ಮುಚ್ಚಂಜೆ ಮುಸುಗಿನಲಿ
ಹೊಂಬಣ್ಣ ಮಾಸುತಿರೆ
ಇಳೆಯು ಸೆರೆಯಾಗುತಿರೆ
ಮೆಲ್ಲಮೆಲ್ಲನೆ ಇರುಳು
ಇಳಿಯುತಿಹುದು.

ಕತ್ತಲೆಯ ಮೊತ್ತದಲಿ
ಬಡಿದು ಮಲಗಿಸಿದಂತೆ
ಪಟ್ಟಣವು ನಿದ್ರಿಸಿರೆ
ನಿಶ್ಶಬ್ದ ಮುದ್ರಿಸಿರೆ
ಗಿಡಗಂಟಿ ಬೇಲಿಯಲಿ
ಕೀಟ ಜಿಂಯ್‌ಗುಟ್ಟುತಿರೆ,
ಚಿಕ್ಕೆಗಳು ಗಗನದಲಿ
ಕಣ್ಣುಮುಚ್ಚಾಲೆಯಲಿ
ಚಂದಿರನ ಹುಡುಕುತಿರೆ
ಚೆಲ್ವೆಳಕ ಸಿಡಿಸುತಿರೆ
ನಾ ನಿಂತ ಕಟ್ಟಡವು
ತಲೆಯೆತ್ತಿ ನಿಂತಿಹುದು
ಪರ್ವತಪ್ರಾಯದಲಿ
ಧ್ಯಾನದಲ್ಲಿ!

ರುದ್ರ ಭೀಷಣದಲ್ಲಿ
ಗಾಳಿ ತುಸು ಮೊರೆಯುತಿರೆ,
ನೆನೆನೆನೆಸಿ ಅತ್ತಂತೆ
ಎಲೆ, ರವುದೆ ನಲುಗುತಿರೆ
ಟಿಂವಕ್ಕಿ ಟಂಕಾರ
ದಿಗ್ದಿಗಂತಕೆ ಹಬ್ಬಿ
ಗಿರಿಸಾನುಗಳ ತಬ್ಬಿ
ಕತ್ತಲಲಿ ಕರಗುತಿದೆ!
ಅರರೆ! ಹೊನ್ನಿಯ ಹುಳವು
ಧರೆಯ ಜಂಗಮ ತಾರೆ
ಮಿಂಚು ಹುಡಿಯಾದಂತೆ
ರೆಕ್ಕೆಯಿಹ ಕಿಡಿಯಂತೆ
ಕತ್ತಲೆಯ ಕಣ್ಣಿನೊಲು
ಮುಚ್ಚುತಿದೆ ತೆರೆಯುತಿದೆ
ಕುಳಿತೆದ್ದು ಹಾರುತಿದೆ
ಅತ್ತಿತ್ತ ಸಾರುತಿದೆ
ಕಂಡು ಮರೆಯಾಗುತಿದೆ
ಬೆಳಕು ಹನಿಯಾದಂತೆ
ತಿರೆಯುತ್ತಮಾಂಗದಲಿ
ಕೆತ್ತಿರುವ ಮಣಿಯಂತೆ
ಕತ್ತಲೆಯ ಕಡಲಿನಲಿ
ಮುತ್ತಿನಂತೆ!

## ಒಂದು ಮುಂಜಾವು

ಒಂದು ಮುಂಜಾವಿನಲಿ ತುಂತುರಿನ ಸೋನೆಮಳೆ
'ಸೋ' ಎಂದು ಶ್ರುತಿ ಹಿಡಿದು ಸುರಿಯುತಿತ್ತು;
ಅದಕೆ ಹಿಮ್ಮೇಳವೆನೆ ಸೋಸಿ ಬಹ ಸುಳಿಗಾಳಿ
ತೆಂಗು ಗರಿಗಳ ನಡುವೆ ನುಸುಳುತಿತ್ತು.

ಇಳೆವೆಣ್ಣು ಮೈದೊಳೆದು ಮಕರಂದದರಿಶಿಣದಿ
ಹೂ ಮುಡಿದು ಮದುಮಗಳ ಹೋಲುತಿತ್ತು;
ಮೂಡಣದಿ ನೇಸರನ ನಗೆಮೊಗದ ಶ್ರೀಕಾಂತಿ
ಬಿಳಿಯ ಮೋಡದ ಹಿಂದೆ ಹೊಳೆಯುತಿತ್ತು.

ಹುಲ್ಲೆಸಳು, ಹೂ ಪಕಳೆ, ಮುತ್ತು-ಹನಿಗಳ ಮಿಂಚು
ಸೊಡರಿನಲಿ ಆರತಿಯು ಬೆಳಗುತಿತ್ತು;
ಕೊರಲುಕ್ಕಿ ಹಾಡುತಿಹ ಚಿಕ್ಕಪಕ್ಕಿಯ ಬಳಗ
'ಶುಭಮಸ್ತು' 'ಶುಭಮಸ್ತು' - ಎನ್ನುತಿತ್ತು.

ತಳಿರ ತೋರಣದಲ್ಲಿ ಬಳ್ಳಿ ಮಾಡಗಳಲ್ಲಿ
ದುಂಬಿಗಳ ಓಂಕಾರ ಹೊಮ್ಮುತಿತ್ತು;
ಹಚ್ಚ ಹಸುರಿನ ಪಚ್ಚೆ ನೆಲಗಟ್ಟಿನಂಗಳದಿ
ಚಿಟ್ಟೆ ರಿಂಗಣಗುಣಿತ ಹಾಕುತಿತ್ತು.

ಉಷೆಯ ನುಣ್ಗದಪಿನಲಿ ಹರ್ಷ ಬಾಷ್ಪಗಳಂತೆ
ಮರದ ಹನಿ ತಟಪಟನೆ ಉದುರುತಿತ್ತು;
ಸೃಷ್ಟಿ ಲೀಲೆಯೊಳಿಂತು ತಲ್ಲೀನವಾದ ಮನ
ಮುಂಬಾಳ ಸವಿಗನಸ ನೆನೆಯುತಿತ್ತು.

## ಮಾನಸ ಪೂಜೆ

ಅಹ! ಪ್ರಾತಃಕಾಲ, ಮತ್ತೆ ಅದೊ ಚಿಮ್ಮುತಿದೆ
ಬಣ್ಣಬಣ್ಣದ ಮಣ್ಣು ಕಣ್ಣಿನಲಿ, ಹಕ್ಕಿಗಳ
ಇಂಚರದಿ, ಇಬ್ಬನಿಯ ಸೊಡರಿನಲಿ, ನಿಬ್ಬೆಗದಿ
ಹರಿವರಿದು ಬರುವ ಗಂಧೋದಕದಿ ಮಿಂದ ತಂ-
ಬೆಲರಿನಲಿ ಹೆರೆಹಿಂಗದಮೃತ ಚೈತನ್ಯ ಝರಿ!
ದಿವ್ಯಾನುಭೂತಿಯಲಿ ರಸದ ಪಾವಿತ್ರ್ಯದಲಿ
ಬಾಳ ತೊಳೆಯುವ ಬದುಕ ಸಿಂಗರಿಪ ಮಂತ್ರಮಿದೆ;
ರಸಾಹ್ಲಾದಿನಿ ಪರಾಪ್ರಕೃತಿ ಸಂಜೀವಿನಿ!

ಹೊತ್ತು ಹೋದರೆ ಮತ್ತೆ ಬಾರದೀ ಸಿರಿಯೊಸಗೆ
ಏಳು ಎಚ್ಚರಗೊಂಡು ನೆನೆ ಮನವೆ, ಇಂಥ ತಣ್-
ಪೊತ್ತಿನಲಿ ಜಗದೆಲ್ಲ ಉತ್ತಮ ವಿಭೂತಿಗಳ,
ಎದೆಗುಡಿಯ ಗದ್ದುಗೆಯಲಿರಿಸವರ ಶ್ರೀಪಾದ
ಪದ್ಮಗಳ, ಪೂಜೆಗೆಯ್, ನಿನ್ನ ನೀನಿಲ್ಲಗೆಯ್
ಅಲ್ಪತೆಯು ಮಹದಲ್ಲಿ ಕರಗಿ ಒಂದಾಗಲಿ!

## ಮುಚ್ಚಂಜೆ

೧

ಒಂದರಗಳಿಗೆಯ
ಬಂಧುರ ಸ್ಪರ್ಶಕೆ
ಮಂದಾನಿಲನೈತಂದಿಹನು;
ಹಗಲಿನ ಬಿಸಿಲಿಗೆ
ಮಾಗಿದ ಬನಗಳ
ಫಲಗಳ ಸೊಂಪಿನಲೀಜಿಹನು.

೨

ರವಿಯದೊ ಬಿದ್ದನು!
ಕವಿಯಿದೊ ಎದ್ದನು
ತಂಗಾಳಿಯ ಜತೆ ಕೇಳಿಯಲಿ-
ನೀಲಾಂಗಣದಲಿ
ಮೋಡದ ಪುತ್ಥಳಿ
ತೂಕಡಿಸುತ್ತಿರೆ ನಿದ್ದೆಯಲಿ.

೩

ಕ್ಷಿತಿಜದ ವರ್ತುಲ
ಕನ್ನೆಯ ಕೆನ್ನೆಯ
ಕಿತ್ತಿಳೆ ಹಣ್ಣಿನ ಬಣ್ಣವಿದು;
ಗುಂಗುರು ಗುಂಗುರು
ಮುಂಗುರುಳಂತೆಯೆ
ಮುಚ್ಚಂಜೆಯ ಮುಂಜೆರಗಿಹುದು.

೪

ಒಂದೊಂದಾಗಿಯೆ
ತಾರೆಗಳಿಣಿಕಿರೆ
ಬಾನಿಗೆ ಹೊಸ ಚಿಗುರೊಡೆದಂತೆ!
ದೇವ ಕಣಗಿಲೆಯು
ಎಲೆಗಳನುದುರಿಸಿ
ಕೊಂಬೆಗೆ ಹಿಡಿ ಹೂ ತಳೆದಂತೆ.

೫

ತಳಿರಂಗೈಯಲಿ
ಕುಳಿತಿಹ ಕೋಗಿಲೆ
ಯಾವುದೊ ಛಂದಕೆ ಕುಕಿಲುತಿದೆ.
ಮತ್ತೊಂದೆಡೆಯಲಿ
'ಟುವ್ವಿ'ಯ ಸವಿಯುಲಿ
ತಿರೆಯಾನಂದವ ಸಾರುತಿದೆ.

೬

ಮುಚ್ಚಂಜೆಯ ತೆರೆ
ಯಾಚೆಗೆ ಕನಸಿನ
ಲೋಕವು ನಾಕವ ತೆರೆದಿಹುದು;
ತುಂಬಿದ ಚಂದಿರ
ಸ್ವಪ್ನದಿ ಸುಂದರ
ಮಾಯಾ ಮಂದಿರ ರಚಿಸುವದು.

೭

ಹಗಲಿರುಳೆರಡರ
ಬಂಧುರ ಮಿಲನದಿ
ಮಿಸುಕಾಡದ ನಸು ಬೆಳಕಿಹುದು;
ದಿನವಿಡಿ ಬಳಲಿಕೆ
ಸಂಜೆಯ ಅಲಸಿಕೆ
ವಿಲಸತ್ ಪ್ರಭೆಯಲಿ ಕರಗಿಹುದು.

## ಒಂದು ಸಂಜೆ

ಸಂಜೆವೆಣ್ಣಿನ ಸಕಲ ಸೌಭಾಗ್ಯ ಹೊಮ್ಮುತಿದೆ!

ಕಿಂಜಲ್ಕ ಕುಸುಮಗಳ ಹುಡಿಯ ಹಾರಿಸಿದಂತೆ
ಕೆಂಕಮಾಗಿದೆ ಬಾನು; ಕಿತ್ತಿಳೆಯ ತೊಳೆಯಂತೆ

ಕ್ಷಿತಿಜದಂಚಿನ ತುಟಿಗೆ ರಾಗ ರಂಗೇರುತಿದೆ!
ಮುಂಗುರುಳು ಚಿನ್ನಾಟವಾಡಿದೊಲು ಮುಚ್ಚಂಜೆ

ಕರಿನೆರಳ ಚಾಚಿಹುದು. ನೀಲ ಸೀಮಂತದಲಿ
ಒಂದೊ ಎರಡೋ ಚಿಕ್ಕೆಯರಳು ಚೆಲ್ವೆಳಕಿನಲಿ

ಚಿಮುಕುತಿವೆ. ಇಲ್ಲಿ ಮೌನ ಧ್ಯಾನವೇ ಪೂಜೆ!
ಚಿತ್ರಗಾರನ ಕುಶಲ ಕುಂಚ ಬಣ್ಣಿಸದಿದನು.

ಪಕ್ಷಿಕೂಜನ ನಿಪುಣ ಗಾಯಕಗು ಅಳವಡದು.
ಕಬ್ಬಿಗನ ನುಡಿಯಿಲ್ಲಿ 'ಓಂ ನಮೋ' ಎಂದಿಹುದು!

ಪ್ರಕೃತಿ ಸೌಂದರ್ಯದೌದಾರ್ಯಕೆನ್ನಲ್ಪತನು

ಮುಡಿಪಾಗಿ ಕರಗಿಹುದು ಅರ್ಪಣಾನಂದದಲಿ.
ಸಾವು ಬಂದರು ಇಂಥ ಶಾಂತ ಸಮಯದಿ ಬರಲಿ.

## ಪಥಿಕ

೧

ಯಾವ ಋತುವಿನೊಳಿಂತು ಕನಸು ಕಂಡಳೊ ಪೃಥಿವಿ
ಆಶೆ ಬೀಜಗಳೆನಿತೊ ಮಡಿಲೊಳಿರಿಸಿ
ಮಳೆಯ ರೂಪದಿ ಮುಗಿಲು ಮುತ್ತಿಡಲು ಮತ್ತೇರಿ
ಹೊತ್ತು ನಿಂತಿಹಳಮಿತ ವೃಕ್ಷರಾಶಿ

೨

ಮಾವು ಬೇವೂ ತೆಂಗು ಕೌಂಗು ನೇರಿಳೆ ಹಲಸು
ಹುಣಿಸೆ ಹುಲುಗಲ ತಾಳೆ ಬಾಳೆಯಂತೆ
ಮಾಧವಿ ತಮಾಲ ಮಾಲತಿ ಹೊಂಗೆ ಶ್ರೀಗಂಧ
ಸೀತಾಳಿ ಬಕುಳ ಸಂಪಿಗೆಗಳಂತೆ!

೩

ದೇವಕನ್ನೆಯರಿಳೆಗೆ ಇಳಿತಂದು ಗುಟ್ಟಿನಲಿ
ತೊಟ್ಟಿಲವ ತೂಗಿ ಹೆಸರಿಟ್ಟರೇನೊ!
ಹೆಸರಿಲ್ಲದೆಯು ಹಸಿರ ಚಿಮ್ಮಿಸುವ ಪಸದನಕೆ
ಜುಮ್ಮೆಂದು ಮನಸೋತು ಬಿಟ್ಟರೇನೊ!

೪

ಇಲ್ಲಿ ಬಣ್ಣದ ತಳಿರ ತುಟಿಯಲ್ಲಿ ಹೂನಗೆಯು
ಅಲ್ಲಿ ಹಣ್ಣಿನ ಗೊನೆಗೆ ಗಿಣಿಗಳೆರಡು
ಸೀಳುದಾರಿಯ ಬದಿಗೆ ಸಾಲು ಮರಗಳ ನೆಳಲು
ಗಾಳಿಯೂದುವ ಕೊಳಲು-ಹಕ್ಕಿ ಹಾಡು,

೫

ಜಗದ ನೂರೆಂಟು ತೆರ ಕಲಹ ಕಂಟಕಗಳಿಗೆ
ತಾವು ಕಾರಣವಲ್ಲವೆಂಬ ಹಾಗೆ
ಹುಲ್ಲು ಮೇಯುವ ಹಸುಗಳಲ್ಲಿ ಮೆಲುಕಾಡಿಸಿವೆ
ಹುಲ್ಲುಗದ್ದೆಯೆ ತಮ್ಮದೆಂಬ ಹಾಗೆ.

೬

ನೆಳಲ ಸೆರಗನು ಹಿಡಿದು ಬಿಸಿಲು ಮುಂದೋಡುತಿದೆ
ದೂರ ದೂರದ ತನ್ನ ಮನೆಯ ನೆನೆದು,
ಬಿಳಿಯ ಮೋಡವದೊಂದು ಬೆಟ್ಟದುದಿಯಲಿ ನಿಂದು
ಎಲ್ಲ ಬಲ್ಲವರಂತೆ ಸುಮ್ಮನಿಹುದು.

೭

ಬಾಳ ಬಿಸಿಲಲಿ ಬಳಲಿ ದಣಿದು ಬಂದಿಹ ಪಥಿಕ
ಮರದ ತಣ್ಣೆಳಲೊಂದೆ ನಿನಗಾಸರು-
ಇಲ್ಲಿ ದಣಿವಾರಿ ಮನ ಶಾಂತಿ ಸಂತಸ ಪಡೆಯೆ
ಮುಂದೆ ನಡೆಯುವ ದಾರಿ ಎನಿತು ಹಗುರು!

೮

ಪ್ರಕೃತಿ ತನ್ನೆದೆಯ ಮಧುವಾಟಿಕೆಯ ತೆರೆದಿರಲು
ಅದನು ತಣಿ ಹೀರದೆಯೆ ಸಾಗಬಹುದೆ?
ಯಾರಿಗೀ ಸುಂದರತೆ? ಯಾರಿಗೀ ಪರವಶತೆ?
ಯಾರ ಸುಖಕೀ ಸೃಷ್ಟಿ ನಿನಗಲ್ಲದೆ?

## ಹೂಬೇಲಿ

ಎಂದಿನಂತೆಯೆ ದಿನದ ದಾರಿಯಲಿ ಸಾಗುತಿರೆ
ಅನಿರೀಕ್ಷಿತಂ ಬಳ್ಳಿ ಗೊಂಚಲವು ಕೈಚಾಚಿ
ಬಣ್ಣಬಣ್ಣದ ಹೂಗಳನುರಾಗದಲಿ ನಾಚಿ
ಗಾಳಿ ಸುಳಿಯಲಿ ಬಂದು ಕಿವಿಮಾತನುಸುರುತಿರೆ
ನಿಂತು ಬಿಡುವೆನು ನಾನು. ಈ ಪರಿಯ ಸೊಬಗಿನಲಿ
ಅರಸದಿದ್ದರು ಕಾಲ ತೊಡಕುವೀ ಹೂಬೇಲಿ
ಯಾವ ಜನುಮದ ನೇಹ ನಲುಮೆಯಾವೇಶದಲಿ
ಎದೆಯನೊಪ್ಪಿಸಲಿತ್ತೊ! ಮುಳ್ಳು ಮಂಚದೊಳಲ್ಲಿ
ನವುರು ಹೂಹಾಸಿಗೆಯಲೊರಗಿ ಪಾತರಗಿತ್ತಿ
ಚಂಚಲತೆ ಚೈತನ್ಯವಡೆದಂತೆಹಾರುತಿದೆ!
ಜೇಡಹುಳು ತಂತು ತಂತುವನೇರಿ ಇಳಿಯುತಿದೆ-
ಇಂತೆಲ್ಲವನು ನನ್ನ ದೃಷ್ಟಿಪಥದಲಿ ಬಿತ್ತಿ
ಸೊಂಪೇರಿ ಬೆಳೆದು ನಿಂತಿಹುದಿದೋ ಹೂಬೇಲಿ
ಹಾದಿಹೋಕರು ನಸುವೆ ನೋಡಬಹುದೇ ಹೊರಳಿ?

## ಬಂತು ಭಾರತ ಹುಣ್ಣಿವೆ!

ಬಂತು ಭಾರತ ಹುಣ್ಣಿವೆ!
ತೆರೆದು ಲೋಕದ ಕಣ್ಣಿವೆ!!

ಕನಸು ಮನಸೂ ಹೊಂದಿವೆ
ಜೇನು ಬಟ್ಟಲು ತಂದಿವೆ
ಇಂಥ ಸಮಯದಿ ಬಂಧವೆ?
ಏನು ಗೈದರು ಚೆಂದವೆ!
ಬಾನಿನುದ್ದಕು ಭೂಮಿಯಗಲಕು
ಎಲ್ಲಿಯೂ ಸ್ವಚ್ಛಂದವೆ!
......ಬಂತು!

ಗಾಳಿ ತಣ್ಣನೆ ತೀಡಿದೆ
ಮರಕೆ ಕಿವಿ ಮಾತಾಡಿದೆ;
ತುಂಡು ಮೋಡವು ತೇಲಿದೆ

ದುಂಡು ಮಲ್ಲಿಗೆ ಹೋಲಿದೆ;
ಹಿಂಡನಗಲಿದ ಕರುವಿನಂದದಿ
ಬಾನ ಬಟ್ಟೆಯೊಳೋಡಿದೆ
.............. ಬಂತು!

ಗೋದಿ ಹೊಲವೂ ಮಾಗಿದೆ
ಕಣದಿ ಹಂತಿಯು ಸಾಗಿದೆ;
ಹತ್ತಿ ತೊಳೆ ತೊಳೆ ತೊಳಗಿದೆ
ರೈತನೆದೆ ಮಾರ್ಪೊಳೆದಿದೆ
ಕುಸುಬೆ ಹೂವಿನ ಕುಸುರಿನೊಂದಿಗೆ
ಜೀವನವೆ ಹಾಡಾಗಿದೆ!
.............ಬಂತು!

ನಿರ್ಭಯತೆ ನಿರಪೇಕ್ಷತೆ
ಶುಭ್ರಗುಣ ಸಂಪನ್ನತೆ
ಬಾಳ ಬೆಳಗಿಪ ನವ್ಯತೆ
ನಿರ್ಮಲತೆ ಸವಿ ನಮ್ರತೆ
ಅಳವಡಿಸುತಿವನೆಲ್ಲ ಕರಗಿಸಿ
ಇಂದಿನೀ ಬೆಳಕಾಯಿತೆ?
............ಬಂತು!

ಜೀವ ಹಂಸವು ನಲಿದಿದೆ
ಶಾಂತಿ ಸಾಗರಕಿಳಿದಿದೆ;
ನೋವು ಚಿಂತನೆ ತೊಲಗಿದೆ
ಇಂದ್ರಲೋಕವು ಮಲಗಿದೆ
ಚಂದ್ರ ಸಾಕಿದ ಚಿಗುರೆ ಭೂಮಿಗೆ
ಜಿಗಿವ ಹಂಬಲದಲ್ಲಿದೆ!
............. ಬಂತು!

ಜಗದ ಪಾತ್ರೆಯು ತುಂಬಿದೆ
ಎಲ್ಲರಾಸೆಗು ಇಂಬಿದೆ;
ಚೈತ್ರಯಾತ್ರೆಗೆ ಕರೆದಿದೆ
ಸಕಲ ಸಿದ್ಧತೆಯಾಗಿದೆ
ಆವುದೋ ದಿವ್ಯಾನುಭಾವಕೆ
ತಾ 'ಉಧೋ' ಎಂದೆದ್ದಿದೆ!
................ ಬಂತು!

## ಸೃಷ್ಟಿ ನೋಂತು ನಿಂತಿದೆ!

೧

ಗಿಡದ ರೆಂಬೆ ಕೊಂಬೆಗಳಲಿ ಚಿಗುರು ಕಣ್ಣ ತೆರೆದಿದೆ
ಎಲ್ಲಿ ನೋಡಿದಲ್ಲಿ ಚೆಲುವು ಗೆಲ್ಲುಗಂಬ ನಿಲಿಸಿದೆ!
ಹೊಸತು ಆಸೆ ಮೂಡಿದೆ
ಹರುಷ ಲಾಸ್ಯವಾಡಿದೆ
ಓ! ವಸಂತ ನಿನಗನಂತ ಆಲಿಂಗನ ಸಂದಿದೆ
ಸೃಷ್ಟಿ ನೋಂತು ನಿಂದಿದೆ!

೨

ಎಂದೊ ಅಗಲಿ ಹೋದ ನಿನಗೆ ನಮ್ಮ ನೆನಪು ಬಾರದೆ?
ಮಾಗಿ ಕೊರೆದ ಗಾಯವಿನ್ನು ಇಹುದು ಮನದಿ ಮಾಯದೆ!
ಜೀವ ಕುಲವು ತಪಿಸಿದೆ
ನೂರು ಬಾರಿ ಶಪಿಸಿದೆ
ಪಾದರಸದ ತೆರದಿ ಜಾರಿ ಕಂಡ ಕಡೆಗೆ ಹರಿದಿದೆ
-ತನ್ನತನವ ಮರೆದಿದೆ!

೩

ತಳಿರ ತಳ್ಕೆಯಲ್ಲಿ ಮುದ್ದು ಕೋಗಿಲೆಯದೊ ಕುಳಿತಿದೆ
ಅದರ ಉದರದೊಂದು ಉಸಿರು ಹಾಸಿ ಬೀಸಿ ಬರುತಿದೆ;
ಓಹೊ!
ಎಲ್ಲೊ ಕಂಡ ಹಾಗಿದೆ
ಆಹಾ
ಎಂದೊ ಕೇಳಿದಂತಿದೆ
ಇಂದು ಜಾಡ್ಯ ಹರಿದು ಇಳೆಗೆ ರೋಮಾಂಚನ ತಂದಿದೆ!
-ಸಮರ ತೂರ್ಯದಂತಿದೆ!
ಏನು ಅಂದ ಬಿಸವಂದವೊ ನಿನ್ನ ಮಧುರ ಮೈತ್ರಿಯು!
ನೃತ್ಯ ಹಾಡು, ಸೊಗದ ಕೋಡು; ಧನ್ಯಳೀ ಧರಿತ್ರಿಯು;
ಹೇಮಂತನ ತ್ಯಾಗವೂ
ಈ ವಸಂತ ಭೋಗವೂ
ಬದುಕಿಗೆಂದೆ ಬಿಜಯಗೈಯೆ ಪ್ರೀತಿ ಸಮಾಯೋಗವು!
-ಹಾಗು ಹೀಗು ಹೇಗೆಯು.

ಬನದ ಬಯಕೆ ಮಾಗಿದೆ
ಚೈತ್ರೋದಯವಾಗಿದೆ
ಬಾ ವಸಂತ ನಿನಗನಂತ ಆಲಿಂಗನ ಸಂದಿದೆ!
-ಸೃಷ್ಟಿ ನೋಂತು ನಿಂದಿದೆ!

## ಶ್ರಾವಣದ ಲಾವಣ್ಯ

೧

ಬಾನ ಸಾಣೆಗೆ ಹಿಟ್ಟು ಸಣ್ಣಿಸಿ-
ದಂತೆ ಜಿನುಗಿದೆ ಸೋನೆಯು;
ಬಿಳಿಯ ತೆಳು ಜವನಿಕೆಯನೆಳೆದಿಹ
ಇಳೆಯು ಸುಂದರ ಮೇಣೆಯು!
ಹುಲ್ಲು ಹಾಸಿದೆ, ಹೂವು ಸೂಸಿದೆ
ಗಾಳಿ ಮೂಸಿದೆ ಕಂಪನು
ಶ್ರಾವಣದ ಲಾವಣ್ಯ ಕುಣಿದಿದೆ
ಮಳೆಯು ಹಣಿಸಿದೆ ತಂಪನು.

೨

ಹಸಿರು ಅಪರಂಪಾರ ಹಬ್ಬಿದೆ
ನೆಲವನೆಲ್ಲೆಡೆ ತಬ್ಬಿದೆ;
ಎತ್ತ ಹೊರಳಿದರತ್ತ ಮೆತ್ತಗೆ
ಚಿತ್ತದಲಿ ಅಚ್ಚೊತ್ತಿದೆ!
ತಿಳಿ ಹಸಿರು ಗಿಳಿ ಹಸಿರು ಗದ್ದೆಗ-
ಳಲ್ಲಿ ಓರಣವಾಗಿದೆ,
ಕಡು ಹಸಿರು ಕಾಡಿನಲಿ ತೋರಣ-
ವಾಗಿ ಹೊರೆ ಹೊರೆ ಬಾಗಿದೆ!

೩

ಹೂವು ಹೂವಿಗೆ ಕೈಯ ಕುಲುಕಿಸಿ
ನೊಸಲು ನೊಸಲಿಗೆ ಸೋಕಿಸಿ
ನೂರು ಪಾತರಗಿತ್ತಿ ಕುಣಿದಿವೆ
ಮೈಗೆ ಮೈಯನು ಪುಲಕಿಸಿ!

ಹೂಬಿಸಿಲು ಸುಸಿಲಾಟವಾಡಿದೆ
ಕೆನ್ನೆ ಕೆನ್ನೆಗೆ ತಾಕಿಸಿ
ಮೋಡ ಬಂದಿವೆ, ನೋಡ ಬಂದಿವೆ
ಮುತ್ತು ಹನಿಗಳ ಚಿಮುಕಿಸಿ!

೪

ಗಗನ ಪಕ್ಷಿಯು ಹಗಲಿನಕ್ಷಿಯ
ಮುಚ್ಚಿ ಕೂತಿದೆ ಬೆಚ್ಚಗೆ;
ಬೆಳಕು ಗಾಳಿಯು ಕನಸು ಮನಸೂ
ಎಲ್ಲವೂ ಹಸಿ ಹಚ್ಚಗೆ!
ಏನು ಹೇಳುವಿ ಹೇಳು ಕೆಳದೀ
ಇಂಥ ಹಸುರಿನ ಹುಚ್ಚಿಗೆ-
ನಂದನದ ವನವೆಂದೆಯಾ?- ಬಿಡು
ಗುಂಜಿ ತೂಕವು ಹೆಚ್ಚಿಗೆ!

## ನಕ್ಷತ್ರ

ಬಾನಿನೊಂದೆಡೆ ತಮದ ರುಂದ್ರ ಪಾತ್ರೆಯಲಿಳಿದು
ದೀನ ಮೊಗದಲಿ ಕಿರಣ ತಾನ ಸೋಪಾನದಲಿ
ನಿರ್ನಿಮೇಷಾಕ್ಷಿಯೊಳಗೇನನೀಕ್ಷಿಸುತಿರುವೆ ಲಲಿತಾಂಗಿ ನಕ್ಷತ್ರವೆ?
ಉನ್ನತದ ತಾರಕಿತ ಗಗನದೊಳು ಏಕಾಕಿ
ಬಿನ್ನಗಾಗುತ ಮೌನವ್ರತಧಾರಿಯಾಗಿರಲು
ಪನ್ನತಿಕೆ ಬಹುದೆಂದು? ಎದೆ ಭಾರವನು ಇಳುಹಲಾರದೆಯೆ ಕೊರಗುತಿರುವೆ!

ಭವದ ಬಾಳಿನೊಳಿಲ್ಲಿ ದಿವದ ಕನಸನು ಕಂಡು
ಜೀವನದ ಪಾವನಂಗೊಳಿಪ ಹಂಬಲದೊಳಿರೆ
ಆವ ನೋವಿನ ಕಾವು ಕೆಂಗುಲಿಮೆಯಲಿ ಕುದಿಸಿ ನಿನ್ನ ದಿಗ್ಬಲಿ ಹೊಡೆಯಿತೊ!
ಭಾವುಕರಿಗಾತ್ಮಾಭಿರಾಮ ಧೀಮಂತರಿಗೆ
ನೋವಿನೊಡ ಹುಟ್ಟಿ ಮೃದು ಹೂವಾಗಿ ಪ್ರೇಮದಲಿ
ನವೆದ ಸತ್ಯಾಶ್ರಯರಿಗೀ ಜಗದೊಳುಳಿಗಾಲ ಬೆಳೆಗಾಲವಿಲ್ಲವೇನೊ!

ನೊಂದವರ ಕಣ್ಣೀರ ಬಿಂದುಬಿಂದುವು ಜಿನುಗಿ
ಕುಂದದಮರ ಪ್ರೇಮ ಬಾನಾಳ್ಕೆಯಲಿ ಮಿನುಗಿ-
ಅಂದಗೆಟ್ಟಿಹ ಬಾಳೊಳಾವ ಸಂದೇಶವನು ತಂದಿರುವೆ ಕಿರುತಾರಗೆ?
ಅಂಧಕಾರವು ಕಣ್ಣ ತಿವಿದು ನಿನ್ನೆದೆಗುದಿಗೆ
ಇಂಧನವನೊಟ್ಟಿ ಹಸಿ ಹೆಣವ ಬೇಯಿಸುತಲಿದೆ!
ಬಂಧಮುಕ್ತಿಯ ಪಡೆದ ಚೊಕ್ಕ ಬೆಳಕಿನ ಚಿಕ್ಕೆ ಮುಂದಾವ ಗುರಿಯು ನಿನಗೆ?

## ನಿಯಮೋಲ್ಲಂಘನ

೧

'ಸುಯ್' ಎಂದು ನಿಡುಸುಯ್ದು ಹುಯ್ಯಲಿಡುತಿದೆ ಗಾಳಿ
ಜಗದ ಆರ್ದ್ರತೆಯನ್ನೆ ಹೀರಿ ಹೀರಿ!
ಮೂಡಗಾಳಿಗೆ ಬಾನ ಮೊಗ ಒಡೆದು ಬಿಳಿ ಬೂದಿ
ಬಳಿದಂತೆ ತೋರುತಿದೆ ಮೇರೆ ಮೀರಿ.

೨

ತರು ಲತಾದಿಗಳಲ್ಲಿ ಚಿಗುರಿಲ್ಲ ಹೊಗರಿಲ್ಲ-
ಅಸ್ಥಿ ಪಂಜರವಾಗಿ ನವೆಯುತಿಹವು ;
ಎಲ್ಲೊ ಅಂಗೈಯಗಲ ಹಸಿರು ಕಂಡರೆ ಸಾಕು
ಮನದ ಆಸೆಗಳಲ್ಲಿ ಸೇರುತಿಹವು.

೩

ಏನು ಬಾನೋ ಎನಿತು ದೂರವಿದ್ದಂತಿಹುದು
ನಮಗು ಅದಕೂ ಮಾತು-ಕತೆಯೆ ಇಲ್ಲ;
ಒಂದು ಮೋಡವೆ? ಮಿಂಚೆ? ಮಳೆಯೆ? ಕಾಮನ ಬಿಲ್ಲೆ?
ಚಳಿಗಾಲಕೋ ಕೊಂಚ ಬುದ್ಧಿಯಿಲ್ಲ.

೪

ಕ್ಷಾಮ ಡಾಮರ ಬಡಿದ ನಿರ್ವಾಸಿತರ ತೆರದಿ
ಒಣಗಿದೆಲೆಗಳ ರಾಶಿ ಭಣಗುಟ್ಟಿವೆ;
ಮೈಕೊರೆವ ಚಳಿಗಾಳಿ ನಿಷ್ಕರುಣದಲಿ ದಾಳಿ-
ಗೈಯೆ ತರಗೆಲೆ ಮತ್ತೆ ಮೊರೆಯುತ್ತಿವೆ!

೫

ಹೇಮಂತಋತುವಿಂಗೆ ಸಾಮಂತ ರಾಜರೊಲು
ಸೂರ್ಯ ಚಂದ್ರರು ನಡುಗಿ ಉಡುಗುತಿಹರೊ!
ಧೀಮಂತ ವರ್ಷಋತು ಗುಡುಗು ಹಾಕುವವರೆಗೆ
ಬರಿಯ ನಾಮಾಂಕಿತರೆ ಮೆರೆಯಲಿಹರು!

೬

ಮೂರು ತಿಂಗಳ ಹಿಂದೆ ಮಳೆರಾಯ ಹಗಲಿರುಳು
ಧಾರಿಣಿಗೆ ತನಿಮುದ್ದುಗರೆಯುತ್ತಿದ್ದ;
ಹರುಷದಾವೇಶದಲಿ ಹೊನಲು ಧುಮ್ಮಿಕ್ಕಿರಲು
ಪ್ರೇಮಗೀತಗಳೆನಿತೊ ಹಾಡುತಿದ್ದ!

೭

ಮಳೆಗಾಲವೈತರಲು ನನ್ನ ಕವಿತೆಯ ನವಿಲು
ನೂರು ಕಣ್ಣನು ತೆರೆದು ನರ್ತಿಸುವದು!
ಭಾವ ಚಾತಕ ಹೊಚ್ಚ ಹೊಸ ಮಳೆಯ ತಂಬನಿಯ
ಜೇಂಬನಿಯ ಗುಟುಕರಿಸಿ ವರ್ತಿಸುವದು!

೮

ಎಂದು ಬರುವದೊ ಕಾಲ ನನ್ನಿನಿಯ ಮಳೆಗಾಲ
ವಿರಹ ವೈಶಾಖವನು ದಾಟಬೇಕೆ?
ಏನು ಋತುರಿಂಗಣವೊ ವಿಧಿನಿಯಮದಾಳಿಕೆಯೊ
ಒಮ್ಮೆಯಾದರು ತಪ್ಪಿ ನಡೆಯದೇಕೆ?

## ಚಿರಂತನ ದಾಹ

೧

ದಿನದಿನವು ಮೂಡಣದ ಬಾನ ಕರೆಯಂಚಿನಲಿ
ಚೆಂಬೆಳಕು ಉಬ್ಬರಂಬರಿಯುತಿಹುದು;
ನೂರು ಕಾರಂಜಿಗಳು ತೆಕ್ಕನೆಯೆ ಪುಟಿದಂತೆ
ಲೋಕಲೋಕಂಗಳನು ತೊಳೆಯುತಿಹುದು.

೨

ಬೊಗಸೆಗಂಗಳ ತೆರೆದು ಮೊಗೆಮೊಗೆದು ಕುಡಿದರೂ
ಈ ಪುರಾತನ ದಾಹ ತೀರದಲ್ಲಾ!
ಏನೊ ಅಸಮಾಧಾನ ಹೃದಯಾಂತರಾಳದಲಿ
ಬಾಯ್ದೆರೆದು ಹೀರುತಿರೆ ತೃಪ್ತಿಯಿಲ್ಲ.

೩

ಬಣ್ಣ ಬಣ್ಣದ ಬೆಳಕ ಕಡಲಿನೊಡಲೊಳಗಲ್ಲಿ
ಕಲ್ಲುಸಕ್ಕರೆಯಂತೆ ಕರಗಿ ಬಿಡಲೆ?
ಇಲ್ಲಿದಿರೆ ಎಲ್ಲವನು ಒಂದೆ ಬೊಗಸೆಯೊಳಾಂತು
ಆ ಅಗಸ್ತ್ಯನ ತೆರದಿ ಕುಡಿದು ಬಿಡಲೆ?

೪

ಹೊಗೆನಟ್ಟು ಹೋಗಿರುವ ಮನದ ಮನೆ ಗೋಡೆಗಳು
ಸುಣ್ಣ ಬಣ್ಣವನೆಂದು ಕಾಣಬಹುದು?-
ಇಲ್ಲಣವು ಜೋತಿರುವ ಜೇಡಬಲೆ ನೂತಿರುವ
ಬೆಳಕಿಂಡಿಯಲಿ ಬೆಳಕದೆಂತು ಬಹುದು?

೫

ಪಂಚ ಭೂತಗಳೆಲ್ಲ ಮಾನವನ ದೇಹದಲಿ
ಹೊಂಚು ಹಾಕುತ ದಾರಿ ಕಾಯುತಿಹವು;
ಕಿಂಚಿತಾದರು ಕರುಣೆ ಕೊನರೊಡೆದು ಬಾರದಿರೆ
ಈ ಪ್ರಪಂಚವೆ ಚಿತೆಯನೇರಲಿಹುದು!

೬

ಕಿಟಕಿಗಳನರೆತೆರೆದು ಕಟಕಿಯಾಡುವ ಗಾಳಿ
ಮಾಡು ನಿನ್ನಯ ದಾಳಿ ಇಂದು ಇಂದೇ!
ಜಗದೆಲ್ಲ ಪುಷ್ಪಗಳ ಪೈರುಗಳ ಪರಿಮಳದ
ಪನ್ನೀರುಗಳನೆರೆದು ಮೀಯಿಸಿಂದೇ!

೭

ಜಗವ ತುಂಬಿದ ಬೆಳಕು ನಮಗೇಕೊ ಸಾಲದಿದೆ
ಎನಿತು ಮಾನವನೆದೆಯ ಆಳ ಅಗಲ!
ಬಂದಷ್ಟು ಇಂಗುತಿದೆ ಮತ್ತೆ ಬರಿದಾಗುತಿದೆ
ಎಷ್ಟು ಸೆಲೆಯೊಡೆದರೂ ವಿಫಲ ವಿಫಲ!

## ಬುದ್ಧೋದಯ

ಜಗದ ದುಃಖದ ಕಡಲ ಕಡೆಯಲೊಗೆತಂದ ಶಶಿ
ಕಳೆಯಂತೆ, ಬೆಳುದಿಂಗಳಿನ ಶಾಂತಿ ಮಡುಗಟ್ಟಿ
ಹರಿದಂತೆ, ಮೌನ ಗಂಭೀರತೆಯೆ ಕೆನೆಗಟ್ಟಿ
ನಿಂದಂತೆ ಬುದ್ಧಸ್ಮಿತಂ! ಕರುಣೆ ನಳನಳಿಸಿ
ದಳದಳವನರೆತೆರೆದಂತೆ ಕಣ್ಮಲರ ಕಾಂತಿ!
ಹಿಂಸಾರತಿಯ ಕೆಸರ ತೊಳೆವ ಬಿತ್ತರದ ಹಣೆ
ನಿಜದ ನೇರಕೆ ಕರೆವ ನನೆಬಾಗು ಮೂಗುತೆನೆ
ತುಟಿಗಳೆರಡೂ ಪರವ ಸೆರೆಗೈದಿರುವ ದಾಂತಿ!
ನಿದ್ದೆಯಿಂದೆದ್ದ ಮೊಗದುದ್ಬುದ್ಧ ಕಳೆಯಂತೆ
ಮುಗ್ಧ ಮಾನವ ಕೋಟಿ ಆದೆ ಮೊದಲು ಕಂಡಿರುವ
ಅಮಲ ತೇಜೋವಲಯ! ಸಿಂಪಿನಿಂದೊಗೆತರುವ
ಹೊಸತು ತತ್ತ್ವದ ಮುತ್ತು ಮನುಜ ಪುತ್ಥಳಿಯಂತೆ
ಕಂಗೊಳಿಸೆ ಬೋಧಿ ವೃಕ್ಷದಡಿ ಬುದ್ಧೋದಯಂ
ಬ್ರಹ್ಮಾಂಡಕೀಯುತಿದೆ ಶಾಂತಿ ನವನೀತಮಂ.

## "ಶ್ರೀ ಕವಿರತ್ನಂ"

ಸಾವಿರದ ಸಾಸಿರಂಬರಿಸ ಪೂರ್ವದಲಿ ಭುವ-
ನದ ಭಾಗ್ಯದಿಂ ಪುಟ್ಟಿ ಮುದುವೊಳಲ ಬಳೆಗಾರ
ಬೀರ ಕಡಗವ ತೊಟ್ಟು ಇಹಪರದ ರಸಸಾರ-
ವೆನೆ ನಿಮಿರ್ಚಿದ ಕಾವ್ಯ ರನ್ನಕೃತಿ! ಪರಿಕಿಸುವ-
ಗೆಂಟೆರ್ದೆಯೆ? ಒಂದರಲಿ ಶಾಂತ ಮತ್ತೊಂದರಲಿ
ವೀರ ರಸಮೊತ್ತರಿಸಿ ಪುಟಿಯುತಿರೆ ಚಲಕಿರಿದ
ಆ ಸುಯೋಧನನ ಘನತೆಯ ರುದ್ರನಾಟಕದ
ದೃಶ್ಯ!- ಗದೆ ಗದೆಯ ಸಂಘಟ್ಟಣೆ-ಮಹಾ ಶೈಲಿ!
ಅತ್ತಿಮಬ್ಬೆಯ ದಾನಚಿಂತಾಮಣಿಯ ಪೆಸರ-
ನುಳಿಸಿ, ರಾಯಗೆ ನಮಿಸಿ, ಪಂಪ ಪೊನ್ನರ ಕೃತಿಯ
ತಿರುಳ ಮಹಿಮೋನ್ನತಿಯ ಬಗೆ ಹೀರಿ, ಜಿನ ಸಮಯ
ದೀಪಕಂ ಒಡೆದನೊಡೆದಂ ನುಡಿಯ ಭಂಡಾರ!
ಸುಭಗದಲಿ ಎರ್ದೆಗೊಂಬ ಗಂಡುಕವಿ ಕೃತಾರ್ಥಂ
ನಿಲ್ಗೆ ನಿನ್ನಯ ಪೆಸರ್ ಚಂದ್ರತಾರಂಬರಂ!

## ಷೆಲ್ಲಿ ಕವಿಯನ್ನು ಕುರಿತು

ಘೋರ್ಗರೆವ ಕಡಲು ನಿನ್ನೊಡಲ ನುಂಗಿತೆ ಷೆಲ್ಲಿ?
"ನಿನ್ನ ಮುಳುಗಿಸಿದ ನೀರಿನ ಬಲವನೊಂದು ಕೈ
ನೋಡಿ ಬಿಡುವೆನು" ಎಂದ ಬೈರನ್-ಕವಿಯ ಸೈ!
ನೂರು ನೋವನ್ನುಂಡ ಕವಿಜೀವ ನಿನಗೆಲ್ಲಿ
ವಿಶ್ರಾಂತಿ? ಶಾಂತಿಯೆಂಬುದೆ ಭ್ರಾಂತಿ! ಚಿರಕಾವ್ಯ-
ನಂದನದ ಮಂದಾರ! ನವದೃಷ್ಟಿ ನೇತಾರ!
ನಿನ್ನಂತೆ ದಿವ್ಯಲೋಕದ ಕನಸ ಸವಿದದರ
ನನಸಿಂಗೆ ನವೆದರತಿ ವಿರಳ; ಬಗೆ ಸಂಭಾವ್ಯ,
ನಿರ್ವಿಕಾರದ ಬುದ್ಧಿ ಹೃದಯಗಳ ವಿದ್ಯುದಾ
ಲಿಂಗನಕೆ ಪ್ರೇಮವೆಂದೊರೆದೆ; ನಿನ್ನ ದುಃಖದ
ಪಾಡು ಜೇನ್ ಕರೆವ ಹಾಡು! ವಿಲಕ್ಷಣ ಜಗದ
ವಿಗುರ್ಭಣೆಗಂಜುವೆದೆ ಮನೋದೌರ್ಬಲ್ಯದಾ-
ಕಳಿಕೆ ನಿನಗಿರಲಿಲ್ಲ; ನಿನ್ನಾತ್ಮ ಶಕ್ತಿ ಖನಿ!
ನಿನ್ನ ನೆನೆದೊಡದೇಕೊ ದುಡುಗುಟ್ಟುವವು ಧಮನಿ!

## 'ಶ್ರೀ'ಯವರನ್ನು ನೆನೆದು

ಕಂನಾಡ ಬಾನಿನಲಿ ಶ್ರೀಕಾರ ಬರೆದಂತೆ
'ಶ್ರೀ' ಬೆಳ್ಳಿ ಚಿಕ್ಕೆ ಲಕಲಕಿಸಿ ಬೆಳ್ಳಂಗೆಡೆಯೆ
ನಾಡ ನಾಡಿಗಳಲ್ಲಿ ಚೈತನ್ಯ ಸೆಲೆಯೊಡೆಯೆ
ಬಾವುಟವನೆತ್ತಿ ದಿಗ್ವಿಜಯಮಂ ಪಡೆದಂತೆ
ದಂಡಯಾತ್ರೆಯ ಗೈದ ವಾಗ್ವಿಭವದುನ್ನತಿಯು!
ತುಂಬು-ವಿದ್ಯೆಯ ತುಂಬುಗಾಂಭೀರ್ಯದಲಿ ಮೆರೆದು
ಕನ್ನಡದ ಸಾರ ಸರ್ವಸ್ವ ಕಡಲಂ ಕಡೆದು
ನವನೀತಮಂ ತೆಗೆದ ಹಿರಿಗೌರವದ ಪರಿಯು.
ಥೇಮ್ಸ ನದಿ, ಕಾವೇರಿ ಸಂಗಮಿಸಿ ಹರಿಯುವೊಡೆ
ನಿಮ್ಮ ಗೀತಸ್ರೋತ! ಏನಿದಚ್ಚರಿಯೆಂದು
ಕಂದೆರೆದು ನೋಡುತಿರೆ ಆ ಪ್ರವಾಹದಿ ಮಿಂದು
"ಸಿರಿಗನ್ನಡಂ ಗೆಲ್ಗೆ!" ಎಂದು ಮುನ್ನಡೆದ ಪಡೆ!
"ಬೀಳ್ಕೊಡಿಂ" ಎನಲೇಕೆ? ಕರುಣಾಳು ಬಾ ಬೆಳಕೆ!
ಸದ್ಗುರು ಪರಂಪರೆಯ ಪುಣ್ಯ ಶ್ರೀಕಂಠಿಕೆ!

## ಗಾಂಧೀಯುಗ !

ನುಡಿಗೆ ನುಡಿಗೆ ಅಡಿಗಡಿಗೆ ಗಾಂಧಿ ಹೆಸರೆದ್ದು ನಿಲ್ಲುತಿಹುದು
ವಿಶ್ವಬಂಧು ವಿಶ್ವಾತ್ಮನೆಂದು ಜನಕೋಟಿ ನಮಿಸುತಿಹುದು;
ಲೋಕದೀಚೆ ಮುಗಿಲಂಚಿನಾಚೆ ಅವನಾತ್ಮ ತುಳುಕುತಿಹುದು
ನೇಸರುದಿಸಿ ಹೂಗಾಳಿ ಸೂಸಿ ಸಂದೇಶ ಬೀರುತಿಹವು!

ಯೇಸುಕ್ರಿಸ್ತನುತ್ಪ್ರೇಮಹಸ್ತ ಸುಸ್ತೇಜವಾಂತು ಬಂತು,
ಬುದ್ಧನೆದೆಯ ಉದ್ಬುದ್ಧನೀತಿ ಹಿಂಸೆಯನು ತಳ್ಳಿ ನಿಂತು,
ಬಸವ ನಡೆದ ನುಡಿ ದಯವೆ ಧರ್ಮಗುಡಿಗಳಸವಾಗಲಿಂತು
ಗಾಂಧಿರೂಪ ಅಪರೂಪ ದೀಪ ಭಾರತವ ಬೆಳಗಿತಿಂತು!

ಜಾತಿ ಕುಲಕೆ ದುರ್ನೀತಿ ಬಲಕೆ ನೆಲೆಯಿಲ್ಲವೆಂದು ಸಾರಿ,
ದೇವಸುತನು- ನಮ್ಮಾತ್ಮಕವನು ತನ್ನಂತರಂಗ ತೋರಿ,
ದೀನದಲಿತರುದ್ಧರಣ- ಹರಣ ಮುಡಿಪಿಟ್ಟ ದೇಹಕರಗಿ
ಯೋಗಿ ತ್ಯಾಗಿ!- ಮನಬುದ್ಧಿಮಾಗಿ ಪದಯುಗ್ಮಕೆರಗಿ ಬಾಗಿ.

'ಅವನೆ ಇಲ್ಲ ಇನ್ನುಳಿದುದಿಲ್ಲ' ವೀ ಮಾತು ನಮಗೆ ಹೊಲ್ಲ;
ಅಳಿದುದಿಲ್ಲ, ಅವನಿತ್ತ ಸೊಲ್ಲ ಜಗಜೀವಿ ಜೀವಿ ಬಲ್ಲ!
ಕರುಣೆಯೊಡಲು ಹೆಗ್ಗಡಲು ತುಂಬಿದೆದೆಯಲ್ಲು ತೇಲುತಿಹನು,
ಚೆನ್ನವಾಗಿ ಮನ ಘನ್ನವಾಗಿ ಬಾಳೆಂದು ಹರಸುತಿಹನು.

ಯಾವ ಕೈಯು ಗುಂಡಿಕ್ಕಿ ಕೊಂದೆನೆನ್ನುವದು ತೆರೆದು ತೋರು
ಅದಕೆ ಕೈಯ ಮುಗಿದಿತ್ತು ಮೈಯನೆಡೆಗೊಟ್ಟ ಪಾಪಭೀರು!
ಇದ್ದರೇನೊ ಇನ್ನಿರುವರೇನೊ ಇಂತಿಂತು ಬಾಳಿದವರು?
ಆ ಕಣ್ಣಕಾಂತಿ ನಗೆಮೊಗದ ಶಾಂತಿ ನಿಸ್ಸೀಮ ಪುರುಷರಿವರು!

ಕಣ್ಣೀರ ಕಣವನೊಡೆದೊಡೆದು ನೋಡು ಅಲ್ಲಲ್ಲಿ ಅವನ ನಿಲುವು,
ನಿಟ್ಟುಸಿರ ತೆರೆಯ ಮರೆಯಲ್ಲಿ ನಿಂತ ಆ ಮೊಗದ ಬಲವೆ ಬಲವು!
ಜಡದ ತಿರೆಯ ಹರ್ಷಾಂತ ಝುರಿಯ ನಾದದಲಿ ಅವನ ಗೆಲವು,
ನಮ್ಮ ಪಾಡು-ಬಿಡುಗಡೆಯ ಹಾಡು ಅವನಾತ್ಮ ತಳೆದ ಛಲವು!

ದಾಸ್ಯನೊಗವ ಕಿತ್ತೊಗೆದ ಯುಗವ ನಿರ್ಮಿಸಿದ ಸಹನೆ ಬಲ್ಪು
ಹಗೆಯ ತಿದ್ದಿ ಜನಮನವ ಮಿದ್ದಿ ನವಸೃಷ್ಟಿಗೈದ ಬಾಪು!
ಹೊಸತು ಯುಗವು ಜಯ ಗಾಂಧಿ ಯುಗವು! ಇನ್ನಾವುದಿದಕೆ ಸೊಗವು
ಭರತಮಾತೆ ಹೆಸರಿಡುವಳಿದಕೆ ಯುಗವಿದುವೆ ಗಾಂಧಿ ಯುಗವು!

## ಭಾರತಕುಲಾವತಂಸ

೧

ಕಾಲಪುರುಷಗು ಧೈರ್ಯ ಸಾಲದಾಯಿತು ಇಂದು
ನಿನ್ನ ಕೊಂಡೊಯ್ಯುವೊಡೆ ಕೈ ನಡುಗಿತು;
ಉಕ್ಕಿನೆದೆ ಬಂಟನಿಗು ಕಂಟಕವನೊಡ್ಡುವರೆ
ಕವಡುಗಂಟಕ ವಿಧಿಯ ಎದೆಯುಡುಗಿತು!

೨

ಭಾರತವಿಯತ್ತಳದಿ ವೈರಿಬಲದೆದುರಿನಲಿ
ಗುಡುಗು ಹಾಕಿದ ಗಂಡುಗಲಿಯು ನೀನು
'ವೀರ ವಲ್ಲಭಭಾಯಿ ನಾಡಗುಡಿಯನು ಕಾಯಿ'
ಎಂದು ಮೊರೆದವು ಎಲ್ಲ ಗಿರಿಯ ಸಾನು!

೩

ಇಂದಾರ ಕೇಳುವದು ಎಂದು ವಿಹ್ವಲಗೊಂಡು
ನೈರಾಶ್ಯದಲಿ ನಿಂದು ಭರತಮಾತೆ
ಅಷ್ಟ ದಿಗ್ಗಜಗಳಿಗೆ ಹಂಬಲಿಸಿ ಕೈಚಾಚಿ
ಅರಸುತಿಹಳಾ ತಾಯಿ ಶೋಕಭರಿತೆ.

೪

ಭರತಭೂಮಿಯ ದಂಡೆಗಪ್ಪಳಿಸುತಿಹವಿಂದು
ಶೋಕಸಾಗರದೆದೆಯ ಬಲ್ದೆರೆಗಳು-
ಒಂದಾದರಿನ್ನೊಂದು ಬರುವ ವಜ್ರಾಘಾತ-
ಕೀಡಾಗಿ ನರಳುತಿದೆ ಜನದ ಬಾಳು.

೫

ಧೀರ ಜವಹರ ಕೂಡ ಮಗುವಾಗಿ ಮರುಗಿಹನು
ನಮ್ಮ ಪಾಡನು ಬೇರೆ ತೋಡಬೇಕೆ?
ನೋಡನೋಡುತ ಬಂಡೆಗಲ್ಲಿಗಪ್ಪಳಿಸುತಿರೆ
ಉರುಳಿ ಹೊರಳಾಡದೆಯೆ ರಾಷ್ಟ್ರನೌಕೆ?

೬

ನ್ಯಾಯನಿಷ್ಠುರ ಧರ್ಮದಸ್ತಿವಾರದಿ ರಾಜ್ಯ
ರಂಗವನು ನಿರ್ಮಿಸಿದ ಚತುರ ನೀನು,
ರಾಜಕೀಯಕು ಸಾಜಮಾದ ತೇಜವ ತಂದ
ವೀರವಿಲಸತ್ಪ್ರಭೆಯ ದಿವ್ಯ ಭಾನು!

೭

ರಾಜ್ಯ ಸಾಮ್ರಾಜ್ಯಗಳ ಗಳಿಸಿ ಉರುಳಿಸಬಹುದು
ನಾಡಕಟ್ಟುವ ಚಮತ್ಕೃತಿಯೆ ಬೇರೆ,
ಪರಪೀಡೆಗೆಡೆಗೊಡದೆ ಸ್ವಾರಾಜ್ಯಕಣಿಗೊಂಡ
ಸೇನಾಧಿಪತ್ಯವದು ದೊಡ್ಡ ಹೋರೆ.

೮

ಈವರೆಗು ಬಾಗದೆಯೆ ನಾಡ ಕಾಪಾಡಿದೊಲು
ಎದೆಗೊಟ್ಟು ನಿಲ್ಲುವೊಲು ನಮ್ಮ ಹೆಮ್ಮೆ
ಸಾಹಸಕೆ ಅನುಗೊಳಿಸು ಬೀಸು ದೋರ್ದಂಡವನು
ಮತ್ತೆ ಮಾರ್ಮೊಳಗಲಿದೆ ನಾಡ ಹಿರಿಮೆ.

೯

ಆ ಮಹಾತ್ಮನ ಸತ್ಯ ರತ್ನದೀವಿಗೆ ಹಿಡಿದು
ನಾಡನೆಮ್ಮದಿಗೊಳಿಸಿದಮರ ವ್ಯಕ್ತಿ-
ದಿಟ್ಟತನದೀ ಅಟ್ಟಹಾಸದಲಿ ಮೆರೆದ ಛಲ
ಎಂದಿಗೂ ಕಾಪಿಡಲಿ ಭೀಮಶಕ್ತಿ!

೧೦

ವೀರಭಾರತ ಕುಲಾವತಂಸನವ, ಬಲ್ಲಿದರ
ಬಲ್ಲಹಂ, ನಾಳ್ಗಾಹಿ ಶ್ರೇಯಾಂಶಿತ-
ಅವನ ಮೇಲ್ಮೆಯನರಿತು ನಾಡನುನ್ನತಿಗೊಳಿಪ
ಕೈದೀಪವಾಗು ಓ ಅಧಿದೈವತ!

## ಶ್ರೀ ಅರವಿಂದ ಮಹರ್ಷಿ

ಓಂ! ತಮೋಹಾರಿ ಜ್ಯೋತಿರ್ಮೂರ್ತಿ ಚಿಚ್ಛಕ್ತಿ
ಚಿತ್ತಪಶ್ಯಕ್ತಿಯಿಂ ಯೋಗಸಾಧನೆಗೈದ
ಅಧ್ಯಾತ್ಮದುನ್ನತಿಯನಂತರಾಳದಿ ಪಡೆದ
ಪರಮ ಭಗವನ್ಮುಕ್ತ, ಲೋಕತಾರಕ ಶಕ್ತಿ!
ಜೀವನ ಸರೋವರದಿ ದೈವತ್ವದರವಿಂದ-
ವರಳಿಸಿದ ದಿವ್ಯ ಜೀವನದಮರ ದಾರ್ಶನಿಕ
ಸರ್ವಾರ್ಪಣಂ ಬಲಿದ ಸಿದ್ಧಿ ಅತಿಮಾನಸಿಕ
ಪೂರ್ಣ ತೇಜೋವೃದ್ಧಿ; ತವನಿಧಿಯ ಮಕರಂದ
ಕಾವ್ಯ ಕುಸುಮದಿ ಕನತ್ಕನಕ ಕಾಂತಿಯ ಬೀರಿ
ಸ್ವೋಜ್ವಲಂ ಮೆರೆದತ್ತು; ಭರತ ಭೂಮಿಯಪಾರ
ಸಂಸ್ಕೃತಿಯ ಬಿಂಬಿಸುತ ಜಗದೆಲ್ಲ ಮಾನವರ
ಕಲ್ಯಾಣಕೀ ಬೆಳಕು ತೋರಲಿಹ ಹೆದ್ದಾರಿ.
ಸಾವಡಸಿತೆಂಬುವರೆ?- ಅದು ನಮ್ಮಲ್ಪ ವಿದ್ಯೆ;
ವ್ಯಕ್ತಿತೆಯುಳಿದ ಭೂಮಾತ್ಮಕಿದು ಯೋಗನಿದ್ರೆ.

## ಸಾವ ಗೆದ್ದಿಹ ಬದುಕು

ತುಂಬಿ ಹರಿಯುವ ಹೊಳೆಗೆ ತುಂಬಿ ಬಂದಿತು ಗಳಿಗೆ!
ಗಿರಿಯ ಗಂಭೀರತೆಯ ಹೀರಿ ನೆರೆ ನಾಡುಗಳ
ಕಾಡುಗಳನಲೆದು ತತ್ವಾಮೃತದ ಶಾಖೆಗಳ
ಕೊಂಡು ಸಾಗಿತು ಶಾಂತಿ ಜ್ಞಾನ ಸಿಂಧುವಿನೆಡೆಗೆ.
ಮೆಲುನಗೆಯ ಕಲಕಲ ನಿನಾದದಲಿ ಬಗೆ ತಣಿಸಿ
ನಿರ್ಮಲೋದಕದಾಳಕಿಳಿದು ಎದೆ ಕನ್ನಡಿಸಿ
ಜೀವನ ರಸಾಯನವ ನೀಡಿ ನೆಲಫಲಗೊಳಿಸಿ
ಧನ್ಯವೆನಿಸಿದೆ ನಾಡಿನಳ್ಕರೆಗೆ, - 'ತತ್ತ್ವಮಸಿ'.
ಸರಸ ಸಜ್ಜನಿಕೆಯನು ಹಿರಿಯರಿಮೆ ಗರಿಮೆಯನು

ತುಂಬಿದನುಭವದೊಂದು ತೇಜೋವಿಲಾಸವನು
ಕಂಡು ಕೈಮುಗಿದಿರುವ ಮಲ್ಲಿಗೆಯ ಮೊಗ್ಗೆಯೊಲು
ಮೆಲ್ಲನೆಯೆ ಎದೆಯ ಪೊದೆಯಲ್ಲರಳಿ ನಿಂದುದನು
ನಮ್ರಭಾವದಿ ಮುಡಿಸಿ ನನ್ನೊಳೆ ಮೌನವಾಂತೆ
ಸಾವ ಗೆದ್ದಿಹ ಬದುಕು ನಿಚ್ಚ ಪರಿಮಳವಲ್ತೆ?

## ಬಸವನಾಳರಿಗೆ ಬಾಷ್ಪಾಂಜಲಿ

ಸಂಜೆಯಾಯಿತು; ಬಾನಬಾಳಿಗೆ ಮಂಜು ಕವಿಯಿತು ಒಮ್ಮೆಲೆ!
ಕಣ್ಣುಮುಚ್ಚುತ ತಣ್ಣಗಾದನು ರವಿಯು; ಬಳಸಿತು ಕತ್ತಲೆ.
ಚಿಲ್ಲನೆಯೆ ಚಳಿಗಾಳಿ ಕೊರೆಯಿತು ನಂಜಿನಂತಹ ವಾರ್ತೆಯ;
ಕನ್ನಡದ ಜೇಂಗೊಡವ ಕದ್ದರು ಸುರರು, - ನಾಡಿನ ಬುತ್ತಿಯ.

"ಇಲ್ಲವಾದರೆ ಇನ್ನು?" ಎಂಬೀ ಸುದ್ದಿ ಹದ್ದಿನ ತೆರದಲಿ
ಎರಗಿ ಬಡಿಯಿತು ನಾಡಸಂತಸ ಕಬಳಿಸಿತು ಆತುರದಲಿ
ಕೇಳಬಹುದೇ ನಮ್ಮ ಕಿವಿಗಳು? ತಾಳಬಹುದೇ ನಮ್ಮೆದೆ?
ತುಂಬಿರುವ ಕೊಡ ತುಳುಕಿತೆಂಬರೆ ಸಲ್ಲುವೆಡೆ ತಾ ಸಂದಿದೆ.

ಏನು ಬಂದಿರಿ ಹದುಳವಿದ್ದಿರಿ ನಾಲ್ಕು ದಿನ ಇರಲಾಗದೆ?
ಏನಿದವಸರ ಕಟ್ಟಿಕೊಂಡಿರಿ ಹೊರಟು ನಿಂತಿರಿ ಆಗಲೆ?
ಬಳಗದಾತಿಥ್ಯವನು ಬಯಸದೆ ಹೊಸತಿಲಾಚೆಗೆ ನಿಂತಿರಾ!
ನೆನಸಿದರೆ ಕನಸಿನಲಿ ಬರುವೊಲು ಮತ್ತೆ ಇಲ್ಲಿಗೆ ಬರುವಿರಾ?

ಅತಿಥಿಯಾಗಿಯೆ ಬಂದವರು ಎಲ್ಲರಿಗು ಮನೆಯವರಾದಿರೇ
'ಇವನು ಆರವನಾರು?' ಎನಿಸದೆ 'ಇವನು ಎಮ್ಮವ'ನೆನಿಸಿರೆ;
ಸಾಗರದ ಗಾಂಭೀರ್ಯ ತಂಗೊಳದಮೃತಶಾಂತಿಯು ನಕ್ಕರೆ
ಹಾಲು ಜೇನೂ ಬೆರಸಿದೊಲು ಸೌಜನ್ಯ, ಹಿರಿಮೆಯೊಳಕ್ಕರೆ.

ನಡೆದು ಬಂದರೆ ಬೆಳ್ಳಿ ಬೆಟ್ಟವೆ ನಡೆಯ ಕಲಿತುದೊ ಎನುವೊಲು
ನುಡಿದು ಹೋದರೆ ತುಂಬುಹೊಳೆ ಸಮನೆಲದಿ ಹರಿಯುವ ತೆರದೊಳು
ನಡೆನುಡಿಯ ಕೊಂಡಾಡಿ ಲಿಂಗವೆ ಮೆಚ್ಚಿ ಅಹುದಹುದೆಂದಿತು
'ಇಲ್ಲಿ ಸಲ್ಲುವರಲ್ಲಿ ಸಲ್ಲುವ'ರೆಂಬ ಸೊಲ್ಲೇ ಸಂದಿತು.

ಕನ್ನಡದ ಹೊಂದೇರನೆಳೆದಿರಿ ಸಂಸ್ಕೃತಿಯ ಚೈತನ್ಯದಿ
ನಾಲ್ಕು ಗಾಲಿಯು ಭದ್ರವಾಗಿವೆ ಸಾಗಿರೆಂದಿರಿ ಮೌನದಿ.
'ಮೂಲೆಯಲ್ಲಿಯೆ ಕುಳಿತು ಮುದುಡುವ ಮೂಳನಿಗೆ ಜಗವಿಲ್ಲವು
ಮುಂದೆ ಬನ್ನಿರಿ' ಎಂದು ಕರೆದಿರಿ ನೂರು ಕೈ ತೇರಳೆದವು.

ಹೊಂಗಳಸ ಕಂಗೊಳಿಸೆ ಹೂವಿನ ಗೊಂಚಗೊಂಚಲು ತೂಗಿರೆ
ದಾರಿ ದಾರಿಗೆ ಮುಗ್ಧ ಕೈಗಳು ಬೆಳಕಿನಾರತಿ ಎತ್ತಿರೆ
ಹಣ್ಣನೊಗೆದರು ಕಾಯಿಯೊಡೆದರು ಕಪ್ಪುರವು ಪರಿಮಳಿಸಿತು
ಇಂತು ಕನ್ನಡ ಚೆನ್ನಪೊಂಗರ ಚೆಲುವರೆದೆ ಹಿರಿಹಿಗ್ಗಿತು!

ತೇರು ಪಾಜೆಯಗಟ್ಟೆ ಮುಟ್ಟುವ ಮೊದಲೆ ಎದೆ ನೋವಾಯಿತೆ?
'ಸೇವೆ ಸಂದಿತು ಓಂ ಶಿವಾರ್ಪಣ' ಮೆಂದು ಮೈ ಕೈ ಮುಗಿಯಿತೆ?
ಶಾಂತಿಯೋಂಕಾರದಲಿ ಹಾಗೆಯೆ ಮುಚ್ಚಿಬಿಟ್ಟರ ಕಂಗಳ?
ಆದಿ ಮಂಗಳ ಮಧ್ಯ ಮಂಗಳ ಅಂತ್ಯ ಮಂಗಳ ಮಂಗಳ!

ತೆರೆಯಲಿಲ್ಲವೆ ಕಣ್ಣು? ತುಟಿಗಳು ಒರೆಯಲಿಲ್ಲವೆ ಏನನೂ?
ಒರಗಿದರು ಮತ್ತೇಳಲಿಲ್ಲವೆ? ಚಾಚಲಿಲ್ಲವೆ ಕೈಯನು?
ಮೂಡಲಿಲ್ಲವೆ ಮುಗುಳುನಗೆ? ಓ! ಮಿಡಿಯಲಿಲ್ಲವೆ ನಾಡಿಯು?
ಆರು ಬಗೆದರು ಇದುವೆ ಕೊನೆಯೆಂದಾರು ತಿಳಿಯದ ಮೋಡಿಯು!

ಎಂಥ ನಿದ್ದೆಯೊ, ಯೋಗಮುದ್ರೆಯ ಧರಿಸಿ ನಿಂತಿರುವಂತಿದೆ!
ಬಾಳು ಪರಿಣತಗೊಂಡ ಆ ತನಿವಣ್ಣಿನರ್ಪಣದಂತಿದೆ.
'ಕರುಣೆ ಬಾರದೆ ಶಿವನೆ?' - ಭಕ್ತರ ಭಜನೆಯಂತಿದು ಸಾಗಿದೆ
ಇಂಥ ಹೂವಿನ ಸಾವ ಮೊದಲೇ ಪಡೆದು ಬಂದಿರುವಂತಿದೆ.

ನಂಬಿ ನಡೆದರು, ನಂಬಿ ಕರೆದರು ತುಂಬು ಬಸವನ ಬಿಂಬವ
ಸಮರತಿಯ ಸಮಕಳೆಯ ಸಮಸುಖ ಸ್ವಾನುಭಾವದ ಸೂತ್ರವ
ಮಾಡುವಾತನು ನೀಡುವಾತನು ಬೇಡುವಾತನು ಬೇರೆಯೆ!
ಸಕಲ ನಿಷ್ಕಲ ಕೂಡಿಕೊಂಡಿರೆ ಎಲ್ಲವೂ ಅದರಲ್ಲಿಯೆ.

ಕನ್ನಡದ ಸುರಧೇನು ಕರೆದಿದೆ ತುಂಬು ಬಿಂದಿಗೆ ಹಾಲನು
ಕುಡಿದು ಬಲಗೊಳಿ ಬಂಧುಗಳೆ, ಮಾರ್ನುಡಿಯಬೇಡಿರಿ ನೋವನು.
ಕಾದ ಹಾಲಿಗೆ ಹೆಪ್ಪನೆರೆವುದು ತುಪ್ಪವಾಗಲಿಕೆಂದೆಯೆ
ಕೆಟ್ಟಿತೆನ್ನುವ ಭ್ರಾಂತಿಯಳಿಯಲಿ ಭಾವಶುದ್ಧಿಯು ಇಲ್ಲಿಯೆ!

ನಮ್ಮ ಕೊರತೆಯ ನೆನೆದು ದುಃಖಿಸುವಂಥ ಸಣ್ಣೆದೆ ನಮ್ಮದು
ಕಾಯಕದಿ ಕಾಯವನು ಸವೆಸಿದ ತುಂಬುಜೀವನವವರದು.
'ಮಾಡಿದೆನು' ಎಂಬತಿಶಯದ ಅಳಿಗಾಳಿ ಸೋಕದ ಆತ್ಮನೆ!
'ತನಗೆ ಬೇಕೆಂದೆತ್ತಿಕೊಂಡನು' ಇಂದು ಆ ಪರಮಾತ್ಮನೆ!

ನಿಚ್ಚವೂ ಶಿವರಾತ್ರಿ; ಪೂಜೆಗೆ ಅಚ್ಚಮಲ್ಲಿಗೆ ಒದಗಿತು.
ಹಚ್ಚ ಹಸುರಿನ ಬನದಿ ಕೋಗಿಲೆ 'ಶಿವ ಶಿವಾ' ಎಂದುಲಿಯಿತು.
ಪೂರ್ಣಮಲ್ಲಿಯು ಪೂರ್ಣಮಿಲ್ಲಿಯು ಪುಣ್ಯ ಪೂರ್ಣದೊಳುದಿಸಿತು
ಪೂರ್ಣದಲ್ಲಿಯೆ ಪೂರ್ಣಮಾಗುತ ಪೂರ್ಣತೆಯೊಳೊಂದಾಯಿತು.

## ಚರಮಗೀತೆ

ಇರುಳು ಹೊರಳಿತು ಜೀವ ನರಳಿತು ಕತ್ತಲೆಯೆ ಚೀರಿಟ್ಟಿತು
ಏನ ಬಯಸಿದರೇನಿದಾಯಿತು - ಆಗಬಾರದುದಾಯಿತು;
ವಿಷಮ ಬಾಳಿಗೆ ವಿಷಮಜ್ವರವೇ ಹೊಂಚು ಹಾಕಿತು ಹಿಂಡಿತು
ಮಾನವನ ಇಷ್ಟಾರ್ಥ ಶಕ್ತಿಗು ಯುಕ್ತಿಗೂ ಕೈಮೀರಿತು.

ನಡುವರಯದಲ್ಲಿಂತು ಝುಂಝಾವಾತವೇತಕೆ ಬೀಸಿತೊ
ಬಾಳಗಿಡ ಬುಡಮುಟ್ಟವಲುಗಿತು ಬೇರ್ವೆರಸಿ ಅಡಗೆಡೆಯಿತು
ಚಿಗುರು ಹೂ ಮಿಡಿ ಸಿಡಿದು ಚೆಲ್ಲಾಪಿಲ್ಲಿಯಾಯಿತು ಗೊಂಚಲು
ಎಂಥ ಗಂಡೆದೆಯಾದರೂ ತಲೆದಂಡ ವಿಧಿಗೆತ್ತೆತ್ತಲು!

ಜೀವ ಜೀವಕೆ ಬೆಸೆದುಕೊಂಡಿದ್ದವಗೆ ಕರುಣಾಮೂರ್ತಿಗೆ
'ಮೂಜಗಕೆ ಮಾದರಿಯು ನಮ್ಮೀ ಒಲವು' ಎನ್ನುವ ಜೀವಿಗೆ
ಇಂತು ಕೊನೆಯೇ ಶಿವಶಿವಾ! ಇನ್ನೆಂತು ಬದುಕುವ ರೀತಿಯು?
ಇದ್ದಕಿದ್ದೊಲೆ ಇಲ್ಲವೆನಿಪುದೆ ವಿಧಿಯ ನಿಷ್ಠುರ ನೀತಿಯು!

'ನನ್ನವರು ನನ್ನವರು ಎಲ್ಲರು' ಎಂಬುದೊಂದೇ ಚಿಂತನೆ
ಪರಹಿತದಿ ಪರಮಾತ್ಮನನ್ನೇ ಕಂಡು ಕೊಂಡಾಡಿದನೆನೆ
ತನ್ನ ಅಳಲಿಕೆ ತನ್ನ ಬಳಲಿಕೆ ಒಂದನಾದರು ನೆನೆಯದೆ
ಒಳಗೆ ಒಳಗೇ ನುಂಗಿ ನಗುತಿರಲಯ್ಯೊ ಮಿಂಚಿದೆ ಮೀರಿದೆ!

ಹೊರಗೆ ಹೋದರೆ, ಒಳಗೆ ಬಂದರೆ ನೀನೆ ನೀನೇ ಬಳಿಯಿರೆ
ಯಾವ ಪುಣ್ಯದ ಫಲವೊ ಸ್ನೇಹವು ನಮ್ಮ ಚಿರಬದುಕಾಗಿರೆ
ಎಂಥ ನೋವಿಗು ನರಳಿಕೆಗು ಗೆಳೆತನವೆ ತೈಲವನೆರೆಯಿತು
ಬಾಳಿನುದ್ದಕು ಅಮೃತವಾಹಿನಿ ಎದೆಗೆದೆಯ ಸಂಗಮಿಸಿತು.

ನಿನ್ನ ಹೃದಯದ ದೊಡ್ಡಿತೆಗೆ ನಮ್ರತೆಗೆ ಘನ ಔದಾರ್ಯಕೆ
ಕವಡು ಹೊದ್ದದ, ಕೃತಕವರಿಯದ ಮುಗ್ಧ ಮನ ಮಾಧುರ್ಯಕೆ
ಏನು ಕೊಟ್ಟರು ತೀರದಯ್ಯೊ ಏನು ಕೊಟ್ಟರು ಬಾರದು!
ಪರಮ ಪ್ರೀತಿಗೆ ಪ್ರೀತಿಯೇ ಪ್ರತಿಫಲವು ಉಳಿದುದು ಸಲ್ಲದು.

ಒಂದೆ, ಎರಡೇ? ಗಣನೆಗರಿಯದು ನೀನು ಮಾಡಿದ ಉಪಕೃತಿ
ಹಾಡಿಕೊಂಡರು ತೋಡಿಕೊಂಡರು ಮರೆಯಲಾಗದ ಸಂಸ್ಕೃತಿ.
ಅಳಿಯಲಾರದು ಜೀವಜೀವಾಳದಲಿ ಜಿನುಗುವ ಝೇಂಕೃತಿ
ನೆನಹು ಗಂಧದ ಕರಡಿಗೆಯು ಮತ್ತದುವೆ ಚಿನುಮಯ ಮೂರುತಿ.

'ಈಗ ಇಲ್ಲಿಯೆ ಹೋಗಿ ಬರುವೆನು' ಎಂದು ಹೊರವಂಟಂತೆಯೆ
ದೂರ ದೂರದ ದಾರಿಯನು ನೀ ಹಿಡಿದು ಸಾಗಿದೆ ಅಂತೆಯೆ;
ಮರಳಿ ಬಾರದ ಭಾಗ್ಯವೇ ಇಂತಾಡಿಸಿತು ಏಡಿಸಿತಲಾ!
ಬಾಳು ಬಿತ್ತರಗೊಂಡ ನೀಲಾಂಬುಧಿಯ ತೆರೆಗೈ ಚೆಂಡಲಾ!

ಆಗ ಇದ್ದವನೀಗ ಇಲ್ಲೆನೆ ಬಾಯಿ ಬರದಂತಾಗಿದೆ
ಬಪ್ಪುದೆಲ್ಲವು ತಪ್ಪದೆಂದರು ಮನಕೆ ಒಪ್ಪದೆ ಹೋಗಿದೆ.
ನೆನೆಯಲೊಡನೆಯೆ ಧುಮುಧುಮಿಸಿ ದುಡುಕುವವು ಧಮನಿಯು ಧಮನಿಯು
ಜೀವರತ್ನವ ಕಳೆದುಕೊಂಡವರಂತೆ ಹುಡುಕುವೆ ಮೌನಿಯು.

ಸಂಜೆ ಮುಂಜಾವಿನಲಿ ಕೂಡಿಯೆ ಬೆಟ್ಟ ಬನಗಳನಲೆದೆವು
ಸೃಷ್ಟಿಹೃದಯದ ರೂಪರಸಗಂಧದಲಿ ನಮ್ಮನೆ ಮರೆದೆವು;
ಒಂದು ಚಿಕ್ಕೆಯೆ ಚಂದಿರನೆ ಕಿರುಮೋಡ ಬಣ್ಣದ ಹಕ್ಕಿಯೆ-
ಎಲ್ಲವೆಲ್ಲವು ಶೋಕಗೀತೆಯೊಳೇಕವಾಗಿಹವಿಲ್ಲಿಯೆ.

ನಾನು ಎಲ್ಲೋ ತೊದಲು ನುಡಿದರೆ ಅದನೆ ಕವಿತೆಯ ಮಾಡಿದೆ
ನಿನ್ನ ಮಹದನುಭೂತಿಯಲ್ಲಿಯೆ ನನ್ನ ಕಲ್ಪನೆ ಆಡಿದೆ.
ಎಲೆಯನುದುರಿಸಿ ಕೊಂಬೆಯಲಿ ಹಿಡಿ ಹೂವು ತಳೆದಿಹ ಕಣಗಿಲೆ
ಅಂತೆ ನಿನ್ನಯ ಬದುಕು; ಸ್ವಾರ್ಥದ ಸೊಗಡು ಹೊದ್ದದ ಚಿತ್ಕಳೆ.

ಸಾಕು ಸೂರ್ಯೋದಯವು ಚಂದ್ರೋದಯವು ನಿನ್ನಯ ನೆನಪಿಗೆ
ನಾಕದಲ್ಲಿಹ ಆತ್ಮಗಳ ಚೆಲ್ವೆಳಕು ಬೀರುವವಿಂದಿಗೆ-
ಅವರಿವರ ನಡೆನುಡಿಗಳಲ್ಲಿಯೆ ನಿನ್ನ ಭಂಗಿಯ ಕಾಣುತ
ನೀನೆ ಮೈವೆತ್ತಂತೆ ಭ್ರಾಂತಿಯೊಳಿರುವೆ ಮಮ್ಮಲ ಮರುಗುತ.

ಕಣ್ಣೆನರೆಬೆಳಕನ್ನು ಮುನ್ನವೆ ಕದ್ದ ಕಾಲಗೆ ಮತ್ಸರ
ಜಗಕೆ ಅರೆಗುರುಡಾಗಿ ಬಾಳುವೆನೆಂಬ ಚಿಂತೆಯ ಬೆಂತರ
ಇರವಿನಾಸೆಯ ಹಿಂಗಿಸಿತೆ, ನುಂಗಿಸಿತೆ ಜಗದಾನಂದವ?
ಒಂದು ಕೊಟ್ಟೊಂದನ್ನು ಕಸಿವುದು ಅವನ ನಿತ್ಯದ ಕೈತವ.

ತ್ಯಾಗಮಯ ಜೀವನಕೆ ಇದ್ದುದರಲ್ಲೆ ಒಂದಿನಿತಾದರೂ
ಶಾಂತಿ ದೊರೆವುದೆ? ದೊರೆವುದೆನ್ನಲು ಎಲ್ಲೊ ಅವರಿವರೊಬ್ಬರು-
ಅವರ ಬಾಳೇ ಕೃತಿಯು; ಪ್ರತಿಕೃತಿ ಕವಿಯ ಪ್ರತಿಮಾ ಸೃಷ್ಟಿಯು
ತನ್ನ ಪಾಲಿನ ಭಾಗ್ಯವನು ಹಲವರಿಗೆ ಹಂಚುವ ದೃಷ್ಟಿಯು.

ಹೆತ್ತ ಹೊಟ್ಟೆಯು ಕಕ್ಕುಳಂಗುದಿಕುದಿಯೆ ಬಿಸಿಗಂಬನಿಯಲಿ
ಆರು ಸಂತಯಿಸುವರು ಗೆಳೆಯಾ ತಾಯ ಕರುಳೇ ಬೆಂಬಳಿ,
ಅಕ್ಕರೆಯ ಸಕ್ಕರೆಯ ಸವಿಯೂಡಿಸುವ ಅಂತಃಕರಣವು
ಕರಗಿ ಕಂಬನಿಯಾಗಿ ಹರಿದರು ತಾಪಕಿಲ್ಲವೊ ಶಮನವು!

ಚಿಕ್ಕ ಮಕ್ಕಳ ಮಾತಿನಿಂದಾ ದುಃಖ ಮರುಕಳಿಸುತ್ತಿರೆ
ಕರುಳು ಕಿತ್ತೆಸೆದಂತೆ, ಜೀವಕೆ ಅರೆಮರುಳು ಬಡಿದಂತಿರೆ
ಅಂತು ಇಂತೂ ಅಳಲಬುತ್ತಿಯೆ ಜೀವನದ ಸೌಭಾಗ್ಯವೆ?
ಬಡಿದುಕೊಂಡರು ಬುದ್ಬುದವೆ ನಮ್ಮಾಯುಸಿನ ಸಾಫಲ್ಯವೆ?

ಜಾನಪದ ಜೀವನವನರಗಿಸಿಕೊಂಡು ಕೊನೆದಿಹ ಸತ್ಕವಿ
ಲೋಕಗೀತಕೆ ಮಾರುವೋಗಿರೆ ಮನಕೆ ಬಂದಿತೆ ಜೇನ್-ಸವಿ?
ಹಾಡು ಕೂಡಿಸಲೆಂದು ಓಡಿದೆ ಬೇಡಿ ಜನತಾ ಹೃದಯವ
ಯಾವ ತೃಪ್ತಿಯೊ ನಿನಗೆ ಹನಿ ಹನಿ ಹೀರಿಕೊಂಡಿರೆ ಸಾರವ!

ನಾಡ ತಿರುಗಿದನಂದು ಗುಡುಗಾಡಿದನು ಕವಿ ಸರ್ವಜ್ಞನು
ಕರದಿ ಕಪ್ಪರವಿಡಿದು ಕಂಬಳಿ ಹೊದೆದು ಜೀವನ ತೆಯ್ದನು.
'ಭವತಿ ಭಿಕ್ಷಾಂದೇಹಿ' ಕವಿಗಳ ಮಂತ್ರವೆಂದನು ಮುದ್ದಣ
ಅಶ್ವಮೇಧವೆ, ವಿಶ್ವಮೇಧವೆ - ಕವಿಗೆ ಕಂಬನಿ ಕಂಕಣ!

ಅರಿವು ಪಾರಾಯಣವ ನಡಸಿದೆ ಸಾವು ಮೀರಿದ ಸತ್ಯದ
ಇರವು ಬಂದುದ ಮೆಟ್ಟಿ ನಿಂದಿದೆ ತುತ್ತತುದಿಯಲಿ ಕರ್ಮದ!
ಜೀವ ಕೋಟಾಕೋಟಿ ಕೋಟಲೆಗೊಂಡರಿಲ್ಲವೊ ಬೆಂಬಲ
ನರನ ದುಃಖವು ನರಗೆ, ಹರನಿಗೆ ಮೂರು ಕಣ್ಣೂ ನಿಷ್ಫಲ!

ಕಣ್ಮರೆಯು ಮಣ್ಮರೆಯು ದೇಹವು ಎಂದು ತತ್ವವು ಸಾರಲಿ
ಇಂದೊ ನಾಳೆಯೊ ನಮ್ಮ ಪಾಲೂ ಸಲ್ಲುವದು ಎಂದೆನ್ನಲಿ,
ಆದರಾ ಚೈತನ್ಯಜೀವನದರ್ಶವಿಲ್ಲಿಯೆ ಉಳಿವುದು
ಒಳಿತಿನೊಡಲಲಿ ಮೊಳೆತು ಬೆಳ್ಜಸವಾಂತು ಬಳೆವುದು ಹೊಳೆವುದು.

ಶಿವಶಿವೇಶ್ವರ ನಿನ್ನ ರೂಪವೆ ನನ್ನ ಕಣ್ಣಲಿ ತುಂಬಿದೆ
ನಿನ್ನ ನೆನಹಿನ ಜೇನಿಗೆನ್ನಯ ಮನದ ಮೊನೆಯಲಿ ಇಂಬಿದೆ.
ಅಳಿದನೆಂದವರಾರು ಚಿಃ ನಮ್ಮಚ್ಚುಮೆಚ್ಚಿನ ಮೂರುತಿ
ಎದೆಯ ಹೊಂಬಟ್ಟಲಲಿ ಇದಿಗೋ ಬಾಷ್ಪಬಿಂದುವಿನಾರತಿ!

ನಿನ್ನ ಪ್ರೀತಿಯ ಹೂವು ಮಲ್ಲಿಗೆ ಚೆಲು ಗುಲಾಬಿಗಳಿಲ್ಲಿವೆ
ಸ್ನೇಹ ಸೌಗಂಧವನು ಹರಡಿವೆ ತೀಡುವೆಲರಿಗೆ ನೀಡಿವೆ.
ನಡುಗುತಿಹ ಪಕಳೆಯಲಿ ಮೌನದಿ ಬಾಷ್ಪದಂಜಲಿ ಪಿಡಿದಿವೆ
ಶಾಂತಿಪೊಂದಲಿ ಆತ್ಮ, ಓಂ ಶಿವ ಭಾವಚಿಂತಾರತ್ನವೆ!

## ಬೆಳಕು

ಬೆಳಕೆ! ಓ ನನ್ನ ಬೆಳಕೆ!
ಜಗವನೆಲ್ಲವ ತುಂಬಿ ತುಳುಕುತಿಹ ಬೆಳಕೆ!
ಕಂಗಳಾಲಯ ತುಂಬಿ ಚುಂಬಿಸುವ ಬೆಳಕೆ!
ಎದೆಯ ಇನಿದಾಗಿಸುವ ಚೆನ್ನ ಬೆಳಕೆ!

ಓ! ಬೆಳಕು ಕುಣಿಯುತಿದೆ ನನ್ನ ಬಾಳಿನ ಮಧ್ಯ
ರಂಗದಲಿ; ಮುದ್ದಿನ ಕಣಿ,
ನನ್ನ ಒಲವಿನ ತಂತಿಯನ್ನೆ ಮೀಟುತ್ತಿಹುದು
ಆ ಬೆಳಕು; ನನ್ನರಗಿಣಿ.
ಬಾನು ಬಗೆ ತೆರೆಯುತಿದೆ
ಗಾಳಿ ಹರಿದೋಡುತಿದೆ
ನಗೆ ಸಾಗಿ ಹೋಗುತಿದೆ ಬುವಿಯ ಮೇಲೆ!

ಎನಿತೊ ಬಣ್ಣದ ಚಿಟ್ಟೆ ಬೆಳಕಿನಾ ಕಡಲಲ್ಲಿ
ಹಾಯಿಗಳ ಹರಹುತಿಹವು,
ಬೆಳಕಿನ ತರಂಗಗಳ ಅಂಚಿನಲಿ ತೇಲುತಿವೆ
ನೈದಿಲೆಯು ಜಾಜಿ ಹೂವು.

ಮೋಡ ಮೋಡಗಳಲ್ಲಿ ಬೆಳಕು ಬಂಗಾರ -ಹುಡಿ,
ರತ್ನಗಳ ಸುರಿಸುತಿಹುದು;
ಎಲೆಯಿಂದ ಎಲೆಗೆ ಸಲೆ ಉಲ್ಲಾಸವಲೆಯುತಿದೆ
ಸಂತೋಷ ಮಿಳಿರುತಿಹುದು.
ಸ್ವರ್ಗದಲಿ ಹರಿವ ನದಿ ಮೇರೆದಪ್ಪುತ ತನ್ನ
ಆನಂದಪೂರದಲಿ ಮುಳುಗಿಸಿಹುದು.

-"Geetanjali" 53

## ಸಾಮರಸ್ಯ

ಹೃದಯದರವಿಂದವೇ ಮನದ ಮಂದಾರವೇ
ಒಳುಗುಂದದಮಲ ಸೌರಭಸಾರವೆ!
ಅರಳಿರುವ ದಲದಲದಿ ನಿನ್ನ ಪದತಲವಿರಿಸಿ
ಚಿತ್ತೈಸು ನನ್ನೊಲವೆ ನನ್ನ ಬಲವೆ!

ತೆಳ್ಳತೆಳ್ಳನೆ ತೀಡಿ ಮೆಲ್ಲಮೆಲ್ಲನೆ ಹಾಡಿ
ಒಯ್ಯನೊಯ್ಯನೆ ಒಲಿವ ತಂಗಾಳಿಯು
ನಿನ್ನುಸಿರ ನರುಗಂಪು ನಿಚ್ಚಪ್ರಸಾದವದು
ಪ್ರಣವನಾದವಗ್ಗೈವ ಭೃಂಗಾಳಿಯು!

ಹಾಲು ಬೆಳದಿಂಗಳಿನ ಕೆನೆಯ ರುಚಿ ನೋಡಿದೊಲು
ಮನದ ಮೊನೆಯಲಿ ನಿನ್ನ ಹೆಸರ ಕುಸುರು;
ತಳಿರ ಚೊಂಪದ ಮರೆಗೆ ಕೋಗಿಲೆಯು ಹಾಡಿದೊಲು
ಸಾಧನಾರಾಧನೆಯೆ ಜೀವದುಸಿರು.

ಸೂರ್ಯಕಾಂತದ ಶಿಲೆಗೆ ಕಿರಣ ಕೇಂದ್ರೀಕರಣ
ಮನಸಿನೇಕಾಗ್ರತೆಯೆ ಚಿಜ್ಯೋತಿಯು;
ಶಾಂತ ಕಾಂತಿಯ ತಳೆದ ಕಣ್ಣೆ ಜ್ಯೋತಿರ್ಲಿಂಗ
ಅಂತರಂಗವನಂತ ಗರ್ಭಗುಡಿಯು.

ಧ್ಯಾನ ಮನನದ ವಾಣಿ ವೀಣಾ ವಿತಾನದಲಿ
ಜೀವ ತಳೆಯುವ ಭಾವಗೀತೆಯಂತೆ;
ಒಂದು ಬೆಳಕಿನ ಕಿರಣ ನೂರೊಂದು ದಲಗಳನು
ಪುಲಕಿಸುತ ಪಾವನತೆ ಬೀರುವಂತೆ.

ಅಲ್ಲಿಂದ ಇಲ್ಲಿಂದ ಎಲ್ಲಿಂದಲೂ ಬರಲಿ
ಬಂದುದೆಲ್ಲವು ನಿನ್ನ ಬೆಳಕಿನಂದ
ಅನುಭವವು ಅನುಭಾವವಾಗಿ ಜೀವನ ಮಾಗಿ
ಹೂವಾಗಿ ಹರಡಿರಲಿ ಆ ಸುಗಂಧ!

ನಿಲುವುಗನ್ನಡಿ ನೋಡಿ ತಿದ್ದಿ ತೀಡುವ ಯುವತಿ
ತನ್ನ ಚೆಲುವಿಗೆ ತಾನೆ ನಲಿಯುವಂತೆ
ಶಬ್ದಮುಕುರದಿ ಕವಿಯು ತನ್ನತನವನು ಕಂಡು
ಮುಗ್ಧ ಕಾವ್ಯಾನಂದ ಪಡೆಯುವಂತೆ,

ಎಲ್ಲೆಲ್ಲಿಯೂ ನಿನ್ನ ಇರವಿನನುಭವ ಬಂದು
ಒಳಗು ಹೊರಗೂ ಸಾಮರಸ್ಯ ನಿಂದು
ಎತ್ತ ಬಿದ್ದರು ನಿನ್ನ ಅಂಕಪರ್ಯಂಕದೊಳೆ
ತಳ್ಳಂಕಗೊಳ್ಳದಿಹ ಯೋಗವೆಂದು?



# ಮಧುಚಂದ್ರ

೧೯೫೩-೧೯೫೪

## ಮಧುಚಂದ್ರ

ಬಾ ಮಲ್ಲಿಗೆ
ಬಾ ಮೆಲ್ಲಗೆ
ನನ್ನೆದೆ ಮೆಲ್ವಾಸಿಗೆ
ಇಳೆಗಿಳಿದಿದೆ
ಬೆಳುದಿಂಗಳು
ನಮ್ಮೊಲುಮೆಯ ಕರೆಗೆ!

ಚೆಲುವಾಗಿದೆ
ಬನವೆಲ್ಲವು
ಗೆಲುವಾಗಿದೆ ಮನವು;
ಉಸಿರುಸಿರಿಗು
ತಂಪೆರಚಿದೆ
ನಿನ್ನೆದೆ ಪರಿಮಳವು.

ತಿಂಗಳ ತನಿ-
ವೆಳಕಲಿ ಮೈ-
ದೊಳೆದಿಹ ಮನದನ್ನೆ!
ಮಂಗಳವೀ

ಮನೆಯಂಗಳ
ಚೆಂಗಲವೆಯ ಚೆನ್ನೆ.

ಹಿತವಾಗಿದೆ
ಮೆಲ್ಲೆಲರುಲಿ
ಮಿತವಾಗಿದೆ ಮೌನ;
ಜೊತೆಗೂಡುತ
ಮಾತಾಡಿವೆ
ಅರೆನಿದ್ದೆಯೊಳೇನ?

ಲೋಕದ ಮೈ-
ನೋವಿಗೆ ಶ್ರೀ-
ಗಂಧದ ತನಿಲೇಪ;
ಆಕಾಶದ
ಗುಡಿಯಿಂದಲೆ
ಹೊರಸೂಸಿದೆ ಧೂಪ.

ಒಳಿತೆಲ್ಲವು
ಬೆಳಕಾಯಿತು
ಬಾನ್‌ಕರೆಯಿತು ಜೇನು;
ಆನಂದದ
ಕಡಲಾಳದಿ
ನಾವಾದೆವೆ ಮೀನು.

ಎವೆಯಿಕ್ಕದೆ
ಮಿನುಗುತ್ತಿವೆ
ಚಿಕ್ಕೆಯ ಹನಿದೀಪ
ತಮ್ಮಿಷ್ಟಕೆ
ಜಾನಿಸುತಿವೆ
ಯಾವುದೊ ಸವಿನೆನಪ.

ಬಾ ಮಲ್ಲಿಗೆ
ಬಾ ಮೆಲ್ಲಗೆ
ನನ್ನೆದೆ ಮೆಲ್ವಾಸಿಗೆ-
ಇಳೆಗಿಳಿದಿದೆ
ಬೆಳುದಿಂಗಳು
ನಮ್ಮೊಲುಮೆಯ ಕರೆಗೆ!

## ಚೆಂಗುಲಾಬಿ

ಚೆಂಗುಲಾಬಿಯ ಮೊಗ್ಗೆ ಅರುಣನೆಡೆ ಮೊಗವಿರಿಸಿ
ಚೆಂದುಟಿಯನರೆತೆರೆದು ನೋಂಪಿಯಲ್ಲಿ-
ಸಕ್ಕರೆಯ ನಿದ್ದೆಯಲಿ ಸವಿಗನಸ ಕಾಣುತಿದೆ
ಚದುರನೈತಹನೆಂಬ ಹಂಬಲದಲಿ!

ನವುರಾದ ಪಕಳೆಯಲಿ ಕುಂಕುಮ ಪರಾಗವಿದೆ
ಎದೆಯಲ್ಲಿ ಸೌರಭದ ಸೂಸುಗಿಂಡಿ,
ಮೈತುಂಬ ಒಳುಗುಂದದಮಲ ಸುರುಚಿರ ಕಾಂತಿ
ಚೆನ್ನೆಯರ ಕೆನ್ನೆಗಳ ರಾಗಬಂಧಿ!

ಮೆಲ್ಲೆಲರು ಮೈದಡವಿ ಗಲಿಸಿ ಗಲ್ಲವ ಸವರಿ
ಸಾಗುತಿರೆ ನಸುನಾಚಿ ಹಿಂದಿನಿಂದ
ರಸಿಕ ಭೃಂಗವು ಬಂದು ಕಿವಿಮಾತನುಸುರುತಿರೆ
ಸವಿ ಹಾಡಿಗೊಲಿಯುತಿಹ ಮಧುರ ಬಂಧ.

ಜೇನುಂಡ ಕಾದಲನು ಬಳಸಿ ಬಳಿಯಲಿ ಸುಳಿದು
ಅಡಿ ಹಾರಾಡುತಿರೆ ಹೂವ ರಮಿಸಿ,
ಒಲಿದ ಮನಕೊಲಿದ ಎದೆ ಎರಡು ಒಂದಾಗಿರಲು
ಹಾಡುತಿದೆ ಗಾಳಿಗೂ ಗುಂಗು ಹಿಡಿಸಿ!

ಅಲ್ಲಲ್ಲಿ ಬಳುಕುತಿಹ ಬಳ್ಳಿಗಳ ಗೊಂಚಲಲಿ
ಹೂಗಳೆನಿತರಳಿಹವು, ಆದರೇನು
ಈ ಗುಲಾಬಿಯ ಬಣ್ಣ, ಕಣ್ಣ ತಣ್ಣನೆ ಬಿಂಬ
ಕೋಮಲತೆ ಒಲುಮೆಗಿದು ತವರು ಜೇನು!

ಹೂವಿನಂತಹ ಹುಡುಗಿ ಈ ಹೂವ ಮುಡಿಯುವಳೆ-
ಹೂವು ಪಡೆದಿಹುದೇನು ಅಂಥ ಭಾಗ್ಯ?
ಕಾಮುಕರ ಕಣ್ಣೆಂಜಲಾಗದಿಹ ಮೀಸಲದ
ಹೂವವಳ ಮುಡಿಯಲ್ಲಿ ಇಹುದೆ ಯೋಗ್ಯ.

## ಈ ಮಲ್ಲಿಗೆ ಈ ಗುಲಾಬಿ. . .!

ಈ ಮಲ್ಲಿಗೆ ಈ ಗುಲಾಬಿ
ಚೆಲುವಿನೆರಡು ಕಣ್ಣು-ಗೊಂಬಿ!
ರಾಗದಾ ಪರಾಗ ತುಂಬಿ
ಬದುಕು ಬಣ್ಣ ಪಡೆಯಿತೆಂಬಿ-
ನಸುಕು ತುಟಿಯ ತೆರಿದಿದೆ
ಜೀವರಸನವನೆರೆದಿದೆ!

ಸ್ವರ್ಣಕಿರಣದರುಣ ಕಂದ
ಈ ಸುಗಂಧದಲ್ಲಿ ಮಿಂದ;
ಗಾಳಿ ತೀಡೆ ಮಂದ ಮಂದ
ಆನಂದವೊ ಅನಿರ್ಬಂಧ
ಹೂವಿನಂತೆ ನುಣ್ಣಗೆ-
ಕಂಡ ಕಣ್ಣು ತಣ್ಣಗೆ-

ಮಡಿಯನುಟ್ಟ ಮೆಲ್ಲಿತೆಲರು
ನೆಲದ ಗಲ್ಲ ಮುಟ್ಟೆ ಹಸುರು
ನಿಮಿರಿ ನಿಂತ ಕಲಾಕುಸುರು!
ಇಳೆಗಿಳಿದರೆ ಬಾನಿನವರು
ಮಂಜು ಹನಿಯ ರೂಪದಿ?
ಅಪ್ಸರೆಯರು ಶಾಪದಿ!

ಕಣ್ಣ ಬೆಳಕ ಕಣ್ಣು ಕುಡಿದು
ಹೃದಯದಂತರಾಳಕಿಳಿದು
ಒಲವಿನಗ್ನಿಕುಂಡದಲ್ಲಿ
ಕರಗಿ ಮಿರುಗಿ ಹೊಮ್ಮಿತಿಲ್ಲಿ
ಉಷಃಕಾಲದಾರತಿ
ಚೈತನ್ಯದ ಪ್ರದ್ಯುತಿ!

ಈ ಪ್ರಶಾಂತ ಕಾಲದಲ್ಲಿ
ಮೌನವೀಣೆ ಮಿಡಿವುದಿಲ್ಲಿ,
ಈ ಮಹಾಂತ ಧಾಮದಲ್ಲಿ
ಸ್ವರ್ಗ ಭಿಕ್ಷೆ ಬೇಡಿತಿಲ್ಲಿ
ಇಲ್ಲಿ ಎಲ್ಲ ಪ್ರೀತವು.
ಮಾತು ಕೂಡ ಗೀತವು!

ಬಂತು ತುಂಬಿ ಗಾನ ತುಳುಕಿ,
ಬಂತು ಚಿಟ್ಟೆ ಬಣ್ಣ ಸೋಕಿ;
ಒಂದು ಜೇನು ಹನಿಯ ಹುಡುಕಿ
ಒಂದು ಬಣ್ಣಕಾಗಿ ಬೆದಕಿ-
　　ಭೃಂಗ ಗುಂಗು ಹಿಡಿಸಿತೋ!
　　ಚಿಟ್ಟೆ ನೃತ್ಯವಾಡಿತು.

ಎಲೆ ಮಲ್ಲಿಗೆ, ಚೆಲು ಗುಲಾಬಿ
ಬಾರ ಚಿಟ್ಟೆ, ಬಾರ ತುಂಬಿ
ಮನದ ತುಂಗ ಶೃಂಗದಲ್ಲಿ
ಎನ್ನ ಹೃದಯ ರಂಗದಲ್ಲಿ
ದ್ವೈತವಿರದ ಕೂಟದಲ್ಲಿ
ಆತ್ಮನಮರ ತೋಟದಲ್ಲಿ
ಸದಾನಂದದೂಟೆಯಲ್ಲಿ
　　ಹಾಡಿ ನೃತ್ಯವಾಡಿರೇ
　　ಚಿರಂಜೀವಿಯಾಗಿರಿ.

## ಗಿರಿಗಿರಿ ಗಿಂಡಿ

೧

ಗಿರಿಗಿರಿ ಗಿಂಡಿ
ಇಬತ್ತಿ ಉಂಡಿ
ಸಂಜೆಯ ಗಾಳಿ
ತಂಪೊಳು ತೇಲಿ
ಗರಿಗರಿ ಮೋಡ
ಬಾನಿನ ಕೂಡ
ಮೈಮರೆತೋಟ
ಚಕ್ಕಂದಾಟ;
ಬಣ್ಣದ ಹಕ್ಕಿ
ಕೊರಳಲ್ಲುಕ್ಕಿ
ಸುವ್ವೀ ಚವ್ವಿ
ಹಾಡಿದೆ 'ಟುವ್ವಿ',
ಬನ ಬನದಲ್ಲಿ

ಮನ ಮನದಲ್ಲಿ
ಸಂತಸ ಬೀರಿ
ಹಾಡಿನ ಲಹರಿ
ಮೆಲ್ಲಗೆ ನಿಂತಿ
ಬಾರೇ ಗೆಳತಿ.
ಗಿರಿಗಿರಿ ಗಿಂಡಿ
ಇಬತ್ತಿ ಉಂಡಿ.

೨

ಬಗಾಟ ಬಗರಿ
ತಿರುಗುವ ತಿಗರಿ
ತೆಂಗಿನ ಚವರಿ
ಗಾಳಿ ಸವಾರಿ
ಹಿತ್ತಲದಲ್ಲಿ
ಕುಂಬಳ ಬಳ್ಳಿ
ಅಂಗಳದಲ್ಲಿ
ಹೂ ಗಿಡಬಳ್ಳಿ
ಮುಂಗಡೆಯಲ್ಲಿ
ಬೇಲಿಯ ಕಳ್ಳಿ
ಬಳಿಯಲಿ ಸುಳಿದು
ಬೇಸರ ಕಳೆದು
ಪಾತರಗಿತ್ತಿ
ಪಕ್ಕಾಹತ್ತಿ
ಮೈಕೈ ತುಂಬ
ಹೂ ಮಕರಂದ
ಮಂಜಿನ ಹನಿಯ
ಮುತ್ತಿನ ತೆನಿಯ
ಹುಲ್ಲಿನ ವಸತಿ
ಕುಸುಮ ಕಸೂತಿ
ಕಾಮನ ಬಿಲ್ಲ
ಮೂಡಿಹುದಲ್ಲ!
ರೇಶಿಮೆ ಅಂಚ
ಮಿರಿ ಮಿರಿ ಮಿಂಚ

ಬಣ್ಣದ ಕುಂಚ
ಯಾರದು ಹೊಂಚ?
ಬಲಗೈ ತಾರ
ಎಡಗೈ ತಾರ
ಗಿರಿಗಿರಿ ಗಿಂಡಿ
ಇಬತ್ತಿ ಉಂಡಿ.

೩

ಕಂಬಕಂಬಾಟ
ನಿಂಬಿಯ ತೋಟ
ನವಿಲಿನ ಓಟ
ತಕಥೈ ಥಾಟ
ಗೆಳೆತಿಯರೆಲ್ಲ
ಬಂದಾರೇನ
ಮಲ್ಲಿಗೆ ಹೂವ
ಮುಡಿದಾರೇನ
ಗುಲಾಬಿ ಲಂಗ
ಉಟ್ಟಾರೇನ
ನೀಲಿ ಪೋಲಕ
ತೊಟ್ಟಾರೇನ
ನತ್ತು ಬುಗುಡಿ
ಇಟ್ಟಾರೇನ
ಚಿನ್ನದ ಬಳೆಗೆ
ಅತ್ತಾರೇನ?
ಬಾರೇ ಗೆಳತಿ
ನನ ಬಂಗಾರಿ
ವಸಂತ ಕಾಲದ
ಸಿರಿ ಸಿಂಗಾರಿ
ಮಾವಿನ ತಳಿರು
ಹುಣಿಸೆಯ ಚಿಗುರು
ಗಾಳಿಯ ಸುಳಿಗೆ
ಕುಣಿತದ ಕರೆಗೆ

ತಲೆಯನು ತೂಗಿ
ಮನಕಿಂಬಾಗಿ
ರವದೆಯ ಪೀಪಿ
ಊದುವದೇನ
ಹರುಷದ ಕೇಕಿ
ಹಾಕುವದೇನ?
ಗಿರಿಗಿರಿ ಗಿಂಡಿ
ಇಬತ್ತಿ ಉಂಡಿ.

೪

ನಗೆ ಮೊಗದಲ್ಲಿ
ಹರುಷದ ಬಳ್ಳಿ
ಕೋಮಲವೆನಿಸಿ
ರಾಗವ ರಚಿಸಿ
ತುಟಿಯಲಿ ಚಿಗುರಿ
ಗಲ್ಲದಲರಳಿ
ಕುರುಳಲಿ ಹೊರಳಿ
ಜಡೆಯಲಿ ತೂಗಿ
ಬಿಂಕದಿ ಬೀಗಿ
ನಿರಿ ಚೆಲ್ಲಾಟ
ಕೋಗಿಲೆ ಕುಕಿಲು
ತೆರೆ ಚಿನ್ನಾಟ;
ದಿನದಿನಕೊಂದು
ಹೊಸತನ ಬಂದು
ಸೆರಗನು ಹೊಚ್ಚಿ
ಕಣ್ಣವೆ ಮುಚ್ಚಿ
ತೆರೆ ತೆರೆವಂತೆ
ಚೆಲುವಿನ ಸಂತೆ!
ಕಣ್ಣಿನ ತುಂಬ
ಕನಸಿನ ಬಿಂಬ
ಜೀವದ ಗೆಳತಿ
ಒಲಿವಿನ ಒರತಿ
ಇತತ್ತ ಬಾರ

ಇದಿರಿಗೆ ಬಾರ
ಬಲಗೈ ತಾರ
ಎಡಗೈ ತಾರ
ಗಿರಿಗಿರಿ ಗಿಂಡಿ
ಇಬತ್ತಿ ಉಂಡಿ.

## ಅಶ್ರುತಗಾನ

ಎಂದೊ ಗುಡುಗಿದ ಧ್ವನಿಯನಿಂದಿಗೂ ಹಿಡಿದಿಟ್ಟು
ಅಂಬರ ಮೃದಂಗವನು ನುಡಿಸಲೊಡರಿಸಿದಂತೆ
ಧಿಮಿಧಿಮಿಕು ಧುಮುಕು ತತ್ಧೊಂಗ ದುಂಧುಮ್ಮೆಂದು
ಬಾನತುಂಬೆಲ್ಲ ನಿಶ್ಶಬ್ದ ಶಬ್ದಾಂಬೋಧಿ;
ಥಳಥಳಿಪ ಸೂರ್ಯಚಂದ್ರರು ತಾಳದೋಪಾದಿ!
ಗೆಜ್ಜೆಗೊಂಚಲು ಜಲಕ್ಕನೆ ಜಗುಳಿ ಸೂರೆಯಾ-
ದೊಲು ಪಳಚ್ಚನೆ ಮಿಂಚಿ ಚಿಕ್ಕೆ ನಡುನಡುಗುತಿರೆ
ಟಿಂವಕ್ಕಿ ಟೀಟಿಟಿಂವ್ ದಿಗ್ದಿಗಂತಕೆ ಹಬ್ಬಿ
ಎಲ್ಲೊ ಮರೆಯಾಗುತಿರೆ, ಕಂಕಣದ ಕಿಂಕಿಣೀ-
ಝುಂಕೃತವನೊಡವೆರಸಿ ಸಣ್ಣನೆಯ ಸೇವಿಗೆಯ
ಎಳೆಯ ಹೊಸೆ ಹೊಸೆದಂತೆ, ಬಿದಿರ ಮೆಳೆಯಲಿ
ಗಾಳಿ ಕೊಳಲ ಬಾರಿಸಿದಂತೆ ಹೃದ್ವೀಣೆಯಲಿ ಯಾರೊ
ಬೆರಳನಾಡಿಸುತಿಹರು! ಬೆಳದಿಂಗಳಲಿ ಕರಗಿ
ಒಗುಮಿಗುವ ತಮ್ಮ ಗಾನವ ತಾವೆ ಕುಡಿದಿಹರು.

## ನೆನಹು-ನಲ್ಗನಸು

ಏಕೊ ಏಕಾಂತದಲಿ ಏಕಾಕಿಯಾಗಿರಲು
ಮೂಕ ಶೋಕದ ಚಿತ್ರ ಕಣ್ಣ ತಾಗಿ,
ಮನದ ನೀರವ ಬಾನ ನಡುವೆ ಬಣ್ಣದ ಮೋಡ
ಸುಳಿದು ನುಸುಳುವದಯ್ಯ ದೀನವಾಗಿ.

ನೆಲದ ಸುಂಟರಗಾಳಿ ತುಂಟತನದಲಿ ದಾಳಿ-
ಯಿಡಲು ಚದುರಿದ ಮೋಡ ದಿಕ್ಕುಪಾಲು!
ಒಳಗಣ್ಣ ತಿಳಿನೋಟ ಮಸಳಿ ಕಸವಿಸಿಗೊಳಲು
ಹೊರಗಣ್ಣಿನಂಚಿನಲಿ ಕಂಬನಿಗಳು.

ಜೇನುಹನಿ ಹನಿಯಾಗಿ ಹರಿವುದೊಲವು
ನೆನಹಿನಲಿ ಜೀವನವು ಮಧುರತರವು;
ಮನವನಿಮ್ಮೈಗೊಂಡು ರಂಜಿಪಂತೆ
ನೆನಹು ನಲ್ಲನಸಲ್ತೆ? ಅಂತೆ, ಉಂತೆ.

## ಮಿಲನ

ಎರಡೆದೆಗಳು ತುಡಿಯುತ್ತಿವೆ ಪ್ರೇಮಾಂಬುಧಿಗೆಳಸಿ
ಆ ಗಂಗಾ ಯಮುನೆಯರೊಲು ಚಿರ ಸಂಗಮ ಬಯಸಿ

ನಡುದಾರಿಗೆ ಅಡ್ಡೈಸಿವೆ ಗುಡುಗಾಡಿವೆ ಮುಗಿಲು
ಹೆಡೆಯೆತ್ತುತ ಪೂತ್ಕರಿಸಿದೆ ಬಿರುಗಾಳಿಯ ಹುಯಿಲು.

ನಿಡು ಬಯಕೆಯ ಹಿಂದೂಡಿರೆ ಹರಿಗಡಿಸಿರೆ ಸೋಲು
ಗಿರಿದರಿಗಳು ಅಪ್ಪಳಿಸಿರೆ ತಿರುಗಣಿಯೊಲು ಹೊನಲು!

ಕಟ್ಟಳೆಗಳ ಕಟ್ಟೊಡೆಯುವೆ ಸ್ವಚ್ಛಂದದಿ ನಲಿವೆ-
ಎನ್ನುತ ಹಿರಿಯೊಲವಿನ ಝರಿ ಹರಿದಿರಲೇಗೈವೆ?

ಸವಿಯೊಲುಮೆಗೆ ರಂಗೆರಚಿದೆ ಬಾಂಬಿಲ್ಲಿನ ಬಣ್ಣ
ಮುಂಬಾಳಿಗೆ ಬಾಂಬಟ್ಟೆಯು ತೆರೆದಂತಿದೆ ಕಣ್ಣ!

ಬಾನವರನು ಬಿಟ್ಟೋಡುತ ಮಾನವರೆದೆ ಸೇರಿ
ವಿದ್ಯುನ್ನಟಿ ಇಳೆಗಿಳಿದಳೊ ಮಿಂಚಿನ ನಗೆ ಬೀರಿ!

ಹೆಣ್ಣಿನ ಕಣ್ಣಂಚಿನಲಿದೆ ಕಡೆಗಾಣದ ಆಶೆ
ಆ ಕಾಂತಿಯೆ ತಾರಾಪಥದೆಡೆಗೊಯ್ಯುವದೈಸೆ?

ಸವಿಸೊಲ್ಲಿಗೆ ನಗೆಮಲ್ಲಿಗೆ ಸಖಿ ಜೀವದ ಕಾಣ್ಕೆ
ರೋಮಾಂಚನ ಪಡೆದಂತಿದೆ ಹಸಿರುಟ್ಟಿಹ ನೆಲಕೆ!

ಪಂಜರದಲಿ ಅಗವಟ್ಟಿಹ ಗಿಳಿಗೆಲ್ಲಿದೆ ತ್ರಾಣ?
ಪಕ್ಕದಲಿಹ ರೆಕ್ಕೆಗಳಲಿ ಬಿಕ್ಕಳಿಸಿದೆ ಪ್ರಾಣ!

ಬಾನಾಡಿಯ ನುಣ್‌ಗೊರಲಿಗೆ ಗುಡಿಗಟ್ಟಿವೆ ದಿಕ್ಕು
ಎದೆ ಗೂಡಿನ ಗೆಡೆವಕ್ಕಿಗೆ ಬಹುದೆಂದಿಗೆ ಉಕ್ಕು?

ಓ ಎಂದಿಗೆ! ಇನ್ನೆಂದಿಗೆ ನೋಂತರ ಸಮ್ಮಿಲನ?
ಹೊಸಬಾಳಿನ ಹೊಸಹಾಡಿಗೆ ರಸಮಯ ಸಂಸ್ಕರಣ?

## ನಲ್ಮೆ

"ನಿನ್ನೆದೆಯೆ ಜೇನ ನೀಡುವ ನಲ್ಮೆಯಿಂದೆನ್ನ
ಒಲಿಸಿ ಮೀಸಲು ನಗೆಯ ಸೂಸಿ ಕರೆದೆ;
ಇಂದೇಕೆ ಮೊಗಬಾಡಿ ವಿಹ್ವಲ ವಿಕಾರದಲಿ
ನಿಂದಿರುವೆ ಚೆಂದುಳ್ಳ ಮಧುರ ಹೂವೆ?"

"ಬೇರೊಂದು ದುರುದುಂಬಿ ಕೆಟ್ಟಗಾಳಿಯ ಸುಳಿಗೆ
ಬಂದೆನ್ನ ಬಲುಮೆಯಲಿ ಬಲಿಗೊಂಡಿತು;
ಅಯ್ಯೊ ಆ ವಿಷನಿಮಿಷ! ಮೈಯೆಲ್ಲ ಉರಿಯುತಿದೆ
ಅಬಲೆಯೆಂದೆನೆ- ಸಾವು ಬೇಕಾಯಿತು!"

ತುಂಬಿ ಮೊರೆಯಿತು ಮರೆಯಲಾರೆನೆಂದು
ನೊಂದ ಹೂ ಕಳಚಿತ್ತು ಎದೆಯು ಬೆಂದು;
ಗಾಳಿ ಗೋಳಿಡೆ ಹಾಡೆ ಚರಮಗೀತ
ಮುಗಿಲ ಹೆಗಲೇರಿ ಸಾಗಿತ್ತು ಪ್ರೇತ!

## ನವೋದಯ

ಮೂಡಣದ ಕೋಡಿಯೊಡೆಯಿತು, ಬೆಳಕು ಹರಿಯಿತಿಗೊ
ದೈವ ತೆರೆಯಿತು ಜಗದ ಜನದ ಮನದ!
ಉಷೆಯು ತಲೆಬಾಚಿ ನಸುನಾಚಿ ಕೆಂಪೇರಿಹಳು
ಬಣ್ಣನೆಗೆ ಬಾರದಿದೆ ಮೊಗದ ಬಿನದ
ವಿಶ್ವವೀಣಾವಾಣಿ ಹಕ್ಕಿ ನಿನದ!

ಆದುದಾಯಿತು ಹಿಂದು, ಶುಭ ನವೋದಯವಿಂದು
ಕಾರಿರುಳ ಕುರುಡಿಂಗೆ ಕಣ್ಣು ಬಂತು!
ಅರುಣನುದಯಕೆ ಕರುಣೆ ಕೊನರಿ ದಾಂಗುಡಿಯಿಟ್ಟು
ಹೂವಿನಲಿ ದೈವಿಕತೆ ಕರುವಿಟ್ಟಿತು!
ಜೀವದೇವರ ಮಿಲನ ಝೇಂಕರಿಸಿತು!

ಎದೆಯ ಮೆಲ್ಹಾಸಿನಲಿ ಕಲ್ಪನೆಯ ತಲ್ಪದಲಿ
ನಿದ್ರೆಗೈದಿಹ ನನ್ನ ಮುದ್ದು ಹಕ್ಕಿ!
ಆಗಲಿ ಕೂಡುವ ಸುಖವ ನೆಚ್ಚಿ ಹಾರಿಸಿದೆನಿದೊ
ನೀಲದಲಿ ತೇಲಾಡು ಪ್ರಾಣಪಕ್ಷಿ!
ಪ್ರೇಮದೌದಾರ್ಯವಿದು, ಆತ್ಮಸಾಕ್ಷಿ.

## ಒಂದು ಪುಟ್ಟ ಹಕ್ಕಿಗೆ

೧

ಚಿಟ್ಟ ಗುಬ್ಬಿ ಪುಟ್ಟಗುಬ್ಬಿ
ಮುಳ್ಳು ಬೇಲಿಯನ್ನು ತಬ್ಬಿ
ಚೀರಿ ಚೀರಿ ಗಂಟಲುಬ್ಬಿ-
ಒಡೆಯುವಂತೆ ಹಾಡಿತು;

ಕೇಳಲಿಲ್ಲ ಜಗದ ಕಿವಿ
ನೋಡಲಿಲ್ಲ ಬಾನ ರವಿ
ನೀನಾದರು ಬಾರೊ ಕವಿ
ಎಂದು ಅಂಗಲಾಚಿತು;

ಹಗಲು ದಿಗಿಲುಗೊಳಿಸುತಿರಲಿ
ಸುಗ್ಗಿ ಹೋಗಿ ಮಾಗಿ ಬರಲಿ
'ಟಿವೂ ಟಿವೂ' ಎಂದು ಒರಲಿ
ಕೊರಗಿ ಸಣ್ಣಗಾಯಿತು;

ತೆನೆಯ ಹಾಲುಗಾಳನುಳಿದು
ಗಗನ ಗಮನವನ್ನು ಹಳಿದು
ಗೂಡಿನಲ್ಲಿ ಮೌನ ತಳೆದು
ರೆಕ್ಕೆ ಮುದುರಿ ಕುಳಿತಿತು.

೨

ಏಕೆ ಇಂತು ಉದಾಸೀನ
(ಸದಾಶಿವನಿಗದೇ ಧ್ಯಾನ)
ನಿನ್ನ ಬಾಳಿಗಾವ ಊನ
        ಹೇಳು ಪುಟ್ಟ ಹಕ್ಕಿಯೆ?

ಜಗವಪಾರ ನಾದಧುನಿ
ನಿನ್ನ ಧ್ವನಿಯದೊಂದು ಹನಿ
ಅದನೆ ಹಾಡಿ ಹಾಡಿ ತಣಿ
        ವಿಶ್ವವೀಣೆ ತಂತಿಯೆ.

ಜನತೆಯೊಂದು ಮೂಢ ಸಂತೆ
ಕಲಹ ಕಪಟ ಕಂತೆ ಕಂತೆ
ನಿನಗೇತಕೆ ಅದರ ಚಿಂತೆ
        ಮುನ್ನಿನಂತೆ ನೀನಿರು;

ಬೆಳಕಿನೆಡೆಗೆ ಕಣ್ಣ ತೆರೆ
ಜಗವ ಕಾವನೊಬ್ಬ ದೊರೆ
ಒಪ್ಪಿಸವನಿಗೆಲ್ಲ ಹೊರೆ
        ನಿನ್ನಷ್ಟಕೆ ಹಾಡಿರು.

## ಮತ್ತೊಂದು ಪುಟ್ಟ ಹಕ್ಕಿಗೆ

ಎಲ್ಲಿಂದ ಬಂದೆ ನೀ ನನ್ನ ಮುದ್ದಿನ ಹಕ್ಕಿ?
        ಹದುಳವೆನ್ನುವ ಮೊದಲೆ ಹಾರಬೇಡ;
ಒಂದು ಚಣವಾದರೂ ನನ್ನ ಬಳಿಯಲಿ ಕುಳಿತು
        ಕುಶಲ ವಾರ್ತೆಯ ನಾಲ್ಕು ಮಾತನಾಡ.

ಎಂದಾದರೊಂದು ದಿನ ಅಂದಚೆಂದಕೆ ಬರುವೆ
        ನೋಡನೋಡುತ ಪಕ್ಕ ಬೀಸಿ ಬಿಡುವೆ;
ನನ್ನ ಹೃದಯದ ಮಾತು ಹೃದಯದಲ್ಲಿಯೆ ಉಳಿಯೆ-
        ಒಲವು ನಲವಿಗೆ ಸಂಚಕಾರ ಕೊಡುವೆ.

ನಿನ್ನ ಹಾಡಿನ ಮುಂದೆ ನನ್ನದೇತರ ಪಾಡು-
ನನ್ನ ಹಾಡಿಗು ನನಗು ಜನ್ಮಗಂಟು!
ನೀ ಕಂಡ ಬನದಲ್ಲಿ ಬಾನಿನಲಿ ಕಾನಿನಲಿ
ಇವಕು ಮೀರಿದ ಬೇರೆ ಭಾವವುಂಟು.

ನಿನ್ನ ಧ್ವನಿ ಸ್ವಚ್ಛಂದ ಆನಂದದುಕ್ಕಂದ
ಹೊಚ್ಚ ಹೊಸ ಮಳೆಯ ತನಿ ಸೆಳಕಿನಂತೆ;
ಹಚ್ಚ ಹಸುರಿನ ಬನದಿ ಗಿರಿಶಿಖರದಿಂದುರುಳಿ
ಹರಿವ ನದಿಯಲಿ ನಾದ ತುಳುಕಿದಂತೆ.

ಪುಟ್ಟ ಹಕ್ಕಿಯ ಇಂಥ ಪುಟ್ಟ ಎದೆಯೊಳದೆಂತು
ಗಾನಚಿಲುಮೆಯು ತಾನೆ ಚಿಮ್ಮುತಿಹುದೊ!
ಇಳೆಯ ಬಾಳಿನ ಸಾರಸರ್ವಸ್ವ ಸುಧೆಯೆಲ್ಲ
ಹಕ್ಕಿಕಂಠದೊಳಿಂತು ಹೊಮ್ಮುತಿಹುದೊ!

ಮೇಲೆ ನೀಲಾಂಬರದಿ ಮೋಡ ತೂಕಡಿಸುತಿವೆ
ನಿನ್ನ ಗಾಯನ ಸುರಾಪಾನದಲ್ಲಿ
ನಿನ್ನ ಧ್ವನಿ 'ಗೋ'ಯೆಂದು, 'ಆ' ಯೆಂದು, 'ಬಾ' ಯೆಂದು
ದಿಕ್ಕು ಕರೆ ಕರೆದಿಹವು ತಮ್ಮೊಳಲ್ಲಿ!

ಮರದುದಿಗೆ ಹೊಂಬಿಸಲ ಬಾವುಟವು ತೂಗಿಹುದು-
ಸೃಷ್ಟಿ ತಲೆದೂಗಿರಲು ಹೆಚ್ಚಿಗೇಕೆ?
ನನ್ನೆದೆಯೆ ಮೌನದಲಿ ಕರಗಿ ನೀರಾಗಿರಲು
ಆರಿಗಾರೋ ಎಂದು ಹಾರಲೇಕೆ?

ಏನಾದರೂ ಇರಲಿ, ಹಾಡ ನಿಲ್ಲಿಸಬೇಡ
ದೀಪ ಪಟ್ಟನೆ ಆರಿ ಹೋಗಬಹುದು!
ನನ್ನೆದೆಯ ಕತ್ತಲೆಯ ಕಣ್ಣುಕಪ್ಪಡಿ ಮತ್ತೆ
ಮೂಲೆ ಮೂಲೆಗೆ ಹೋಗಿ ಹಾಯಬಹುದು!

ಬದುಕು ಸೋಲಾದರೂ ಕಾಡು ಪಾಲಾದರೂ
ಹಾಡ ಬಿಟ್ಟುಳಿದವನ ಪಾಡು ಬೇಡ:
ನೀನೆನ್ನ ದೈವತವು ಹಾಡೆನ್ನಜೀವಿತವು
ಮತ್ತೆ ಮತ್ತುಳಿದವರ ಮಾತುಬೇಡ.

## ಸ್ವರ್ಣಪಕ್ಷಿ

ಬ್ರಹ್ಮಾಂಡದ ಬಿರುಮೊಟ್ಟೆಯನೊಡೆದು
ಪಿಂಡಾಂಡದ ತನಿಗೆಂಡವ ಪಡೆದು
ಇರುಳಿನ ಕಬ್ಬಿಣ ಪಂಜರ ಮುರಿದು
ಹಾರಿತು ಸ್ವರ್ಣಾರುಣ ಪಕ್ಷಿ!
ಮೂಡಣ ಬಾನಿನ ಉಷೆ ಸಾಕ್ಷಿ!

ಮೇಘಮಂಡಲದ ಬಾಗಿಲು ತೆರೆದು
ಜಗದಗಲವ ಮುಗಿಲಗಲವನಳೆದು
ತಾರಾಲೋಕದ ಕಣ್ಣನು ಸೆಳೆದು
ಸಾರಿತು ಸ್ವರ್ಗ ಸಮೀಪದಲಿ!
ಚೀರಿತು ಮಾಯಾ ಲೋಕದಲಿ.

ಏನಾಯಿತು ಏಕಾಯಿತು ಎಂದು
ಅಸಮಾಧಾನಕೆ ಪೂರವು ಬಂದು
ಜಗದ ಕಣ್ಣಿನಲಿ ಕಂಬನಿ ನಿಂದು
ಹುಡುಕಿರೆ ಬೆಳ್ಳಂಬೆಳಕಿನಲಿ
ಬಾನಿಗೆ ಬಾನೇ ಬೆರಗಿನಲಿ-

ಹೃದಯ ಸಮುದ್ರವ ತೊತ್ತಳದುಳಿದು
ಯಾ ಸೌಭಾಗ್ಯಕೊ ಯಾರೋ ಕಡೆದು
ವಿಷವನು ಕಡೆಯಲಿ ನೀನೇ ಕುಡಿದು
ನಿಂತಿಹೆ ಮಾನವ ಕೋಟಿಯಲಿ!
(ಹಾಡಿತೆ ಹಕ್ಕಿಯು ವ್ಯಂಗ್ಯದಲಿ?)

ಹಗಲುರುಳಿತು ಇರುಳಾಯಿತು, ಮರೆತೆ;
ಪಡುವಣ ಬಾನೊಳಗೇತರ ಕೊರತೆ?
ತುಂಬಿ ತುಳುಕೆ ಸುರಗಾನದ ಒರತೆ
ಇಳಿಯಿತಗೋ ಹೊಂಬಣ್ಣದ ಪಕ್ಷಿ
ಸಂಧ್ಯಾಸುಂದರಿ ಹಿರಿಸಾಕ್ಷಿ!

## ರಸಋಷಿ

೧

ಆಹ! ಮಧುಮಾಸವೈತಂದಿಹುದು. ಬನಕೆಲ್ಲ
ಚಿಗುರು ಹೂಗಳ ಹುಚ್ಚು ಹಿಡಿದಿಹುದು. ಜೀವನದ
ರಸಿಕತೆಯೆ ಮೂರ್ತಿಮತ್ತಾಯಿತೆನೆ ಆ ಮರದ
ತಳಿರ ತಣ್ಣೆಳಲಲ್ಲಿ ಮುಪ್ಪಾದ- ಅಲ್ಲಲ್ಲ-
ಹರೆಯ ಒಪ್ಪಂಬೂಸಿ ಕಪ್ಪ ಕಾಣಿಕೆಯಿತ್ತ
ಉಮರ ಖಯ್ಯಾಮನದೊ ನಲ್ಗಬ್ಬಮಂ ಪಿಡಿದು
ಕುಳಿತಿರುವನಾನಂದಿ! ಬಟ್ಟಲದ ತುಂಬ ಮಧು.
ಚೆಂಗುಲಾಬಿಯ ಚೆಲುವೆ ಸಾಕಿ ರಾಗೋನ್ಮತ್ತ
ಚಿತ್ತ ಚಿತ್ರೀಭೂತೆ ಸಂಗೀತವೆರೆದಿಹಳು!
ಚೆಲ್ವ ಬುಲ್‌ಬುಲ್ ಪಕ್ಷಿ ಜೊತೆಗೆ ಸರವೆತ್ತಿಹುದು;
ಕಾಡು ನಾಡುಗಳೆಂಬ ಪರಿಭೇದವಳಿದಿಹುದು.
ಏನಿದೇನಗ್ಗಳಮೊ! ಒಲವರದ ರಸಬಾಳು.
ಎಣ್ಣೆಸೆಗು ತಂಗಾಳಿ ಸಂದೇಶ ಬೀರುತಿದೆ:
"ಪ್ರೇಮಜೀವಿಯು ಚಿರಂಜೀವಿ ಕೇಳ್ ಮುಗುದೆ."

೨

ಸಾಕು ಮಾಡೀಜನ್ಮವೆಂದು ನರಳುವುದೇಕೆ?
ಸಾವಿನಂಜಿಕೆಯೇಕೆ? ನಮ್ಮ ಪಾಲಿನ ಬದುಕು
ಮಧುವಾಟಿಕೆಯ ಸರಕು; ಚಿಂತೆ ನಾಳೆಗೆ ಹೋಕು.
ಇಂದಿಗಿದೆ ಸುಮುಹೂರ್ತ, ಬರಲಿ ಹರುಷದ ಕೇಕೆ
ಅವರಿವರಿಗಂಜಿ ಸುಖಪಡಲು ನಾಚುವರೊಳರೆ?
ನಮ್ಮ ಬಾಳಿಗೆ ನಾವು ಹೊರೆಯಲ್ಲ; ಹೂವಿನೊಲು
ಹಗುರು; ಸುಖನಿಮಿಷ ಸವಿದ್ರಾಕ್ಷಿ ಪಾನಕದಮಲು
ಬಾಳಗೋಳನು ಮರೆಸಿ ಹಿಗ್ಗಿನಲಿ ಸುಗ್ಗಿ ಬರೆ
ತಡಮಾಡದಿರು, ಏಳು ಏಳೆನ್ನ ಮನದನ್ನೆ
ಸಂಕಷ್ಟವೀಡಾಡಿ ಪ್ರೇಮಮಧು ನಿಧುವನದಿ
ಒಂದೆ ಸಲ ಅರೆವಿರಿದ ನಿನ್ನಧರ ಚುಂಬನದಿ
ಅಮರನಾಗುವನುಮರ; ಸತ್ಯವಿದು ಓ ಚೆನ್ನೆ
ನಿನ್ನ ಹೂಗೆನ್ನೆಯಲಿ ನನಗಿಂದ್ರಸಂಪದಂ
ಚೆಲುವಿನೊಲವಿನ ಭೋಗ ದೈವಪ್ರಸಾದಂ.

೩

ಉಮರನೊಸಗೆಯ ಕೇಳಿ ಹಿಗ್ಗಿ ಹಾಡಿತು ಜೀವ,
ಕೇಕೆ ಹಾಕಿತು ನವಿಲು, ಫಲಮಂಜರಿಯ ಕರ್ದುಕಿ
ರಸವನೀಂಟಿತು ಗಿಳಿಯು. ತಳಿರಜೊಂಪನು ತುಡುಕಿ
ಬಗ್ಗಿಸಿತು ಕೋಗಿಲೆಯು. ಎಳಗರುಕೆಯನು ಮೇವ
ಹರಿಣಿ ನೆಗೆಯಿತು ಬಾನ್ಗೆ! ತುಂಬು ಚಂದಿರನೆದೆಯು
ತಂಬೆಳಕ ತುಳುಕಿಸಿತು. ತುಂಬಿ ಝೇಂಕಾರದಲಿ
ಬಳ್ಳಿ ಮಾಡದೊಳಲೆಯೆ ಪರಿಮಳದ ಗಾಳಿಯಲಿ
ಪನ್ನೀರ ಚಿಮುಕಿಸಿತು ಮೋಡ ಹಾಲಿನ ಕೆನೆಯು.
"ಜೀವನದ ಸೊದೆಯ ಸವಿಯಲ್ಕಿರುವುದೀ ನಿಮಿಷ
ಕರೆವುದಿನ್ನೊಂದು ನಿಮಿಷದಲಿ ಸುಡುಗಾಡು"
ಹೊತ್ತು ಹೋದರೆ ಮತ್ತೆ ಕಾದು ಕುಳಿತಿದೆ ಕೇಡು.
ವೇದಾಂತ ಜಡವಾದಿ, ಓ ಸನಾತನಿ, ಕಲುಷ
ವಾದವನು ಹೂಡದಿರು; ರಸಋಷಿಯ ತತ್ವಮಿದು
ಅವನ ಬಾಳಿನ ಲಸತ್ಕಾವ್ಯಕುಂಜರಿ-ಮಧು.

## ನನ್ನೊಲವು

ಹುಲ್ಲು ಗದ್ದೆಯ ಹೂವು ನೆಲದೆದೆಯನಪ್ಪಿದೊಲು
ಅನಿತು ನನ್ನೆದೆ ಸನಿಹಕಿರುವಳವಳು;
ದಣಿದ ಅವಯವಗಳಿಗೆ ನಿದ್ದೆ ಮುದ್ದಾದಂತೆ
ನನಗನಿತು ಸವಿಯಾಗಿ ತೋರಿದಪಳು.

ತನಿ ಶರತ್ಕಾಲದಲಿ ಅರ್ಪಣಾನಂದದಲಿ
ನದಿ ಮಹಾಪೂರದಿಂದೋಡುವಂತೆ
ತುಂಬಿ ಹರಿಯುವ ನನ್ನ ಬಾಳು; ಅವಳಲ್ಲಿರುವ
ಪ್ರೇಮಬಾಹುಳ್ಯವನೆ ಸಾರ್ವುದಂತೆ!

ತೊರೆಯ ಮರ್ಮರ ಝರಿಯ ತೆರೆಯ ಮೇಳಾಪದಲಿ
ಸಾಮರಸ್ಯದ ಸಾಮಗಾನದಲ್ಲಿ
ಹಾಡುವೊಲು ನನ್ನ ಹಾಡುಗಳೆಲ್ಲ ಏಕಲಯ-
ವಾಗಿಹವು ನನ್ನೊಲವಿನಾಳದಲ್ಲಿ.

"Lover's Gift"-4

## -ಗೆ

೧

ಒಲವು ಬೆಸುಗೆಗೊಂಡ ಒಸಗೆ-
ಗಾವ ಹಾಡು ಹಾಡಲಿ?
ಹೇಳು ಕೆಳದಿ ನಿನ್ನ ಚೆಲುವಿ-
ಗಾವ ನುಡಿಯ ತೊಡಿಸಲಿ?
ನನ್ನ ಹೊನ್ನ ಕನಸು ನಿನ್ನ
ರೂಹುವಡೆದು ಬಳಿಯಲಿ
ಕುಳಿತು ನಲಿಯುತಿರಲು ಮುಗುದೆ
ಹೆಚ್ಚಿಗೇನು ಬೇಡಲಿ?

೨

ನಿನ್ನ ಕಂಡ ಚಣದೊಳೆನ್ನ
ಕಂಗಳ ಬರ ಹಿಂಗಿತು;
ನೂರು ನೋವನೆಲ್ಲ ಮರೆಸಿ
ಸ್ವರ್ಗ ಹೂವ ಸುರಿಸಿತು;
ಸುಳಿವ ಗಾಳಿ ಅಳಿಯದಂಥ
ಪ್ರೀತಿಗಂಧ ತಂದಿತು,
ಜೀವ ಬಯಸಿದಂಥ ಜೇನಿ-
ನಲ್ಲಿ ಆತ್ಮ ಮಿಂದಿತು.

೩

ನಾದಲಹರಿಯೊಡನೆ ಬಂದ
ನೀನು ಹಾಡಿನೊಡತಿಯು,
ಒಲಿದು ಒಲಿಸಿಕೊಂಬ ನಗೆಯೆ
ನಿನ್ನ ನಯದ ನಡತೆಯು.
ಮಾತು ಪಾರಿಜಾತ ಪುಷ್ಪ-
ದಂತೆ ಮೃದುಲ ಕೋಮಲ,
ಹದುಳದಿಂದ ಒಡಪಿನಿಂದ
ಪಡೆದ ಭಾವನೋಜ್ವಲ!

೪

ಒಲವು ಬಳ್ಳಿಯಾಗಿ ಕುಡಿಯ
ಚಾಚಿ ನಿನ್ನ ಬಳಸಿದೆ,
ನಡುವೆ ಚೆಂಗುಲಾಬಿಯಂತೆ
ನಿನ್ನ ಬಾಳು ಅರಳಿದೆ;
ಸುಪ್ರಭಾತದಲ್ಲಿ ನಭದಿ
ಉಷಾರೂಪದರ್ಶಿನಿ!
ಇಂದು ನನ್ನ ಜೊತೆಗೆ ಬಂದೆ
ಶುಭದ ಪ್ರೇಮಕಾಂಕ್ಷಿಣಿ.

೫

ಗಾಳಿಸುಳಿಗೆ ತಿರ್ರನೆಂದು
ತಿರವ ಗರಿಯ ತೆರದಲಿ
ಹರಿದ ತಂತಿ ನುಡಿಸಿದಂತೆ
ತೀರ ನವೆದ ಸರದಲಿ
ತಿರುಗುತಿತ್ತು ಮರುಗುತಿತ್ತು
ನನ್ನ ಚಿತ್ತರಂಗವು;
ಇಂದು ನಾದದುನ್ಮಾದದಿ
ಝೇಂಕರಿಸುವ ಭೃಂಗವು.

೬

ಕೂರ್ಮೆ ಕುರುಹನರುಹುತಿಹುದು
ಚೊಕ್ಕ ಚಿನ್ನದುಂಗುರ
ಮಧುಮಾಸದ ಚಂದ್ರಹಾಸ
ಬೆಳಗಿತೆದೆಯ ಮಂದಿರ.
ಮುಗಿಲ ಮಾಡದಲ್ಲಿ ಮಿಗಿಲು
ಚಿಕ್ಕೆ ಎತ್ತಲಾರತಿ
ಒಲುಮೆಯೋರೆನೋಟದಲ್ಲಿ
ತಣಿಸುತಿಹಳು ಈ ರತಿ.

೭

ನಮ್ಮ ಕಂಡು ಸೂರ್ಯಚಂದ್ರ-
ರೆಂಥ ನಗೆಯ ನಕ್ಕರು!

ಹೊನ್ನ ಜೊನ್ನ ಕಿರಣದಲ್ಲಿ
ಶಾಂತಿ ಸವಿಯನಿತ್ತರು.
ಬಂದ ಮಾವು ಬಿಟ್ಟ ತಳಿರ
ತಳ್ಕೆಯಲ್ಲಿ ಕೋಗಿಲೆ
ಮಧುರ ಪ್ರೇಮಗೀತ ಪಾಡೆ
ಎದೆಗೆ ಇನಿಯಾಳುಯ್ಯಲೆ!

೮

ಅಚ್ಚ ಬಾಳಿನಚ್ಚುಮೆಚ್ಚು
ಪಡೆದು ಬಂದ ಚಂದಕೆ
ಅರಿತು ಬೆರೆತ ಸೌಧರ್ಮಿಕೆ
ಒಂದಕೊಂದು ಹೊಂದಿಕೆ.
ನಲ್ಲೆ ನಿನ್ನ ನೆಚ್ಚಿ ಮೆಚ್ಚಿ
ಹಾಡಿದಷ್ಟು ಸುಂದರ
ನಲ್ಮೆಗೈಯು ಹರಸುತಿರಲು
ಬಾಳು ಹಸುರ ಹಂದರ.

೯

ಒಲವು ಬೆಸುಗೆಗೊಂಡ ಒಸಗೆ-
ಗಾವ ಹಾಡು ಹಾಡಲಿ?
ಹೇಳು ಕೆಳದಿ, ಹೊಸತು ಬಾಳು
ಹರುಷದಿಂದ ಹಿಗ್ಗಲಿ.
ಮುಂದೆ ಬಹುದ ಕಂಡರಾರು
ಇಂದು ಜೀವ ಕುಣಿಯಲಿ
ಪ್ರೀತಿಯೊಂದೆ ನಮ್ಮ ನೀತಿ
ಅದರೊಳೆದೆಯು ತಣಿಯಲಿ.

## ನನ್ನ ಹೊಂದಾವರೆ

ನನ್ನ ಕನಸಿನ ಹೊನ್ನ ತಾವರೆಯ ಹೂವರಳಿ
ಎನ್ನ ಬೊಗಸೆಯೊಳಿಂದು ಕಂಗೊಳಿಸಿದೆ;
ಎನ್ನಿನಿಯ ಭಾವಗಳ ಮಧುರ ಮಕರಂದವೂ
ಮೃದುಲ ದಲದಲಗಳಲಿ ಪರಿಮಳಿಸಿದೆ!

ಮಾನಸ ಸರೋವರದ ಶಾಂತಿಸೌಖ್ಯಾಭೋಗ
ಸಕಲ ಸೌಂದರ್ಯದೀ ಮೊಗ್ಗೆಯಾಗಿ
ನೇಹ ನೇಸರನೊಂದು ಮೀಸಲದ ಕಿರಣದೆಡೆ
ಮೊಗವ ಚಾಚಿದೆ ಸೊಗಕೆ ಕಳಸವಾಗಿ.

ಹಲವಾರು ಹೂವುಗಳ ಅಂದಚಂದವದಿರಲಿ
ಸೌಗಂಧವೇ ಇದರ ಸೌಭಾಗ್ಯವು.
ಕಂಡ ಕಣ್ಣಿಗೆ ತಂಪು, ಎದೆಗೆ ಕುಂದದಲಂಪು-
ನಕ್ಷತ್ರಗಂಗಳಕ್ಷಯದ ಒಲವು!

ಎದೆಗೆದೆಯ ತುಂಬಿಸುವ ರಂಬಿಸುವ ಝೇಂಕಾರ-
ಹಲವು ಹಂಬಲವಿಲ್ಲಿ ಹಣ್ಣಾಗಿವೆ;
ಬಿಸಿಲೊ ಬೆಳುದಿಂಗಳವು, ಕಾಡೊ ನಂದನವನವು
ಮಧುರ ಮಿಲನದೊಳೆಲ್ಲ ಜೇನಾಗಿವೆ.

ಆವ ಚೆಲುವಿನ ದಿವ್ಯ ಸಾನ್ನಿಧ್ಯವನು ಬಯಸಿ
ಜೀವವನವರತವೂ ಹುಡುಕುತಿತ್ತೊ-
ಸತ್ಯ ಸೌಂದರ್ಯಗಳ ಹತ್ತು-ಗಡಿಯನು ತಡಕಿ
ಅಂತರಂಗದೊಳಿಂತು ಮಿಡುಕುತಿತ್ತೊ

ಅಂಥ ಪಂಥದ ಮುದ್ದು ಮೊಗವನಪ್ಪಿತು ಗೆಲುವು
ಬಾಳಬೀದಿಗೆ ಬೆಳಕು ನುಗ್ಗಿ ಬಂತು!
ಹೊಂಗೆಳೆತಿ ಸಂಗಾತಿ ಪ್ರೇಮಕುಂಡಜ್ಯೋತಿ
ನಿನ್ನ ಜೊತೆಯೊಳು ಬಾಳು ತುಂಬಿ ಬಂತು.

## ನಲುಮೆಯ ಕರೆ

ಅಲ್ಲೆ ಇರು, ಇಲ್ಲೆ ಇರು, ಎಲ್ಲೊ ಎಂತಾದರಿರು
ನನ್ನ ನಲುಮೆಯ ಕರೆಗೆ ಓಗೊಡುತಿರು;
ಒಮ್ಮೆ ಉದ್ವೇಗದಲಿ, ಒಮ್ಮೆ ಸಂತೃಪ್ತಿಯಲಿ
'ಓ' ಎಂಬ ಸವಿದನಿಯ ಸೋಂಕಿಸುತಿರು.
ದೂರದಿಂ ತೇನೆಯುಲಿ ಸಾರುವಂತೆ
ಮರಳಿ ಬೆಳುದಿಂಗಳಲಿ ಕರಗುವಂತೆ!

ಆವ ಹೆಸರಿನ ಅಂದಚಂದದಲಿ ಎನಿತು ಸಲ
ಮೆಚ್ಚಿ ಕರೆದರು ಮನಕೆ ತೃಪ್ತಿಯಿಲ್ಲ;
ಹೂವಿನೆದೆ ಸವಿಜೇನಿಗಾವ ಹೆಸರಿಟ್ಟರೂ
ತುಂಬಿ ತಣಿ ಹೀರದೆಯೆ ಮಾಬುದಿಲ್ಲ.
ಒಲುಮೆಯಾಳದ ನುಡಿಯು ಹೃದಯಂಗಮ
ಬದುಕ ಸವಿಯಾಗಿಸುವ ರಸ ಸಂಭ್ರಮ.

ತಿಳಿಗೊಳದ ಮಧ್ಯದಲಿ, ತೆರೆಯ ವರ್ತುಲಗಳಲಿ
ಹೊನ್ನ ತಾವರೆ ತೇರು ತೇಲಿದಂತೆ
ಮನದ ಮಾನಸ ಸರೋವರದ ಕನ್ನಡಿಯಲ್ಲಿ
ನಿನ್ನ ಮೊಗ ಚಂದಿರನ ಬಿಂಬದಂತೆ!
ಬಾಳ ನಿರ್ಮಲಗೊಳಿಸಿ ಸಿಂಗರಿಸಿದೆ.
ಎದೆಯ ಮಂದಿರ ಮತ್ತೆ ಕಂಗೊಳಿಸಿದೆ.

ಸುಂದರ ವಸುಂಧರೆಯು ಸೂರ್ಯಚಂದ್ರಾದಿಗಳು
ಕೋಟಿ ನಕ್ಷತ್ರಗಣ ನೀಹಾರಿಕೆ
ಯಾರ ದೂರದ ಕರೆಗೆ ಓಗೊಟ್ಟು ಓರಂತೆ
ತಿರುಗುತಿವೆ ಒಂದೊಂದರೊಳಸೆಳೆತಕೆ.
ಸುಖದುಃಖಗಳ ಸಾಮರಸ್ಯದಲ್ಲಿ
ಬಾಳಿಹುದು ಮನುಜಕುಲ ಸಖ್ಯದಲ್ಲಿ.

ಸೊಂಪೇರಿ ನಳನಳಿಸಿ ಬೆಳೆದ ಪೈರಿನ ಕಂಪು
ಗಾಳಿಯಲಿ ತಂಪಾಗಿ ಬೀಸುವಂತೆ
ನೂರು ಗಾವುದ ದಾಟಿ ಮೇಘತಾನವ ಮೀಟಿ
ಇನಿವಾತನುಸುರುತಿರು ಹಿಂಗದಂತೆ.
ಯಕ್ಷ ಸಾಕ್ಷಿಗೆ ಮೇಘದೂತನಾಗೆ
ಇಂದು ಕಳಿಸಿಹೆನಕ್ಷಿ ಪಕ್ಷಿಹಾಗೆ.

## ಜೊತೆ

ಬಾನಂಗಣದಲಿ ಕಂಕಣ ಕಟ್ಟಿದೆ
ಚಂದಿರ ರೋಹಿಣಿಯರ ಬಳಸಿ,
ಕಿರುಮೋಡವು ಹೆಡೆಯಾಡಿಸಿ ನಲಿದಿದೆ
ಗಾಳಿಯ ಪುಂಗಿಯನನುಸರಿಸಿ.

ಅಲ್ಲಿಂದಿಲ್ಲಿಗೆ ಸಾವಿರ ಮಲ್ಲಿಗೆ-
ಚಿಕ್ಕೆಯ ಸೇತುವೆ ತೂಗಿಹುದು,
ಇರುಳಿನ ಹೆಜ್ಜೆಯ ಗೆಜ್ಜೆಯ ಮೆಲ್ಲುಲಿ
ಗಿರಿ ವನ ಕೊಳದಲಿ ಸುಳಿದಿಹುದು.

ಹಿತಮಿತವಾಗಿಹ ಮಾಯಾಬಂಧನ
ಸೃಷ್ಟಿರಹಸ್ಯದ ಛಾಯೆಯಿದು-
ಮಾತಿಗೆ ನಿಲುಕದ ರಸಸಂವೇದನ
ಅತ್ತಿಂದತ್ತವ ವಿವರಿಸದು.

ಈ ಬೆಳುದಿಂಗಳ ಇಂಗಡಲಾಳದಿ
ಕಂಗಳ ಮೀನ್ಗಳ ತೆರೆಯೆ ಸಖಿ,
ಸೃಷ್ಟಿಯ ಸೌಂದರ್ಯೋಪಾಸನೆಯಲಿ
ನೀ ಜೊತೆಗಿರೆ ನಾ ಪರಮ ಸುಖಿ.

## ಜೀವಜೀವಾಳದಲಿ ಕೂಡಿದವಳು

೧

ಸಣ್ಣ ಮನೆಯನು ತುಂಬಿ
ನುಣ್ಣಗಿನ ದನಿಯಲ್ಲಿ
ಬಣ್ಣವೇರಿದ ಹೆಣ್ಣು ಹಾಡುತಿಹಳು.
ಕೈತುಂಬ ಹಸಿರು ಬಳೆ
ಹಣೆಗೆ ಕುಂಕುಮ ಚಂದ್ರ
ಜಡೆತುಂಬ ಮಲ್ಲಿಗೆಯ ಮುಡಿದಿರುವಳು.

೨

ಹೆಜ್ಜೆ ಹೆಜ್ಜೆಗಳಲ್ಲಿ
ನವಿಲನಾಡಿಸುತಿಹಳು
ಮಾತು ಮಾತಿಗೆ ಮುತ್ತು ಸುರಿಸುವವಳು.
ಚೆಂಗುಲಾಬಿಯ ಚೆಲುವೆ
ಚೆಂದುಟಿಯನರೆತೆರೆದು
ಉಸಿರುಸಿರಿಗೂ ಕಂಪ ಸೂಸುತಿಹಳು.

೩

ಹಾಲುಗಲ್ಲಿನ ಮೇಲೆ
ಬೆಳುದಿಂಗಳಿಳಿದಂತೆ
ನಗೆಯ ಹೊಂಗೇದಗೆಯ ಮುಗುದೆಯಿವಳು;
ಮುಂಜಾವು ಉಷೆಯಂತೆ
ಸಂಜೆ ಅಪ್ಸರೆಯಂತೆ
ಕಣ್ಣು ಕಣ್ಣಿಗೆ ದೀಪ ಮಿನುಗಿಸುವಳು!

೪

ನಲುಮೆದೋಳುಗಳಲ್ಲಿ
ಒಲವು ಮಾತುಗಳಾಡಿ
ಮುದ್ದಿಟ್ಟು ಮೂಲೋಕ ಮರೆಸಿದವಳು;
ನಿದ್ದೆ ಬಂದವರಂತೆ
ಎದೆಯಲ್ಲಿ ಹುದುಗಿರಲು
ಕದ್ದು ನೋಡುವ ಆಶೆ ಹಚ್ಚಿದವಳು.

೫

ಅಳಲ ಕಂಬನಿಯೊರಸಿ
ಸೊಗದ ಹೂಮಳೆ ಸುರಿಸಿ
ಮೌನವಾಗಿಯೆ ಮನವ ಮಿಡಿಯುವವಳು;
ನೆನೆಸಿದೊಡನೆಯೆ ಕನಸಿ-
ನಲ್ಲಿ ಕೋರಯಿಸುವಳು
ಜೀವ ಜೀವಾಳದಲಿ ಕೂಡಿದವಳು.

## ಉಷೆಯ ಗೆಳತಿ

ಏಳೆನ್ನ ಮನದನ್ನೆ, ಏಳು ಮುದ್ದಿನ ಕನ್ನೆ
ಏಳು ಮಂಗಳದಾಯಿ ಉಷೆಯ ಗೆಳತಿ-
ಏಳು ಮುತ್ತಿನ ಚೆಂಡೆ, ಏಳು ಮಲ್ಲಿಗೆ ದಂಡೆ
ಏಳು ಬಣ್ಣದ ಬಿಲ್ಲೆ ಮಾಟಗಾತಿ!

ಏಳೆನ್ನ ಕಲ್ಯಾಣಿ, ಏಳು ಭಾವದ ರಾಣಿ
ನೋಡು ಮೂಡಲದಲ್ಲಿ ರಾಗಮಿಲನ!
ಮರದುದಿಯ ತೋರಣದಿ ಹೊಂಬಿಸಿಲ ಬಾವುಟವು
ಗಾಳಿವಟ್ಟೆಯಲದರ ಚಲನವಲನ.

ಏಳು ಬಾಳಿನ ಕೊಳಲೆ, ಸರಳ ಸುಂದರ ತರಳೆ
ಹಕ್ಕಿ ಹಾಡಿಗೆ ಮಧುರ ದನಿಗೂಡಿಸು;
ಹೂವು-ಹಾಸಿಗೆಯಿಂದ ಬಂದ ಸೂಸಲ ಗಾಳಿ
ಪಿಸು ಮಾತನಾಡುತಿದೆ ನಸು ಆಲಿಸು.

ಮಂಜಿನರಳೆಯ ಹಿಂಜಿ ತೂರುತಿಹ ನೇಸರನು
ಹಿಮಮಣಿಯ ದರ್ಪಣದಿ ತನ್ನ ಕಂಡು
ಮಿರುಗಿ ಹೊಗರೇರಿಹನು! ಏಳೆನ್ನ ಹೊಂಗೆಳತಿ
ಮೊಗದ ಜವನಿಕೆ ತೆರೆದು ನಗೆಯ ನೀಡು.

ಲಲಿತ ಶೃಂಗಾರ ರಸಪೂರ್ಣೆ ಚಂದಿರವರ್ಣೆ
ದೃಷ್ಟಿ ತೆಗೆಯಲು ಒಂದು ಮುತ್ತನಿಡುವೆ;
ನಿನ್ನ ಸಕ್ಕರೆ ನಿದ್ದೆ ಸವಿಗನಸ ಕತೆ ಹೇಳು
ಒಂದು ಚಣ ಜಗವನ್ನೆ ಮರೆತು ಬಿಡುವೆ.

## ನಿರೀಕ್ಷೆ

ಮನೆಯ ಮಂಗಳಮೂರ್ತಿ ಮೌನದಾಳದಿ ಮುಳುಗಿ
ಕಣ್ಣ ರತ್ನದ ಖಣಿಯ ದೀಪಿಸಿಹಳು-
'ಸಂಜೆಯಾಯಿತು ಈಗ ಬಂದೆ ಬರುವರು' ಎಂದು
ಒಂದೆ ಚಿಕ್ಕೆಯ ತೆರದಿ ಜಾನಿಸಿಹಳು.

ತುಂಬುಗೈ ಬಾಗಿಲಿಗೆ ಇಂಬುಗೊಟ್ಟಿದೆ, ಕಾಲ
ತುದಿಬೆರಳು ಹೊಸತಿಲಕೆ ಹೂವಾಗಿದೆ!
ನೆಟ್ಟ ದಿಟ್ಟಿಯು ದಾರಿ ನೋಡಿ ನಿಟ್ಟುಸಿರಿಡಲು-
ಜಡೆಯುದ್ದಕೂ ಚಿಂತೆ ಹೊಯ್ದಾಡಿದೆ!

ಏನೊ ನೆನಪಾದಂತೆ ಒಳಗೆ ಮೆಲ್ಲಗೆ ನುಸುಳಿ
ದೀಪವಂಟಿಸಿ ಸುಪ್ರಸನ್ನ ಮೊಗದಿ

ಚೆನ್ನೆ! ಹೆಜ್ಜೆಯ ಗುರುತನೆಂದೊ ಅರಿತವಳಂತೆ
ಬಂದೆ ಬರುವಳು ಇದಿರುಗೊಂಬ ಭರದಿ.

ಹಗಲುಗನಸೇ ಮಾಗಿ, ಬೈಗು ಸುಂದರವಾಗಿ
ಪೂರ್ಣಗೊಂಡಿದೆ ಬಾನ ಸ್ವರ್ಣನಕ್ಷೆ;
ಹೆಣ್ಣು ಜೀವದ ಹಲವು ಬಯಕೆ ಬಣ್ಣವ ಕೂಡಿ
ಮೂಡಿ ನಿಂತಂತಿಹುದು ಈ ನಿರೀಕ್ಷೆ.

ಸ್ನಿಗ್ಧನೋಟದೊಳಖಿಲ ಬ್ರಹ್ಮಾಂಡ ಮಿದುಗೊಂಡು
ಮೆಲಿತು ನಲ್ವಾತಿನಲಿ ತೇಲುತಿಹುದು-
ಬಾನು ಬುವಿಗಳ ತುಟಿಗೆ ಹುಣ್ಣಿಮೆಯ ಮುತ್ತಿಟ್ಟು
ಬರುವ ಬೆಳದಿಂಗಳವ ಹೋಲುತಿಹುದು.

ಪಡುವಣದ ಸಂಜೆವೆಣ್ ನಡುಮನೆಗೆ ಬಂದಂತೆ
ರಾಗಪುಲಕಿತೆ ಎದೆಯನಾಳುತಿಹಳು-
ಮಳೆಬಂದ ಮರುಚಣದ ಇಳೆಯ ಹೊಸತನದಂತೆ
ಅಡಿಗಡಿಗು ಈ ಬಾಳ ಬೆಳಗುತಿಹಳು

## ಮೌನಭಾರ

ತುದಿಬೆರಳಲೆನ್ನ ಗಲ್ಲವ ಪಿಡಿದು ಮುದ್ದಿನಲಿ
'ಮುದ್ದು, ಚಿನ್ನಾ' ಎಂದು ಕರೆಯುವವರು,
ಕರುಳ ತಿದ್ದುತ ಹೆರಳಮಾಲೆಯನು ನೇರ್ಪಡಿಸಿ
'ಮಲ್ಲಿಗೆಯೆ ಮಾತಾಡು' ಎನ್ನುವವರು.

ಕಂಕಣದ ಕಿಂಕಿಣಿಯ ದನಿಯನಾಲಿಸಿ ಬಂದು
ಸಪ್ಪಳಿಲ್ಲದೆ ಎದೆಯನಪ್ಪುವವರು,
ಜೇನು ಹಾಡಿಗೆ ಮನವ ಮಾರುಗೊಂಡೈತಂದು
ಮುತ್ತು-ಸವಿಗೆಂದಿಗೂ ತಪ್ಪದವರು.

ನಕ್ಕು ನಗಿಸುತ ಮನೆಯ ತುಂಬಿ ತುಳುಕಿಸುವವರು
ಅಕ್ಕರೆಯ ಸಂತೋಷ ಲಹರಿಯವರು;
ಒಂದೆ ಕಂಬನಿಯಲ್ಲಿ ಕರಗಿ ನೀರಾಗುವರು
ನವಿರು ನವಿರೊಳು ನಲ್ಮೆ ಚಿಮ್ಮುವವರು,-

ಇಂದಾವ ಬೇಸರವು ಎದೆಯನಾವರಿಸಿಹುದು
        ನಿಮ್ಮ ಪಾಲಿಗೆ ಮೌನ ಬಂದುದೇಕೆ?
ಗಿರಿಯ ಗಂಭೀರತೆಗೆ ಮನೆಯೆ ಬಿಮ್ಮೆಂದಿಹುದು-
        ನವಿಲು ಮರೆತಂತಿಹುದು ತನ್ನ ಕೇಕೆ.

ಸರಸ ಸಲ್ಲಾಪಗಳ ಸರಸಿ ಬತ್ತುತಲಿರಲು
        ಈ ಸರೋಜಕೆ ಬೇರೆ ಜೀವವಿಹುದೆ?
ಒಪ್ಪವಾಗಿದ್ದವರು ಸಪ್ಪೆಮುಖ ಮಾಡಿರಲು-
        ಎಳೆದು ತಂದಿಹ ನಗೆಯು ಚಂದವಹುದೆ?

ನೀವು ಮರುಗಿದರೆನ್ನ ಜೀವಕ್ಕೆ ತಂಪಿಹುದೆ?
        ನಸುಮುನಿಸಿಗೂ ನೆಲಕೆ ಇಳಿದುಬಿಡುವೆ-
ಬಂದುದೆಲ್ಲವು ಬರಲಿ, ನಗೆಯು ಚಿರವಾಗಿರಲಿ
        ಇಂದ್ರಲೋಕವನಿಲ್ಲಿಗೆಳೆದು ತರುವೆ!

ಬಾನ ಬೀದಿಯೊಳಲ್ಲಿ, ಹುಣ್ಣಿಮೆಯ ರಥದಲ್ಲಿ
        ಚಂದ್ರನ್ಪೊಸಗೆಯು ಬಾರ ಬಾ ಚಕೋರ,
ಕಣ್ಣು ಕಾತರಿಸಿಹವು, ಎದೆಯು ಹಾರೈಸಿಹುದು
        ತಾಳಲಾರೆನು ಇನ್ನು ಮೌನಭಾರ!

## ಪಯಣ

ಬಂತು!.... ಬಂದನಿತರಲೆ ಹೊರಟು ನಿಂತಿತು ರೈಲು!
'ಹೋಗಿ ಬರುವಿರ?' ಎಂಬ ಧ್ವನಿಯು ಎದೆ ಕಲಕಿರಲು
ಹರುಷ ದುಃಖಗಳೆರಡು ಮೌನದಲಿ ಮೊಳಗಿರಲು
ರೈಲು ಸಾಗಿತು ಮುಂದೆ ಮೈಲು ಮೈಲು!

        ಕಿಟಕಿಯಲಿ ಕರವಸ್ತ್ರ ಒಲುಮೆ ಬಾವುಟದಂತೆ
        ಎದೆಯ ತಡಬಡದೊಡನೆ ಮಿಡುಕುತಿತ್ತು;
        ಯಂತ್ರವೇಗಕೆ ಮನುಜನೆದೆಯ ರಾಗೋದ್ವೇಗ
        ಸಿಳ್ಳುಹಾಕುತ ಕೂಗಿಕೊಳ್ಳುತಿತ್ತು!
        ಬಿಟ್ಟ ಹೊಗೆ-ಧಗೆ ಮೋಡ ಗಾಳಿಯಲಿ ನೂಲಾಗಿ

ಹೊರಳಾಡುತಿರಲಲ್ಲಿ ಅಲಸಿ ಅಲಸಿ,
ನಿರ್ಜನದ ನೀರವದ ಭಣಗುಡುವ ನಿಲ್ದಾಣ
ರಣರಣಕಗೊಂಡಿತ್ತು ನೆನೆಸಿ ನೆನೆಸಿ!

## ವಿರಹ ಕೂಜನ

೧

ಮನೆಯೊಳಗೆ ಅತ್ತಿತ್ತ ಕಾಲು ಸುಳಿದಾಡುತಿವೆ
ಕಂಡು ಕಂಡೂ ಕಣ್ಣು ಹುಡುಕುತಿಹವು;
ಸುಮ್ಮ ಸುಮ್ಮನೆ ಕಿವಿಗಳೇನೊ ಆಲಿಸಿದಂತೆ-
ತಮ್ಮ ರೂಢಿಗೆ ತಾವೆ ನಾಚುತಿಹವು.
ಅಡುಗೆ ಮನೆಯೊಳು ಬರಿಯ ಹೊಗೆಯಾಡಿದಂತಿಹುದು
ದಿನದ ಗುಂಜಾರವದ ನಿನದವಿಲ್ಲ;
ನಡುಮನೆಗು ಪಸರಿಸುವ ನಗೆಯ ಸುಳಿವೇ ಇಲ್ಲ
ಸಜ್ಜೆವನೆ ಪಡಿಪಾಟು ಶಿವನೆ ಬಲ್ಲ.

೨

ಸಂಜೆ ಮನೆಗೈತರಲು ಪ್ರೇಮಪೂರ್ಣಿಮೆ ನಗಲು
ಹುಣ್ಣಿಮೆಗು ಹೊಸಬಣ್ಣ ಮೂಡುತಿತ್ತು;
ಇಡಿಯ ದಿನದಾಯಸವು ಮಂದಹಾಸದಿ ಕರಗಿ
ಸ್ವಚ್ಛಂದ ಛಂದದಲಿ ಹಾಡುತಿತ್ತು.
ಗಾಳಿಯಲೆಗೂ ನಲುಮೆ ಬೆರಳನಾಡಿಸಿದಂತೆ
ತರಳೆಯೊಲವಿನ ಹೊಳವುದೋರುತಿತ್ತು;
ಬೆಣ್ಣೆಯೊಳಗಿನ ಕೂದಲೆಳೆಯ ಹೊರದೆಗೆವನಿತು
ನಯವಾಗಿ ದಿನಬಳಕೆ ಸಾಗುತಿತ್ತು.

೩

ತವರುಮನೆ ನೆನೆದೊಡನೆ ಹಗಲೆಲ್ಲ ಹಿಗ್ಗಿದಳು
ನನ್ನ ಅನುಮತಿಗೆನಿತೊ ಅಮೃತಧಾರೆ-
ಮರುಗಳಿಗೆಯಲಿ ಮತ್ತೆ ಇರುಳು ಕೊರಳನ್ನಪ್ಪಿ
'ಅಗಲಲಾರೆನು' ಎಂಬ ಕಣ್ಣಧಾರೆ!
ಅವಳಿಗೋ ಮೊದಲ ಸಲ ತವರುಮನೆ ಹಂಬಲವು-

ನನಗೊ ಅಗಲಿಕೆಯೊಂದು ಮಧುರಶಾಪ,
ಹೆತ್ತ ತಾಯ್ತಂದೆಗಳ ಕರುಳ ಮಲ್ಲಿಗೆಯರಳ
ಕಳಿಸಿರುವೆ ನಾಲ್ಕು ದಿನ ಇರಲಿ ಪಾಪ!

೪

ಅಂದು ಆಗಿನ ಬುದ್ಧಿ ಇಂದಿಗಿರಬೇಕಲ್ಲ-
ಸಾಕು ಸಾಕೆನಿಸಿಹುದು ಮೂಕ ಮನಕೆ,
ಏಕಾದರೂ ಕಳಿಸಿ ಏಕಾಕಿಯಾದೆನೋ-
(ಪತ್ರ ಬಂದಿದೆ; ಅದರಷ್ಟೆ ಸಾಕೆ?)
ಒಂದು ತೋಪಿನ ಮರದಿ ಕುಳಿತ ಬೆಳವನಹಕ್ಕಿ
ಕಳುಹಿಸಲು ಕೂಜನದ ಪ್ರಣಯಗೀತ-
ಸ್ವಿಚ್ಚನೊತ್ತಲು ಬಲ್ಬು ಬೆಳಕು ಚಿಮ್ಮುವ ತೆರದಿ
'ಕೂ' ಎಂದು ಅದರ ಸಖಿ ಎದೆಯ ಮಿಡಿತ!

* * * *

ಇಂದು ಬಂದಿಹ ಓಲೆಯಲ್ಲಿ ಮರುಕದ ಸಾಲು;
"ರವಿವಾರ ದಿನ ನೀವು ಬರಲೆಬೇಕು",
ಅದು ಎಲ್ಲ ಸರಿ, ಅದರಿಂದು ಮಂಗಳವಾರ
ನಾಲ್ಕು ದಿನಗಳನೆಂತು ನೂಕಬೇಕು?

## ಮಗುವಿಗೆ

ನಮ್ಮ ಬಾಳಬಳ್ಳಿಗೊಗೆದ ಹೊಚ್ಚಹೊಸತು ಮಲ್ಲಿಗೆ!
ನೆಲಮುಗಿಲಿನ ಒಲವು ಗೆಲವು ಪಡೆದು ಬಂದಿತಿಲ್ಲಿಗೆ!
ಪರಿಮಳಿಸಿತು ತುಂಬಿ-ತೋಟ ನಿನ್ನ ಒಂದೆ ಸೊಲ್ಲಿಗೆ
(ಪುಟ್ಟ ಎಸಳುಗೈಗಳನ್ನು ಮುಟ್ಟಲೇನು ಮೆಲ್ಲಗೆ?)

ನಿದ್ದೆಯಲ್ಲು ನಗುವೆ ನೀನು ನಮ್ಮ ಬುದ್ಧಿಯಾಚೆಗೆ
ತೇಲುತಿರುವ ಮುದ್ದುಹಂಸ ಕೊಳದ ಸ್ವಪ್ನ ವೀಚಿಗೆ.
ತಾವರೆಯೆಲೆ ಹೊಚ್ಚಿದಂತೆ ಅಮ್ಮ ಹೊಲಿದ ಕುಂಚಿಗೆ
ನಮ್ಮ ಬಾಲ್ಯ-ಚಿತ್ರ-ಲೀಲೆಗಳ ವಿಶೇಷ ಸಂಚಿಕೆ!

ಗಾಳಿಗಡಲಿನಲ್ಲಿ ಹುಟ್ಟುಕಡೆಯುತಿರುವ ಕೈಗಳು!
ಮಲಗಿದಲ್ಲೆ ಬೈಸಿಕಲ್ಲು ತುಳಿವ ಪುಟ್ಟ ಕಾಲ್ಗಳು!
ಇಷ್ಟು ಅಗಲ ಬಾಯಿ ತೆಗೆದು ಆಕಳಿಸುವೆ ಏಗಳು
ಒಂದೆ ಸಮನೆ ನೋಡುತಿರುವೆ ನೋಯವೇನು ಕಂಗಳು?

ನೀನು ಅಳುವ ದನಿಯೆ ಮಧುರ ರಾಗವಾಗಿ ಸೆಳೆವುದು!
ಗೂಡಿನಲ್ಲಿ ಗುಬ್ಬಿಮರಿಯು ಚಿಂವ್‌ಗುಡುವೊಲು ಸುಳಿವುದು;
ಇನ್ನು ಈಟು ಇರುವಾಗಲೆ ಹಟವ ತೆಗೆದು ನಮ್ಮನು
ಹೆದರಿಸುವೆಯ? ನೋಡು ಮತ್ತೆ ಬಂದು ಬಿಡುವ ಗುಮ್ಮನು!

ತಾಯ ಒಲುಮೆ ತೂಗುತಿರಲು ನಿನ್ನ ಮುದದ ತೊಟ್ಟಿಲು
ಜೀಕವಾಡಿ ಏರುತಿರುವೆ ದಿನದಿನಗಳ ಮೆಟ್ಟಿಲು!
ಶುಭದ ಹರಕೆ ನವೋದಯಕೆ ನೂರು ದೀಪ ಹಚ್ಚಲು
ನಮ್ಮೆದೆಯಾನಂದಕೆಲ್ಲ ಕಂದ ನೀನೆ ಚೊಚ್ಚಲು.

## ತುಂಬುದಿಂಗಳು

ಮೊನ್ನೆ ದೀಪಾವಳಿಗೆ ಒಂದು ತಿಂಗಳು ದಣೇ
ತುಂಬಿಹುದು; ಆಗಲೇ ಸುಳುವು ಹಿಡಿಯುವ ಮೋಡಿ!
ತೆರೆದು ಬಟ್ಟಲಗಣ್ಣ ಬಿಟ್ಟೂ ಬಿಡದೆ ನೋಡಿ
ಮಿಟ್ಟು ಮಿಸುಕದೆ ಇರುವ (ನಾನು ಅಪರಿಚಿತನೇ?)
ಎತ್ತಿಕೊಂಡರೆ ತುಸುವೆ ಅತ್ತಂತೆ ಮಾಡಿ, ಮರು-
ಗಳಿಗೆಯಲ್ಲಿ ಬೆಚ್ಚಗೆ ಬಟ್ಟೆ ತೊಯ್ಸಿ, ಗೊತ್ತಿಲ್ಲ-
ದವರಂತೆ ಸುಮ್ಮನಿರೆ (ಇದನಾರು ಕಲಿಸಿಲ್ಲ!)
ಬೇರೆ ಬೇಕೇ ಶಿಕ್ಷೆ? ಹಗಲು ನಿದ್ದೆಯ ಹೊಡೆದು
ದೀಪ ಹಚ್ಚುವ ಹೊತ್ತಿಗಾಗಲೇ ಕಣ್ದೆರೆದು
ಇರುಳೆಲ್ಲ ತಂತಿ ಮೀಟಿದ ತೆರದಿ ದನಿತೆಗೆದು
ಪಹರೆ ಮಾಡುವನೀತ. ಮುಟ್ಟಿಗೆಯ ಬಿಗಿಹಿಡಿದು
ಕುಟ್ಟಿ ಗಾಳಿಯ ಒಂಟಿಕುಸ್ತಿಯಾಡುವ ಜಟ್ಟಿ!
'ಹಸಿವೆಯಾದರೆ ಒಂದು ನಿಮಿಷ ತಡೆಯಲು ಒಲ್ಲ'
ಇರಬಹುದು; (ಅದು ಮಾತ್ರ ನನ್ನ ಖಾತೆಯದಲ್ಲ.)

## ಆನಿ ಬಂತವ್ವಾಽಽನಿ

ಆನಿ ಬಂತವ್ವ ಆಽನಿ
ಇದು ಎಲ್ಲಿತ್ತವ್ವ ಮರಿಯಾನಿ||
ಕಳ್ಳಿಸಾಲಾಗ ಮುಳ್ಳ ಬೇಲ್ಯಾಗ
ಓಡಿಯಾಡತಿತ್ತಾಽನಿ,
ಕಾಲ ಮ್ಯಾಲ ಅಂಗಾತ ಮಲಗಿ
ತೂರನ್ನತೈತಿ ಈ ಆಽನಿ!
ಎಂಥ ಚಿಟ್ಟಾನಿ
ನನ್ನ ಕಟ್ಟಾಣಿ
ಇದಕ ಯಾರಿಲ್ಲ ಹವಣಿ
ಆನಿ ಬಂತವ್ವ ಆಽನಿ
ಅಡವಿ ಕಡೆಯಿಂದ ಹಿಂಡಿನೊಳಗಿಂದ
ದುಂಡಗುರುಳಿ ಬಂತಽ
ದಾರಿ ಮಂದೆಲ್ಲ ಮೀರಿ ತುಡುಕಿದರ
ಕೊಸರಿಕೊಂಡು ಬಂತುಽ
ನನ್ನ ಬಂಗಾರ
ಮುದ್ದು ಸಿಂಗಾರ
ಬಾರ ನನ್ನ ಕುವರಾ
ಒರಸತೇನಿ ಬೆವರಾ;
ನಿನ್ನ ನೋಡಿ ಮುದ್ದಾಡಿ ಹಾಡಿ
ಅಪ್ಪಿದರ ದುಃಖ ಹಗುರಾ
ಅಪ್ಪಿದರ ದುಃಖ ಹಗುರಾ;
ಮರದ ಕೊಂಬಿಯನು ಮುರಿದು ಚೆಲ್ಲುವಾ
ಸೊಂಡಿ ಇಲ್ಲ ಇದಕಽ
ತಳಿರ ಕೈಯಿಂದ ಕೊರಳನಪ್ಪಿದರ
ಸುಗ್ಗಿ ಹಾಂಗ ಬದುಕಽ.
ನನ್ನ ಕಂದ
ದಿನಕೊಂದು ಚಂದ
ಭವ ಬಂಧ ಬಿಡಿಸ ಬಂದಽ
ಮನಿ ತುಂಬ ಇದರ ಗಂಧಽ.
ತೊದಲು ತುಟಿಗೆ ತಪ್ಪೆಜ್ಜಿ ಹಾಕಿ
ಬರತೈತಿ ಓಡಿ ಓಟ,

ಬಂದು ಸೆರಗ ಮರೆಯಲ್ಲಿ ಅವಿತು
ಹುಡುಹುಡುಕುವಾಟ ಮಾಟ.

ಆನಿ ಬಂತು ಅರಸಾನಿ ಬಂತು
ದೊರೆಸಾನಿ ಬಳಿಗೆ ಬಂತು;
ನನ್ನ ಅರಸರಾ ಪಟ್ಟದಾನಿ ಇದು
ಬಾಳ ಗುಟ್ಟ ತಂತು.
ನನ್ನೊಡಲ ಜೀವ ಜೀವಾಳದಾಗ
ಚಂದ್ರಾಮನಾಗಿ ನಿಂತು,
ಹುಣ್ಣೀವಿ ದಿನದ ಬೆಳದಿಂಗಳ್ಹಾಲ
ಕುಡಿಲಾಕ ಬಂತ ಬಂತು.
ಆಕಾಶದಾಗ ಚಿಕ್ಕೀಯ ಚಟ್ಟು
ಕಟ್ಟೇತಿ ನಿನಗ ಬಾಳಾ
ಜಗವು ತೊಟ್ಟಿಲಾ, ಚಂದ್ರ ಬಟ್ಟಲಾ
ತುಂಬ ಹಾಲ ಕೊಡುವಾ
ದೇವರಲ್ಲ ಬಡವಾ.
ಜಾಜೀಯ ಬಳ್ಳಿ ಕುಡಿಗೈಯ ಚಾಚಿ
ನೀಡೇತಿ ನಿನಗ ಹೂವಾ
ನಿನ ಮ್ಯಾಲ ಅದರ ಜೀವಾ.
ಬಡಕೊಂಡ ಜೀವ ಉಳಕೊಂಡು ಹೇಗೊ
ನಿಂತೈತಿ ಕುಡಿದು ವಿರಸಾ

ನೀನೇನ ಪಡೆದು ಬಂದೀಯೊ ಏನೊ
ನೀ ನನ್ನ ಕನಸ ಮಾನಸಾ.
ಯಾರಾರ ದೃಷ್ಟಿ ಬಡಿದೀತು ಬಾರೊ
ಚಂದ್ರಾಮ ಚೆಲುವ ನೀನು.
ಹಾಲುಗಲ್ಲದಾ ಹಸುಳೆ ತಾಯಿ,
ಸುರಿದೀತು ಜೊಲ್ಲು-ಜೇನು.
ಬಾ ಬಾರೋ ಕಂದ
ಏನಂದ ಚೆಂದ!
ಬಾ ಇಂದ್ರ ಪಟ್ಟದಾನಿ
ದುಡು ದುಡೂ ಬಂದು
ಕಾಲಾಗ ನಿಂತು
ತೂರ್‍ಯಾಡು ಆನಿಯಾಡು.

## ಮುದ್ದಣ-ಮನೋರಮೆ

ಮುದ್ದಣ ಮನೋರಮೆಯರಿನಿವಾತನಾಲಿಸಲು
ಕನ್ನಡದ ಬೆಳ್ನುಡಿಯ ಹೊಂಬೆಳಗಿನುನ್ನತಿಯ
ಕಾಣಲೆಂದಾಸೆಯಿರೆ ಜೇನುಂಡ ಆರಡಿಯ
ಝೇಂಕೃತಿಗೆ ಕಿವಿದೆರೆದು ಕೇಳು ಎದೆತಣಿಯುವೊಲು.
ತನಿವಣ್ಣು ತಿನಲಿತ್ತು ಕೆನೆವಾಲನೀಯುವರು.
ಏನು ಜೊತೆ! ಎಂಥ ಕಥೆ! ನಾಲ್ಮೊಗನ ಅಗ್ಗಿಟ್ಟಿ-
ಯೊಗೆದ ಮುತ್ತಿನ ಚೆಂಡು! ಮಾತೊಂದು ರಸಘಟ್ಟಿ!
ನಸುನಗೆಯ ನಸೆಗಾರ್ತಿ, ಕಬ್ಬಿಗನ ಕಲ್ಪತರು!
ಮುದ್ದಣನ ಮುದ್ದುನುಡಿ ಮನೋರಮೆಗೆನಿತೆನಿತೊ
ಅನಿತನಿತೆ 'ರಾಮಾಶ್ವಮೇಧ' ರುಚಿ ಕನ್ನಡಕೆ.
ಕಂಡುಗವ ಬಳ್ಳದಿಂದಳೆದ ನಲ್ಗತೆ ಸೊಗಕೆ
ಚೆಂಬವಳನಿಕ್ಕುವಂ; ತಿರುಳ ಕಾಣಿಕೆ ಪೊಸತೊ.
ಬಣ್ಣಗಬ್ಬಿಗನೊರೆದ ಬಟ್ಟೆದೋರಿಪ ಕೃತಿಯು
ಅಂತಪ್ಪೊಡಿಂತಿದುವೆ ಮೆಚ್ಚಿದೆದೆಯುಡುಗೊರೆಯು.

## ಹಾಡಿನೊಡತಿ

೧

ಸವಿಹಾಡ ರಸವತಿಯೆ
ಎದೆಯನ್ನೆ ಕನ್ನೆ,
ನಿನ್ನೆದೆಯ ಬೀಣೆಯನು ನುಡಿಸು ಚೆನ್ನೆ!
ನುಡಿದು ಪಡಿನುಡಿದು ಎದೆವನೆದೆರೆದು ನುಡಿಯೆ.

೨

ಜೀವಸಂಜೀವಿನಿಯೆ
ಕಲ್ಪನಾಮೋದೆ,
ಹೋಗಾಡಲೀರೊತೆ ಹಾಡು ಪ್ರಮದೆ
ಅಂಬರವ ತುಂಬಿ ತುಳುಕಿಸಿ ಗಾನ ಸುರಿಯೆ!

೩

ಚಿತ್ಕಲಾ ಸುಂದರಿಯೆ
ಲಲಿತಾರವಿಂದೆ,
ಪುಳಕದಲಿ ಗುಡಿಗಟ್ಟಿ ಬಂದು ನಿಂದೆ
ಹಾಡು ಹಾಡೆನ್ನ ಕಂಗಳು ಕೋಡಿವರಿಯೆ!

೪

ಸುರುಚಿರ ವಿಲಾಸಿನಿಯೆ
ಝೇಂಕಾರವಾಣಿ!
ಚಿನ್ನಾದವಾನಂದಿ ಕವಿಯು ಮೌನಿ,
ರವಿಕಿರಣ ಮುದ್ದಿಡುವ ಹೂವಿನೊಲು ಒಲಿಯೆ.

೫

ಗಾಯತ್ರಿ ಕಲ್ಯಾಣಿ
ಚೆಲು ಚೆಲ್ಲಗಾರ್ತಿ
ಭಾವಚಿಂತಾರತ್ನ ಕಾವ್ಯಸ್ಫೂರ್ತಿ
ಬಾಂದಳದಿ ಭೂತಲದಿ ನಾದ ನಿರ್ಝರಿಣಿ!

೬

ಹೊಂಗೆಳತಿ ಸಂಗಾತಿ
ಏನೆಂಥ ಪ್ರೀತಿ!
ರಸರಸಾಲದಿ ಕುಕಿಲುತಿರುವ ಖ್ಯಾತಿ
ರೋದೋಂತಪರ್ಯಂತ ನುಡಿ ಮಿಡಿಸು ತಂತಿ.

## ಕವಿತೆಗೆ

ಕವಿತೆ! ಸುಲಲಿತ ಭಾವಸಂಪ್ರೀತೆ, ನನ್ನೆದೆಯ
ಸುಪ್ತಸುಖದುಃಖ ವೀಣಾಕ್ವಣಿತ ಸಂಗೀತೆ
ಚೈತ್ರಮುಖಿ ಕಣ್ಣನರಳಿಸು ವಿಮಲವಿಖ್ಯಾತೆ!
ಏನಿದ್ದರೇನು ವಿಶ್ವಂಭರಿತೆ ನಿನ್ನುದಯ
ಚಿರನೂತನೋತ್ಸಾಹ ಚೇತನಂ ಪಡೆವನಕ
ಕವಿಮನವು ಬರಿಯುದಾಸೀನ ರಸಹೀನತೆಯ

ದೀನತೆಯ ತವರು; ಅದೊ ವಿಶ್ವಮೋಹಿನಿ ಉಷೆಯ
ಚುಂಬನುತ್ಕರ್ಷತೆಗೆ ಭೂಮಿಗಿಳಿದಿದೆ ನಾಕ!
ಆವುದೋ ಮೂಲೆಯಲಿ ಕುಳಿತು ಭೂರಂಗದಲಿ
ನಡೆವ ಅಕಟೋವಿಕಟ ನಾಟಕದ ಹಿನ್ನೆಲೆಯ
ಬಗಿದು ನೋಡುವ ಬಯಕೆ ಬಗೆಯೊಳಿದೆ; ಮನ್ನಣೆಯ
ಅಳಿಯಾಸೆ ಮಣ್ಣುಗೂಡಲಿ, ಮಹಾಪೂರದಲಿ
ಜಾಲಿಸಲಿ ಬಾಳಕೊಳೆ, ಬದುಕು ಮಡಿಯಾಗಿರಲಿ
ಮೂಡು ಮುದ್ದಿನ ಕವಿತೆ ಋತಶಿವಾನಂದದಲಿ.

## ಅವಳು ನನ್ನವಳಾಗಿ

ಆಕಾಶ-ಅಲ್ಲಿರುವ ಎಲ್ಲ ನಕ್ಷತ್ರಗಳು
ಜಗವು-ಮುಗಿಯದ ಅದರ ಎಲ್ಲ ಸಂಪದವು
ನನ್ನ ವಶವಾದರೂ ನಾನು ಇನ್ನಿಷ್ಟು ಬಯಸಬಹುದು;
ಆದರೆ ನಾನು ಸಂತೃಪ್ತ, ನೆಲದ ಮೇಲಿನ ಸಣ್ಣ ಮೂಲೆ ಸಾಕು-
ಅವಳು ನನ್ನವಳಾಗಿ ಮಾತ್ರ ದೊರೆಯಬೇಕು.*

## ನುಗ್ಗಿ ಬಂದಿತು ಎಲ್ಲ ಲೋಕದಾನಂದವದು

ನುಗ್ಗಿ ಬಂದಿತು ಎಲ್ಲ ಲೋಕದಾನಂದವದು
ನನ್ನ ದೇಹದ ಗೇಹ ರಚನೆಗೆಂದು,
ಮುದ್ದನಿಟ್ಟವು ಬಾನ ಬೆಳಕು ಬಿಟ್ಟೂ ಬಿಡದೆ
ಅವಳು ಎಚ್ಚರಗೊಂಡು ಏಳುವರೆಗು.

ತ್ವರೆಯಿಂದ ಬಂದ ಬೇಸಗೆ ತಂದ ಹೂವುಗಳು
ಅವಳ ಉಸಿರಾಟದಲಿ ಉಸಿರಿಟ್ಟವು.
ಹರಿವ ನೀರಿನ, ಬೀಸುಗಾಳಿಗಳ ಸೂಸುದನಿ
ಅವಳ ಸಂಚಲನದಲಿ ಸರಗೈದವು.

ಮೋಡಗಳ, ಕಾಡುಗಳ ಬಣ್ಣದೇರಿಳಿತಗಳು
ಅವಳ ಬಾಳಿಗೆ ಹರಿದು ಮೀಯಿಸಿದವು;

---

* 'Lover's Gift' : 5

ಎಲ್ಲ ಎಲ್ಲದರ ಸ್ವರ ಮಾಧುರ್ಯವವಳ ಅಂ-
        ಗಾಂಗಗಳ ಲಾಲಿಸುತ ರೂಪಿಸಿದವು.

ಅವಳೆನ್ನ ಕೈಹಿಡಿದ ಕನ್ನೆ - ನನ್ನೀ ಮನೆಗೆ
        ತನ್ನ ದೀಪವ ಹಚ್ಚಿ ಬೆಳಗಿಸಿದಳು.*

## ನನ್ನವಳೀ ಶರದೃತು

ನನ್ನವಳೀ ಶರದೃತು-
ನನ್ನೆದೆಯೊಳೋಲಾಡಿದವಳು.
ಅವಳ ಕಾಲಂದಿಗೆಯ ಹೊಳೆವ ಗೆಜ್ಜೆಗಳು
ನನ್ನ ನರನರಗಳಲಿ ಝಣಿರು ಝಣಿರು!

ಅವಳ ಮಂಜಿನ ಮುಸುಕು
ಪಟಿಪಟಿಸಿತೆನ್ನುಸಿರೊಳು.
ನನ್ನ ಕನಸುಗಳಲ್ಲಿ
ಅವಳ ತಲೆಗೂದಲಿನ ಮೃದುಲ ಸೋಂಕು.

ನನ್ನ ಬಾಳನು ತುಡಿದು ಕಂಪಿಸುವ ಎಲೆಗಳಲಿ-
ಎಲ್ಲೆಡೆಗು ಹರಡಿರುವಳು.
ನೀಲ ಬಾನಿಂದವಳ ನಗುವ ಕಣ್ಣುಗಳು
ತಮ್ಮ ಬೆಳಕನು ಕುಡಿದವೆನ್ನೆದೆಯೊಳು.+

## ನಾವಿಬ್ಬರು

ಹೂತೋಂಗಲಲಿ ಕುಳಿತು, ಹೊಂಬಕ್ಕಿ ಹಾಡುತಿರೆ
        ಎನ್ನೆದೆಯು ಸಂತಸದಿ ಕುಣಿಯುತಿಹುದು;
ನಾವಿಬ್ಬರೂ ಒಂದೆ ಹಳ್ಳಿಯಲಿ ಬಾಳಿಹೆವು-
        ಈ ಬಗೆಯ ಬದುಕೆಮ್ಮ ಹಿಗ್ಗಿಸಿಹುದು.

---

* 'Fruit - Gathering', LXXII

\+ 'Lober's Gift' - 57

ನಮ್ಮ ತೋಪಿನ ನೆಳಲ ಹಸುರ ಮೇಯಲು ಬಹವು
ಅವಳ ಮುದ್ದಿನವೆರಡು ಕುರಿಮರಿಗಳು;
ಹಾದಿತಪ್ಪುತ ನಮ್ಮ ಗೋದಿ ಹೊಲಕೈತರಲು
ಅಕ್ಕರತೆ ತೋಳಿನಲಿ ತೆಗೆದಪ್ಪಲು.

ನಮ್ಮೂರು 'ಕಂಜನಾ', ಹರಿದಿಹುದು ಹೊಳೆಯೊಂದು
'ಅಂಜನಾ' ಎಂದದನು ಕರೆಯುತಿಹರು;
ನಮ್ಮೂರಿನವರೆಲ್ಲ ನಾನೆಂದರರಿತಿಹರು
'ರಂಜನಾ' ಎಂದವಳಿಗಿಟ್ಟ ಹೆಸರು.

ನಮ್ಮ ಬನದಲಿ ಹುಟ್ಟುಕಟ್ಟಿರುವ ತುಂಬಿಗಳು
ಅವಳ ಬನಕೋಡುವವು ಜೇನರಸಲು,
ಅವಳ ತೋಟದಲರಳಿ ಜಗುಳಿರುವ ಹೂಜಲ್ಲಿ
ನಾವು ಮೀಯುವ ಝರಿಗೆ ತೇಲಿ ಬಹವು.

ನಮ್ಮೆರಡು ಬೀಡುಗಳ ನಡುವಿರುವ ತಾಣದಲಿ
ಒಂದೆ ಹೊಲವಿಹುದಲ್ಲಿ ದಾರಿತುಂಬಿ,
ಅವಳ ಹೊಲದಿಂದೆಮ್ಮ ಮಾರುಕಟ್ಟೆಗೆ ಬಹವು
ಒಣಗಿರುವ ಕುಜ್ಮಹೂ ಬುಟ್ಟಿದುಂಬಿ.

ನಮ್ಮೂರು 'ಕಂಜನಾ' ಹರಿದಿಹುದು ಹೊಳೆಯೊಂದು
'ಅಂಜನಾ' ಎಂದದನು ಕರೆಯುತಿಹರು;
ನಮ್ಮೂರಿನವರೆಲ್ಲ ನಾನೆಂದರರಿತಿಹರು;
'ರಂಜನಾ' ಎಂದವಳಿಗಿಟ್ಟ ಹೆಸರು.

ಚೈತ್ರ ಮಾಸದಲವಳ ಮನೆಯ ಮುಂದಿನ ದಾರಿ
ಮಾಮರದ ಕಮ್ಮಲರ ಕಂಪೊಗೆವುದು;
ಅವಳ ಅಗಸೆಯ ಬೆಳೆಯು ಮಾಗಿ ಸುಗ್ಗಿಗೆ ಬರಲು
ನಮ್ಮ ಸಣಬಿಗೆ ಹೂವು ಚೆಲ್ವರಿವುದು!

ಅವಳ ಗುಡಿಸಲ ಮೇಲೆ ಮಿನುಗುತಿಹ ಚಿಕ್ಕೆಗಳು
ನಮ್ಮೆಡೆಗು ಅದೆ ಬೆಳಕ ಚೆಲ್ಲುತಿಹವು.
ಅವಳ ಕೊಳ ತುಳುಕಿಸುವ ತುಂತುರಿನ ಸೋನೆವಳೆ
ನಮ್ಮ ಪೇರಡವಿಯನು ಸೊಕ್ಕಿಸುವದು.

ನಮ್ಮೂರು 'ಕಂಜನಾ' ಹರಿದಿಹುದು ಹೊಳೆಯೊಂದು
'ಅಂಜನಾ' ಎಂದದನು ಕರೆಯುತಿಹರು;
ನಮ್ಮೂರಿನವರೆಲ್ಲ ನಾನೆಂದರರಿತಿಹರು
'ರಂಜನಾ' ಎಂದವಳಿಗಿಟ್ಟ ಹೆಸರು.*



* The Gardener : 17

# ದೀಪಧಾರಿ

೧೯೫೪-೧೯೫೬

## ಬೇಲಿಯ ಮೇಲಿನ ನೀಲಿಯ ಹೂಗಳು

ಸಾಲಾಗಿ ನವಿಲು ಗರಿಗೆದರಿ ನರ್ತಿಸಿದಂತೆ
ಮುಂಜಾವದಲಿ ಬೇಲಿತುಂಬ ನೀಲಿಯ ಹೂವು
ಜೀವನೋತ್ಸಾಹದಲಿ ಎದೆದುಂಬಿಸುವ ರೂಹು!
ಭೂಮಿಯಾಳದ ಭಾವ ಮೇಳೈಸಿ ಪುಟಿದಂತೆ
ಎಲ್ಲೆಂದರಲ್ಲೆ ಮನಸೇಚ್ಛೆ ಬೆಳೆದಿಹ ಬಳ್ಳಿ
ತೆರೆದಿಹುದು ನೂರು ಸಾವಿರ ನೀಲ ಬಗೆಗಣ್ಣು!
(ನೇಸರನಿಗೂ ಜಗಕು ಇನ್ನೂ ನಿದ್ದೆಗಣ್ಣು)
ಎಲ್ಲ ಒಂದೇ ಅದಕೆ - ತೋಟ ಬೇಲಿಯಕಳ್ಳಿ.
ಬಿಸಿಲು ಬಲಿಯುವ ಮುನ್ನ ಬಗೆಗೊಂಡ ಸೌಜನ್ಯ
ಮುಖವ ಸಣ್ಣದು ಮಾಡಿ ಮುದುಡಿಕೊಂಡಿರೆ ಜೀವ
ಬರಿಯ ನೆನಪಿಗೆ ಉಳಿದ ದೇಟಿಗಂಟಿದ ಹೂವ
ಬದಿಬದಿಗೆ ನಾಳೆಯರಳುವ ಮೊಗ್ಗೆ ಮೂರ್ಧನ್ಯ!
ವಿಮಲ ಕೋಮಲ ಕಾಂತಿಯೊಗುಮಿಗುವ ಚೈತ್ಯಾಕ್ಷಿ
ಅದೊ ಅಲ್ಲಿ, ಇದೊ ಇಲ್ಲಿ ಪ್ರತ್ಯಕ್ಷ ಸುಮ ಸಾಕ್ಷಿ!

## ಮಧುರಚೆನ್ನರ ನೆನಪಿಗೆ

ಜಾನಪದ ಜೀವನದ ಸಂಗೀತಕೆದೆಯೊತು
ಹೂವು ಹೂವಿನ ಜೇನು ತೊಳೆಯ ಬಿಡಿಸಿ,
ಹೊಸ ಬೆಳೆಯ ಕಸುವಾಗಿ ಸ್ನೇಹರಸದೊಳು ಮಾಗಿ
ಸುಗ್ಗಿ ಮಾಡಿದಿರಂದು ನಾಡ ನಲಿಸಿ!

ಅಂದಿನಿಂದೆನ್ನೆದೆಗೆ ಮೂಡಿಹುದು ಮಳೆಬಿಲ್ಲು
ಆಡಿಹವು ನಿಮ್ಮೂರ ನವಿಲ ಹೆಜ್ಜೆ!
ಕಾಳರಾತ್ರಿಯು ಬೆಳಗು ಬೈಗುಗಳು ದಾಟಿದವು
ಕಂಡೆ ನಾ ನಿಸ್ಸೀಮ ನಯದ ಓಜೆ!

ದೇಹ ಮೋಂಬತ್ತಿಯೊಲು ಮುಡಿದ ಬೆಳಕಿನ ಕುಡಿಗೆ
ಕರಗಿ ಮಿದುವಾಗಿತ್ತು ಅಂತರಂಗ;
ಬೆಳ್ಮುಗಿಲ ಕನಸುಗಳು ಸಚ್ಚಿದಾಕಾಶದಲಿ
ದೇವತಾಪೃಥಿವಿ ಮೈದಡವಿದಾಗ!

ಹರಿಗಡಿದ ಬಾಳಿನೊರತೆಯ ತೋಡೆ, ಪ್ರೀತಿ ಜಲ
ಸೆಲೆಯೊಡೆದು ಬರೆ ಮಧುರಗೀತವಾಗಿ
ಹಲವನೆಲ್ಲನುಳಿದು ಹಾಡಿ ಮೀಸಲುಗವಿತೆ
ಚೆಲುವನಲ್ಲಿಯೆ ಬೆರೆತೆ ಬಯಕೆ ಮಾಗಿ!

"ನಿಶ್ಯಬ್ದ ನಿಶ್ಯಬ್ದ ಶಬ್ದಾದಾಚೆಯ ಶಬ್ದ" -
ಮೌನ ಕೋಗಿಲೆಯದನೆ ಧ್ಯಾನಿಸಿತ್ತು!
ಸೂರ್ಯಕಾಂತಿಯ ಚಿತ್ತವದರ ಸುಳಿವಿಗೆ ಹೊರಳಿ
ಬೆಳಗಿನೊಳಗಿನ ಬೆಳಕ ಹೀರುತಿತ್ತು!

ಇಲ್ಲಿ ಊರಿದ ಬೀಜವಲ್ಲಿ ಹಣ್ಣಾಗಿತ್ತು
ಆಕಾಶದಡವಿಯಲಿ ಕೊಂಬೆ ಚಾಚಿ!
ಮರದ ನೆರಳಲಿ ತನ್ನ ನೆರಳನರಸಲು ಬಹುದೆ?
ಅರಿತವರಿಗಂತದುವೆ ಆತ್ಮಸೂಚಿ!

ತನುವು ನಿಸದಿಗೆಗಲ್ಲು, ಮನವು ಮಾಸತಿ ಕಲ್ಲು
ನಿಮ್ಮ ಸಾಧನೆಯೊಂದು ವೀರಗಲ್ಲು!
ಭಾವ ದೇವಾಲಯದಿ ನಿತ್ಯ ನಂದಾದೀಪ
ಶರಣು ಶರಣೆಂಬುದೇ ಕೊನೆಯ ಸೊಲ್ಲು!

## ಶ್ರೀ ರಾಮಾಯಣದರ್ಶನವನೋದಿ

ಮಲೆನಾಡ ನಿರ್ಝರಿಣಿ ತಡಿಯ ತಳಿರ್ದೊಂಗಲಲಿ
ನಲಿವ ಮಂಗಲಪಕ್ಷಿ ನಿಚ್ಚಹಸುರಿನ ಒಸಗೆ
ಹಾಡೆ ಈ ನೆಲದ ಮಣ್ಣಿಂದೊಗೆದ ಹಾಲ್ದೆನೆಗೆ,
ಸೂರ್ಯ ಚಂದಿರ ತಾರೆ ಮೂಡಿ ಮುಳುಗುವ ನೀಲಿ
ತೇಲಿಸಿತು ನಿನ್ನೆಡೆಗೆ ತನ್ನಮೃತ ಲೀಲೆಯಂ!
ಭವ್ಯತೆಯ ಕನಸು ಗರಿಗೆದರಿ ಮರದುದಿಯಿಂದ
ಬಾನಮುಡಿಗೇರಿ ಬೆಳಕಿನ ಗರ್ಭಗುಡಿಯಿಂದ
ಮಿಡಿಯಿತೊಂದದ್ಭುತೋಂಕಾರ ವೀಣಾರವಂ!
ಗುಣಕೆ ಮತ್ಸರಮುಂಟೆ? ದೇಗುಲದ ಗಂಟೆಯಲಿ
ಕಂಬ ಕಂಬವ ತುಂಬಿ ಮೈದುಂಬಿ ನಿಂತ ಬಗೆ
ನಿಂತೆ; ನಿಂತೆನೆ? ನಾದ ತಂತುವಾದೆನು ಕೊನೆಗೆ
ರಸಋಷಿಯ ಪದ್ಮಶಾಂತಿಯ ಪರ್ಣಶಾಲೆಯಲಿ.
ಯುಗಯುಗಕು ಸಾಗಿರುವ ಜಗದ ರಾಮಾಯಣಂ
ನೂರು ಸೂರ್ಯೋದಯದ ಬಿಂಬ ಕವಿದರ್ಶನಂ!

## ಮನೆ-ಕಿಟಕಿ

೧

ಮಗುವನಾಡಿಸುತ ಹೂವಿಗೆ ಹೂವ ಪೋಣಿಸುತ
ಜಾವ ಜಾವಕೆ ಹಾಡಿನೆಳೆಯ ಜಗ್ಗಿ,
ದುಂಡುಮಾಲೆಯ ಕನಸ ಕಟ್ಟಿ ಮುಡಿಯುತ್ತಿಹಳು
ಇರುಳ ಬಾನಿಗೆ ಚಂದ್ರ-ತಾರೆಯಾಗಿ!

ನೀರು ತುಂಬಿದ ಕೆರೆಯ ಹೃದಯಾಂತರಾಳದಲಿ
ಆ ನೀಲಿ ಆ ಮೋಡವೆಲ್ಲ ಮೂಡಿ
ಹೇಳಬಾರದ ಹಿಗ್ಗು-ಬಾಯಿ ಬಿಟ್ಟಿತು ಮೊಗ್ಗು
ಯಾವುದೋ ಮಾಯೆಯಲಿ ಗಾಳಿ ತೀಡಿ!

ಈ ಮನೆಯ ಮನದ ಅನುನಯ ನಿತ್ಯನೂತನವು
ಅದರ ಕಲ್ಪನೆ ಕುಡಿಯೆ ರಂಗವಲ್ಲಿ;

ಊದು ಬತ್ತಿಯು ಬರೆವ ಊಹೆ ಚಿತ್ರವಿಲಾಸ-
ಮಗುವಿನೆಳನಗೆಯದರ ಧವಳಕೀರ್ತಿ!

ಮುಂಜಾವದಂಗಳದಿ ಹೊನ್ನ ಬೆಳಕಿನ ಹುಂಜ
ಕೂಗಿ ಕುಣಿಸುವುದದರ ಹೂ-ತುರಾಯಿ;
ಸಂಜೆ ಮೇಲುಪ್ಪರಿಗೆ ಚಿಕ್ಕೆ ಸಮ್ಮೇಲನಕೆ
ಕತ್ತಲೆಯ ಬೀಡಿನಲಿ ಸರಬರಾಯಿ!

ಹಂಚು-ಮಾಳಿಗೆ ಮೇಲೆ ಓಡೋಡಿ ಬರುವ ಮಳೆ
ಕಿಟಕಿ ಕಣ್ಣನು ತೆರೆವ ಮಿಂಚು ಸೆಳೆತ,
ಎಲ್ಲ ಗುಡುಗಿನ ಧ್ವನಿಯನೆದೆಗೆ ತುಂಬಿಸಿಕೊಳುವ
ಇದರ ಮಡಿಲಲ್ಲಿಹವು ನೂರು ಗೀತ!

೨

ಜಾಜಿ ಮಲ್ಲಿಗೆ ಬಕುಲ ಸಂಪಿಗೆಯ ಹೂಗಾಳಿ
ಬಾನಬೆಳದಿಂಗಳಿನ ಗಂಧಲೇಪ,
ನೂರು ಸ್ನೇಹದ ಒಲುಮೆ ಚಿಲುಮೆ ಪುಟಿಯುವ ರಂಗ
ಏಕಾಂತಕಿದು ಮತ್ತೆ ನಿಸ್ತರಂಗ!

ದೂರ ದೂರದ ಹಡಗು ಬಂದು ತಂಗುವವಿದರ
ಒಡಲ ನಡುಗಡ್ಡೆಯಲಿ ಸರಕು ಇಳಿಸಿ,
ತೆರೆ ತೆರೆಯ ಭಾವದುನ್ಮಾದಕ್ಕೆ ಏರಿಳಿದು
ಸಾಗುವವು ದಿಗ್ದಿಗಂತಕ್ಕೆ ಎಳಸಿ!

ದಾರಿ ತಪ್ಪುತ ಅಲೆದು ಮುಗಿಲ ಶೂನ್ಯವನಳೆದು
ಕನಸೊಡೆದು ಗರಿಯುದುರಿ ಸೋತ ಪಕ್ಷಿ
ರೆಂಬೆ ರೆಂಬೆಯ ಕುಕ್ಕಿ ಕನವರಿಸಿ ಹಾರುವವು
ಮರದ ಹರಣವೆ ಹಾರಿ ಹೋದ ತೆರದಿ!

ಚಣಕೊಂದು ತೋಟ, ಮನವೆಳಸಿದಾಕಡೆ ನೋಟ
ಹರಿಸಿ ಹಾರುತ ಗಾಳಿಯೊಡನೆ ತೇಲಿ
ಅಂತು ಇಂತೂ ಹೊತ್ತುಗಳೆವ ಪಾತರಗಿತ್ತಿ
ಒಮ್ಮೆಯಾದರು ಭೆಟ್ಟಿಕೊಡುವವಿಲ್ಲಿ

ಮಾವು ಹೂವಿನ ತೇರು, ಹೊಂಗೆ ತುಂಬಿದ ಬಸುರಿ
ಉರಿವ ದೀಪಸ್ತಂಭವಗೊ ಬೂರಲ!
ಬೆಳೆದು ಬಾಗಿದ ತೆಂಗು, ಹುಲ್ಲು ಹೂವಿನ ರಂಗು
ಎಲ್ಲೊ ಮರೆಯಾಗಿಹುದು ಮರಿಕೋಗಿಲ!

೩

ನಿಮಿಷ ನಿಮಿಷಕೆ ಬೀದಿಮೈಯ ಕೆರೆಯುವ ಕಾರು
ಬಸ್ಸು, ತುಂಬಿದ ಲಾರಿ ತರಗ-ಬರಗ
ಆಡು ಕುರಿಮರಿ ಎಮ್ಮೆ ಹೋರಿ ಆಕಳ ಮಂದೆ
ನಡುಬೀದಿಯಲಿ ನಾಯಿ ಗೋಪ್ಯಭಂಗ!

ಹೊಗೆಗೋಡೆ, ಹಳಸಿರುವ ನೆಳಲು, ಬಚ್ಚಲರೊಜ್ಜು
ಇಲ್ಲಣವು, ಜೇಡಬಲೆ, ಧೂಳಿ ಮುಸುಕು-
ಒಲೆಯ ಮೇಲೊಗ್ಗರಣೆ ಘಾಟ, ಛಟ ಛಟ ಸೀನು-
ಡಬ್ಬಿಬಾಯಿಗೆ ಸೊಂಡಿ ಚಾಚುವಿಲಿಯು.

ಊರಿನಾಚೆಗೆ ದೂರ ಗಿರಿಕಿರೀಟದ ತುದಿಗೆ
ಮೋಡ-ಬೆಳಕಿನ ಪುಂಜ-ಅದ್ವಿತೀಯ!
ಹಗಲು ಇರುಳಿನ ಕೈಗೆ ಕೊಟ್ಟು ಪ್ರತಿಭೆಯ ಪಂಜು-
ಬಾನಿನಾಶೀರ್ವಾದ ಶಾಂತಿ ಅಭಯ!

ದಿನಬಳಕೆಯನು ಮೀರಿ ಸೆಳೆವತೀಂದ್ರಿಯ ಸ್ಪರ್ಶ
ಹೊರ ಜಗವನೊಳಗಿಟ್ಟವುಂಕಿ ತಣಿಸಿ
ಬಾನ ಕನ್ನಡಿಗೆ ಚೌಕಟ್ಟು ಹಾಕಿದೆ ಕಿಟಕಿ
ಇಲ್ಲಿ ಕುಳ್ಳಿರು, ಆಗು ಅಂತರ್ಮುಖಿ.

## ಮಧ್ಯಾಹ್ನದ ಮಜಲು

ಬಾನ ಬೀದಿಗೆ ಜೋಲಿ ಹೊಡೆದು ಉರುಳಿವೆ ಮೋಡ
ಪಡುವಣದ ಪಡಖಾನೆಯಿಂದ ತೂರಿ;
ಬೇಕು ಬೇಕಾದತ್ತ ಹೊರಳಿ ಅಸ್ತವ್ಯಸ್ತ
ಸುಸ್ತಾಗಿ ಬಿದ್ದಿಹವು ನೆರಳು ಕಾರಿ!

ಹಗಲು ಮೂರ್ಛೆಗೆ ಸಂದ ಗಾಳಿ ಇದ್ದೆಡೆಯಿಂದ
ಮೈಮುರಿದು ಆಗೀಗ ಆಕಳಿಸಿದೆ-
ಆಗ ಬೆಚ್ಚನೆ ಧೂಳಿ ಹುಚ್ಚೆದ್ದು ಮೇಲೇರಿ
ಅದಕೆ ಹಾಜರಿ ಕೊಟ್ಟು ಕುಪ್ಪಳಿಸಿದೆ!

ಕಾಗೆ ಬೇವಿನಕಾಯಿ ಕುಕ್ಕಿ ಚುಂಚನು ತಿಕ್ಕಿ
ಹೊತ್ತು ಗೊತ್ತಿಲ್ಲದೆಯೆ ಕಿರಿಚುತ್ತಿದೆ;
ಹುಲ್ಲಿನಲಿ ಹುಳವನಾರಿಸುತಿಹವು ಗೊರವಂಕ
ಗೂಡಿನಲಿ ಗುಬ್ಬಚ್ಚಿ ಅರಚುತ್ತಿದೆ.

ಗಿಡದ ಬೊಡ್ಡೆಯನಾತು ಮಲಗಿರುವ ಭಿಕ್ಷುಕನ
ಮುತ್ತಿ ಜೊಮ್ಮೆಂದಿಹುದು ನೊಣದ ಪರಿಸೆ;
ಬಾಲ ಗುಂಡಾಡಿಸುತ ನಾಯಿ ತೆರೆದಿದೆ ಬಾಯಿ
ತೀರಲಿಲ್ಲವೊ ಅದರ ಅಗಳಿನಾಸೆ!

ಬೆಕ್ಕು ತಿಂದಿಹ ಇಲಿಗೆ ಬಿತ್ತು ಹದ್ದಿನ ಕಣ್ಣು
ನಿಮಿಷಾರ್ಧದಲಿ ಅದಕು ಅರ್ಧಪಾಲು,
ಬೆಟ್ಟಿ ಬೆನಕನ ಮಸಣಯಾತ್ರೆ ನೆರವೇರಿಸಲು
ಅತ್ತೆ ಹೊರಟಂತಿಹುದು ಇರುವೆ ಸಾಲು!

ಹಸುರು ಜೊಂಡಿನ ಹೊಂಡದಲ್ಲಿ ಬಡಕಲು ಎಮ್ಮೆ
'ಈಸಬೇಕೊ ಇದ್ದು ಜೈಸಬೇಕು'!
ಹಿಂಡಿದರೆ ಉಪಚಾರ; ತೊಂಡು ಮೇದರೆ ಕೊಂಡ-
ವಾಡೆಯಲಿ ಉಪವಾಸ ಸಾಯಬೇಕು.

ಬಾಡಿಗೆಯ ಚಕ್ಕಡಿಗೆ ಎಣ್ಣೆಯಿಲ್ಲದ ಕೀಲ
ಎಳೆಯಲಾರದ ಎತ್ತು ಎಳೆಯುತ್ತಿದೆ;
ಧೂಳಿ ಮಾಂಕಾಳಿಯೊಲು ಬುಸುಗುಟ್ಟಿ ಬರುತಿರುವ
ಕಾರು ಫೋಂಕರಿಸುತ್ತ ಒತ್ತರಿಸಿದೆ!

ಆಫೀಸಿನಲಿ ಕುಳಿತ ಕಾರಕೂನರ ಕುರ್ಚಿ
ಜಡವಾಗಿ ಬಡವಾಗಿ ಹುರುಪಳಿಸಿವೆ;
ಮೇಜು ತಿಣಿಕಿದೆ, ಟೈಪುರೈಟರಿಗು ತೆರಪಿಲ್ಲ
ಹೊರೆಗಟ್ಟಲೆಯ ಕಡತ ಬೆಂಬಳಿಸಿದೆ!

ಎದುರುಗೋಡೆಗೆ ಶಿಲುಬೆಗೇರಿಸಿದ ಗಡಿಯಾರ
ಸುತ್ತುಸುತ್ತಿಗೆ ಗಂಟೆ ಟೆಂಟೆಣಿಸಿದೆ;
ಹತ್ತಿರದ ಹೋಟಲಿನ ಹಾಡು-ಹಲಗೆಯ ಕೂಗಿ
ಬಸಿಯ ಮಧುವೀಂಟಲ್ಕೆ ಕರೆಯುತ್ತಿದೆ.

ಬಿಸಿಲು ತಗ್ಗಲು ಸಂಜೆ ನಂಜಿಕೊಳ್ಳಲಿಕಿಹುದು,
ಇರುಳು ಹೇಗೋ ಕಳೆದು ಬೆಳಗು ಬಹುದು.
ಮಜಲು ಬರುವುದು ಮತ್ತೆ ಹಗಲ ಪಂಜನುಹಿಡಿದು
ಜಗದ ಹೆಗಲಿಗೆ ನೊಗವ ಹೇರಿಸುವುದು.

## ವಿರಹಿ : ಸಂಜೆ

ಉರಿದುರಿದು ಹಗಲು
ಆರಿ ಹೋಗಿಹ ಕೆಂಡವಾಯ್ತು ಮುಗಿಲು,
ನೇಸರನಿಗೂ ಬೇಸರಾಗುವದು ಸಹಜ
ನಿಜ ......
ರಜೆಯೆ ಸಿಗದಿರಲು ಅವನಿಗೆಲ್ಲಿಯದು ಮಜ?
ಅಂತೆಯೇ
ಅವನೆಂದಿನಂತೆಯೇ
ಕರಿಯ ಮೋಡದ ಬರಿಯ ಕಂಬಳಿಯ ಮುಖಕೆಳೆದು
ಹೊತ್ತೂಂಟ್ಲೆ ಮಲಗಿದನು ಗಪ್ಪುಗಡದು.

ಮಗುವು ಕಿಟಿಕಿಟಿ ಹಚ್ಚಿ ಕೀಸರಿಟ್ಟಂತೆ
ಮಳೆಯು ಜಿಟಿ ಜಿಟಿ ಹತ್ತಿ ತೊಟ್ಟಿಕ್ಕಿದೆ;
ಮರದ ಎಲೆಗಳ ಸಂದಿಯಲ್ಲಿ ಮಾಸಿದ ಕಿರಣ
ಹರಿದು ಬರುತಿದೆ ಪಿಸಿಯ ನೂಲಿನಂತೆ.
ಆಗ ಕಣ್ಣಿಗೆ ಸ್ವಲ್ಪ ಬಣ್ಣವಾಗೆ
ಅಳುವ ಮಕ್ಕಳು ನಸುವೆ ನಕ್ಕಹಾಗೆ.
ಬಳಿಯ ಹೊಂಡದ ದುಂಡುಮೇಜು ಪರಿಷತ್ತಿನಲಿ
ಕಪ್ಪೆಗಳು ಚಪ್ಪಾಳೆ ತಟ್ಟಿ ಜಿಗಿದಾಡುತಿವೆ
ತಮ್ಮ ಪಕ್ಷವೆ ಕೊನೆಗೆ ಗೆದ್ದಹಾಗೆ!
ಜ್ವರವಿಳಿದು ಮೈ ಬೆವರು ಬಿಟ್ಟ ರೋಗಿಯತೆರದಿ

ಕಾದ ತಿರೆ ತೊಯ್ದಿಹುದು ಮೇಲೆ ಕೆಳಗೆ-
ಇಂಥ ಇಳಿಹೊತ್ತಿನೊಳಗೆ.

ಕಣ್ಣು ತಪ್ಪಿಸಿ ಬರುವ ಕಳ್ಳ ಬೆಕ್ಕಿನ ತೆರದಿ
ಮಬ್ಬುಗತ್ತಲೆ ಇಳೆಯ ಮೂಸುತಿಹುದು;
ಗಾಳಿ ಮೈಸೋಕಿಸದೆ ಮಡಿಯ ಮಾಡುವರಂತೆ
ದೂರ ದೂರವೆ ಹಾರಿ ಬೀಸುತಿಹುದು.
ಮಂಜು ಹಬ್ಬಿತು
ಪೃಥ್ವಿಗೇ ನಂಜೇರಿದಂತೆ!
ಸೇದಿ ಬೀಸಾಡಿರುವ ಸಿಗರೇಟು ತುಂಡಿನೊಲು
ದೂರದಲಿ ಕಾಣಿಸಿತು ಮಂಕು ಚಿಕ್ಕೆ!
ವಿರಹಿಗಾಯಿತು ಸಂಜೆ
ಸೊರಗಿ ಹೋದಂತೆಯೆ ಬಾನಬಂಜೆ-
ರಾಗವಿರಹಿತವಾಯ್ತು ಅವಳ ಕೆನ್ನೆ,
ನಿಶೆಯು ಬರೆಯಿತು ದೊಡ್ಡದೊಂದು ಸೊನ್ನೆ.

## ಸೊಳ್ಳೆ

೧

ಓಡುತಿಹ ಕಾಲನನು ಹಿಡಿದು ನಿಲ್ಲಿಸಿ, ತಲೆಯ
ಚಾಣದಲಿ ಹೊಡೆದಂತೆ ಹತ್ತು ಗಂಟೆ
ಬಾರಿಸಿತು ಗಡಿಯಾರ, ಮುಂದೆ ಸಾಗಿತು ಮುಳ್ಳು
ಇರಲಿ ಬಿಡು, ನಮಗೇತಕದರ ತಂಟೆ?
ಮಂದ ಬೆಳಕ ತಂದ್ರಿಯಲ್ಲಿ
ಇಂದ್ರಚಾಪದಂತೆ ಬಾಗಿ
ಒಲವು ಸವಿಯ ನೀಡಿತು;
ಹಿಗ್ಗು ಪಡೆದ ಪ್ರಣಯಪಕ್ಷಿ
ನೀಲದಾಳದಲ್ಲಿ ಸುಳಿದು
ನಿರಾಯಾಸವಾಗಿ ಇಳಿದು
ಎದೆಯಗೂಡ ಸೇರಿತು.
ದೀಪವಿಳಿದು ಆರಿತು
ಕತ್ತಲೆ ಮೈ ಚಾಚಿತು.

ನಿದ್ದೆಲೋಹಚುಂಬಕದೊಲು
ಎಳೆವ ಸೆಳೆವ ಹೊತ್ತಿನಲ್ಲೆ
ತಂಬೂರಿಯ ನಾದದಂತೆ
ನಾರದರವತರಿಸಿದಂತೆ
ಝೇಂಕರಿಸಿತು
ಮೂಲೆಯಲ್ಲಿ ಕಾದು ಕುಳಿತ ಸೊಳ್ಳೆ
ತನ್ನ ಗತ್ತಿನಲ್ಲೆ!

೨

ಕೊಳ್ಳೆ ಹೊಡೆಯಲು ಬರುವ ಮೆತ್ತಗಿನ ಕಳ್ಳನೊಲು
ಸುಳ್ಳು ಸುಳ್ಳೇ ಹಾಡಿ ಹರಸುತಿತ್ತು;
ಬಾಂಬನೆಸೆಯುವ ಮೊದಲು ಅತ್ತಿತ್ತ ಹಾರಾಡಿ
ಸುತ್ತುವ ವಿಮಾನದೊಲು ಮರಸುತಿತ್ತು.
ಬಂತು ಅಗೊ!
ಬಂದೆಬಿಟ್ಟಿತು
ಮಹಾಸೈನ್ಯವನು ಹಿಂದಿರಿಸಿ ಮೊರೆದು 'ಸ್ವಾಹಾ'
"ನೀನಾರಿಗಾದೆಯೊ ಎಲೆ ಮಾನವಾ".
ಪರಿಚಿತರು ಸಲಿಗೆಯಲಿ ಮಾತನಾಡುತ ಬಂದು
ಹೆಗಲಮೇಲೆಯೆ ಕೈಯನಿರಿಸುವಂತೆ
ಬಂದು ಕುಳಿತಿದೆ ಮುಖದಮೇಲೆ ಅಂತೆ;
ಕೈ ಮುಟ್ಟಿ ಮೈ ಮುಟ್ಟಿ ಬಂದು
ಗುಂಯ್ ಗುಟ್ಟುತಿದೆ
ಕಿವಿಯಲ್ಲಿ ಸ್ಕ್ರೂ ಇಟ್ಟು ತಿರುವಿದಂತೆ
ರೋಮರೋಮಕೆ ಸೂಜಿ ಮದ್ದಿನಂತೆ!
ಇಂಥ ಧೈರ್ಯವದೆಂತು ಬಂತೊ ಕಾಣೆ,
ಕೋಣೆಯಾಚೆಗೆ ಇದನು
ಹೊಡೆದೋಡಿಸದೆ ಮಾಣೆ.

೩

ಅದು ಮುಂದು ಮುಂದೆ
ನಾನು ಸೂತ್ರದ ಗೊಂಬೆ
ತೆ ಆಡಿಸಿತೆನ್ನ ಹಿಂದು-ಮುಂದೆ.
ಗುಂಗಾಡ ಗುಂಗು ಮೈದುಂಬಿ ಹಂಗಿಸುತಿತ್ತು

ಆದರೂ ಆಗಲೆಂದೆ;
ಮನಕೆ ಮಾಯಾಮೃಗದ ನೆನಪು ತಂದು
ಪುಂಗಿಯೂದಿತು ಕಿವಿಯ ಬಳಿಗೆ ಬಂದು;
ಚಪ್ಪಾಳೆಗೂ ಸೊಪ್ಪುಹಾಕದೆಯೆ ಕೈತಪ್ಪಿ
ಮೂಲೆಯ ಕಪಾಟಿನಲಿ ಲೀನವಾಯ್ತು.

ಶಿಸ್ತಿನಿಂದ ಹಿಂದೆ ಸರಿದ
ಸೈನಿಕನೊಲು ಮರಳಿದೆ,
ಹಾಸಿಗೆಯಲಿ ಹೊರಳಿದೆ
......
ಕನಸಿನಲ್ಲಿ ಗೊರವ ಬಂದು
ಜಾಗಟೆಯನು ಬಡಿದನು:
'ಏಳ್ಕೋಟಿಗೇಳ್ಕೋಟಿಗೇಳ್ಕೋಟಿಗೋ'
ಕಣ್ದೆರೆದೆನು
? ? ?
ಕಿವಿ ನಿಮಿರಿತು
! ! !
ಗಡಿಯಾರ ಬಾರಿಸಿತು ಏಳುಗಂಟೆ.

## ಚಿಂತನ

೧

ತೆರಳಿದರು
ಅತಿಥಿಗಳು ಮರಳಿದರು ಮನೆಗೆ.
ನನ್ನ ಮನೆ
(ಗುಬ್ಬಿ ಹೆರವರ ಮನೆಗೆ
ತನ್ನ ಮನೆ ಎಂದಂತೆ)
ಬರಿದಾಯ್ತು ಕೊನೆಗೆ.

ಎದೆಯೊಲವನರಳಿಸುತ
ಕೆರಳಿಸುತ ಬಂದು
ಒಂದು ದಿನ ನಿಂದು

ಏನೆಲ್ಲವನು ಒಮ್ಮೆ ಹೊಳಹಿನಲಿ ತಂದು
ಎದೆಯ ತೋಟಕೆ ದಯೆಯ ಮಳೆಗರೆದರು!
ಮೇಲುನೋಟಕೆ ತಣಿಸಿ
ಒಳಗೆ ಕನಿಕರಿಸಿ
ಬೇಸಗೆಯ ಮಲ್ಲಿಗೆಯ ಗಾಳಿ ಬೀಸಿ
ಮೋಡದೊಲು ಬಯಲಾಗಿ
ಬೆರಗುಗೊಳಿಸಿದರು.
.........................
ತುಂಬಿದೀ ಬಟ್ಟಲವನಾರು ಕುಡಿದವರು?

೨

ಅಲ್ಲೊಬ್ಬರು
ಇಲ್ಲೊಬ್ಬರು
ಬಾಳ ಕವಲುದಾರಿಯಲ್ಲಿ
ಸಾಗಿದತಿಥಿಗಳೆಯರು;
ನೋವಿನೆಳೆಯ ಜಗ್ಗಿದಂತೆ
ನೆನಹಿನೊಡನೆ ನುಡಿವರು;
ಹೀಜಿ ಬಿಟ್ಟ ರಬ್ಬರಿನೊಲು
ಎದೆಗೆ ಬಂದು ಬಡಿವರು!
ಕತ್ತರಿಸಿದ ಹಲ್ಲಿ-ಬಾಲ
ಐದೊ ಆರೊ ಸಲ
ಜಿಗಿದು ನೆಗೆದು ನಿಶ್ಚೇತನ
ಅಂತೆ ಮನದ ಚಿಂತನ,
ಚಿರಂತನ.

## ಋತುಸಂಸಾರ

೧

ಮೂರು ತಿಂಗಳು
ಬೇಸರವ ನೀಗಿಕೊಳ್ಳಲು ಬಂದು ತಂಗಿದರು
ಮಗಳ ಮನೆಯೊಳು ಮುದುಕಿ ಮೋಜುಗಾರ್ತಿ.

ಮೊದಲೆರಡು ದಿನ ಕ್ಷೇಮಸಮಾಚಾರದ ಸುದ್ದಿ,
ಬೇಡವೆಂದರು ಕೂಡ ಕೆಲಸಕ್ಕೆ ಹಾತೊರೆವ ಕೈ
ಹಾಗೆಯೇ ನಾಲ್ಕು ದಿನ ಸೈ;
ಸುರುವಾಯ್ತು ರಗಳೆ
ಅಷ್ಟಿಷ್ಟು ಮಾತಿಗೇ ವಟವಟಾ ಪಿಟಿಪಿಟೀ . . . . .
ಲಟಿಕೆ ಮುರಿದು ಚಿಟುಕು ಮುಳ್ಳಾಡಿಸುವ
ಸುಮ್ಮ ಸುಮ್ಮನೆ ಕೆಮ್ಮಿ ಕ್ಯಾಕರಿಪ ತಾಪ.
ಗಿಡಬಳ್ಳಿಯನು ಹಿಡಿದು ಅಲ್ಲಾಡಿಸಿತು ಅವಳ
ನಿಟ್ಟುಸಿರು ಶಾಪ!
ಅಣಕಿಸುತ ಗಾಳಿಯಲಿ ಹಾರಿಹೋದವು
ಬತ್ತಿದೆಲೆಯ ಬಳಗ.
ಗದಗುಟ್ಟಿ ನಡುಗಿ ಕಟಕಟ ಹಲ್ಲು ಕಡಿದರು ಮಂದಿ;
ಮಾತು ಮಾತಿಗೆ ಅವಳು ಮಾತ್ರ, 'ಏನಂದೀ?'
ಸುಕ್ಕುಗಟ್ಟಿದ ಮುಖಕೆ ಸೆರೆಗೆಳೆದು ಕೋಲೂರಿ
ಹೊರಟುಬಿಟ್ಟಳು, ಒಮ್ಮೇಲೆ ಗಂಟು ತಲೆಗಿಟ್ಟು
ಏನವಳ ಸೆಡವು ಸಿಟ್ಟು!

೨

ಮಾವು ಹೂವಿನ ಕೊಡೆ ವಿಮಾನದಿಂದಿಳಿತಂದು
ಬಂದ ಪ್ರೀತಿಯ ಕಂದ;
"ಕುವ್ವೂ, ಜಗ್ ಜಗ್, ಪುವ್ವೀ ಟುವಿಟ್ಟವೂ"
ಕಾಲೇಜು ಕಟ್ಟೆಯ ಹತ್ತಿ ಮೊದಲ ಸಲ ಊರಿನೆಡೆ
ಕನಸಿನಲ್ಲಿಯೆ ನಡೆದು ಬಂದಿಹನು ಹುಡುಗ;
ಎತ್ತರೆತ್ತರದಲ್ಲಿ ಹಾರುತಿದೆ ಗಿಡುಗ!
ದಿನದಿನಕು ಕನಸುಗಳು ಚಿಗುರಿ ತೋರಣ ಕಟ್ಟಿ
ಬರೆದಿಹವು 'ಸುಸ್ವಾಗತ'.
ಕಾವ್ಯ ಕಾದಂಬರಿಯ ನಾಯಕರ ಜೊತೆಯಲ್ಲಿ ನಿತ್ಯ ಸ್ವಗತ.
ಕೋಗಿಲೆಯ ಧ್ವನಿಗೆದೆಯ ಬಾಗಿಲವೆ ತೆರೆದಿಹುದು
ಮನದ ಮೇಲಿನ ಮಹಡಿಯಲ್ಲಿ ನಡೆದಿದೆ ಸರಸ ಸಂಗೀತಗೋಷ್ಠಿ!
ನುಗ್ಗೆ ಹೂವಿಗೆ ಲಗ್ಗೆಯಿಟ್ಟು ಮೊರೆದಿವೆ ದುಂಬಿ
ಕಣ್ಣೆದುರು ಕುಣಿಯುತಿವೆ ಕರ್ಪೂರಗೊಂಬಿ:
ಹೋಳಿಹುಣ್ಣಿವೆ ಬಂತು ತಾಳಿ ಎನುತಿದೆ ಗಾಳಿ
ತಾಳಲಾರದು ಬಿಸಿದು ರಕ್ತನಾಡಿ!

೩

ಗಾಳಿ ಗಿರಿಗಿರಿ ಬುಗುರಿಯಾಡಿ ಹಕ್ಕಲುಹೊಲದ
ಹೊಟ್ಟು ರವುದೆಯ ತೊಟ್ಟು ಆಕಾಶಕೇರಿ
ಮೋಡಮೋಡಕು ಹಾಯ್ದು ಝಾಡಿಸಿದೆ, ನೆರೆದಿರುವ
ಸಂತೆಯಲಿ ಬಿಡಬಹುದೆ ಇಂಥ ಹೋರಿ?
ಹೊತ್ತೇರಿದಂತೆ ನೆತ್ತಿಗೆ ಚುರುಕು ಬಡಿದಿತ್ತು
ತಳಿರು ನಾಲಗೆ ಚಾಚಿ ತೇಕುತಿತ್ತು;
ಮರದ ಕೆಳಗಡೆ ನೆಳಲು ಮೈಚಾಚಿ ಮಲಗಿತ್ತು
ಬಿಸಿಲುಗುದುರೆಯು ವ್ಯರ್ಥ ಓಡುತಿತ್ತು.

೪

ಬಂತು ಮಳೆ ಹನಿಯಾಗಿ
ಜೀವವಾಹಿನಿಯಾಗಿ
ಬಾನ ಕೊಡುಗೈದೊರೆಗೆ ಇಳೆಯು ಋಣಿಯಾಗಿ.
ಹಳ್ಳ ಹೊಳೆ ಹಾಡಿದವು ಜಲಪಾತವಾಗಿ.
ಗಿಡಗಿಡದ ನೆತ್ತಿಯನು ಅಡರಿ ಕುಳಿತಿಹ ಜಗದ
ಧೂಳು ತೊಡೆದು
ಧಾರೆ ಎರೆಯುತ ಬಂದ ನವನೀರದ!
ಪುಲಕಗೊಂಡಳು ಪ್ರಕೃತಿ
ಹಸಿರುಟ್ಟು ಹೂವಿನಾರತಿಯೆತ್ತಿ ನಿಂತಿಹಳು
ಬಾನುದ್ದ ಬೆಳೆದಂತೆ ಜಗದ ಪ್ರೀತಿ!
ಒಸಗೆಯಾಯಿತು; ನರನ ಒಂದೊಂದು ಕೃತಿ-ವಿಕೃತಿ
ಋತುಋತುವಿನೊಡನಿಂತು ಬೆಸುಗೆಯಾಗಿ.

## ನೆರಳು

ನಿಟ್ಟುಸಿರನೆಳೆದು
ದಾಟಿತು ಕೊನೆಯ ರೈಲು:
(ತಕ್ಕೊ ಕೈಮರದ ಕರಡೀಸಲಾಮು!)
ಕೈಯ ಚಾಚಿದ ನೆರಳು ಚಲಿಸುತ್ತಿದೆ!....
ಮೆಲ್ಲಮೆಲ್ಲನೆ ಸಂಜೆ ಹಿಂಬಾಲಿಸುತ ಬಂತು!
ಅಸ್ಥಿಪಂಜರದೊಡಲ ತುಂಬುತ್ತಿದೆ.
ಕೈಯಕೋಲನು ಮೀಟಿ

ಸೇತುವೆಯ ದಾಟಿ
ಕೈಯ ಚಾಚಿದ ನೆರಳು ತೆರಳುತ್ತಿದೆ
ನೆರಳು ನರಳುತ್ತಿದೆ.

ತೊಗಲಬಾವಲಿಯಂತೆ ಜೋತಿರುವ ಜೋಪಡಿಯ ನೆರಳು
ಅಕರಾಳ ವಿಕರಾಳ ಬೆರಳು!
ಅದರ ಮಡಿಲಲ್ಲಿ ಅದೋ. . . . .ಎರಡು ಕಣ್ ಕಪ್ಪಡಿ!
ನಂದಿದಾಶೆಯ ಮನದ ತುಕುಡಿ ತುಕುಡಿ.

ಹೊರಗೆ . . .
ಕೈಬಿಸಿ ಕರೆವ ಈಚಲಗರಿಯ ನೆರಳು
ಮರುಳು?
ನಟ್ಟಿರುಳು ಕೊರಳ ಹಿಸುಕಿದ ತೆರದಿ ನರಿಯ ಕೂಗು!
ಕೊಳ್ಳಿದೆವ್ವದ ಸೋಗು.
ಗೂಬೆ ಜೋಗುಳ ಕೇಳಿ
ಜೋಪಡಿಯೊಳಿರುಳು ಜೋಂಪಿಸಿತು.

ಅಸ್ಥಿ ಪಂಜರ ಕುಳಿತು
ಬೀದಿಯಲಿ ಆಯ್ದ ಕೊರೆ ಬೀಡಿ ಕಿಡಿಗೆ
ಕತ್ತಲೆದೆ ತಿದಿಯಿಂದ ಹೊಗೆಯೆಳೆದು ನೂಕಿ-
ನೆರಳಿನನಿಮಿತ್ತ ಷೋಕಿ!

* * *

ಬೆಳಕು ಹರಿಯಿತು ....
ಯುಗಯುಗದ ಹೊಳವು ಹೊಡಮರಳಿತು.
ಒಡಲ ಹಸಿವೆಗೆ ಸೋತು
ಕೈಕೋಲನಾತು
ನೆರಳು ನಾಲಿಗೆ ಚಾಚಿ ಚಲಿಸುತ್ತಿದೆ.
ಅದೋ!....
ಕೂಗಳತೆಯಲ್ಲಿಹುದು ರೈಲು ನಿಲ್ದಾಣ:
ನೆರಳು....
ನೆರಳಿನದೊಂದು ಪರಿವಾರವೇ ನಿಂತು
ಕೈ ಚಾಚುತಿದೆ ನರಗೆ: "ನಾರಾಯಣ!"
ಪುರಿಬಾಜಿ, ಬ್ರೆಡ್ಡು, ಬಿಸ್ಕೀಟು, ಬಿಸಿಬಿಸಿ ಚಹ

ಕಪ್ಪು ಬಸಿ ಗಾನ ಸನ್ಮಾನ .....
ಮುಸುರೆಯರಸುವ ನಾಯಮೊಲೆಗೆ ಜೋತಾಡುತಿವೆ
ಬೀತಕುನ್ನಿ.
"ಕಾಗೆ ಒಂದಗುಳ ಕಂಡರೆ ಕರೆಯದೇ ತನ್ನ ಬಳಗವನು?!"
ಕೈಯಚಾಚಿದ ನೆರಳು ಜೊತೆಗೂಡಿತೆನ್ನಿ!
ಹೊಸನಾತ .... ಹೊಸನಾತ!
ಬಂದು ನಿಂತಿತು ರೈಲು ಮತ್ತೊಂದು:
ನೂಕು ನುಗ್ಗಲಿನಲ್ಲಿ
ತೆವಳಿಕೊಂಡೇ ಬಂದು
ನೆರಳು ಕೈಚಾಚಿತದೊ ಬಾಗಿ ನಿಂದು!

* * *

ಹೊಗೆಯುಗುಳಿ
ದಾಟಿತು ಕೊನೆಯ ರೈಲು-
ಕೈಯ ಚಾಚಿದ ನೆರಳು ತೆವಳುತ್ತಿದೆ
ನೆರಳು ನರಳುತ್ತಿದೆ.

## ಕಾಲಾತೀತ

'ಬಿಡುವಿಲ್ಲ, ಅರ್ಜಂಟು!' ಟಾರುಬೀದಿಯ ತುಡಿತ.
ಕಾರು ಮೋಟಾರು ಸೈಕಲ್ಲು ಟಾಂಗಾ ಟ್ರಕ್ಕು
ಉಸಿರು ಕಟ್ಟುವ ತೆರದಿ ಬಟ್ಟೆಯಲಿ ಹಾಸು-ಹೊಕ್ಕು.
ಗಡಿಯಾರದೆಡೆಬಿಡದ ಟಿಕ್ಕುಟಿಕ್ಕಿನ ಬಡಿತ!
ಆಫೀಸು ಶಾಲೆ ಕಾಲೇಜು ಅಂಗಡಿ ಬ್ಯಾಂಕು
ಎಳೆಯುತಿಹವಯಸ್ಕಾಂತದೊಲು ಜೀವಾಣುಗಳ
ಮೂಗುದಾರವ ಜಗ್ಗಿ; ನೂರುಗಾಲಿಯ ಕೀಲ
ಸವೆದು ಕಿರುಗುಟ್ಟುತಿವೆ: ನರನಿಗೆ ಜಯಪರಾಕು!
ಬೀದಿಯಂಚಿನ ಕಾಲುದಾರಿಯಲಿ ದನಗಾಹಿ
ಮಹಿಷವಾಹನನಾಗಿ ಕೊಳಲೂದಿ ಸಾಗಿಹನು,
ನೋಡಿದಿರ? ನೋಡದಿದ್ದರು ಸರಿಯೆ; ಅವನೇನು
ಮಂತ್ರಿಯೆ? ಯಾವುದಾದರು ಸಭೆಯ ಮನಮೋಹಿ
ಗಾರುಡಿಯೆ? ಅವನಲ್ಲ ಬಿಡಿ; ಆದರೆನ್ನಾಣೆ
ಅಂಥ ಮನಸಿನ ಶಾಂತಿ ಯಾರಿಗಿಹುದೋ ಕಾಣೆ.

## ಮೃತ್ಯುಬಂಧ

೧

ಅಲ್ಲಿಯೇ ಕುಳಿತಿತ್ತು ಹಾವು!
ಮೆತ್ತಗೆ ಸುರುಳಿ ಸುತ್ತಿ ಹೆಡೆಯೆತ್ತಿ ಆಡುತ್ತಿತ್ತು
ಕೈ ಮಾಡಿ ಕರೆವಂತೆ ಮೋಹಬಂಧ.
ಜೋಡು ನಾಲಗೆ - ನಾ ಮುಂಚು ತಾ ಮುಂಚು
ಮುಗಿಲ ಮೋಹರದಲ್ಲಿ
ಸಳ ಸಳ ಮಿಂಚು ಹರಿದಾಡಿ, ನಡೆದಂತೆ
ಸಿಡಿಲಿನೊಳಸಂಚು!
ನಾವು ನೀವೂ ಅಲ್ಲಿಯೇ
ಅಲೆದುದೆಷ್ಟೋ ಬಾರಿ,
ಒಮ್ಮೆಯಾದರೂ
ನಮ್ಮನದು ಕಂಡಿರಬೇಕು, ಖಂಡಿತ;
ಮನದೊಳೇನೋ ಗುಣಾಕಾರ ಹಾಕಿರಬೇಕು
ಈಗಲಾದರೂ ಕಂಡಿರ, ಆದರೆಂಥಾ ಚಮಕು ಚುರುಕು?

೨

ನೆರಳ ಜೊತೆ ನೆರಳಾಗಿ ಅರಿವಾಗಗೊಡದಂತೆ ಹುಟ್ಟಿನಿಂದಲೆ
ಬಂತು ಬೆನ್ನ ಹಿಂದೆ,
ಹೆಜ್ಜೆಯಲಿ ಹೆಜ್ಜೆಯನಿಟ್ಟು
ಕಾಯ್ದುಕೊಂಡೇ ಇತ್ತು.
ಎಂಥಾ ಒಜ್ಜೆ ಹೊತ್ತರೂ ನುಜ್ಜುಗುಜ್ಜಾಗದೊಲು ಮಾಂಸಮಜ್ಜೆ.
ಜಪ್ಪಿಸಿ ಕುಳಿತು ನೋಡುವುದು, ತಪ್ಪಿತೊ
ಕುನುಸಿಟ್ಟು ಕೊನೆಗಾಣಿಸಿಯೆ ಬಿಡುವ ಹಿಡಿತ ಹೊಡೆತ!
ಇದೆ ಈಗ ಸುರುಳಿಯ ಬಿಚ್ಚಿ ಮಿಂಚಿ ಮರೆಯಾಯ್ತು!
ನುಣ್ಣಗಿನ ಡೊಂಕುಗೆರೆ ಬದಿಗೆ ಹಕ್ಕಿಯ ಹೆಜ್ಜೆ
ನಕ್ಷತ್ರ ಮೂಡಿಸಿದೆ! ಮುಂದೆ ಮಾತೇ ಇಲ್ಲ. ಅದರ ಗುರುತಿಲ್ಲ.
ಯಾರು ಊದಿದರೇನು ಮನಸೆಳೆವ ಪುಂಗಿ
ಅದಕಿತ್ತು ಬೇರೊಂದು ಭಾವ ಭಂಗಿ!

೩

ಉಸುಕಿನಲಿ ನಡೆದಂತೆ ಸಾಗಿತ್ತು ನಾಡೀಪರೀಕ್ಷೆ.
ಔಷಧಿಯ ಚಮಚೆ ಎಣಿ ಎಣಿಸಿತ್ತು ಒಂದೊಂದೆ ಕೊನೆಯಗಳಿಗೆ.

ಭೂಲೋಕವನು ಮೂರು ಸುತ್ತು ಸುತ್ತಿದರೂ
ಸಪ್ತಸಾಗರ ತಳವ ಶೋಧಿಸಿದರೂ
ಇಲ್ಲ.... ಎಲ್ಲೂ..... ಇಲ್ಲ
ಬರಿಯ ಪಂಜರ ಕೆಳಗೆ ಜೋತಾಡುತಿತ್ತು.
"ಸಣ್ಣ ಗಿಣಿಯು ಕತ್ತಲಲ್ಲಿ ಎಲ್ಲಿ ಹಾರಿತು?"
ಆಕಾಶವಾಣಿಯು ನುಡಿದು, ಗುಡುಗು ಮಿಂಚನು ತಳೆದು
ದೇವದೇವಿಯರೊಲಿದು ಬರುವ ಮೊದಲೇ
ಮಣ್ಣಲೋಕದ ಸಣ್ಣ ಬೊಂಬೆ ಕೇಳಿತು ಜಗವ;
"ಹೊತ್ತಾಯ್ತು ನಾನಿನ್ನು ಹೋಗಿ ಬರಲೆ?"

## ಹೊಸಹುಟ್ಟು

ನಿದ್ದೆ ಮಡಿಲೊಳು ದಣಿದು ಮಲಗಿಹುದು
ಜಗದ ಬಾಳು;
ಹಗಲಿನ ಅಪಸ್ವರಗಳೆಲ್ಲ ಮೌನದಲಿ
ಮರೆತಿಹವು ನೂರಾರು ಮೇಲು-ಕೀಳು:
ನಿದ್ದೆ ಬಾರದೆ ನಿನಗೆ? ಬೀಳದೆಯೆ ಸವಿಗನಸು?
ನೆಲದಿಂದ ಮುಗಿಲವರೆಗೂ ಚಿಮ್ಮಿ ಬರುತಿಹವೆ ಬಾಣ ಬಿರುಸು?
ಕತ್ತಲೆಯ ಆಳದಲಿ
ಕೊರತೆಗಳನೆಲ್ಲವನು ಹೂಳು ಹೂಳು.

*      *      *

ಹರಿದು ತಿನ್ನುವ ಹದ್ದು
ತನ್ನ ಗೂಡೊಳು ಮಲಗಿ ನಿದ್ದೆಗೈದಿರುವ ಹೊತ್ತು.
ಬಾನಿನೆದೆಯೊಳದಾವುದೋ ನೋವು ಮೆಲ್ಲನೆ ಹರಿದು
ಸುರುಳಿ ಸುತ್ತುತ ಕೊರಳ ಬಿಗಿಯುತ್ತಿತ್ತು;
ಚಿಕ್ಕೆಗಣ್ಣುಗಳಿಂದ ಕಂಬನಿಗಳುರುಳುರುಳಿ
ಮಂದ ಬೆಳಕೂ ಕೂಡ ನಂದಿ ಹೋಗುತಲಿತ್ತು;
ನರನರಗಳಲ್ಲಿ ವೇದನೆ ತುಂಬಿ ತುಡಿದಂತೆ
ಗಾಳಿ ನರಳಿತ್ತು.

*      *      *

ಕಣ್ದೆರೆಯುತಿದೆ ನಸುಕು
ಬಾನ ಬಸುರಿಂದೊಗೆದ ಕೂಸು!
ಉಷೆಯ ತಾವರೆಗೈಗಳಲ್ಲಿ ಮಿಸುಕಾಡುತಿದೆ!
ಹೊಂಬೆಳಕಿನಾನಂದ
ದಿಕ್ಕುದಿಕ್ಕುಗಳನೊಂದೆ ತೆಕ್ಕೆಯೊಳು ಬಿಗಿದು
ಜೀವ ಜೀವದ ಹೂವ ಅರಳಿಸಿಹುದು.
ಹೂವಿನೆಸಳಿನ ಮೇಲೆ ಚಿಕ್ಕೆಗಂಬನಿ ಜಾರಿ
ಮಿರುಗುತಿದೆ ಅಮೃತಬಿಂದು.

## ಪಡುಗಡಲು

೧

ಇದೋ ಕಡಲು
ಅದೋ ಮುಗಿಲು
ಬಾಯ್ದೆರೆದಿವೆ ಒಂದಕೊಂದು ಅನಂತತೆಯ ಹೀರಲು!
ಎನಿತೆನಿತೋ ಹಗಲು ಇರುಳು
ತೆರೆಗಳ ಹೆಗಲೇರಿ ಬರಲು
ನೆಲವನಳಲ ಮಳಲಿನಲ್ಲಿ ಹುಗಿದು ಮುಂದೆ ಸಾಗಿವೆ!
ಋತು ಋತುಗಳು ಓತು ಬಂದು
ನದೀ ಮುಖದಿ ಕೂಗಿವೆ.
ಬೆಟ್ಟ ಬೆಟ್ಟ ಬೆಂಬಳಿಸಿವೆ-
ಗುಟ್ಟನರಿಯದಂತಿವೆ;
ಘಟ್ಟವೇರಿ ಘಟ್ಟವಿಳಿದು ಹಸಿರು ಪಟ್ಟವೇರಿದೆ.
ಬಾನಿನೆದೆಯ ಭವ್ಯತೆಗಿದೋ
ಕಡಲು ಹಿಡಿದ ಕನ್ನಡಿ
ಬೇಡ ಬೇರೆ ಮುನ್ನುಡಿ.

೨

ಅಗೋ ಅಲ್ಲಿ
ಉಸಿರ್ಗಟ್ಟಿ ದ್ವೀಪ ಮೇಲಕೆದ್ದಿವೆ
ನೀಲ-ನಿದ್ದೆ ಗೈದಿವೆ.

ಹಾಯಿ ಬಿಚ್ಚಿ ಹಾಯಾಗಿವೆ
ದೋಣಿ ತೆರೆಯನೇರಿವೆ;
ನೀರಿನಲ್ಲಿ ರಂಟೆ ಹೊಡೆದು ಹಡಗು ಕ್ಷಿತಿಜವಡರಿದೆ.
ಕೊರೆದ ಹರಿದ ನೀರ ಛಾಯ
ಮಟಾಮಾಯವಾಗಿದೆ.
ಈ ಪಡುವಣ ತೀರದಲ್ಲಿ
ತೀರದಂಥ ಮೊರೆತವೊ!
ಆಖಾತವೊ ಭೂಶಿರವೊ
ತೇಲುತಿರುವ ತೆಪ್ಪವೊ
ದೇಶಾಂತರದಾಸೆ-ವೀಚಿ ಇದರುದರದಿ ಬೆರೆತವೊ!
ತೆರೆ ತೆರೆಗಳು ಬಂದರದಲಿ ನೊರೆಯ ತೂರಿ ತೂರಿ
ಬರೆಯುತ್ತಿವೆ ದಿನಚರಿ.

೩

ಅಲೆ ಅಲೆ ಅಲೆ ತೇಲಿಬರುವದಲ್ಲ ದೋಣಿ ಬಿನದ
ಅಂಬಿಗರುಲಿ ನಿನದ;
ತುಣುಕು ಮಿನು
ಮಿಣುಕು ಮಿನು
ಅಣಕಿಸಿ ಪಾರಾದವೇನು?
ಬಿದ್ದವದೋ ಬುಟ್ಟಿಗೆ
ರಾಶಿ ರಾಶಿ ಒಟ್ಟಿಗೆ!
ಮೀಂಬುಲಿಗನ ಹಕ್ಕಿ ಕೊಕ್ಕಿನಲ್ಲಿ ಕಚ್ಚಿ ಹಾರಿತು,
ಬಲೆಗೆ ಬಿದ್ದ ಮೀನು ಮಾತ್ರ ವಿಲಿವಿಲಿ ಒದ್ದಾಡಿತು.
ಬೊಕ್ಕುದಲೆಯ, ಬರಿಮೈ
ಮಕ್ಕಳು ಮುಗಿಬಿದ್ದಿವೆ.
ಅವರ ಪಾಲಿಗಷ್ಟು ಇಷ್ಟು ಕಡಲು ಕೊಟ್ಟ ಕಾಣಿಕೆ,
ಮತ್ಸ್ಯಗಂಧಿ ಯೋಜನಸುಗಂಧಿಯಾದಳೆಂಬ ವಾಡಿಕೆ!

೪

ಮೊನ್ನೆ ಮೊನ್ನೆ ಯುದ್ಧವಾಯ್ತು ಮನುಕುಲದುದ್ಧಾರಕೆ;
ಕಳೆಯಲೆಂದು ಬಂದಿತೆನ್ನಿ
ದೇಶ ದಿಗ್ದೇಶಗಳ
ಶಾಂತಿಯ ಬಾಯಾರಿಕೆ;

ನೆಲ ಬಾನ್ಗಳು ಸಾಲಲಿಲ್ಲ
ಕಡಲಿಗು ಕಿಡಿ ಸಿಡಿಯಿತು.
'ಉದ್ಧರೇದಾತ್ಮನಾತ್ಮಾನಂ'
ಜಲಸುರಂಗ ಹಬ್ಬಿತು!
ಹಡಗು ಹಡಗು ಬುಡಮೇಲು
ಸುತ್ತು ತೋಪುಗಾವಲು;
ನಾಗರಿಕತೆ ಮುಗಿಲಗೇರಿ
ಬಾಂಬಿನ ಮಳೆಗರೆಯಿತು
ಆಗಸವ ಅದುರಿತು.
ಕಡಲು ದಂಡೆಗಪ್ಪಳಿಸಿತು
ಚಪ್ಪರಿಸಿತು ನಾಲಗೆ
ಈ ಯುದ್ಧದ ಮದ್ದು ಗುಂಡು
ಸಾಲಬೇಕು ಅದರ ಯಾವ ಮೂಲೆಗೆ?

೫

ಇದೋ ಕಡಲು
ಅದೋ ಮುಗಿಲು
ಬಾಯ್ದೆರೆದಿವೆ ಒಂದಕೊಂದು ಅನಂತತೆಯ ಹೀರಲು!
ಉರುಳಿತ್ತಿಹ ಭೂಗೋಲದ
ಆಯುಷ್ಯವು ತೀರಲು
ಅದೂ ಬೊಕ್ಕು ಬೋರಲು

## ಪಣತಿ

೧

ನೂರು ಹೃದಯದ ಮೇರು ಭಾವಗಳ
ನೂರಾರು ಸಾಲುದೀಪ
ಹೊತ್ತಿ ಉರಿದಿವೆ ಸುತ್ತು ಕತ್ತಲೆಯ ಕೂಪದಲಿ-
ಒಂದು ಚಣ ಬೆಳಕು ನಗೆ ನಲಿವು ಸಲ್ಲಾಪ;
ಮರುಗಳಿಗೆ 'ಆ' ಎಂದು ಅಂಧಕಾಸುರ ಬಂದು
ಕೊಳ್ಳೆ ಹೊಡೆಯಲು ಕೇಳಿಬರುವದೊಂದೇ ಸೊಲ್ಲು
ಅಣುಕಣದ ವಿಪ್ರಲಾಪ!

ಸುತ್ತು ಕಂದಕ ತೋಡಿ, ಮುಳ್ಳು ತಂತಿಯ ಬಿಗಿದು
ಭದ್ರವಾಗಿಯೆ ಕಾವಲಿಟ್ಟರೂ, ಬಿಟ್ಟರೂ
ನುಗ್ಗಿ ಬಂದೇ ಬಿಡುವನಲ್ಲ ಈ ಭೂಪ!
ಬಿಳಿಯ ಗೋಡೆಯ ಮೇಲೆ ನೆರಳು ಬಂದಾಡುವವು
ಕುಣಿಸುವನು ಕಿಳ್ಳಿಕೇತ;
ನೆತ್ತಿಯಲಿ ಸುರುಳಿ ಸುತ್ತಿ ಮಲಗಿದ ಮೆದುಳು. . . . ಬಡಪಾಯಿ
ಚಿತ್ತವೆತ್ತೋ. . . . ಅದರ ಧ್ಯಾನವೆತ್ತೋ!. . . .
ಕೆಸರು ಮೆತ್ತಿದ ಕಾಲನೆತ್ತೆತ್ತಿ ಇಡುತಿಹುದು ಗಾಣದೆತ್ತು.
ಹಾಳು ಗೋಡೆಯ ಬದಿಗೆ ಕಾಲು ಜೋಡಿಸಿ ನಿಂತು
ಇಹ ಪರದ ದೀರ್ಘ ಆಲೋಚನೆಗೆ ತೊಡಗಿಹುದು
ಯುಗಯುಗದ ದೈನ್ಯವಾಣಿ,-
ಕಟ್ಟಿ ಕಾಲನು ಮೇಯಬಿಟ್ಟ ಪ್ರಾಣಿ.
ಕೆದರಿ ತಿಪ್ಪೆಯ ಕೋಳಿ ಹೆಕ್ಕುತಿಹುದೇನನೊ
ಬೆನ್ನ ಹಿಂದೆಯೆ ಕಟ್ಟಿಕೊಂಡು ತಿರುಗಿದೆ ತನ್ನ ಸರ್ವ ಬಳಗ!
ಬೆಳಗಾಗೊ ಮುನ್ನವೇ ಕೂಗುವದೆ-ಅದರಮನೆ ಹಾಳಾಗ
ಇಷ್ಟುಬೇಗ?
ಹಿಡಿದು ಒಂದೇ ಉಸಿರು ಒದರುತಿದೆ ಊರೆಲ್ಲ ಗಿರಣಿ ಭೋಂಗಾ
ದಿನದ ಬೀಸುವಕಲ್ಲು ಗರಗರೆಂದಾಡಿಹುದು
ಬಳೆಯ ಮಂಜುಳರವದ ನಾದ ಹಿಡಿದು;
ಇರುಳೆಲ್ಲ ಉರಿದುರಿದು ಸಣ್ಣದಾಗಿದೆ ಪಣತಿ
ಗುಡಿಸಲದ ಗೂಡಿನಲಿ ಜೀವ ಹಿಡಿದು.

೨

ಅವತಾರಗಳ ಮೇಲೆ ಅವತಾರಗಳು ಬಂದು
ಮಂಡಿಸಿದ ಭಾವಚಿತ್ರ!
ಕಟ್ಟುಹಾಕಿಸಿ ಗೋಡೆಗಿಡಿದು ಮೊಳೆಯನು ಜಡಿದು
ತೂಗಬಿಟ್ಟಿಹರಾರೊ ಬಲು ವಿಚಿತ್ರ.
ಸುತ್ತು ಮುತ್ತಲು ಪೌಳಿ, ನಡುವೆ ಗೋಪುರವೇರಿ
ಮೂಡಿತ್ತು ಮುದ್ದು ಕಳಸ;
ಹರಗಿ ಹಸನಾದ ಹೊಲದಲ್ಲಿ ಬೆಳೆಯಿತು ರಾಶಿ ಧಾನ್ಯದವಸ.
ಪೂಜೆ ಸಂದಿತು ಮುಗ್ಧ ನೈವೇದ್ಯ ಸಂತೃಪ್ತಿ-
ಹಬ್ಬ ಹುಣ್ಣಿಮೆಗೊಮ್ಮೆ ಹೊಮ್ಮಿದುತ್ಸಾಹದಲಿ
ಮೊಳಗಿದವು ಜೋಡು ಕಹಳೆ!

ಗಂಟೆ ಗಣಗಣ ನಾದ ರಿಂಗಣದಿ ನರನರವು ವಿದ್ಯುತ್ತರಂಗಮಾಲೆ!
ಬಯಕೆ ಊದಿನಕಡ್ಡಿ ಬರೆದುಹಾಕಿತು ದಿನವು ಬಿನ್ನಹದ ಓಲೆ:
ಮುಟ್ಟಿತಿಲ್ಲವೊ, ಇನ್ನೂ ಉತ್ತರವೆ ಬರಲಿಲ್ಲ
ಏನೊ ವರ್ಗಾವರ್ಗಿ ಅಲ್ಲಿ ಮೇಲೆ.
ನುಡಿಯಲೊಲ್ಲದು ದೇಹ ದೇಗುಲದ ಗಂಟೆಯಲಿ
ಮಿಡಿಯಲೊಲ್ಲದು ಮುಖ್ಯ ಜೀವನಾಡಿ;
ಹಿಡಿದು ಸಿಕ್ಕಾಬಟ್ಟೆ ಜಗ್ಗುತಿವೆ ನೂರಾರು ಬೇಟೆನಾಯಿ!
ಮಡಿಯುಟ್ಟ ಪೂಜಾರಿ (ನೋಡಿರವನವತಾರ!)
ಕಾಣಿಕೆಯ ಕೊಂಡ ತತ್‌ಕ್ಷಣವೇ ಕೃತಾರ್ಥ.
ಆಮೇಲೆ ಧರ್ಮಾರ್ಥ ಹಣಿಸುವನು ಒಂದೊಂದೆ ಸೌಟು ತೀರ್ಥ.
(ಗಂಗೆ ತುಂಗೆಯು ಬ್ರಹ್ಮಪುತ್ರೆ ಕಾವೇರಿಯರು ನೆರೆ ಬಂದು
ಹೊರಚೆಲ್ಲುತಿಹರು ವ್ಯರ್ಥ)
ಬಣ್ಣ ಬಣ್ಣದ ಬಲ್ಬು, ಕಾಜಿನ ಗುಳಾಪುಗಳು, ಕಾರ್ತಿಕವ
ಹಚ್ಚಿದಿರುಳು.
ಥಳಥಳಿಸುವೆರಡು ಬಂಗಾರ ಪಾದುಕೆಮೇಲೆ
ಆಡುತಿವೆ ಪೂಜಾರಿ ಕೈಯ ಬೆರಳು,
ಗರ್ಭಗುಡಿಯಲಿ ಪಣತಿ ಉರಿದಿವೆ. ನಿರಾತಂಕ
ಬಂದು ಬಡಿದರು ನೂರು ದೀಪದಹುಳು!

೩

ಚೆಂಡು ಹೂ, ತುಂಬೆ ಹೂ, ಹೊನ್ನವರೆ, ಹುಚ್ಚೆಳ್ಳು-
ಸೆಜ್ಜೆ, ಜೋಳದ ತೆನೆಗೆ ಸುಂಕವಾಡಿ,
ಮಣ್ಣ ಕುಡಿಕೆಯನೊಡೆದು ಪುಟಿಯುತಿದೆ ಕಾರಂಜಿ
ಬಣ್ಣ ಬಣ್ಣದ ಬದುಕನೆಲ್ಲ ತೂರಿ!
ಗುದ್ದುತಿದೆ ಗಾಳಿಯನು ಸುಮ್ಮ ಸುಮ್ಮನೆ ಮದ್ದು
ಒದ್ದಾಡುತಿವೆ ಒಳಗೆ ಚಟಪಟಾಕಿ;
ಹೊತ್ತು ಸುರುಸುರು ಬತ್ತಿ ನಕ್ಷತ್ರ ಸೂಸುತಿವೆ
ಗೊತ್ತಿಲ್ಲವೇ, ಇಂದು ದೀಪಾವಳಿ?
ಗುರಿಯಿರದ ಸುರುಬಾಣ, ಹಾರಿದೆ ಧಡಲ್‌ಬಾಜಿ
ಆಟದಾಟಂಬಾಂಬಿನಾಸ್ಫೋಟನ!
ಒಂದೊಂದಕೂ ಸ್ಪರ್ಧೆ 'ನಾ ಮುಂದೆ ನೀ ಮುಂದೆ'
ಸಾಲಬಹುದೇ ಒಂದು ಜೀವಮಾನ?
ಮುಗಿಲು ಝಗಝಗ ಮಿಂಚಿ ಹೊಡೆದುಕೊಂಡಿತು ಸ್ನ್ಯಾಪು
(ಸಿಗಲಾರದಿನ್ನಿಂಥ ಜಗದ ಭಂಗಿ!)

ಬಿರುಗಾಳಿ ಬೀಸಿ ಮಳೆ ಹೊಯ್ದು ಗುಡುಗುಡಿಸಿತ್ತು
ಸಿಕ್ಕ ಬೇಟೆಯ ಸಿಡಿಲು ತಿಂದು ತೇಗಿ.
ಮರ ಮುರಿದು ಬಿದ್ದು, ಕಬ್ಬಿಣಕಂಬ ನೆಲಕೊರಗಿ
ಹರಿದು ವಿದ್ಯುತ್ತಂತಿ ದೀಪವಾರಿ,
ಕತ್ತಲೆಯೆ ತುಂಬಿ ಹೊರಚೆಲ್ಲುವ ಗಟಾರದಲಿ
ಕೊಚ್ಚಿಹೋಯಿತು, ಪಾಪ! ಮುದ್ದು ಕುನ್ನಿ.

*   *   *

ತಲೆತಲಾಂತರದಿಂದ ತೈಲವೆರೆಯುತ ಬಂದು
ಸೊಡರು ಕುಡಿಯಾಡಿಸಿದೆ ಮಣ್ಣ ಪಣತಿ;
ನೆಲಬಾನಿಗೊಂದೆ ದೀಪಾವಳಿಯ ಸೇತುವೆಯ
ನಿಲಿಸಿ ಉದ್ಘಾಟಿಸಲಿ 'ಜ್ಯೋತಿಷಾಂ ಜ್ಯೋತಿಃ'

## ದ್ವಂದ್ವ

ಎಲ್ಲಾ ಬಿಟ್ಟು ತಲೆಯೊಳಗೇ ಏಕೆ ಸುರುವಾಯ್ತೊ
ಹಾಳಾದ ಕಾರಖಾನೆ!
ನೂರು ಯಂತ್ರದ ಗಾಲಿ ಚೀತ್ಕರಿಸಿ ಓಡುತಿವೆ ಇಲ್ಲಿ ಒಂದೇಸವನೆ.
ಹಗಲಿರುಳು ಬಿಟ್ಟೂಬಿಡದೆ ಕಪ್ಪು ಹೊಗೆಯುಗುಳಿ
ಅಳಿಸಿಬಿಟ್ಟಿದೆ ಆಗೊ ಆಕಾಶದ ನಕಾಶವನ್ನೆ.
ಎಲ್ಲಿ ಬಿರುಗಾಳಿಯಲಿ ಮಗುಚಿ ಮೋಡದ ದೋಣಿ
ಚಿಕ್ಕೆ ತಳಕಂಡವೋ-,
ಹಗಲು ಕಾಮನಬಿಲ್ಲ ಸೇತುವೆಯು ಮುರಿದಿರುಳ
ರಹದಾರಿ ಬಂದಾಯಿತೋ-
ಇಲ್ಲಿಯವರಿಗೇ ಮೊದಲು ನೆಲೆಯಿಲ್ಲ.
ಅಲ್ಲಿಯವರನು ಕುರಿತ ಯೋಚನೆಗೆಲ್ಲಿ ಅವಕಾಶ?
ಇಂದಿನದೆ ಮುಖ್ಯ ರಾದ್ಧಾಂತವಾಗಿದೆ ನೋಡಿ-
ಉಳಿದದ್ದು ಮುಂದೆ ನೋಡೋಣ, ಸಾವಕಾಶ.

*   *   *

ಸೆಳಕಿನ ಹಿಂದೆ ಸೆಳಕು, ಸೆಳಕಿನ ಹಿಂದೆ ಸೆಳಕು
ನಡುಸಡುವೆ ಕುಲುಕುತಿಹುದಲ್ಲ ಇದು ಯಾವ ಬೆಳಕು?

ದಿಕ್ಕು ದಿಕ್ಕುಗಳಿಂದ ತೂರಿಬಿಟ್ಟಂತಿಹುದು ಹಸುರು ಸರ್ಚಲೈಟು.
ಕಾಡುನಾಡೆನ್ನದೆಯೆ ಹುಲ್ಲು ಹಸುರಾಣಿಯಲಿ ಅದರ ಝೋಕು!
ಒಳಗೆ ಬೆಚ್ಚಗೆ ಕುಳಿತು ಚಹವ ಗುಟುಕರಿಸುತ್ತ
ಆಗಾಗ ಕಿಟಕಿಯಲಿ ಹಣಿಕಿದರೆ ಸಾಕು
ಇನ್ನೇನು ಬೇಕು?-
ಆಹ! ಹೀಗೆಯೇ ಸಾಗಿರಲಿ ಈ ಜಗತ್ತು.
ಮರದ ಪೊಟರೆಯೊಳೊಂದೆ ಗಿಳಿಯಮರಿ-ಕಿಲಿ ಕಿಲಿ
ಜಿನುಗು ಮಳೆಯಲಿ ತೊಯ್ದು ತೆಪ್ಪಗಿವೆ ಉಳಿದೆಲ್ಲ ಹಕ್ಕಿಪಕ್ಕಿ.
ತೊಟ್ಟಿಲಲಿ ಮಗುವಿನೆಳನಗೆಯ ತಲಕಾವೇರಿ!
ಅಂಗಳದ ಕಸಗಂಟೆಯಲಿ ರಸದ ವಿಜಯಧ್ವಜವನೆತ್ತಿವೆ
ಗುಲಾಬಾಕ್ಷಿ;
'ರಸೋವೈಸಃ'
ಮದುಗುಣಿಕೆ ಊದಿವೆ ತುತೂ ತುತ್ತುತೂರಿ.
ಕಂಪೌಂಡುಗೋಡೆಯ ಮೇಲು ಬರೆದಿದೆ ಹಸಿರು ತನ್ನ
ಸಂಪೂರ್ಣ ಹೆಸರು.
ಬೆಳ್ಳಗೆ ನಿರಿಯ ಚಿಮ್ಮುತ ಬಂದು
ನೆಲವ ಮೋಹಿಸಿ ಮತ್ತೆ ಬಾನಿಗೇರಿದೆ ಮಳೆಯ ಥಳಕು.
ನೀರೆಲ್ಲ ಬಸಿದು, ರೇವೆ ಮಣ್ಣನು ಹರವಿ
ನಿಶ್ಚಿಂತ ನಿಂತಿಹುದು ಜೀವರ್ಝರಿಯು;
ತೊಳೆದ ಮನಸಿನ ತೋಟದಲ್ಲಿ ಮೂಡಿವೆ ನೂರು ಡೇರೆ ಹೂ
ಮರಿನೇಸರು.
ಎದೆ ಎದೆಗಳಲ್ಲಿ ಕುಣಿದು ಕೋಲಾಟವಾಡಿದೆ ಅದೇ;
'ಚೆಲುವಯ್ಯ ಚೆಲುವೋ. . . . ಚೆಲುವಯ್ಯ ಚೆಲುವೋ'

*   *   *

ಅದಕಾಗಿ ಇದಕಾಗಿ ಬೆದಕುತಿಹುದಲ್ಲ ಮನ-
ಅದಕಿಹುದೆ ಬೇರೆ ಬದುಕು?
ತೊಟ್ಟು ಕುಣಿಯುತ್ತಿಹುದು ನಿಮಿಷ ನಿಮಿಷಕ್ಕೊಂದು
ಬೇರೆ ಪೋಷಾಕು.
ಸಾಧನೆ, ಸತ್ಯದಾರಾಧನೆಗಳೆಂದರದಕೆ ತಲೆಬೇನೆ,
ಈಗಿರುವ ಮೆದುಳೊ? ಖಾಲಿ ಖಜಾನೆ.
ಇಷ್ಟರ ಮೇಲೆ ಹೇಗೆ ನಡೆದೀತು, ವರ್ಷಗಟ್ಟಲೆ ಈ ನಮ್ಮ
ಕಾರಖಾನೆ-

ಇಲ್ಲವೆಂದರು ಬೇರೆ ಎಲ್ಲಿಂದ ತರುವದಿದೆ ಹೇಳಿ,
ಅದು ಮೊಟ್ಟಮೊದಲೇ ಬ್ರಹ್ಮ ಕೊಟ್ಟ ಆಸ್ತಿ!
ಸಂಪು ಹೂಡಿದರೂ ನಡೆಯುವುದಿಲ್ಲ.
ಅದರ ಮಾಲಕನು ಅಷ್ಟಿಷ್ಟಕ್ಕೇ ಹಣಿಯುವುದಿಲ್ಲ ಮಾರಾಯಾ.
ಆದುದಾಗಲಿ, ಕೊನೆಗೆ ಆಗಿಯೇ ಬಿಡಲಿ ಕುಸ್ತಿ
ನೋಡೋಣ ಒಂದು ಕೈ!
ಗೆದ್ದರೂ ಸೈ,
ಗೆದೆಯದಿದ್ದರೂ ಸೈ.

## ಇವನಿಂದಲೇ ನಮಗೆ ಬೈಗು-ಬೆಳಗು

೧

ಸುತ್ತು ಹತ್ತೂ ಕಡೆಗೆ ಹೊಳೆಯುತಿವೆ ಕಂಗಳು
ಮಗುವಿನೆಳನಗೆಯಲ್ಲಿ ಹಗಲುಹಗಲೇ ನುಸುಳಿ ಬಂದಿಹುದು
ಬೆಳುದಿಂಗಳು!
ಕತ್ತಲೆಯ ಅಚ್ಚಿನಲಿ ಬೆಳಕಿನೆರಕವ ಹೊಯ್ದು
ತೆಗೆದಿರುವ ಅಪ್ರತಿಮ ಪ್ರತಿಮೆ ನೂರು!
ಮೂರು-ಸಂಜೆಯ ಮೃದುಲ ನೀಲಿಯಾಗಸದೆದೆಯ
ತುಡಿವ ಬೆಳ್ಳಕ್ಕಿಗಳ ಬಯಕೆ-ಸಾಲು;
ದೂರ ಬೆಟ್ಟವನಿಳಿದು ಮೆಲುಕಾಡಿಸುತ ಬರುವ ಕೊರಳ
ಗಂಟೆಯು ಮಿಡಿವ ನಾದ ಹೊಳಲು.
ಗಿರಿಯ ಮುಡಿಗಿರುವ ಗುಡಿಯಲ್ಲಿ ನಂದಾದೀಪ
ಬಾನಿಗೇರಿದೆ ಹೊಗರು ಆಗರುಧೂಪ-
ಶೂನ್ಯದೊಡನನ್ಯೋನ್ಯವಾಗಿ ಬೆರೆದಿವೆ ವಿಶ್ವಚೈತನ್ಯ ವಿವಿಧ ರೂಪ,
ಮುಳ್ಳುಜಾಲಿಯ ಹೂವ ಸೌಗಂಧದಲಿ ತೇಲಿ ದುಂಬಿಗನಸು
ಜೋಂಪಿಸುತ್ತಿದೆ ಮಗುವಿನೆಳೆಯ ಮನಸು.
'ಕಂದ ಜೋ ಜೋ. . . . ಬೆಳಕಿನಂದ ಜೋ ಜೋ'
ಹೊಂಗೆ, ಹುಣಿಸೆಯು ಬೊಗಸೆ ಬೊಗಸೆ ಸುರಿದಿವೆ ಹೂವು
ಹಣ್ಣು ತೂಗಿದೆ ಕೊಂಬೆ ಕೊಂಬೆಯಲಿ ಮಾವು;
ಧೂಳಿ ನುಣ್ಣಗೆ ನೆಲಕೆ ಜಾರುತಿದೆ, ಗಾಳಿಯಲಿ ಆರುತಿಹುದದರ
ಕಾವು.
ಮನೆಯ ಜಗುಲಿಯನೇರಿ ಬೆಳಕು ತೂಗಾಡುತಿದೆ
ಒಳದನಿಯು ಹಾಡುತಿಹುದು;

'ಕಂದ ಜೋ ಜೋ, ಪೂರ್ಣಚಂದ್ರ ಜೋ ಜೋ'
ನೀಲಪರದೆಯ ನಡುವಿನೆಳೆಯ ಜಗ್ಗಲು ಝುಗ್ಗನೆದ್ದು ಕುಣಿದಿವೆ
ತಾರೆ!
ನೆಲದೆದೆಯ ಮೊಗ್ಗರಳಿ ಪರಿಮಳದ ಸೂರೆ.
ಮುಗಿಲ ಮಂಚವನೇರಿ ಅಂಚೆದುಪ್ಪುಳ ಹೊದೆದು
ಚಿಕ್ಕೆಗಂಗಳ ಮುಚ್ಚಿ ತೆರೆವ ನೀರೆ,
ಅಡಿ ದಣಿದಿದೆ ಮಗುವು
(ಅದಕೆ ದಣಿವೇ ಇಲ್ಲ!)
ಎಳೆಯ ಕಂಗಳ ಎವೆಗೆ ತಂಗಾಳಿಯಾಗಿ ಸುಳಿ, ಜೇನಾಗಿ
ಇಳಿದು ಬಾರೆ.

೨

ಹಗಲು ಕೋಳಿಯ ನಿದ್ದೆ-
ಬಯಲಾಟದಲಿ ಸೋಗು ಕುಣಿದದ್ದೂ ಕುಣಿದದ್ದೆ
ತಕ್ಕ ಥೈ ತಕ್ಕ ಥೈ.
ಕಾಳಿಂಗನ ಹೆಡೆಯ ಹತ್ತಿ ಹತ್ತಿ ತುಳಿದ ಬಾಲಕೃಷ್ಣ
ಧಿತ್ಥೈ ಥೈ!
ಆಚೆ ಬೀದಿಗು ಗಸ್ತಿ ಹೊಡೆದು ಬರುವದು ಕೇಕೆ
ಕೊಟ್ಟು ಎಚ್ಚರಿಕೆ.
ಬಿಳಿ ಜೋಳ ಹೊಲದಲ್ಲಿ ಕವಣೆಗಲ್ಲನು ಬೀರಿ ಹಕ್ಕಿ ಹಾರಿಸುತಿಹನು
ಅತ್ತಿತ್ತ ಸುಳಿದೀರಿ ಮತ್ತೆ, ಜೋಕೆ!
ತಾಸಿಗಿಪ್ಪತ್ತು ಮೈಲಿನ ವೇಗ ಮೀರುವುದು
ಮನೆತುಂಬ ಓಡುವುದು ಅಂಬೆಗಾಲಿನ ಕಾರು,
ನೋಡ ನೋಡುತ ಧುಮುಕಿ ಹೊಡೆದು ಮೇಲೇಳುವದು
ಬ್ರೇಕು ಹಾಕಲು ವೇಗ ಮತ್ತಿಷ್ಟು ಜೋರು!
ಏನಿಲ್ಲವೆಂದರೂ ದಿನಕೆಂಟು ಅಪಘಾತ
ಇನ್ನೆಂಟು ಆದರೂ ಈತ ನಿರ್ಭೀತ;
ಎಂಥ ಅದ್ಭುತವಡಗಿ ಕುಳಿತು ಆಡಿಸುತಿಹುದೊ
ಎಂಟು ತಿಂಗಳ ಪುಟ್ಟ ಜೀವಯಂತ್ರ!

೩

ಮೈಮರೆತು ಕುಳಿತಕಡೆಗಿವನ ಮಿಂಚಿನದಾಳಿ
ಹೊಂಚುಗಾರ!

ಎಲ್ಲಿಂದಲೊ ಸರ್ರನೆರಗಿ ಬಡಿಯುವ ಗಿಡುಗ
ಆಕ್ರಮಣಶೀಲ!
ರಾಶಿಯೊಕ್ಕುವ ಸಮಯಕೆದ್ದ ಸುಂಟರಗಾಳಿ-
ಕೋಲಾಹಲ!
ಏಳು ಮೆಟ್ಟಿನ ಹುಲಿಯ ಹಿಡಿದು ಪಳಗಿಸಬಲ್ಲ
ಚಂಡ ಪ್ರಚಂಡ!
ಕಣ್ಗೆ ಬಿದ್ದುದನೆಲ್ಲ ಕಸಿದು ಕೈವಶಗೊಂಬ
ಪುಂಡ ಮಾರ್ತಾಂಡ!
ನಜರು ಕಾಣಿಕೆ ಕೊಟ್ಟು ಮುಜುರೆ ಹೊಡೆದರು ಕೂಡ
ಸಂಧಾನ ವಿಫಲ ವಿಫಲ,
ತುಂಟನಗೆ ಸಮ್ಮೋಹನಾಸ್ತ್ರ ಬೀರುವ ಬಂಟ
ನಿತ್ಯ ಜಯಶೀಲ

೪

ಎರೆದು ಧೂಪವ ಹಾಕಿ ಹೊಚ್ಚಿಬೆಚ್ಚಗೆ ತುಂಬುದೊಟ್ಟಲನು ತೂಗಿ
ಮೆಲ್ಲನುಲಿಯಲಿ ಇವಳು ಜೋಗುಳವ ಹಾಡುತಿರೆ
ಹೊಮ್ಮಿ ಬರುವುದು ಇವಗು ಕಾವ್ಯಸ್ಫೂರ್ತಿ!
ಯಾವ ದೈವಿಕ ಭಾಷೆ ಯಾವುದೋ ಧಾಟಿ-
ಹಾಡಿಯೇ ಹಾಡುವನು ಕಂಠಪೂರ್ತಿ.
ತೂಗಿದವರಿಗೆ ಬಂತು ತೂಕಡಿಕೆ ಎಂದಾಗ
ಹಾಡು ಮುಗಿವುದು ಕನಸಿನಲ್ಲಿ ಕರಗಿ.
ಏರಿ ಗಗನಕೆ ಹಾರಿ ತೂರಿ ಬಿನ್ನಾಣದಲಿ
ಬಗೆ ಬಗೆಯ ಲಾಗ ಹಾಕಿ,
ಗೂಡಿಗಿಳಿವುದು ಪಾರಿವಾಳ ನೆಟ್ಟಗೆ ಬಂದು
ಬಾನಿನಲಿ ಸಂಜೆಯಾಗಿ.

ದಡಸೂಸಿ ಹರಿವ ನದಿ ಮಡುವಾಗಿ ನಿಂತಂತೆ
ಇರುಳಿನಲಿ ಇವನ ನಿದ್ದೆ-
(ನಿದ್ದೆಯಲ್ಲೂ ಮುಖವು ಮುದ್ದು ಮುದ್ದೇ.)
ನಡುವೆ ಏನೋ ಕನಸು, ತುಟಿಯಂಚಿನಲಿ ಮಿಂಚು-
ಮೂಡಿ ಮರೆಯಾಗುವದು ದಿವದ ಬೆಳಕು;
ಕೊಳದ ತಳದಿಂದ ಮೇಲೆದ್ದು ಮುಳುಗಲು ಮೀನು
ಥಳಥಳಿಸಿ ಹೊಳೆಯುವೊಲು ನೀರಿನಂಚು.

ಎಲ್ಲೊ ಒಲವಿನ ಸೂತ್ರ ಹಿಡಿದು ಆಡಿಸುತಿರಲು
ಆನಂದದುಯ್ಯಾಲೆ ಒಳಗು-ಹೊರಗು;
ಸೂರ್ಯಚಂದ್ರರು ದಿನವು ಮೂಡಿ ಬೆಳಕಾಡಿದರೂ
ಇವನಿಂದಲೇ ನಮಗೆ ಬೈಗು-ಬೆಳಗು.

## ದೀಪಧಾರಿ

೧

ಒಂದು. . . ಎರಡು . . . ಮೂರು
ಒಂದೊಂದು ಹೂ ಹಗುರು
ಮಗುವಿಡುವ ಮೊಟ್ಟಮೊದಲಿನ ಪುಟ್ಟ ಹೆಜ್ಜೆಗಳನೆಣಿಸಿದನು
ಸೃಷ್ಟಿಕರ್ತ!
ದಟ್ಟಡಿಯನಿಡುತಲಿವ ನಡೆಗಲಿತುದೇ ಒಂದು
ಶುಭ ಮಹೂರ್ತ.
ಭೂಮಂಡಲವ ನೆತ್ತಿಯಲಿ ಹೊತ್ತು ಮೇಲೆತ್ತುವೊಲು
ಏಳುವನನಾಮತ್ತು;
ಜೋಲಿ ಹೊಡೆಯುತ ತಂತಿ ಮೇಲೆ ಓಡುವ, ನಡೆವ
ವಿವಿಧ ಕಸರತ್ತು;
ಅದರ ಗತ್ತುಗಳೆಲ್ಲ ಇವನಿಗೂ ಗೊತ್ತು!
ಬಂದು ನೋಡಿರಿ ಒಮ್ಮೆ, ಗರ್ದಿಗಮ್ಮತ್ತು.

೨

ಪದವಿಟ್ಟುದೇ ಭಂಗಿ
ನಡೆದದ್ದೆ ದಾರಿ,
ಕಣ್ಣುತಪ್ಪಿದರಿವನು ವಿಶ್ವಸಂಚಾರಿ!
ಹಿಡಿದದ್ದೆ ಹಟ
ಇವನು ನುಡಿದದ್ದೆ ವೇದ,
ತಳಕಿತ್ತು ಓಡುವವು ಎಲ್ಲ ವಾಗ್ವಾದ
ಎದ್ದನೊ,-
ತೊತ್ತಳಂದುಳಿವ ಯಜ್ಞದ ಕುದುರೆ!
ಬಿದ್ದನೋ-

ಇವಗಿಲ್ಲ ಅದರ ಪರಿವೆ.
ಎದ್ದೆದ್ದು ಬಿದ್ದು ಮುನ್ನುಗ್ಗಿ ನಡೆಯುವ ಹಿಗ್ಗು
ಸಾಹಸದ ದಂಡಯಾತ್ರೆ-
ನಡೆಯುತಿದೆ ಈಗಿನಿಂದಲೆ ಮುಂದಿನಾವ ಹೋರಾಟಕ್ಕೊ ಈ ಸಿದ್ಧತೆ!

೩

ಇವನ ಅಧ್ಯಕ್ಷತೆಯ ಕೆಳಗೆ ಜರುಗಲು ಬೇಕು
ಈ ಮನೆಯ ಪ್ರತಿಯೊಂದು ಕೆಲಸ ಕಾರ್ಯ.
ತಪ್ಪಿತೋ,-
ಹಿಂದುಮುಂದೂ ನೋಡದಿವನು ಊದಿಯೆ ಬಿಡುವ
ಸಮರ ತೂರ್ಯ!
ನಮಗಿಲ್ಲ ಇವನೆದುರು ನಿಂತು ನುಡಿಯುವ ಧೈರ್ಯ;
ಬೆಳಗಿನಿಂದಲು ಸಂಜೆವರೆಗು ಒಂದೇ ಸವನೆ ಉರಿವ ಸೂರ್ಯ!
ಆಡಿದರೆ ಅಡಿಯೇ ಆಡವನು-ಮನಸುಖರಾಯ
(ನಮೋ ವಿಘ್ನೇಶ್ವರಾಯ)
ಕಲ್ಲೊ ಮುಳ್ಳೊ - ಇವನು ಒಂದನೂ ಲೆಕ್ಕಿಸನು
ವಜ್ರಕಾಯ!
(ಇತ್ತಿಚೆ ಬೇರೆ ಕಲಿತಿಹನು
ಕಣ್ಣಿನಲಿ ನೀರಿಲ್ಲದೆಯೆ ಅಳುವ ಹೊಸ ಉಪಾಯ)
ಮರುಗಳಿಗೆ-ಶುಭಗಳಿಗೆ-ಏನು ಹೊಳೆವುದೊ ಏನೊ
ಏನಿಳಿವುದೋ ಚಂದ್ರಲೋಕದಿಂದ,
ಇಷ್ಟಗಲ ಅರಳುವದು ದುಂಡು ಮಲ್ಲಿಗೆ ನಗೆಯು
ಹೊಮ್ಮಿದೊಲು ಈ ಬಾಳಿನೆಲ್ಲ ಚೆಂದ.

೪

ಎತ್ತಲೋ ಹತ್ತು ದಿಕ್ಕಿಗು ಕೈಯನೆತ್ತುವನು
ಕಾಣದುದ ಕೈಮಾಡಿ ಕರೆಯುತಿಹನು;
ಇವನ ಕಪ್ಪನೆ ಕಣ್ಣಿಗಿದಿರು ಕುಣಿಯುವ ನವಿಲು
ಯಾವುದೊ? ಬೆರಳೆತ್ತಿ ತೋರಿಸುವನು.

ಬಾನ ಮರೆಗಿರುವ ಚಂದ್ರನ ಹುಡುಕಿ ತೆಗೆಯುವನು
ಒಂದೆ ನೋಟಕೆ ಚಿಕ್ಕೆ ಜಾಲಾಡಿಸುವನು;

ಹೂವ ಕಂಡರೆ ಹಿಗ್ಗಿ ಮೂಸುವನು ಈ ರಸಿಕ-
ಬಾನುಲಿಗೆ ತಾನೆ ಹೊಸ ಹಾಡು ಕಲಿಸುವನು.

ಬಿಸಿಲ ಕೋಲನು ಹಿಡಿದು ಮೇಲೇರ ಬಯಸುವನು
ಮಣ್ಣಿನಲಿ ಹೊನ್ನಕಣವಾರಿಸುವನು;
ಮೇಲೆ ಹಾರುವ ಹಕ್ಕಿ ಪುಚ್ಚಗಳನೆಣಿಸುವನು
ಮೌನಗಾಳಿಯ ಜಡಿದು ಮಾತಾಡಿಸುವನು!

ಹಗಲು ಸತತೋದ್ಯೋಗಿ, ಇರುಳು ಕಿಂದರಿಜೋಗಿ
ನಿದ್ದೆ ಎಲ್ಲೊ ಯಕ್ಷಲೋಕ ಸಂಚಾರಿ,
ಇವನೆಳೆಯ ಕಂಗಳಲಿ ಹೊಳೆವ ತಿಂಗಳ ಬೆಳಕು
ದಿನದ ದಾರಿಯೊಳೆಮಗೆ ದೀಪಧಾರಿ.



# ಮಣ್ಣಿನ ಮೆರವಣಿಗೆ

೧೯೫೬-೧೯೬೦

## ಮಣ್ಣಿನ ಮೆರವಣಿಗೆ

೧

ತಿರುಗುತ್ತಿದೆ, ಎಂದೋ ಸಿಡಿದಾರಿದ
ಅಗ್ನಿಯ ಪಿಂಡ;
ಆರಿದೆಯೆಂದವರಾರೊ, ಇನ್ನೂ ನಿಗಿ ನಿಗಿ ಉರಿಯುತ್ತಿದೆ
ಅದರೆದೆಯಾಳದ ಕುಂಡ!
ಹರಿಯುತ್ತಿವೆ ಬೆಂಕಿಯ ಹೊಳೆ
ತಣ್ಣನೆ ಕಡಲೊಳಗೆ;
ಹೊಗೆಯಾಡುತ್ತಿದೆ ಸುಮ್ಮನೆ ನುಣ್ಣನೆ ಬಾನೊಳಗೆ.
ಬಿದ್ದಿವೆ
ಒಡ ಮುರಿದೆದ್ದಿವೆ ಗಿರಿ ಗಹ್ವರ-
ಯುಗ ಯುಗಗಳ ನೋವೆ!
ದರಿಕಂದರದೊಳಗಿನ್ನೂ ಹರಿದಾಡಿದೆ ಸಂಶಯವೆ.

ಕುದಿಯುವ ಆ ಬಸಿರಿನ ಆವುದೊ ರಸ ಹೀರಿ,
ಚಿಮ್ಮಿವೆ
ದಿನದಿನವೂ ಹೊಮ್ಮಿವೆ ಹಸುರಾಗಿ

ಲಕ್ಷಾಂತರ ಆಶೆ!
ದಿಕ್ಕು ದಿಕ್ಕುಗಳ ಗೋಪುರವೇರಿ ದಿಟ್ಟಿಸಿವೆ;
ಕಣ್ಣ ಕ್ಷಿತಿಜದ ಆಚೆ ನೂರು ಗೋಲಗಳಾಡಿ
ಅದನಿದನು ಇದನದನು ಹಿಡಿದು ಎಳೆದಾಡಿ,
ಕೂಡಿ ಕುಣಿದಾಡಿ,
ಕೊನೆಯಿರದ ವರ್ತುಲಕೆ ಒಯ್ದು ಮುಟ್ಟಿಸಿವೆ!
ಸಂಜೆ ಮುಂಜಾವಗಳ ಸೂರ್ಯಬಿಂಬದ ಸುತ್ತು-
ಸದ್ದು ಗದ್ದಲವಿಲ್ಲದೆದ್ದು ಬಾನಂಗಳಕೆ ಬರುವ ಚಂದ್ರನ ಹೆಗಲ ಮೇಲೆ ಹೊತ್ತು.
ಬಾನ ಕಣದಲಿ ಕೋಟಿ ಚಿಕ್ಕೆ ಹಂತಿಯ ಕಟ್ಟಿ
ದಿವದ ಬದುಕನು ಒಕ್ಕಿ ರಾಶಿಮಾಡಿ
ಬೆಳಕು ಚಕ್ರಾಕಾರ ತಿರುಗುತ್ತಿದೆ!

೨

ಮಣ್ಣಮನೆಯೊಳು ಮಗುವು ಕಣ್ಣು ತೆರೆದಿತ್ತು!
ಬೆಳಕಿಂಡಿಯಿಂದ ಪಡಸಾಲೆಯಲಿ, ಮೂಲೆಯಲಿ
ಕೋಲಾಡಿಸಿತ್ತೆಳವಿಸಿಲು;
('ದೇವರ ಬಂಗಾರದ ಕುದುರೆ')
ಕಿಟಕಿಯಲಿ ಕೈ ಚಾಚಿ ಕರೆದ ಚಂದ್ರ.
(ಚೆಂದಪ್ಪ ಚೆಂದಪ್ಪ ಚೆಲುವ, ಚುಂಗಬಿಟಗೊಂಡು ಬರುವ)
ಚಿಕ್ಕೆ ನಕ್ಕವು ಬಾನ ಕನ್ನಡಿಯ ತುಣುಕಿನಲಿ
ಬಾನ ಬೀದಿಗೆ ನೂರು ಬೆಳ್ಳಿಯ ರಥ!
ಅಕ್ಕಪಕ್ಕದ ಮರದ ಹೂ ತುರಾಯಿಯ ಮೇಲೆ
ಹಾಡಿನುಯ್ಯಾಲೆ-
"ಅಕ್ಕ ಓ ಚಿಕ್ಕವ್ವೂ"
ಸಾಲೆ ಕೋಣೆಯಲಂದು ಮಗ್ಗಿ ಒಪ್ಪಿಸುವಾಗ
ಮೇಜ ಮೇಲೆಯೆ ಇತ್ತು ಪೃಥ್ವಿಗೋಳ.
ಗೂಡಿನಲಿ ಕುಳಿತು ಗುಟುಕರಿಸಿತ್ತು ಪಾರಿವಾಳ.
ಕಿಟಕಿಯಾಚೆಗೆ ದೂರ ಬೆಟ್ಟ ಬಯಲುಗಳಲ್ಲಿ
ಮುಂಗಾರು ಮಳೆ ಬೆಳೆದ ಭಾವ ಮೇಳ!
ಮಣ್ಣೆದೆಯೊಳು ಸ್ನೇಹವಂಕುರಿಸಿ ಬೆಳೆದು
ಬೆಳುದಿಂಗಳಿನ ಹೊನಲೆ ಎಲ್ಲೆಲ್ಲು ಹರಿದು
ಕಣ್ಣೆದುರು ಸಾಗಿತ್ತು ಮಣ್ಣ ಮೆರವಣಿಗೆ
ಇಲ್ಲಿಂದ ಆ ಬಾನ ಗುಡಿಯವರೆಗೆ!

೩

ಕತ್ತಲೆಯ ಕೋಣೆಯಲಿ ಹುಣ್ಣಿಮೆಯು ಹರಿದಾಡಿ
ಮಣ್ಣ ಗೋಡೆಯ ಮೇಲೆ ಬಣ್ಣ ಬರೆದಿತ್ತು.
ಆಷಾಢ ನಿಬ್ಬಣವು ಸೂಸ್ಯಾಡಿ ಬರುವಾಗ ಎಷ್ಟೊಂದು ಚೆಂದವಿತ್ತು!
ಚಿತ್ತವೆಲ್ಲಾ ಅದರ ಮೇಲೆ ಇತ್ತು.
ಬಂದು ಹೋದವು ಬಂಡು ಹೂಡಿ ಒಂದರ ಮೇಲೆ ಒಂದು ಮಳೆಗಾಲ-
ಗುಡುಗಿ, ಗದ್ದಲಿಸಿ, ಮದ್ದಳೆ ಬಡಿದು ಕುಣಿದಾಡಿ
ಹಿಡಿದು ಹೆಂಡದ ಬುಂಡಿ ಎತ್ತಿ ಕುಡಿದು!
ಹಾಗೂ ಹೀಗೂ ಗೋಡೆ ನಿಂತಿಹವು ಜೋಲಿ ಹೊಡೆದು;
ಕುಸಿಯತೊಡಗಿದೆ ಕೆಳಗೆ ನೆಲಗಟ್ಟು, ಮೇಲೆ ಬಿದ್ದಿದೆ ಭಾರ ನೀಗದಷ್ಟು,
ಎಷ್ಟು ಮಣ್ಣನು ಹಾಕಿ ಮೆತ್ತಿದರು ಪ್ರತಿ ವರುಷ ಇದರ ಹಾಡೇ ಇಷ್ಟು;
ಮಾಳಿಗೆಯ ಮೇಲೆ ಇರುವೆಗಳ ಸಾಲುದುರ್ಗ,
ಜಂತಿಯಲಿ ಇಲಿಗಳೋಡಾಡಿ ದಿನವೂ ಬುಟ್ಟಿ ಬುಟ್ಟಿ ಮಣ್ಣುದುರಿ
ಎಲ್ಲಿ ನೋಡಿದರಲ್ಲಿ ಸುರಂಗ ಮಾರ್ಗ!
ಇರುಳಿನಲಿ ಕುರುಡು ಬೆಳಕಿನ ಸುತ್ತ ನೆರಳುಗಳ ಕುಣಿತ.
ಇತ್ತೊ ಇಲ್ಲೋ ಎನಿಸಿ ಬಿಡುವ ಕತ್ತಲೆ ಒಳಗೆ;
ಹತ್ತು ಸಲ ಆರಿ ಹತ್ತುವ ದೀಪ ಬೀದಿಯಲಿ!
ಕೂಟು ಕೂಟುಗಳಲ್ಲಿ ಬೂಟು-ಸಪ್ಪಳ ಸೀಟಿ
ದಾಟಿ ಹೊಸತಿಲಿನಾಚೆ ಹೋದರೇನೊ ಎಂತೊ-
ಒಟ್ಟಿನ ಮೇಲೆ,
ಪರಿಸ್ಥಿತಿ ತುಂಬಾ ಶೋಚನೀಯ.

ಮೇಲೆ ಕಣ್ಣಿಟ್ಟ ಕಡೆಗೆಲ್ಲ ಜ್ಯೋತಿರ್ಮಾಲೆ
ನೀಲ ಬೆಳಕಿನಪೂರ್ವ ನೃತ್ಯಶಾಲೆ.
ಮಣ್ಣಮಡಿಲೊಳು ನಿತ್ಯ ಯಾತನೆಯ ನೆಲಗುಮ್ಮ
"ಎಚ್ಚತ್ತು ತಾಯಿ ಎಂವೆ ಬಿಚ್ಚ ಏಳಮ್ಮಾ
ಮಲಗಿರುವ ತಾಯಿ ಪೃಥಿವೀ".
ಕತ್ತಲೆಯ ಹುತ್ತ ಬೆಳಿದಿದೆ ಎತ್ತ ಸರಿದರೂ
ಆದರೂ ಎಂಥ ಸೋಜಿಗವೆಂದಿ-
ಬೆಳಕಿನಿಂದಲೆ ಅದರ ಉಪಜೀವನ-
ಜನನದಲಿ ಮರಣದಲಿ ತುಂಬಿ ಜಯಗಾನ.

ಚಳಿಗಾಲದಲ್ಲಿ ಮೈ ಸೆಟೆದುಕೊಂಡಿದ್ದ ತರು
ಬಂದು ನಿಂತಿದೆ ಬೀದಿ ಮಧ್ಯದಲಿ ಸಿಂಗಾರಗೊಂಡ ತೇರು!

ಬೇಡವೆಂದವರಾರು?
ಹಲಗೆ ಬಾರಿಸಿ, ಕಹಳೆಯೂದಿ, ಸಾಗಲಿ ಮುಂದೆ
ದುಂದು ಮೆರವಣಿಗೆ-
ಓ ಜೀವನವೆ!
ಶುಭಮಸ್ತು ನಿನಗೆ.

## ಯುಗಾದಿ

ಕರೆಯದಿದ್ದರು ನಾವು, ನೀನು ಬಂದೇ ಬರುವಿ
ಅಲ್ಲವೆ? ಬಾ ಮತ್ತೆ, ಬಾ ಯುಗಾದಿ;
ಎಂಥ ಬಿಸಿಲೊಳು ಬಂದೆ!
ಬೇಕೆ ಬಾಯಾರಿಕೆಗೆ ಬೇವು-ಬೆಲ್ಲ?
ಚಹಕೆ ಸಕ್ಕರೆಯಿಲ್ಲ; ನಡೆದೀತೆ ಬರಿಯ ತಣ್ಣೀರ ಗುಟುಕು?
ಇದು ಹೋದ ವರುಷವೇ ಕೊಂಡ ಬಾಳದ ಬೇರ ಬೀಸಣಿಗೆ
ನೀರು ಚಿಮುಕಿಸಿದೆ; ತಣ್ಣಗೆ ಬೀಸಿಕೊ.
ಇಲ್ಲಿ ಪಾಟಿಯ ಕಲ್ಲಮೇಲೆ ಹಾಸಿದೆ, ಸ್ವಲ್ಪ ಅಡ್ಡಾಗಿ ಏಳು;
ಆಮೇಲೆ ಮಾತಾಡೋಣ, ಕುಳಿತು ಹಾಯಾಗಿ.
ಒಂದು ಯುಗವಾಗಿ ಹೋಯಿತಲ್ಲವೆ ನಾವು ಭೆಟ್ಟಿಯಾಗಿ!

* * * * * *

ಜೆಟ್ ವಿಮಾನ, ಹೆಲಿಕಾಪ್ಟರ್, ಉಗಿಹಡಗ, ಬೋಟು
ಎಮ್.ಎಸ್.ಎಮ್. ರೈಲು, ಕಾರು ಕೊನೆಗೆ ಎಸ್.ಟಿ. ಬಸ್ಸು?-
ಯಾವ ವಾಹನದಲ್ಲೂ ಬರಲಿಲ್ಲವೆ? ನೋಡಿದರೆ ಇಳಿವಯಸ್ಸು
ಕೊನೆಗೆ ಎತ್ತಿನ ಬಂಡಿ ಹತ್ತಿ ಬಂದೆಯ, ಹಿರಿಯ,
ಎಲೆಯಡಿಕೆ ಜಗಿದು, ಕಥೆ ಹೇಳಿ, ಲಾವಣಿ ಹಾಡಿಕೊಂಡು?
ಬಂದೊಡನೆ ನಿನ್ನ ಗುರುತಿಸಲಿಲ್ಲವೆ ಇಲ್ಲಿ ಯಾರೂ?
(ಬಗಲಗಸೆ ಅಂಗಿ ತಲೆಗೆ ಹೆಡಿಗೆಯ ರುಮಾಲು)
ಮರೆತು ಬಿಡಬೇಕೆ ಇಷ್ಟು ಬೇಗ ಮುಂಚಿನ ಹಾದಿ
ಅಥವಾ ಕಂಡೆಯ ಬೇರೆ ಅದಲು ಬದಲು?
ವರುಷಗಟ್ಟಲೆ ಎತ್ತಲೋ ಕಣ್ಮರೆಯಾಗಿ ಹೋಗುವ ನಿನಗೆ ಹೇಗೆ ಗೊತ್ತು-
ಇಲ್ಲಿ, ಒಳಗೊಳಗೆ ನಡೆಯುತಿರುವ ಮಸಲತ್ತು,
ನಿಮಿಷ ನಿಮಿಷಕ್ಕೆ ಹೊಸ ಹೊಸ ವೇಷ ಧರಿಸಿ ಓಡುವ ಜಗತ್ತು
ಹಾಗೆ ನೋಡಿದರೆ, ನಮಗಿಲ್ಲಿ ಏನಿದೆ ಹೇಳು ವಿಶೇಷ ಸವಲತ್ತು?

ಇಂದೊ ನಾಳೆಯೊ ವಲಸೆ ಹೋಗುವರು ನಮ್ಮ ಜನ
ಚಂದ್ರ ತಾರಾಲೋಕ ಹುಡುಕಿಕೊಂಡು
(ಬಹುಶಃ) ಕವಿಗಳನ್ನೂ ಜೊತೆಗೆ ಕರೆದುಕೊಂಡು.

* * * * *

ವರುಷ ವರುಷಕ್ಕೊಮ್ಮೆ ಬಯಲಟ್ಟದಲಿ ತೊಟ್ಟು ಬರುವೆ ಭರ್ಜರಿವೇಷ
ಓ ಚೈತ್ಯ ಪುರುಷ!
ಬಿರುಗಾಳಿ, ಕೋಲ್ಮಿಂಚು, ಆಣೆಕಲ್ಲಿನ ಮಳೆಯು, ಗುಡುಗು, ಸಂತೋಷ;
ಹೇಗಿಹುದು ಪಂಚಾಂಗದಲ್ಲಿ ಹೊಸ ವರುಷ?
ಕೋಗಿಲೆಯು ಮಾತ್ರ ಬಿಟ್ಟೂ ಬಿಡದೆ ತನ್ನ ಜಾಹೀರಾತು ಪ್ರಕಟಿಸಿದೆ.
ಅಚ್ಚಾಗಿಹುದು ಕೆಳಗಿನ ಕವಿತೆ
ಚೈತ್ರ ಪತ್ರಿಕೆಯ ವಿಶೇಷ ಸಂಚಿಕೆಯ ಮೊದಲ ಪುಟದ ಮೇಲೆ:

ತಳಿತ ಮಾವು ಮುಗುಳಾದ ಬೇವು
ಹುಲುಗಲದ ತುಂಬ ಹೂವು;
ಬೇಗೆ ಹತ್ತಿ ಮೈಸುಟ್ಟ ಕಾಡು
ಮರೆತಿಹುದು ಎಲ್ಲ ನೋವು.

ಅರ್ಧ ಹಸಿರು, ಇನ್ನರ್ಧ ಹಳದಿ
ಅಂಚಿನಲಿ ಚಿಗುರುಗೆಂಪು;
ಬಿಸಿಲ ಬೇಗೆಗೀ ನೆಳಲ ತಂಪು
ತಂಗಾಳಿ ತಂದ ಜೊಂಪು.

ಬಂತು ಗಾಳಿ ಕೆಂಧೂಳಿ-ಗೂಳಿ
ಮುಗಿಲುದ್ದ ಹೋಳಿಯಾಡಿ,
ಬೆಣಚುಗಲ್ಲ ಬಿಳಿ ಮೋಡದಲ್ಲಿ
ಕುಡಿಮಿಂಚು ಜೀವತಾಳಿ!

ಮೊದಲ ಮಳೆಗೆ ನೀರಡಿಸಿ ನಿಂತ
ಇಳೆಗಾಯ್ತು ಮೊದಲ ಕೂಟ;
ಸಾಕು ಎನಿಸಿ ಸಾಕಾಗಲಿಲ್ಲ
ಹೊಸ ಋತುವಿನೊಡನೆ ಬೇಟ.

* * * * *

ನೆನೆಸಿದೊಡನೆಯೆ ಕನಸಿನಲ್ಲಿ ಬಂದವ ನೀನು
ಬಾ ಯುಗಾದಿ; 'ಶತಂ ಜೀವೇಮ ಶರದಃ'
ನೂರು ವರುಷದ ಮೆದುಳ ಮಡಿಕೆಯೊಳಗೇನಿಹುದೊ-
ಹಬ್ಬ ಹುಣ್ಣಿಮೆಗೊಮ್ಮೆ ಬಿಚ್ಚಿ ಬಿಸಿಲಿಗೆ ಹಾಕಿ,
ಮಡಿಚಿ ಪೆಟ್ಟಿಗೆಯೊಳಗೆ ಇಟ್ಟುದಷ್ಟೆ!
ನುಸಿ ಮುಟ್ಟಿದರೆ ಅದರ ಗತಿಯೇನು? ಮೊದಲೆ ರೇಶಿಮೆಯ ಬಟ್ಟೆ-
ಇರಲಿ; ದಾರಿಯಲಿ ಬರುವಾಗ ಎಡಬಲಕೆ ಕಂಡುದೇನು?-

ಎಲೆಯುದುರಿ ರಸವಾರಿ ಕೊಂಬೆಗೈಗಳ ಬಾಚಿ
ಬಾನಿಳೆಯ ನಡುವೆ ಜೋತಾಡುತಿರುವೀ ಅಸ್ಥಿಪಂಜರಗಳು?
ಸ್ವಲ್ಪ ತಾಳು-
ಯುಗ ಯುಗಕ್ಕೊಮ್ಮೆ ಸಂಭವಿಸಿ ಬಂದರು ಅವಗೆ
ದುಂಬಾಲು ಬೀಳುವ ಮಂದಿ ಎಷ್ಟು ಹೇಳು.
ಸ್ವತಃ ನೀನೇ ಎಷ್ಟು ಸಲ ಬಂದು ಹೋದೆಯೋ ಈ ಹಿಂದೆ
ಬರಲಿರುವೆಯೊ ಮತ್ತೆ ಇನ್ನು ಮುಂದೆ;
ಮಹಡಿ, ಗೋಪುರ, ಗುಡಿಲು, ಕೋಟೆ, ಕೊತ್ತಳ, ಬೀಳು
ಕೊಳಚೆ, ಗೊಬ್ಬರ ಗುಂಡಿ, ಒಗ್ಗಾಲಿ ಬಂಡಿ-
ನೀ ಬರುವ ಮುನ್ನವೇ ನಡೆದಿತ್ತು ನೀ ಬರುವ ದಾರಿಯ ರಿಪೇರಿ;
ಮುಂದೆ ಬರುವಾಗೆಲ್ಲ ಬಲು ಹುಷಾರಿ!
ಮರೆಯದಿರು, ಕನಿಷ್ಠ ವರುಷಕೊಂದಾದರೂ ಬೇಕು ನಮಗೆ ಹೊಸ ಮಾದರಿ.

* * * * *

ಯುಗ ಯುಗದ ಹಾದಿಯಲಿ ನೆಳಲು ಬಿಚ್ಚಿದೆ ಬೋಧಿ
ಆಗಾಗ ಬಂದು ವಿಶ್ರಾಂತಿ ಪಡೆಯುವವಿಲ್ಲಿ ಈ ಜಗದ ಕರುಣೆ ಶಾಂತಿ;
ಎದೆಯ ಗುಹೆಯಲ್ಲಿ ಮಿಣುಕುತಿದೆ 'ಕಲ್ಯಾಣವೆಂಬ ಪ್ರಣತಿ'
ಒಳಗು ಹೊರಗೆಲ್ಲ ಒಂದೆ ರೀತಿ.
ಯುದ್ಧ ರಂಗದಲಿ ಸನ್ನದ್ಧವಾಗಿದೆ ರಥವು
ಎಲ್ಲಿ ಆ ಸಾರಥಿ?
"ಓಡ್ಯಾವ ಏಳು ಕುದುರೀ ಮಬ್ಬು ಕೆದರೀ
ಮೂಡ್ಯಾವ ಏಳು ಬಣ್ಣಾ ತುಂಬಿ ಕಣ್ಣಾ
ನೋಡ್ಯಾವ ಬಯಲ ಸುತ್ತೀ ಬೆಳಕು ಬಿತ್ತೀ"
. . . . ಓ! ಇದು ಈಗ ನಮ್ಮ ಸರತಿ.

## ಅಪರಾವತಾರ

ಚೋಟುದ್ದ, ಗೇಣುದ್ದ, ಆಕಾಶದುದ್ದ
ಕುತುಬ ಮೀನಾರಕ್ಕೆ ಕೈಯೂರಿ ಎದ್ದ!
ಕೆರೆಯಿಂದ ಸಾಗರದವರೆಗೆ ಸಾಗರಬಿದ್ದ
ರಾಡಿ ಮೈಯಿಂದಲೇ ಮೇಲಕೆದ್ದ-
ಗೌರಿಶಂಕರ ಶಿಖರ ಏರಬೇಕೆಂದಿದ್ದ
ಆದರೀಗಾಗಲೆ ಅದು ನಿಷಿದ್ಧ.
ಬುದ್ಧನೊಬ್ಬನು ಬೇರೆ ಆಗಿ ಹೋಗಿದ್ದ
ಇಲ್ಲದಿದ್ದರೆ ಇವನೆ ಇಂದಿಗೂ ಮುಂದಿಗೂ ಜಗದೆಲ್ಲ ಮಂದಿಗೂ ಸುಪ್ರಸಿದ್ಧ!
ಅಲ್ಲಿದ್ದ
ಇಲ್ಲಿದ್ದ
ಎಲ್ಲ ಕಡೆಗೂ ಬಾಲ ಗುಂಡಾಡಿಸಿದ್ದ.
ಹೋದ ಹೋದಲ್ಲೆಲ್ಲ ಹದನೋಡಿ ಹುಸಿಗುಂಡು ಹಾರಿಸಿದ್ದ!
ಮುದ್ದಾಗಿ ತೋರಿದವ ಹದ್ದಾಗಿ ಹಾರಿದ.
'ಉಳಿದ ಪಕ್ಷಿಗಳೇನು ನನ್ನಂತೆ ಹಾರುವವೆ
ಹಾಡಬಲ್ಲವೆ'? ಎಂದು ಡಂಗುರವ ಸಾರಿದ.
'ಕಿಂಖಿಲಿಲಿಲಿಲಿಲಿ' ಹರಡಿತ್ತು ನಾದಪ್ರಮಾದ!
ಆಕಾಶದಲ್ಲೆ ಯಾವ ದೇವರಿಗೊ ಪ್ರದಕ್ಷಿಣೆ ಹಾಕುತಿದ್ದವನು
ಕೆಳಗೆ ಸರ್ರನೆ ಇಳಿದು ಕೋಳಿಮರಿಗಳ ಮೇಲೆ
ಬಂದೆರಗಿದ!
ಪೂರ್ವಜನ್ಮದ ಸುಕೃತ-
ಈ ಮಹೋದಯ ಕೃಪಾಕಟಾಕ್ಷಕ್ಕೆ ನಾ ಬಿದ್ದೆ ಅಪ್ರಬುದ್ಧ.
ಚಿಕ್ಕೆ ಬಳಗದ ಚಂದ್ರ ಚೆಲುವಿನಿಂದ್ರ
ನಾಲ್ಕಾಣೆ ಚೂರುಗಳ ನಡುವೆ ಹೊಳೆಯುವ ಬೆಳ್ಳಿರೂಪಾಯಿಯಾದ.
ಬಿಡಲಿಲ್ಲ ಈತ ಅಲ್ಲಿಗೂ ಹೋಗಿ ಗಟ್ಟಿ ತಳವೂರಿದ;
ಹೂವಿನ ಸುವಾಸನೆಯ ಬೆಳದಿಂಗಳಿನ ತಂಪ
ತಕ್ಕಡಿಯ ಪರಡಿಯಲಿ ತೂಗ ಹೊರಟ.
ಕೊಬ್ಬರಿಯ ಜೊತೆಗದರ ಕರಟವನ್ನೂ ಕೂಡ
ತಿಂದು ಬಿಟ್ಟ.
ನಿತ್ಯವೂ ಮೊಗೆಮೊಗೆದು ಕುಡಿಯತೊಡಗಿದನಾಸೆಯಾಮಿಷದ ಪೀಯೂಷ
ಏನು ಕೊಟ್ಟರೆ ತಾನೆ ಬಂದೀತು ಇದರಿಂದ
ಬರುವ ಮಾದಕದಮಲು, ಸರಿಗಟ್ಟಿ ನಿಂತೀತು ದ್ರಾಕ್ಷಾರಸ?
ರೂಪಾಯಿ, ಆಣೆ, ಪೈ.

ಮನಸಿನೊಳಗೇ ನೀನು ಬೇಕಾದ್ದು ಬೈ
(ಪೂರ್ಣ ಪರವಾನಿಗಿ)
ಜಮಾಖರ್ಚಿಗೆ ಮಾತ್ರ ವ್ಯತ್ಯಯವಾಗದಿರಲಿ
ವೇದದಷ್ಟೇ ಪೂಜ್ಯ ರೋಜ ಕಿರ್ದಿ.
ರೂ. ಆ. ಪೈ.
ಇದರ ನಾದವೆ ನಾದ, ಇದುವೆ ಸಂಗೀತ
ಇದರ ಕುಣಿತವೆ ಕುಣಿತ: ಝುಣ್ ಝುಣ್ ತಕ್ಕಥೈ.
ಸೈ ಸೈ ತಲೆದೂಗಿ ಬೆನ್ನ ಚಪ್ಪರಿಸಿದನು ಕಥೆಯಾಗಿ ಕುಳಿತ ಆ ಮಿಡಾಸ!
ಅವರಿವರು ತೊಟ್ಟ ಬಿಳಿಯ ಬಟ್ಟೆಯ ಮೇಲೆ
ಮಸಿಯ ಸಿಡಿಸಿದರೆಷ್ಟು ಸೊಗಸು ಸಂತೋಷ!
ಯಾರ ತಲೆಗೆಂಥ ಟೊಪ್ಪಿಗೆಯಾದರೊಪ್ಪೀತು-
ಹಗಲಿರುಳು ಅದರದೇ ಧ್ಯಾನ, ಅದುವೆ ಜೀವನೋಲ್ಲಾಸ!
ಕತ್ತರಿಸಿ, ಹೊಲಿದು, ಬಿಚ್ಚಿ ತೇಪೆಯ ಹಚ್ಚಿ ತೊಟ್ಟು
ತೋರಿಸುವನು ತಗೊ ತಾಸಿಗೆ ನೂರು ವೇಷ.
ಊರಿನುಸಾಬರಿ ಇವನ ಊಟಕುಪ್ಪಿನಕಾಯಿ;
ಕೊಂಡಿ ಮಂಚಣ್ಣ, ಶಕುನಿ, ಜಕ್ಕಿಸಿಹೋದರಿವನೆದುರು-
ಅವರಿಗಿದ್ದವೆ ಹೇಳಿ, ನೂರು ಬಾಯಿ?
ಸಮಯಬಂದಾಗಿರಲಿ ಎಂದು ಸಂಗ್ರಹಿಸಿಹನು
ನಸುಗುನ್ನಿಕಾಯಿ.
ಕರಟಕರು ದಮನಕರಿಗೆಲ್ಲ ಇವನೇ ಇಂದು
ತಂದೆ ತಾಯಿ.

ಕಣ್ಣು ಗುಳಿಗಣ್ಣು, ಸದಾ ಒಳಸಂಚುಗಳ ಕೋಣೆ.
ಒಮ್ಮೆಯಾದರೂ ಅಪ್ಪಿ ತಪ್ಪಿ ಹೃದಯದ ಮಾತು ಹೊರಬಂದರಾಣೆ!
ಬಿಂಕದುಟಿಗಳ ಮೇಲೆ ಹಾಸ-ವಿರೋಧಾಭಾಸ
ಒಮ್ಮೊಮ್ಮೆ ಮಾತಿನಲಿ ಚೈತ್ರಮಾಸ!
ಮೊದಲ ನೋಟಕ್ಕಿವನು ಹಸುಳೆ. ಪೂರಾ ಹಸುಳೆ
ಗುಮ್ಮನಗುಸುಗ;
ಭಾವಕೋಶದ ಮೇಲುಮುಸುಗನೆಳೆದರೆ ಸಾಕು
ಮೂಗು ಮುಚ್ಚದೆ ಬೇರೆ ಗತಿಯೆ ಇಲ್ಲ.
ಒಳ ಮುಚುಗ; ನಾಲಗೆಯು ಹೊರಗೆ ಹಾದರೆ ಚುಚುಗ-
ತಿಂದುಚುಗ!
ಬೆಳಕಿಂಡಿಯಲ್ಲಿಳಿದು ಬಂದು ಬೆಣ್ಣೆಯ ತಿಂದು
ಗುರ್ರೆನುವ ಬಾವುಗ!

ಗೋಣಿಚೀಲದಿ ಹಾಕಿ ಹೊತ್ತು ಹೊರಗೊಗೆದರೂ
ಮತ್ತೆ ಹೇಗೋ ಬಂದು ಮೂಸುವದು ಸೋಜಿಗ!
ಅಲ್ಲಿಲ್ಲಿ ಸಂಶಯದಿ ಏಕೆ ಹುಡುಕುತ್ತಿಹಿರಿ?
ಇಲ್ಲಿಯೇ, ಇವನಂತರಂಗದಲ್ಲಿಯೇ ಹೊಗೆಯಾಡುತಿದೆ
ಬನ್ನಿ, ಮೂರನೆ ಮಹಾಯುದ್ಧ.
ಗೊಬೆಲ್ಸ ಮಹಾಶಯ ಕೊನೆಯ ಗಳಿಗೆಯಲಿ ತನ್ನೆಲ್ಲ
ಗುಟ್ಟು ಇವನಿಗೆ ಕೊಟ್ಟು ಪ್ರಾಣ ಬಿಟ್ಟ.

ಕಂಡಿರಾ ನೀವಿವನ, ಪರಮ ಸ್ನೇಹಿತನ?
ಸ್ನೇಹಕೆಂದೇ ಮೂರ್ತಿಮತ್ತಾಗಿ ಈ ಇಳೆಗೆ ಅವತರಿಸಿದವನ?
ಮೊನ್ನೆ ಮೊನ್ನೆಯೆ ಆಯಿತೆನಗೆ ತಾನಾಗಿಯೇ
ಇವನೊಡಲ ಬ್ರಹ್ಮಾಂಡದ ಮಹಾದ್ಭುತ ವಿಶ್ವರೂಪದ ದರ್ಶನ;
ಸಿಡಿಲೆರಗಿದಂತಾಯ್ತು ನಡುಗಿಹೋಯಿತು ನನ್ನ ಅತ್ಯಲ್ಪ ಚೇತನ.
"ನಮೋನಮಸ್ತೇಸ್ತು ಸಹಸ್ರ ಕೃತ್ವಃ
ಪುನಶ್ಚಭೂಯೋಪಿ ನಮೋ ನಮಸ್ತೆ."

## ಶಿಶು ಕಂಡ ಕನಸು

೧

ಇವನ ಹಾಲ್ದುಟಿಯಂಚಿನಲ್ಲಿ ಮಿಂಚುವ ನಗೆಯು
ತುಂಬುಗಣ್ಣುಗಳಲ್ಲಿ ಹೊಳೆವ ಬದುಕು,
ಧ್ವನಿತರಂಗದಲೆದ್ದು ತೇಲಿ ಬರುತಿಹ ನಾದ
ಚಂದ್ರ-ದೋಣಿಯನೇರಿ ಹುಟ್ಟು ಹಾಕು-

ಹೂವಿಗೆರಗಿದ ತುಂಬಿ, ಸಿಂಪಿಗೊರಗಿದ ಮುತ್ತು
ತಂಪುಗಾಳಿಗೆ ಬಿರಿದ ಸಂಪಿಗೆಯ ಮೊಗ್ಗು,
ತೆಂಗಿನೊಳಗಿನ ತಿಳಿಲು, ಗಾನದಿಂಪಿನ ಹೊಳಲು
ಮನಸಿನೊಳಗಿನ ಕನಸು ಹೀಗೆ ಬೆಳೆದು.

ತೆಂಗುಗರಿ ಚಾಮರವ ಬೀಸಿ ಬೆಳ್ಗೊಡೆಯೆತ್ತಿ
ಚಿಕ್ಕೆ ಪಲ್ಲಕ್ಕಿಯನು ಸಜ್ಜುಗೊಳಿಸಿ,
ಬೆಳ್ಳಿ-ಗಂಟೆಯ ನುಡಿಸಿ ಹೂವು ಹಡದಿಯ ಹಾಸಿ
ಇರುಳ ದೇವರು ಇಳೆಗೆ ದಯಮಾಡಿಸಿ-

ನೆರಳ ನೇವರಿಸುತ್ತ ಬೆಳಕು ಬೆರಳಾಡಿಸಿತು
ಬೆಳುದಿಂಗಳಿನ ಹಾಲು, ಖೀರು ಕುಡಿಸಿ,
ಹಗಲು ಧಿಮಿ ಧಿಮಿ ಕುಣಿದ ಬಿಸಿಲುಗುದುರೆಯ ಮೈಯ
ತಿಕ್ಕಿ ತೋಬರಿ ಕಟ್ಟಿ ಹಾಯಾಗಿಸಿ.

ಮಗುವಿನೆಳೆಗಂಗಳಲಿ ಬೆಳ್ಳಿ ಚಿಕ್ಕೆಯ ಮಿನುಗು
ಮನಸಿನಲಿ ತಿಂಗಳಿನ ತಂಪು ಕನಸು;
ಹಸು ಹಾಲು ಕರೆದ ತಂಬಿಗೆ ತುಂಬ ಮಲ್ಲಿಗೆಯು-
ಶಿಶು ಕಂಡ ಕನಸಿನಲಿ ಜೀವದುಣಿಸು!

೨

ಬಯಲೆಲ್ಲವೂ ಒಂದೆ ಬೆಟ್ಟವಾಗುತ ನಿಂತು
ಬೆಳೆಯಿತು ಪ್ರಪಂಚ.
ಎಲ್ಲಿ ನೋಡಿದಡಲ್ಲಿ ಬಣ್ಣದಲಿ ಆಡಿದವು ನೂರು ಕುಂಚ;
ಸರಸರ ಕೊಂಬೆಯೇರಿ ಇಳಿಯುವ ಅಳಿಲು,
ಎಲೆಗಳಲಿ ಸೋಸಿ ರಂಗವಲ್ಲಿಯ ಬಿಡಿಸಿ ಹಾಸಿದೆಳವಿಸಲು,
ನಿಮಿಷ ನಿಮಿಷಕ್ಕೆ ಗೂಡಿಗೈತಂದು ಹಾರುವ ಗುಬ್ಬಿ,
ಹುಲ್ಲಿನಲಿ ಬಿಸಿಲುಕಾಸುತ ಮಲಗಿ, ಮೈಮುರಿದು
ಬಾಲ ನಿಗುರಿಸಿ ಒಂಟೆ ಡುಬುರಿಯೆತ್ತಿ
ಹೂವಿನ ಮೇಲೆ ಹೆಜ್ಜೆಯಿಡುವಂತೆ ಮೈಗೆ ಮೈ ಸೋಕಿಸುವ ಕಾಮಿ ಬೆಕ್ಕು;

ನುಣ್ಣಗೆ ಸಣ್ಣ ಲೈನು ದಾರಿಯ ರಚಿಸಿ
ಒಂದರ ಹಿಂದೆ ಒಂದು
ಸಕ್ಕರೆಯ ವಾಗೀನು ಸಾಗಿಸುವ ಇರುವೆ ಸಾಲು.
ನಟ್ಟಿರುಳಿನಲಿ ಕಿಡಿಗೆದರಿ ಹಳಿಗುಂಟ ಉರುಳುವ ರೈಲು, ಮೈಲು ಮೈಲು!

ಕಣ್ಣಗೊಂಬೆಗೆ ಮೂಡಿ ಮನಸಿನಲಿ ಅಚ್ಚಾಗಿ
ಕನಸಿನಲಿ ಬಿಚ್ಚುವವು ರೀಲು ರೀಲು!

೩

ನಾನು (ಬೆಳೆದ ಮಗು)
ಮೂರು ಮಕ್ಕಳ ತಂದೆ
ಮೂರುಸಲ ಮಗುವಾಗಿ ಮತ್ತೆ ಬೆಳೆದೆ;

ನೂರು ಕನಸುಗಳನ್ನು ಮರಳಿ ಪಡೆದೆ.
ಎಳೆಯ ಕನಸೇ ಮರಳಿ ಕಳೆಗೂಡಿದಂತಿಹುದು
ಇಂದಿನಿರುಳು:
ಕಣ್ಣೆದಿರು ಕನಕಾಂಗಿ ಮುಗಿಲು ಕಪ್ಪುರಗೊಂಬೆ!
ಚಿಕ್ಕೆ ಲೋಕವ ತೆರೆದು ಅಕ್ಕರತೆ ಬೀರುತಿಹ ಸ್ವಚ್ಛ ಆಕಾಶ,
ಹಚ್ಚೆಯ ಚುಚ್ಚಿದಂತೆ ನೆಲದೊಳಚ್ಚೊತ್ತಿರುವ ಹಸುರ ಕುಸುರು.
ದಿಗಂತದಲಿ ಕೆಳಗೆ ಇಳಿಬಿಟ್ಟಿರುವ ಗಿರಿಸಾನುಗಳ ನೀಲ ತೆರೆ
ಮೇಲೆ ಚಂದ್ರನು ಬರಿಯ ದುಂಡು ಗೆರೆ.
ಕಿವಿಗೊಟ್ಟರೆದೆಗೆ ತೋಟ ಪಟ್ಟಿಯ ತೋಪಿನಿಂಚರದ ದೂರವಾಣಿಯ ಕರೆ.

ನಗರದಲಿ ತುಂಬ ವಿದ್ಯುದ್ದೀಪ-
ಬೆಳಕನ್ನೆ ಬಿಗಿದು ಹಿಡಿದಂತೆ ಹತ್ತೂ ಕಡೆಗೆ ಸುತ್ತು ತಂತಿಯ ಕಂಬ;
ಟಾರು ಬೀದಿಯಲಿ ಕಾರುಗಳ ಮಿಂಚಿನ ಲಾಳಿ,
ತಾಳ್ಮೆಯ ಮೇಲೆ ಕರಹೇರಿ ಕರಕರೆಪಡುವ ರೇಡಿಯೊ ಹಾಡು,
ಈಗ ಮ್ಯಾಟಿನಿ ಮುಗಿದು ಎರಡನೆಯಾಟ ಸುರುವು.
ನಗರ ಸಭೆಯುಪವನದ ಬೆಂಚಿಗೊರಗಿದ ಬಾಯ್ಗೆ ಹುರಿಗಡಲೆ, ಎರಡು ದುಡ್ಡಿನ
ಸುಟ್ಟಸೇಂಗಾ,
ಆಣೆಗೆ ಎಂಟು ಪೆಪ್ಪರಮೆಂಟು:
ಬಾಯಾಡಿಸು, ಯಾರಪ್ಪನದೇನು ಹೋಯ್ತು ಗಂಟು-
ನಗರಭವನದ ಧ್ವನಿವರ್ಧಕವ ತೂರಿ, ಸುರಿಯುತಿವೆ
ರಾಜಾ, ರೋರರ್, ರಾಕೆಟ್, ರಾಣಿ!
ನಾಳೆ ಬೆಳಿಗ್ಗೆ ನೋಡಿದರಾಯ್ತು ಪತ್ರಿಕೆಯಲ್ಲಿ, ಯಾಕ್ರಿ?
ಇದ್ದೇ ಇರುವನಲ್ಲ ಸ್ವಂತ ಸುದ್ದಿಗಾರ.

ಇಲ್ಲಿ ರಹದಾರಿ ಬಂದು. ತೂಗುತಿದೆ ಕೆಂಪು ಕಂದೀಲು,
ವರ್ಷಗಟ್ಟಲೆ ರಿಪೇರಿ ನಡೆಯುತ್ತಿರುವ ರಾಜಮಾರ್ಗ!
ಗಂಟೆಯಾಯಿತು, ಈಗ ಹೊರಟಿದ್ದು ನಿನ್ನೆಯ ರೈಲು.
ಇಂದಿನದು ನಾಳೆ ಎಷ್ಟೊತ್ತಿಗೋ
ದಾರಿಯಲಿ ಬರುವ ಸೇತುವೆಯೆಲ್ಲ ಭದ್ರವೊ-
ಭದ್ರಂ ಶುಭಂ ಮಂಗಲಂ.

*   *   *   *   *

ಹಗಲ ಪಾಜೆಯಗಟ್ಟಿ ಮುಟ್ಟಿ ಮರಳಿದೆ ಇರುಳ ತೇರು
ಆಕಾಶದಾಚೆ ತುದಿಯಿಂದ ಈ ತುದಿಯವರೆಗೆ ಬೆಳ್ಳಿಯ ಬೀದಿ.
ಇಳೆಯ ಹಾಡನ್ನೆಲ್ಲ ಕುಡಿದ ಸಾವಿರ ಚಿಕ್ಕೆ-
ಮಿಡಿಯುತಿವೆ ಇರುಳ ಮೌನ.
ಅಲ್ಲಿ ಮೂಡಿದ ನೂರು ಹೆಜ್ಜೆ ಮಿನುಗಿವೆ ಹರಡಿ ಜೀವಕಾಂತಿ!
ಇಲ್ಲಿರುವ ನಮಗೊ?
ಕಣ್ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿಯೆ ಬೆಳಗು
ಮತ್ತದೇ. . . ಬೆಳಗು.

## ಜೀರ್ಣೋದ್ಧಾರ

೧

ಹೊರಗೆ ಭಾರೀ ಥಂಡಿ
ನೆಲದ ಮೇಲಿದ್ದುದೆಲ್ಲವ ದುಂಡುಸುತ್ತಿ ಮೇಲೆತ್ತಿ
ಎಲ್ಲಿಗೋ ಒಯ್ದು ಒಗೆಯುತ್ತಿಹುದು ಗಾಳಿ!
(ಕಂಡ ಕಂಡವರ ಬಾಚಿ ತಬ್ಬಿಕೊಳ್ಳುವದಿದರ ಕೆಟ್ಟಚಾಳಿ)
ಗುಡ್ಡದೋವರಿಯಿಂದ ಸಂದಿಗೊಂದಿಗಳಿಂದ
ಒಮ್ಮೆಲೇ ಇದರ ದಾಳಿ.
ಶ್ರಾವಣದ ಹಸಿರು ರೇಶಿಮೆ ನೆನೆದು ನೆಲದ ಮೈಗಂಟಿಹುದು
ಶಿರಸಲದ ಹೂವಿನರಿಷಿಣವ ತೊಡೆದು.
ಮಳೆಯ ಜಾಲರಿ ಹಿಡಿದು ಮುಂದೆ ಸಾಗಿವೆ ಮೋಡ
ಆಗಾಗ ಹೂಬಿಸಿಲ ಮುಗುಳುನಗೆ ತಳೆದು-
ಅದರೀ ಗಾಳಿ ರೋಮ ರೋಮವ ಕಿತ್ತು ತೆಗೆಯುತಿದೆ,
ಎಲ್ಲೊ ಎಂದೋ ಉದುರಿಹೋದ ಎಲೆಗಳನೆತ್ತಿ
ಬುಗುರಿಯಾಡಿಸಿ ಮತ್ತೆ ಬೀಸಾಡಿದೆ.
ಮೈಮೇಲೆ ಎಚ್ಚರಿಲ್ಲದೆ ಅಲೆವ ಈ ಮದ್ದಾನೆಗೊಂದಲ್ಲ ಸಾವಿರ ಸೊಂಡಿಲು!
ದೂರ್ವಾಸಮುನಿಯ ಹೂವಿನಹಾರ ನೆಲಕೊಗೆದು ತಿಕ್ಕಿದ್ಯೆರಾವತಕು ಮಿಗಿಲು.
ಮೇಲೆ ಕುಳಿತವನಿಂದ್ರನೋ ಚಂದ್ರನೊ
ಕೊಟ್ಟ ಶಾಪವು ಅವನಿಗೇ ತಟ್ಟುತಿರಲು-
ಅದೊ ಬಂತು, ಮೊರಗಿವಿಯ ಝಾಡಿಸಿ, ನೆಲದ
ಮಣ್ಣ ಮೇಲಕೆ ತೂರಿ-

ಕಾಲೊಳಗೆ ಸಿಕ್ಕುದೆಲ್ಲ ಕಚ ಪಚ ತುಳಿದು
ಭೂಮಿಯಾಕಾಶ ಒಂದು ಮಾಡಿ!
ಸಾಧುಗೊಳಿಸಿದ ಮಾವುತನೆ ಕಂಗಾಲಾಗಿ ಕುಳಿತಿದ್ದಾನೆ
ಉಳಿದವರಿಗೆಲ್ಲಿಯದು ಜೀವದಾನ?
ಕಿಟಕಿ ಮುಚ್ಚಿ, ಬಾಗಿಲು ಹಾಕಿ, ಅಗಳಿ ಜಡಿದು ಬಿಡು
ನಿಶ್ಚಿಂತೆ:
ಹೊರಗಿನ ಪೀಡೆ ಹೊರಗೇ ಇರಲಿ
ಅದರುಸಾಬರಿ ಬೇಡ, ತಿಳಿಯಿತೆ?

೨

ಈ ಕಣ್ಣು ಕಾಣುವ ಜಗದ ಸೊಗದ ನೋಟ
ಈ ದಿನದ, ಈ ಹೊತ್ತಿನ, ಈ ಗಳಿಗೆಯ ಸಂಪುಟ.
ಒಳಗೆ ಕನ್ನಡಿಸಿ ತೆರೆದಿದೆ ನೂರು ಪದರುಗಳ
ಮನೋಮಂದಿರದ ಸುಂದರ ಕವಾಟ!
ಬಣ್ಣಬಣ್ಣದ ಗೋಲ, ಬಣ್ಣ ಬಣ್ಣದ ಛಾಯೆ-
ಒಂದೊಂದೂ ಪ್ರಸ್ಫುಟ.

ಒಡೆದ ಗಾಜಿನ ಬಳೆಯ ತುಂಡುಗಳ ಶೇಖರಿಸಿ
ಚಿತ್ರದಲಿ ಬಿಡಿಸಿಟ್ಟು ಕಂಡ ಮಾಟ;
ಕಣ್ಣೆದುರು ಬೀಳದೆಯೆ ಕಿವಿಗೆ ಕೇಳಿಸುತಿಹುದು
ಕೇಳಿದಂತೆಯೆ ಕಣ್ಣು ಕಾಣುತಿಹುದು;
ಈ ದೃಶ್ಯದಾಚೆಗಿನ ಬೇರೆ ದೃಶ್ಯದ ಪರದೆ
ರಂಗಭೂಮಿಯ ಮೇಲೆ ಜಾರುತಿಹುದು-

ಹನಿ ಹನಿಯಿಂದ ಹೊಡೆದು, ಕವಣೆಗಲ್ಲನು ಹಿಡಿದು
ನುಗ್ಗು ನುಗ್ಗಾಗಿಸುವ ಕಾರೊಡಲ ಮೇಘ;
ಹಳ್ಳ ಹೊಳೆ ಹುಚ್ಚೆದ್ದು ಹರಿದು, ಸೇತುವೆ ಮುರಿದು
ಊರು ಕೇರಿಯ ಹೊಕ್ಕು ನೀರಿನೋಘ!-
ಅತ್ತ ದನಕರು, ಇತ್ತ ಮನೆಮಾರು ತೆಪ್ಪತೇಲಿ
ನೀರು ಕಾಯ್ದಿದೆ ತನ್ನ ಸಮಪಾತಳಿ!
ಒಮ್ಮೊಮ್ಮೆ ಮೈಯಲ್ಲಿ ದೆವ್ವ ಹೊಕ್ಕಂತೆ ಭೂಕಂಪ
ಆಕಾಶ ಗಾಳಿಯ ಪಟ!
ಬಸಿರು ಬಸಿರೇ ಬಿರಿದು ಬಕ್ಕರಿಸುವುದು, ಕಣ್ಣ

ಕೆಕ್ಕರಿಸುವದು-ಸೌರಬಿಂಬಿದಲಿ ಸ್ಫೋಟ!
"Things fall apart, centre cannot hold"
"ತಾಸಿಗಿಪ್ಪತ್ತು ಅಪಘಾತ ಆಕಾಶದಲ್ಲಿ, ನೆಲದಲ್ಲಿ, ಪಾತಾಳದಲ್ಲಿ."
ಹತ್ತು ದಿಕ್ಕಿಗು ಸಂಪು
ಒತ್ತಿ ಮಾತಾಡಿದರೆ ರಂಪು
ಕೂಟು ಕೂಟಿಗೆ ಜನರ ಗುಂಪು- ಕೋಲಾಹಲ!
ಕಲ್ಲು, ಲಾಠಿ, ಲೂಟಿ, ಸೋಡಾಬಾಟ್ಲಿ, ಅಶ್ರುವಾಯು ಪ್ರಯೋಗ
ಕೊನೆಗೆ ಗುಂಡಿನೇಟು-
ಸದಾ ತೆರೆದು ಕೊಂಡಿಹುದು ಆಸ್ಪತ್ರೆಗೇಟು;

ಮಹಾಸಾಗರದ ಗಂಭೀರ ಗುಂಭವೆನಿಸಿದ ಹಡಗು
ಹೀಗೇಕೆ ಹೊಯ್ದಾಡಿದೆ?
ಅಂತರಿಕ್ಷದಲಿ ತೂಗಿ ತಾಕಲಾಡಿವೆ ದೀಪ,
ಬೆಳಕಿನ ಮೊಟ್ಟೆಯೊಡೆದು ಕತ್ತಲೆ ಬರುವುದುಂಟೆ, ಪಾಪ.
ಕಿವಿಯಲ್ಲಿ ಗಾಳಿದುಂಬಿದ ಕರುವಿನಂತೆ ಸದಾ
ಜಿಗಿದಾಡುತಿರುವ ಇದಕೆ
ಇದ್ದಕ್ಕಿದ್ದಂತೆ ಎಲ್ಲಿಂದ ಬಂತು ಲಂಗರು ಬಿಚ್ಚಿ ನೀರ ತಳ-
ಕಿಳಿವ ಬಯಕೆ:
ದಿಗಂತವನೆ ವ್ಯಾಪಿಸಿ ನಿಂತ ಮಹಾಸಾಗರದ ಮಧ್ಯದಲಿ
ಎದ್ದು ನಿಂತಿದೆ ಮುಗಿಲವರೆಗೆ ವಿಷಧೂಮ-
ವಿಜಯಸ್ತಂಭ!
ಮೆದುಳಿನ ಮೇಲೆ ನಾಯಿ ಕೊಡೆ ಬೆಳೆಯಿಸಿಕೊಂಡ
ಶುದ್ಧ ಹುಂಬ!

೩

ಗತವೈಭವವೊ?- ಪಾಳುಬಿದ್ದ ಗುಡಿ;
ಅಂಗಳದಿ ಅಂಗುಲಂಗುಲಕೆ ನೆಗ್ಗಿಲಿ ಮುಳ್ಳು, ಗೊಳ ಗೊಳಿಕೆ.
ಈ ಹಿಂದೆ ಎಲ್ಲ ದಾರಿಗಳಿಲ್ಲಿ ಬಂದು ಕೂಡಿದ ಗುರುತು-
ನಮಗಿಂದು ಕಾಣುವದು ಬರಿಯ ತೋರು ಬೆರಳು.
ಗೋಡೆ ಗೋಡೆಯ ಗೋರಿಯಲ್ಲಿ ಹುಳು-ಹುಪ್ಪಡಿ
ಕಣ್ಣು ಕಪ್ಪಡಿ,-ಬಿಚ್ಚುಗತ್ತಿ ಮೈಗಾವಲು.
ಗಾಳಿಯಾಡಿದರೆ ಆಡು ಕುರಿ-ದಡ್ಡಿ ಜಿಡ್ಡುನಾತ.
ಆಚೀಚೆ ನಡುಬಾಗಿ ಒಂಟೆ ಮಲಗಿದ ತೆಂಗು

(ಆಯುಷ್ಯ ಗಟ್ಟಿಯಿದ್ದರೆ ಯಾರದೇನು ಹಂಗು?)
ಬದಿಯಲ್ಲಿ ಬೆಳೆದು ನಿಂತಿದೆ ಸ್ವಾಮಿ ಸನಾತನ
ಅಶ್ವತ್ಥ ವೃಕ್ಷ
ಸುತ್ತು ಮುತ್ತೂ ಹಸುರು ಪೈರು ಮೊಳೆದಂತಿಲ್ಲ
ಅಷ್ಟು ವರ್ತುಲ ಜಾಗ ಇಂದಿಗೂ ರುಕ್ಷ.
ಇದರಡಿಗೆ ಕುಳಿತು ಮೋಕ್ಷ ಪಡೆದವರೆಷ್ಟೊ
ಆಗಲೂ ಈಗಲೂ ಟೊಂಗೆ ಟೊಂಗೆಗೆ ಜೋತು-
ಬಿದ್ದಿರುವ ತೊಗಲಬಾವಲಿ ಸಾಕ್ಷಿ ನುಡಿಯಬಹುದಲ್ಲ!
ಧೂಳಡರಿ ಜಂತಿಗೆ ಸೇರಿ ಕುಳಿತ ಪಲ್ಲಕ್ಕಿ.
ಮೂಲೆಗುಂಪಾಗಿರುವ ತೇರು-
ಒಳಗಿನುತ್ಸವ ಮೂರ್ತಿ ಮೊದಲೇ ಗಡೀಪಾರು.
ಯಾರ ಪುಣ್ಯವೊ, -ಗರ್ಭಗುಡಿಯಲ್ಲಿ
ಇನ್ನೂ ಉರಿಯುತಿದೆ ಸಣ್ಣ ಹಣತೆ-
ನಮಸ್ತೆ, ನಮಸ್ತೆ, ನಮಸ್ತೆ.

* * *

ಕಲ್ಲು ಕಟೆಯುವ, ಮಣ್ಣು ಹೊರುವ, ನೇಗಿಲು
ಹಿಡಿದು ಉಳುವ; ಬಟ್ಟೆ ನೇಯುವ, ಕಾರ-
ಖಾನೆಯಲಿ ದುಡಿವ; ಭಂಗಿ ಬುಟ್ಟಿಯ ಹೊರುವ,
ಪತ್ರಿಕೆಯ ಮಾರುವ; ಕಛೇರಿಯಲಿ
ಕುರ್ಚಿಗೆ ಕುಳಿತು ಬಗ್ಗಿ ಬರೆದೇ ಬರೆವ;
ಆಣೆಕಟ್ಟನು ಕಟ್ಟಿ ಕಾಲುವೆಯ ತೋಡುವ
ಭೂಗರ್ಭದಿಂದ ಬಂಗಾರ ತೋಡಿಕೊಡುವ
ಲೇಖನಿ ಮಿಡಿದು ಅಂತರಂಗ ಕರಗಿಸುವ
ಪಾಟಿ ಪೇಣೆಯ ಕೊಟ್ಟು ಅಕ್ಷರವ ತೀಡಿಸುವ
ಲಕ್ಷ ಲಕ್ಷ ಹೋರೆಯ ಭಾರತಶಕ್ತಿ ಪ್ರತ್ಯಕ್ಷ.
ದುಡಿದು ಹಣ್ಣಾದವಗೆ ಇಲ್ಲಿ ಸಾಕ್ಷಾತ್ಕರ;
ಇವರಿಂದ ಈ ಪಾಳು ಗುಡಿಯ ಜೀರ್ಣೋದ್ಧಾರ.

## ವಕ್ರರೇಖೆ

೧

ನಗರ ಮಧ್ಯಕೆ ನುಗ್ಗಿ ದೂರದ ದಿಗಂತಗಳ
ಕನಸು ಕಾಣುತ್ತಿರುವ ಟಾರು ಬೀದಿ-
ಸಂತೆ ಮೂಟೆಯ ಹೊತ್ತ ಬಾಡಿಗೆಯ ಚಕ್ಕಡಿಗೆ
ಸನಿಹದಲ್ಲಿಯೆ ಬೇರೆ ಹೊರಳು ಹಾದಿ.

ಓಣಿ ಓಣಿಯ ಸುತ್ತಿ ಸಂದಿ-ಗೊಂದಿಗೆ ಹಾಯ್ದು
ಇದ್ದಲ್ಲಿಯೇ ಇಹುದು ಬೀದಿನಾಯಿ-
ಗಂಟೆ ಗಂಟೆಯ ನಡುವೆ ಕಾಲ ಚಡಪಡಿಸಿಹುದು
ಇಲ್ಲಿಗೂ ಬಂದೆಯ ನೀನು, ಬೊಂಬಾಯಿ!

ಈ ಸಮಾಂತರ ಹಳಿಯ ಮೇಲೆ ಓಡುವ ರೈಲು
ವಕ್ರರೇಖೆಗೆ ತಿರುಗಿ ನೂರು ಮೈಲು
ಎಲ್ಲ ರಾಜ್ಯದ ಗಡಿಯ ತುಳಿದು ದಾಟುತ್ತಿಹುದು
ಕೆಂಪು ಹಸುರಿನ ದೀಪ ಎರಡು ಕೈಲು!

ಕಣಿವೆ ಬೆಟ್ಟದ ಅಂಕುಡೊಂಕಿನಲಿ ಒಡಮುರಿದು
ಕಡಲ ಹುಡುಕುವ ನದಿಗು ಬೇರೆ ದಾಹ:
ಮಳೆಗಾಲ ಬೇಸಿಗೆಯ ಹರೆಯ ಮುಪ್ಪಿನ ತಿರುವು
ತಳದ ಒರತೆಗೆ ನೂರು ಸೆಲೆಯ ಸ್ನೇಹ.

ಏಳು ಹೊರಸಿನ ನುಲಿಯ ಬಿಟ್ಟರೂ ತಳ ಮುಟ್ಟಿ
ಬರುವ ಭರವಸೆಯಿಲ್ಲ, ಬೋಳು ಬಾವಿ;
ಪಾವಟಿಗೆ ತುಂಬ ಹಾವಸೆಗಟ್ಟಿದಿಳಿಜಾರು
ಎಷ್ಟು ಕುಡಿದರು ಆರದಂಥ ಬಾಯಿ!

೨

ಮರಿಗೆ ಮರಿಯಿಕ್ಕಿರುವ ಶೂನ್ಯ ಮಂಡಲ, ಕೆಳಗೆ
ತಿರುಗೆ ತಿರುಗುತ್ತಿರುವ ಪೃಥ್ವಿಗೋಲ,
ಜಾಳಿಗೆಯ ಬಿಚ್ಚಿರುವ ಬುಗುರಿಗಿನ್ನೂ ನಿದ್ದೆ
ದೀರ್ಘ ವರ್ತುಲದಲ್ಲಿ ಸ್ವಪ್ನಲೋಲ.

ತೆರೆದ ಕಣ್ಣಿನ ತಾರೆ, ತೇಲು ನೌಕೆಯ ಮೋಡ
ಮಳೆಯಿಳಿದ ಸಲಕೊಮ್ಮೆ ಹೊಸತು ನೀರು.
ನಿಂತಲ್ಲಿಯೇ ನೀಲಿಗಟ್ಟಿರುವ ಆಕಾಶ-
ನೆಲದ ಬಸಿರೊಳು ಸದಾ ಹಚ್ಚ ಹಸುರು.

ಗಾಳಿಪಟ ಹೆಡೆ ತೆರೆದು ಆಡುವಾಗಲು ಜಗ್ಗಿ
ಕೊಸರಿಕೊಂಡೇಳುವದು ಒಡಲ ಸೂತ್ರ;
ಕಡಲಿನುದ್ದಕು ಒಳಗೆ ಹರಿವ ಉಷ್ಣ ಪ್ರವಾಹ-
ಮೇಲೆ ತೆರೆಯಾಡುವದು ಬೇರೆ ಪಾತ್ರ.

ಸಂಜೆ ಕತ್ತಲೆಯೊಡನೆ ಹತ್ತು ಸಾವಿರ ದೀಪ
ಬೆಳಕು ಬಟ್ಟೆಯ ಕಳಚಿ ನಿಂತ ನಿಲುವು-
ನಿಂತ ನೀರೆಲ್ಲವೂ ತಿಳಿದು ತಳ ಕಂಡಾಗ
ದುಷ್ಯಂತನಿಗೆ ಬೇರೆ ಅರಿವು-ಮರೆವು.

ಈಚೆ ಬಾಗಿಲಿನಲ್ಲಿ ಬೆಳಕು ಕರಗುತ್ತಿರಲು
ಇರುಳು ತೆರೆವುದು ಮರೆಯ ವಸ್ತು ಕೋಶ;
ನಡುವೆ ಪಡಸಾಲೆಯಲಿ ನೆರಳು ಹೊಡಮರಳುವದು
ಇವನ ಎದೆಯೊಳು ಸದಾ ಸಂಧಿ ಪ್ರಕಾಶ!

## ನಾಳಿನ ನವೋದಯ

೧

ಬೆಳಗಾಯಿತು-
ಕಾಶ್ಮೀರದಿಂದ ಕನ್ಯಾ ಕುಮಾರಿಯವರೆಗೆ
ಹೊಂಬಿಸಲು ಸೂಸಿ ಹೂಗಾಳಿ ಹರಿದಾಡಿತು.
ನೀಲಿಯಾಗಸದ ತೊಳೆದ ಪಾಟಿಯ ಮೇಲೆ
ಹಕ್ಕಿ ಧ್ವನಿ ತೀಡಿತು ಹೊಸದೊಂದು ವರ್ಣಮಾಲೆ!

ಕೆಂಪು ಕೋಟೆಯ ಭುಜಕೆ ಧರ್ಮಚಕ್ರ ಧ್ವಜವನಿರಿಸಿ
ತಾಜಮಹಲಿನ ಹಾಲುಗಲ್ಲಿನಲಿ ಪ್ರೀತಿ ಪ್ರತಿಬಿಂಬಿಸಿ
ಸದಾಸಿದ್ಧ ಗೊಮ್ಮಟೇಶ್ವರನ ಮಂದಸ್ಮಿತವ ಬಳಸಿ
ಗಂಗೆ, ಗೋದಾವರಿ, ಕೃಷ್ಣೆ, ತುಂಗಭದ್ರೆ, ಕಾವೇರಿಯರ
ತೆರೆ ಪರಂಪರೆಯಲ್ಲಿ ತಂಗಾಳಿ ಸೂಸಿ-

ಹಳ್ಳಿ ಹಳ್ಳಿಯ ಬದುಕ ಬೆಳ್ಳಿ ಚಿಕ್ಕೆಗೆ ಉಜ್ಜಿ
ದನಕರದ ಕೊರಳಿನಲಿ ಕಟ್ಟಿ ಹುರಿಗೆಜ್ಜಿ,
ಗುಡಿಸಲಿನ ಗೂಡಿಂದ ಹೊರಬಂದ ಹುಂಜ ಕೊರಳೆತ್ತಿ ಕೂಗಿ
ಬೆಳಗಾಯಿತು.

ಗಿರಣಿ ಬಂಬಿನ ಹುತ್ತದಿಂದ ಹೊಗೆಯೆದ್ದು
ಹಾವು ಹೆಡೆ ಬಿಚ್ಚಿತು!
ಬೀದಿಯೀ ತುದಿಯಿಂದ ಆ ತುದಿಯವರೆಗೆ
ರಬ್ಬರು ಗಾಲಿಯುರುಳಿ, ಎಬ್ಬಿಸಿತು ಧೂಳಿ.
ನಳದಲ್ಲಿ ನೀರು ಗೊರಗೊರ ಸದ್ದು ಮಾಡಿ
ಹಂಡೆ ಕೊಡಗಳ ಜೊತೆಗೆ ತೋಡಿಕೊಂಡಿತು ತನ್ನ ಸುಖ ದುಃಖ.
ಆಕಾಶವಾಣಿಯಲಿ ತಕ್ಕ ದೇವರ ನಾಮ.
ಹೊರ ಬಾಗಿಲಿಗೆ ಬಂದು ಹಾಲು ಅಳೆದನು ಗೌಳಿ;
ಸುದ್ದಿಯಲಿ ಅದ್ದಿ ತೆಗೆದಿರುವ ಪತ್ರಿಕೆ ಬಂದು ಬಿತ್ತು
ಜೊತೆಗೆ ಚಹವೂ ಬಂತು-
ಮತ್ತೇನು ಸುದ್ದಿ?

೨

ನಿನ್ನೆ ಮೊನ್ನೆಯದು, ತಿಂಗಳು ವರುಷದಾಚೆಯದು
ಇಂದಿಹುದೆ? ಇಹುದು-ಇಲ್ಲ;
ನಾಳೆ ನಾಡಿದ್ದು ದೇವರೇ ಬಲ್ಲ.
ಯುಗ ಯುಗಗಳನು ಸೆಳೆದು ತುಳಿದು ತಳಹದಿ ಮಾಡಿ ಮೇಲೆ ನಿಂತು
ಮುಗಿಯ ಬಂದಿಹುದೇನೊ ಮೊದಲ ಹಂತ-
ನಡೆದಷ್ಟು ದೂರ ಸಾರುವದು ದೂರದ ದಿಗಂತ.
"ಅಡಿಯ ಮುಂದಿಡೆ ಸ್ವರ್ಗ
ಅಡಿಯ ಹಿಂದಿಡೆ ನರಕ
ಅಡಿಗಶ್ವಮೇಧ ಫಲ"- ಸಾಗಿಹುದು ಪಾದಯಾತ್ರೆ;
ಯಾರು ಬಲ್ಲರು, ನಾಳೆ ಈ ಗುಡಿಯ ಮುಂದೆಯೇ
ನೆರೆದೀತು ದೊಡ್ಡ ಜಾತ್ರೆ.

ಕಣ್ಣೆದುರು ಬಣ್ಣದಲಿ ಹೊಳಹುಗೊಂಡೇಳುತಿಹ
ದೇಶದುದ್ದೇಶಗಳ ಹೊಸತು ನಕ್ಷೆ,
ಲಕ್ಷ ಲಕ್ಷದ ಜನದ ಆಶೆಯಾಕಾಂಕ್ಷೆಗಳ ಭರವಸೆಯ ಬೆಳ್ಳಿ ರೇಖೆ!
ಒಂದೊಂದೆ ಇಟ್ಟಂಗಿ, ಒಂದು ಕಬ್ಬಿಣ ಬುಟ್ಟಿ ಗಚ್ಚುಗಾರೆ

ಕೋಟಿ ಕೈಗಳ ದಾಟಿ, ಕೋಟಿ ಹೃದಯವ ಮೀಟಿ
ಜಾತಿ, ಕುಲ, ಪಂಥ; ಊರು, ತಾಲೂಕು, ಜಿಲ್ಲೆ, ಪ್ರಾಂತ-
ಮೀರಿ ಅಂಥಿಂಥ ಸಂಕುಚಿತ ಮೇರೆ
ಸಮರ್ಪಿಸಿದೆ ಕೋಟಿ ತಾರೆಯ ಬೆಳಕಿನೆಲ್ಲ ಧಾರೆ.

ನಿಲ್ಲಿ ನದಿಗಳೆ ಇಲ್ಲಿ, ನಿಮಗೆಲ್ಲಿ ವಿಶ್ರಾಂತಿ? ನಿಂತು
ಸಾಗರವಾಗಿ, ವಿದ್ಯುದಾಗರವಾಗಿ ಮುಂದೆ ಸಾಗಿ
ನೂರು ಯೋಜನ ನೆಲವನೆಲ್ಲ ಹಚ್ಚಗೆ ನಗಿಸಿ
ತೆನೆತೆನೆಯ ತಲೆದೂಗಿಸಿ
ನಿಮ್ಮ ಹೊನಲಿನ ಶಕ್ತಿಯುಕ್ತಿಯಲಿ ಆಗಸಕೆ ತಂತಿ ಬೀಸಿ
ಮನೆ-ಮಹಡಿ, ಗುಡಿ-ಜೋಪಡಿ, ಬೀದಿಯಿಕ್ಕಟ್ಟಿನಲಿ ಬೆಳಕು ಸೂಸಿ.
ಹಳ್ಳಿ ಪಟ್ಟಣ ನಗರ, ಗುಡ್ಡ ಕೊರಕಲು ಕಂಟಿ
ಎಲ್ಲೆಂದರಲ್ಲಿ ಶ್ರಮದಾನಕ್ಕೆ ಶುಭದ ಹಾದಿ.
'ಮೆಲ್ಲೆಲರಿಂ ಪೂತ ಕೊಳಂಗಳಿಂ ಕೆರೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ'
ತುಂಬಿ ತೂಗಿ,
'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪು
ಗಳ್ಗಾಗರಮಾಗಿ'
ಹೊಸ ರೂಪ ರಚನೆಯಲಿ ಕಂಗೊಳಿಸಿ ಕಸುವಾಗಲಿದೆ ನಾಡು
ಅದಕಿದೇ ಮೊದಲ ನಾಂದಿ.
ಬರಿಯ ಹಾರೈಕೆಗಳನುಂಡು ಸೊರಗಿದ ದೇಹದಲ್ಲಿ ಬಿಸಿನೆತ್ತರಿನ
ಸಂಚಾರ-
ನೀರು ಗೊಬ್ಬರವುಂಡು, ಭೂಮಿಯಾಳಕೆ ನೂರು ನಾಲಗೆಯ ಚಾಚಿ
ಹೊಸಬಾಳ ಚಿಗುರು ಹೂ ಹಣ್ಣುಗಳ ಬಸಿರಲ್ಲಿ ಹೊತ್ತಿರುವ
ಜೀವಯಜ್ಞ.

೩

ವರುಷ ವರುಷಕೆ ನಮಗು ನಿಮಗೂ ಬೇವು ಬೆಲ್ಲದ ಯುಗಾದಿ.
ಬಿಡುಗಡೆಯ ಪಡೆದ ಈ ನಾಡು ಹುಡುಕುತಿದೆ ಸರ್ವೋದಯದ
ಸುಖದ ಹಾದಿ.
ಐದೈದು ವರುಷಗಳ ಸೋಪಾನವನ್ನೇರಿ ಆಪಾದಮಸ್ತಕವ ನೋಡಿಕೊಂಡು
ನವಯುಗಾರಂಭದಲಿ ಅಂಬೆಗಾಲಿಟ್ಟ ಶಿಶು ಆಗಲೇ ಬೆಳೆದು ನಿಂತು
ಹಾಲಿನ ಬಾಟ್ಲಿ ಬಿಟ್ಟು, ಬಟ್ಟಲನ್ನವ ತೊರೆದು ತನ್ನಿಚ್ಛೆಯಲಿ ತಾನೆ
ಉಣ್ಣುತಿದೆ ಐದೈದು ಬೆರಳ ತುತ್ತು. . . . . . .
'ಸರ್ವೇಜನಾಃ ಸುಖಿನೋಭವಂತು'

ಕೆಡುಗಾಳಿ ಬಿಟ್ಟಾಗ ಈ ಮಗುವಿಗೊಂದಿಷ್ಟು ನೆಗಡಿ ಕೆಮ್ಮು;
ಜ್ವರದಲ್ಲಿ ಬಡಬಡಿಸಿ, ಒಮ್ಮೊಮ್ಮೆ ಹೆದರಿಸಿಬಿಡುವುದೂ ಉಂಟು.
ಆದರೂ ನೆರೆಹೊರೆಯು ಬೆರಗು ಬಡುವಂತಿಹುದು ಇದರ ಬೆಳವಣಿಗೆ:
ವರ್ಣಮಾಲೆಯ ಕಲಿತು, ಗುಣಿತಾಕ್ಷರವ ನೀಡಿ, ಅಂಕಿಮಗ್ಗಿಯ ಮುಗಿಸಿ
ವರ್ಗದಲಿ ಎಲ್ಲರಿಗೂ ಮುಂದಾಯಿತು.
ಮುಂದಿನದು ಬರೆದಂತೆ ಹಿಂದಿನದು ಮರೆಯುತ್ತ ಹೊರಟರೇ ಸ್ವಲ್ಪ ಕಷ್ಟ,
ಅದಕಾಗಿ ಆಗೀಗ ಆಗಬೇಕಿವಗೆ 'ಅಜ್ಜಯ್ಯನಭ್ಯಂಜನ'-
ಗಾಂಧಿ ಗಾಂಧಿ ಗಾಂಧಿ
ಹೆಜ್ಜೆಹೆಜ್ಜೆಗೆ ಮನಸಿನಲ್ಲಿ ಕಟೆಯುತ್ತಿಹುದು
ಅವನ ಮನದಲಿ ಮೂಡಿ ಕೈ ಮೇಲೆ ಆಡಿ
ಹೆಗಲೇರಿ ಬೆಳೆದಂಥ ದಿವ್ಯ ಕನಸು.
ಹೊತ್ತು ಮುಳುಗಿತು ಎಂದು ಮತ್ತೆ ಹರಿದಾಡುತಿವೆ
ಸಿಕ್ಕ ಸಿಕ್ಕೆಡೆಗಳಲಿ ಹಾವು, ಚೇಳು;
ಕಾಡಿನಲಿ ಬೀಡು ಬಿಟ್ಟಿದ್ದ ಹುಲಿ, ಕರಡಿ, ಚಿರತೆ, ನರಿ, ತೋಳ
ನಾಡನಾಕ್ರಮಿಸಿ ಜಪ್ಪಿಸಿ ಕುಳಿತು, ಜಪಮಾಲೆ ಎಣಿಸುತಿವೆ
ಗುಂಡಾಡಿಸುತ್ತ ಬಾಲ.
ಅತ್ತ ಕತ್ತಲೆಯಲ್ಲ, ಇತ್ತ ಬೆಳಕೂ ಅಲ್ಲ;
ಮೋಟುಮರ ದೆವ್ವದಾಕಾರ ತಾಳಿರುವ ಸಂಧಿಕಾಲ.

ಎಂಥ ಕತ್ತಲೆಯಲ್ಲು ಸ್ವಂತ ತೇಜವ ಬಿಡದ
ಚಿಕ್ಕೆ ಬೆಳಕಿನ ಧೈರ್ಯ, ಶಾಂತಿ, ಔದಾರ್ಯ
ಈ ನಾಡಿನೆದೆಯಲ್ಲಿ ಮೂಡಬಹುದು;
ಇಂದಿನೀ ಕಂಬ, ತೊಲೆ, ಜಂತಿ, ತಂತಿಯ ಮೇಲೆ
ಇದರ ಬದುಕಿನ ಹಂತವೇರಲಿಹುದು:
ಮುಖ ಮುಖದ ನಡುವಿರುವ ಮಂಜು ಪರದೆಯು ಸರಿದು
ನಾಳಿನ ನವೋದಯವ ತೋರಲಿಹುದು.

## ಲಾಗ

ಲಾಗ ಹೊಡಿಯಲೊ ಮಂಗ, ಲಾಗ ಹೊಡಿಯಲೊ ಮಂಗ
        ಬಗ್ಗಿ ದಣಿಯರ ಮುಂದೆ ಲಾಗ ಹೊಡಿಯೊ;
ಹಾಕು ಅಂತರ್ಲಾಗ, ಹಾಕು ಜಂತರ್ಲಾಗ-
        ನೆರೆದ ಮಹನೀಯರಿಗೆ ಶರಣು ಹೊಡಿಯೊ!

ಇಸ್ತ್ರಿ ಮಾಡಿದ ಪ್ಯಾಂಟು, ಕ್ರಾಪು ತಲೆ, ಬುಶ್ ಕೋಟು-
ತೊಗಲ ಚೀಲವ ಹಿಡಿದುಕೊಂಡು ಮಗನೆ!
ಅತ್ತಿತ್ತ ಹಣಿಕಿದರೆ ಲತ್ತೆ ಬಿದ್ದಾವು ಬಾ,
ಕುತ್ತಿಗೆಯ ಹಗ್ಗವನು ಜಗ್ಗಿದೊಡನೆ!

ಬಡಿವಾರ ಮಾಡುತ್ತ ಬಸನಿಂಗಿ ಬಂದಾಗ
ಓಡಿ ಹೋಗುವರೇನೊ ಬಡೇಮಿಯಾ?
ಲಾಗ ಹೊಡೆಯುತ ಬಂದು ಗಜಮು ನಿಂತರೆ ನಿನಗೆ
ದೊಡ್ಡ ಕೋಲಿನ ಪದವಿ, ನಿಸ್ಸಂಶಯ.

ಕಂಡ ಕಂಡವರೆದುರು ಹಲ್ಲು ಕಿರಿ, ಪರವಿಲ್ಲ;
ಕೆಲಸ ತೀರುವವರೆಗು ಮುಜುರೆ ಮಾಡು;
ತೊಲೆಯ ಸಂದಿಯೆ ನಡುವೆ ಬಾಲ ಜೋತಾಡಿಸುತ
ಕೀಲು ಹಿರಿದರೆ ಮಾತ್ರ ನಿನಗೆ ಕೇಡು!

ನೀ ಕೊಟ್ಟ ಹಣ್ಣು ರುಚಿ, ಹೃದಯವಿನ್ನೆಷ್ಟು ಸವಿ!
ಕಡಲ ತಳದಲಿ ಮೊಸಳೆ ತೆರೆದ ಬಾಯಿ-
ಮರದಲ್ಲಿ ಹೃದಯವನು ಬಿಟ್ಟ ಸೋಜಿಗವ ನುಡಿ,
ಬದುಕಿಕೊಳ್ಳಲು ಇದೇ ತಕ್ಕ ದಾರಿ.

ಬೆಕ್ಕು-ಬೆಣ್ಣೆಯ ಜಗಳದಲ್ಲಿ ತಕ್ಕಡಿ ತೂಗಿ
ನ್ಯಾಯದಾನವ ಗೈದ ನಿನ್ನ ಬುದ್ಧಿ-
ರಾಜಕಾರಣಿಗಳನು ತಲೆದೂಗಿಸಿಹುದಿಲ್ಲಿ
ನಿನಗಿಂತ ಅವರಿಗೇ ಹೆಚ್ಚು ಸಿದ್ಧಿ!

ಗುಲಗಂಜಿಯನು ಬೆಂಕಿ ಕಿಡಿಯೆಂದು ಊದಿದರೆ
ನಿನಗಂಜಿ ಚಳಿ ಹೋಯ್ತು, -ಬರೋಬರಿ;
ಸೂಚೀಮುಖನು ಪಟ್ಟಪಾಡು ಯಾರಿಗೆ ಬೇಕು
ಲಾಗ ಹೊಡಿಯೋ ರಾಜ, ನಿಂದೇ ಸರಿ!

ಪ್ರತಿ ವರುಷ ನಿನಗೆಂದೆ ವನಮಹೋತ್ಸವವುಂಟು
ಮೋರೆ ಒಣಗಿಸಿಕೊಂಡರೇನು ಬಂತು?
ಬೇರೆ ದೇಶಗಳಿಂದ ನಿನಗು ಬೇಡಿಕೆಯುಂಟು-
ಸೇತು ಬಂಧವ ಬಿಟ್ಟು ಹಡಗ ಹತ್ತು.

ಲಾಗ ಹೊಡಿಯಲೊ ಮಂಗ, ಲಾಗ ಹೊಡಿಯಲೊ ಮಂಗ
ಲಾಗ ಹೊಡೆದರೆ ಬೇರೆ ತ್ಯಾಗ ಬೇಡ!
ಹಾಕು ಅಂತರ್ಲಾಗ, ಹಾಕು ಜಂತರ್ಲಾಗ-
ಡೋಲು ಬಡಿಸುವುದಕ್ಕೆ ಮರೆಯಬೇಡ.

## ವಿಕಾರಿ

'ಬಿಕೊ' ಎನ್ನುತಿದೆ, ಹಾಳು ನೀಲಿಯ ಸುರಿವ ಆಕಾಶ.
ಅಲ್ಲಿ ಒಂದೇ ಸಮನೆ ಚಕ್ರ ಹಾಕುವ ಹದ್ದು.
ಅದಕೆ ಮದ್ದು.
ವಕ್ರ ಹಳಿಗಳಗುಂಟ ಹೊಟ್ಟೆ ಹೊಸೆಯುತ ಹೊರಟು ನಿಂತಿಹುದು ರೈಲು.
ಬಿಸಿಲ ನೆತ್ತಿಯ ಬಿರಿವ ಸಿಳ್ಳು; ಕಪ್ಪು ಹೊಗೆ;
ಒಟ್ಟರಸಿ ಬಿಟ್ಟ ನಿಟ್ಟುಸಿರು!
ಬಡಕಲು ಗಿಡದ ಬುಡದಲ್ಲಿ ತಳಿರು-ನಾಲಗೆ ಚಾಚಿ
ದಸದಸ ತೇಕುತಿದೆ ನಾಯಿ;
ಪಾತಾಳದಾಳಕ್ಕೆ ಸೇದು ಹಗ್ಗವ ಹಾಕಿ ಜಗ್ಗಿದಂತಿಹುದದರ ಬಾಯಿ!
ಊರು ಕೇರಿಯ ದಾಟಿ, ಕೋಲಿ ಹೊಲಗಳ ತುಳಿದು
ಕೆಮ್ಮಣ್ಣು ಮರಡಿಯಾಚೆ-
ಬಿಸಿಲ ಚಾಪೆಯ ಸುರುಳಿ ಬಿಚ್ಚಿ ಓಡುತ್ತಿಹವು ಎಲ್ಲಿಗೋ ಬಿಸಿಲುಗುದುರೆ.

ವರುಷದುದ್ದಕೂ ವಟಗುಟ್ಟಿತು ಕಪ್ಪೆ; ಈ ಜಗವೇ ಕೆಟ್ಟಿದೆಯೆಂದು,
ಸುತ್ತು ಸುತ್ತಿಗೂ ಬಾಳಿನ ಗಾಣಕೆ ಪ್ರಾಣವ ಹೂಡಿದೆಯೆಂದು,
ಕೀಲಿ ಜಡಿದಿರುವ ಗುದಾಮಿನೊಳಗೆ ಖಾಲಿ ಚೀಲಗಳೆ ಒಟ್ಟಿವೆಯೆಂದು,
ತುಂಬಿ ಬೆಳೆದ ಹೊಲ ನೋಡಿಕೊಂಡು ದನ ತುಡುಗಿಗೆ ಬಿಟ್ಟಿಹರೆಂದು.
ಕಟ್ಟಡದಲ್ಲಿಯ ಕಲ್ಲು ಸಿಡಿದು ತಾವಿಟ್ಟಲ್ಲಿರಲಾರೆವು ಎಂದು-
ಕೂಡಿ ಕಟ್ಟಿ ಬೆಳೆಸುವುದನೆ ಮರೆತಿವೆ ಬುದ್ದಿಯೊ ತಲೆಗೊಂದು.
ಸೊಟ್ಟ ನಾಣ್ಯವೂ ದಿಟ್ಟಿಸಿ ನೋಡಿದೆ ಮನುಜನ ಮುಖವನ್ನು
ಬಟ್ಟೆಯ ಒಳಗೇ ಬೆಳೆಯುತ್ತಿದ್ದರು ಕಾಣದು ಬಿಳಿ ತೊನ್ನು-
ಆಗ ಈಗ ಲೊಚಗುಟ್ಟಿದೆ ಹಲ್ಲಿ, ಒಳಿತೋ ಒಳಿತೆನ್ನು.

ತೊಟ್ಟು ನೀರಿರದ ಬಟ್ಟ ಬಯಲಿನಲಿ ಸುಂಟರಗಾಳಿ-
ಕುಣಿವ ತಾಂಡವಮೂರ್ತಿ ಅಟ್ಟಹಾಸ!
ಮರ ಮರದ ಕೊಂಬೆಯಲಿ ಏನೊ ಪವಾಡ

ಚೆಂದುಟಿಯ ಮಂದಹಾಸ.
ಅಗ್ನಿಗೆಂಡವ ಹಾಯ್ದು ತಳಿರ ಪಲ್ಲಕ್ಕಿಯಲಿ
ಚಿಗುರು-ಹೂ-ಮಿಡಿ ಛತ್ರ ಚಾಮರವ ಹಿಡಿದು;
'ದೇವತಾ ಪೃಥಿವಿ'
ವರುಷ ವರುಷವು ತಪ್ಪದಂತೆ ಹೂವಿನ ತೇರು
ಬಾನ ಹರುಷಕೆ ನೆಲವು ತಾಯಿ ಬೇರು.
ಕೋಗಿಲೆಯ ಮೈದುಂಬಿ ಹೊಸ ಜೀವ ಬಂದಂತೆ
ಬರುವ ಸಂವತ್ಸರದ ಹೇಳಿಕೆಯ ಸಾರು.

ಯುಗ ಯುಗದ ವಿಸ್ಮೃತಿಯ ಬಾವಿ ತಳದಿಂದ ಕಪ್ಪಲಿ ಹೊಡೆದು
ಜೀವಕ್ಕೆ ನೀರು ಹಾಯಿಸುವ ಜುಳುಜುಳು ನಿನಾದ;
ಬದುಕಿನೆಲೆವಳ್ಳಿ ತೋಟ ಸೊಂಪಾಗಿ, ಕಬ್ಬಿನಾಲಿಯ ಹಾಲು ಹಬ್ಬವಾಗಿ,
ಊರೂರ ಹಾದಿಯಲಿ ಬೆಳೆದ ಬೇವಿನ ಮರದ ನೆಳಲು ತಂಪಾಗಿ,
ಬಳಲಿಕೆಯ ಹೂದುಟಿಗೆ ಬೆಲ್ಲದಚ್ಚಾಗಿ-
ಸವಿಗೊಳಿಸಿ ಸಮರಸವ ಎದೆಗಿಳಿಸಲೆಂದಿತ್ತು ಆ ವಿಳಂಬಿ.
ಅದಕೆ ಬೆಂಬಲವಾಗಿ ಬಂದೆಯಾ,
ಬಾ, ವಿಕಾರಿ.
(ಆ ಹೆಸರು ನಿನಗಲ್ಲ, ನಮಗೇ ಸರಿ.)
ಒಳಗು ಹೊರಗೂ ನಿನ್ನ ಹರಿದು ತಿನ್ನುವರಿಹರು ಬಲು ಹುಷಾರಿ.
ನೀನಾಗದಿರು ಕಂಡ ಕಂಡವರ ಮೋರೆ ಪರಚಿಕೊಳ್ಳುವ ಮಾರಿ,
ಆಗು ಸುವಿಚಾರಿ, ಜನತೆಗುಪಕಾರಿ, ಜಗಕೆ ಮಂಗಲಕಾರಿ.
ಭೂತ ಭವಿಷತ್ತುಗಳ ಕಾದಾಟದಲಿ ನಿನ್ನ ವರ್ತಮಾನದ ಜೋಲಿ ತಪ್ಪದಿರಲಿ
ನೀನಾಗು ತುಮುಲದಲಿ ತಲೆಯನೆತ್ತುವ ಕಲಿ
ನಿನ್ನ ಹೊಂಗನಸುಗಳು ನನಸಾಗಲಿ.

## ಕೊನೆಯ ನಿಲ್ದಾಣ

೧

ಜೇನು ಹುಟ್ಟಿಗೆ ಯಾರೊ ಹೊಗೆಯಿಟ್ಟು ಹೋದಂತೆ
ಮಂದಿ ಗಿಜಿಗಿಟ್ಟಿರುವ ನಿಲ್ದಾಣ;
ಯಾವುದೋ ಊರು,
ಎಲ್ಲಿಯೋ ಏತಕೋ ಅವಸರದ ಕೆಲಸ,
ಮನದ ಕೊನೆಯಂಚಿನಲಿ ಮತ್ತಾವುದೋ ಸರಸ ವಿರಸ;

ನಿಂತಲ್ಲಿಯೆ
ಕುಳಿತಲ್ಲಿಯೆ
ಎದೆಯ ಮಗ್ಗದಲಿ ಮಿಂಚಿನ ಲಾಳಿ ಓಡಾಡಿದೆ!
ಕೈಯ ಗಡಿಯಾರದಲಿ ಕಾಲದ ನಾಡಿ ಮಿಡಿಯುತಿದೆ-
ಅಲ್ಲಿಗೂ ಇಲ್ಲಿಗೂ ಎಲ್ಲಿಗೋ ಎಳೆಯನೆಳೆದಾಡುತಿದೆ ಜೀವಜೇಡ!

ದೂರ ತಾರಸ್ವರದಿ ಕೂಗಿಕೊಂಡಿತು ಗಾಡಿ
(ಮುಗಿಲ ಭೇದಿಸಿ ಬರುವ ಆಶರೀರವಾಣಿ!)
ಅಡಪು ಹತ್ತಿದ ಮೈಯ ತುರಿಸಿಕೊಳ್ಳುತ ನಾಯಿ
ಎದ್ದು ಕಿವಿ ಝಾಡಿಸಿದೆ-
ಧಡ್. . . ಧಡ್. . . ಧಡ್. . . ಧಡ್
ಕಂಪಿಸಿದವೆರಡೂ ಕಂಬಿ
ನೂರು ಗಾಲಿಗಳುರುಳಿ ದಡ್ಡು ಬಿದ್ದಿರುವೆದೆಯು
ಹೊಡೆದುಕೊಂಡಿದೆ ಮತ್ತೆ ಧಡ ಧಡಿಸಿ-
ಓ ಬಂತು!. . . . ಬಂದು ನುಗ್ಗಿತು ಗಾಡಿ
ಬಂದಂತೆ ಕೊನೆಗೊಮ್ಮೆ ಬೇರು ಕಿತ್ತು!
('ಬಂದಿತೆಂದರು ಇದ್ದುದಿದ್ದೆ ಇತ್ತು.')

ಸಾಮಾನು ಸಟ್ಟು, ಎಲ್ಲಾ ಒಳಗಿಟ್ಟು ಕುಳಿತೆಯಾ?-
ಇಲ್ಲಪೋ ಇಲ್ಲಿ ಜಾಗ, ಡಬ್ಬಿ ಭರ್ತಿ.
ಮೋಟಾರು ಬಸ್ಸೊ, ಸಿನಿಮ ಸರ್ಕಸ್ಸೊ, ಎಲ್ಲಿ ಹೋದರೂ
ಇದೇ ಫಜೀತಿ!
ಎಂಥ ಹುಚ್ಚನೋ ನೀನು!
ಸುಮ್ಮನೆ ದಂಗು ಬಡಿದೇಕೆ ನಿಂತಿ?
ಹೂಂ ಹತ್ತು, ಜೋರಾಗಿ ಆ ಕಡೆ ಒತ್ತು. ಈಗ ನಿನ್ನ ಸರತಿ.
'ಮಹಾಜನೋಯೇನ ಗತಸ್ಸಪಂಥಾ'
ಯಾರಾದರೇನು, ತಮಗಿಷ್ಟು ಆರಾಮು ಜಾಗ ಸಿಕ್ಕರೆ ಸಾಕು-
ಸಾಕಪ್ಪ ಸಾಕು; ಕುತ್ತಿಗೆ ಹಿಡಿದು ದಬ್ಬುವುದೊಂದೆ ಬಾಕಿ!
ಎಲಾ ಅವಿವೇಕಿ,
ಗುಂಪಿನಲ್ಲೂ ನೀನು ಮಾತ್ರ ಏಕಾಕಿ!

* * *

ಇದು ಹೊರಟಿದ್ದೆ ಲೇಟು
ಬಂದು ಮುಟ್ಟಿದ್ದು ಇನ್ನೂ ಲೇಟು;

ಸುಮ್ಮನೆ ಹೊಗೆ ಬಿಡುತ್ತಿದೆ ಸಾಹೇಬರ ಬಾಯ ಚಿರೂಟು;
ಫುಸ್. . . . ಫುಸ್. . . . ಫುಸ್. . . .
ಉಶ್‌ಶ್. . . . ಎಲ್ಲಿ ಸತ್ತಿತೋ ಗಾಳಿ
ಒಂದೇ ಸವನೆ ಸೆಖೆ ಕುಚ್ಚುತಿದೆ
ಬಂದ ಬೆವರೆಲ್ಲ ಇಂಗಿ ಒಳ ಅಂಗಿ ಒಣಗಿ ಒತ್ತುಗರಡಾಗಿದೆ!
'ಸೋಡಾ ಲೆಮನ್ ಆರೇಂಜ್. . . . . . .'
'ಗರಮಾ ಗರಂ ಚಹಾ. . .'
'ಒಂದಾಣೆ ದಿನ ಪತ್ರಿಕೆ'
ಅರೆ, ಎಲ್ಲಿ ಹೋಯಿತು ಕೋಟಿನೊಳಗಿಟ್ಟ ಪಾಕೀಟು!
ಅದರ ಜೊತೆಗೇ ಇತ್ತು ಈಗ ತೆಗೆಸಿದ ತಿಕೀಟು,
ಐದರದೊಂದು ನೋಟು!
ನನ್ನ ಪಾಲಿಗೇ ಬರಬೇಕೆ ಇಂಥ ಪಡಿಪಾಟು!
ಅಪರೂಪಕ್ಕೆ ಭೆಟ್ಟಿಯಾಗಿದ್ದ ಗೆಳೆಯರಿಗೆ
ಚಹ ಕುಡಿಸಲೊಂದಾಣೆ ಉಳಿಯಲಿಲ್ಲ.
ಅವರಾದರೂ ನನ್ನ ಕರೆಯಲಿಲ್ಲ;
ಯಾವ ಡಬ್ಬಿಯನೇರಿ ಯಾರ ಡುಬ್ಬದ ಮೇಲೆ ಕುಳಿತರೋ ಯಾವ ಬಲ್ಲ!
ಕಿಟಕಿಯೊಳಗಿಂದಲೇ ಒಳಗೆ ತುರುಕಿರಬೇಕು ಅವರ ಹಮಾಲ.
ಬೆನ್ನ ಹಿಂದೆಯೆ ಬೆಕ್ಕಿನೊಲು ಬಂದು ನಿಲ್ಲುವನೀಗ ಚೆಕ್ಕರು.
ಇದ್ದುದನು ಹೇಳಿದರೆ ನಂಬಬಹುದೇ ಅವನು?
ಹಾಗು ಹೀಗೂ ಜಡಿದು ವಸೂಲು ಮಾಡದೆ ಬಿಡನು.
ಇಲ್ಲಿ ಗದ್ದಲದಲ್ಲಿ ಕಣ್ಣು ತಪ್ಪಿಸಿ ನುಸುಳಿ ಪಾರಾಗಬಹುದು-
ಅಲ್ಲಿ ಏನೋ ಎಂತೊ
ನಾನಿಳಿವ
ಆ
ಕೊನೆಯ ನಿಲ್ದಾಣದಲ್ಲಿ!
(ಜಪ್ತು ಮಾಡಿದರೆ ಮಾಡಲಿ, ನನ್ನ ಕಿಸೆಯೆಲ್ಲ ಖಾಲಿ.)

*    *    *

ಇದು ದೊಡ್ಡ ನಿಲ್ದಾಣ ಕೂಟ
ಇಲ್ಲಿಂದಲೇ ಹೊರಟು ಇಲ್ಲಿಗೇ ಬಂದು ಕೂಡುವವೆಲ್ಲ ಕಡೆಯ ಗಾಡಿ;
ದೇಹಾದ್ಯಂತ ಸಂಚರಿಸಿ ಪುಪ್ಪುಸಕೆ ಹರಿವಂತೆ ರಕ್ತನಾಡಿ.
ನಮ್ಮ ಗಾಡಿಗೆ ಏನು ಬಂತೊ ಧಾಡಿ-
ನಿಂತು ನಿಂತಲ್ಲಿಯೇ ಗೊರಕೆ ಹೊಡೆಯುತ ಮಲಗಿಬಿಡುವ ರೂಢಿ.

ಎಲ್ಲಿ ಹೋದನೊ ಪುಣ್ಯಾತ್ಮ ಗಾರ್ಡ
ತ್ರಿಶಂಕುವಿನಂತೆ ನಮ್ಮನ್ನಿಲ್ಲಿಯೆ ಬಿಟ್ಟು; ಕೈಯಲ್ಲಿ ತಾಳಕೊಟ್ಟು
ಕುಣಿಯ ಹಚ್ಚಿದನಲ್ಲ, ಇವನೊಬ್ಬ ದೊಡ್ಡ ಕೀರ್ತನಕಾರನೇ ಥೇಟು!
ಆಕಳಿಸಿ, ತೂಕಡಿಸಿ, ಓಕರಿಸಿ ಸಾಕಾಯ್ತು ಮೂಗು ತಿಕ್ಕಿ!
ಒಬ್ಬರ ಮೇಲೊಬ್ಬರು ಹತ್ತಿ ಹತ್ತಿಕ್ಕಿ ಹತ್ತಿಯಂಡಿಗೆಯಂತೆ
ತುಳಿಯುತ್ತಿಹರು-
ಹೊಡೆಯಬಾರದೆ ಗಂಟೆ
ಊದಬಾರದೆ ಸೀಟಿ!
ಊರುಳಬಾರದೆ ಒಮ್ಮೆಲೇ ನೂರು ಗಾಲಿ!
"ಉಧೋ ಉಧೋ ಒಳಗಿದ್ದ ಬೆಳಕೆ ಬೆಳಕೇ
ಉಧೋ ಉಧೋ ಹೊರಗೆ ಬಾ ಏಕೆ ಒಳಕೆ!"

೨

ಧಡಗ್. . . ಗಡಗ್. . . ಧಡಗ್. . . ಗಡಗ್. . .
ಇದ್ದ ಶಕ್ತಿಯನೆಲ್ಲ ಒಟ್ಟುಗೂಡಿಸಿ ಮುಂದಕೆಳೆಯಿತೆಂಜಿನ್ನು
ಒಂದೊಂದೆ ಸುತ್ತು ಎಣಿಸುತ್ತ ಉರುಳಿದವು ಗಾಲಿ,
ಉಸಿರಾಡಿಸಿತು ಗಾಳಿ.
ಸಾಗಿದವು ಡಬ್ಬಿ ಹೊಯ್ದಾಡುತ್ತ ಒಂದರ ಹಿಂದೆ ಒಂದು. . .
ದೊಡ್ಡ ಸಂಸಾರಕ್ಕೆ ಒಬ್ಬನೇ ದುಡಿಯುವವ
ಹಬ್ಬಿ ಬೆಳೆದಿದೆ ಬಳಗ ತೂಗು ತೊಟ್ಟಿಲವಾಗಿ, ಬೆಳ್ಳಿ ಬಟ್ಟಲವಾಗಿ
ಒಂದಕ್ಕೆ ಹತ್ತಾಗಿ, ಹತ್ತು ನೂರಾಗಿ!
ವರುಷ ವರುಷಗಳೆಷ್ಟೊ ಗತಿಸಿದವು ಹೀಗೆಯೇ ಹಳಿಗುಂಟ ಸಾಗಿ.
ಜಗ್ ಜಗ್ ಝುಕು ಝುಕು
ಜಗ್ ಜಗ್ ಝುಕು ಝುಕು ಜಗ್ ಜಗ್. . . .
ಓಹೊ! ಕುಣಿಯಲೂ ಬಲ್ಲುದೀ ಗಾಡಿ ಒಮ್ಮೊಮ್ಮೆ ಉನ್ಮಾದಗೂಡಿ.
ಒಳ್ಳೆ ಪ್ರಾಯದ ಮೋಡಿ;
ಹತ್ತಿದಿಬ್ಬವ, ಸಿಳ್ಳು ಹೊಡೆದು, ಹುಬ್ಬನು ಕುಣಿಸಿ
ಹಸಿರ ಸೆರಗನು ಜಗ್ಗಿ ಸರಸವಾಡಿ
ಸೇತುವೆಯನೊತ್ತಿ ಮುತ್ತಿಟ್ಟು ಆಲಿಂಗಿಸುತ
ಕಣಿವೆ ಕಂದರಗಳಲ್ಲಿ ಕಟ್ಟಾಡಿಸಿ-
ಜಗ್. . . ಜಗ್. . . . ಝುಕು. . . . ಝುಕು
ಜಗ್. . . ಜಗ್. . .
ಕೊಂಚ ಮುಗ್ಗರಿಸಿತ್ತು ಗಾಡಿ, ಬಿತ್ತು ಬ್ರೇಕು!

ಅಂತು ಇಂತೂ ಕೊನೆಗೆ ಬಂದು ಮುಟ್ಟಿತು ಇಗೊ ಬಂತು ನಿಲ್ದಾಣ;
ನಿಟ್ಟುಸಿರುಗರೆದು ನಿಂತಿತೋ ಆಗಿ ನಿತ್ರಾಣ;
ಹತ್ತುವರು ಇಳಿಯುವರು ಮುತ್ತಿ ಮುಗಿ ಬೀಳುವರು
ಮತ್ತೆ ನಿನ್ನಂಥವರು ಎಷ್ಟೋ ಜನ!
ಎಡಬಲದ ಗಿಡಮರಗಳೋಡಿ ಡಿಕ್ಕಿಯ ಹೊಡೆದು,
ಗಿರಿದರಿಗಳೆಲ್ಲ ಗರ ಗರ ತಿರುಗಿ, ಎಲ್ಲಿಗೋ ಬೀಸಿ ಒಗೆದು,
ಗಕ್ಕನೆ ಜೇನು ಜಗ್ಗಿ ನಿಲ್ಲಿಸಿದಂತೆ ಬಹುದೂರ ನೆನಪು-
ಇಡಿಯ ಹಾಡಿನಲಿ ಎದೆಯ ಮಿಡಿದಂತೆ ಯಾವುದೋ ಒಂದು ಚರಣ,
ಇರಲಿ; ಹೊತ್ತಾಯ್ತು ಮತ್ತೇಕೆ ಆ ಎಲ್ಲ ಹಳೆ ಪುರಾಣ?
ಹೊರು ನಿನ್ನ ಹೋಲ್ಡಾಲು
ಹಿಡಿದುಕೋ ಕೈ ಚೀಲ
ಇಳಿದು ಬಿಡು ಸಾವಧಾನ.

ಜಗ್. . . ಜಗ್. . . ಜಗ್. . . ಜಗ್. .
ಚಲಿಸುತಿವೆ ಗಾಲಿ,
ಮತ್ತೆ ಎಲ್ಲಿಂದಲೋ ಬಂತು ತ್ರಾಣ
ಎಲ್ಲಿಹುದೊ, ಈ ಇದರ ಕೊನೆಯ ನಿಲ್ದಾಣ?!



# ನೆಲ-ಮುಗಿಲು

೧೯೫೬-೧೯೬೫

## ದೀಪಮಾಲೆಯ ಕಂಬ

"ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು"
ಮಿದುವಾಗಿ ಹದಗೊಂಡು ಹರಿವುದೀ ಹಾಡು!
ಗೂಡಿಂದ ಬಾನಿನಂಗಣಕೇರಿ ಕರೆಯುತಿದೆ,
ಸಹ್ಯಾದ್ರಿ ಶಿಖರದಲಿ ನಿಂತು ನೋಡು;

ಮೂಡಪಡುವಲ ತೆಂಕು ಬಡಗು ಕೊಡಗಿನ ನಾಡು
ಎಲ್ಲ ಒಂದೇ ಯಶದ ರಸದ ಬೀಡು.
ಬಾ ಬಂಧು, ಹತ್ತಿರದಿ ನಿಂದು ಸಂತೋಷದಿಂದ ಹಾಡು;
ಶತಮಾನಗಳ ನಾಡ ಗತವೈಭವವ ನೆನೆದು,
ಸಣ್ಣತನ ಸ್ವಾರ್ಥ ಸಂಕೋಚಗಳ ರಾಡಿ ಮಡುವನುಳಿದು,
ನಿನ್ನ ಮನಸಿನ ಮೂಲೆಗಂಟಿರುವ ಸಂಶಯದ ಜೇಡ ಬಲೆ ಹರಿದು,
ಶುಭದ ಹಾರೈಕೆಯಲಿ ನಿನ್ನೆದೆಯು ದಾಳಿಂಬವಾಗಿ ಬಿರಿದು,
ನಾಡಿನಂತಃಕರಣದಲ್ಲಿ ಬೆರೆದು.

ಈಸು ದಿನ ಹತ್ತಿರಿದ್ದರು ದೂರ
ಕಂಡರೂ ಕೆಂಡಮುಟ್ಟಿದ ತೆರದಿ ಒಂದು ತರಹ;
ಗೋಡೆಗೋಡೆಗೆ ಹಾಯ್ದು ತಡಕಾಡುತಿದ್ದವರು

ಈಗ ಬಂದಿದ್ದೇವೆ ಹೊಂಬೆಳಕು ಹರಡಿರುವ
ಹುಲ್ಲುಗಾವಲಕೆ, ಹೂಗಾಳಿಗೆ,
ಅಗಲಿ ಕೂಡಿದ್ದೇವೆ ಹೊಸ ಬಾಳಿಗೆ.
ಮೇಲೇರಿದಂತೆ ಕ್ಷಿತಿಜ ವಿಸ್ತಾರಗೊಳ್ಳುವದು, ಬಲ್ಲೆಯ?
ಅಷ್ಟು ದೂರದ ಮಾತು ಒಲ್ಲೆಯ?
ಇಲ್ಲೆ ಕಣ್ಣೆದುರು ಅರಳಿದೆ ಸೃಷ್ಟಿ;
ನೀಲಿ, ಬಿಳಿ, ಹಳದಿ, ಕೆಂಪು, ಕಂಪು;
ಟುವ್ವಿಡುವ ಕುಕಿಲಿಡುವ ಗಾನದೊನಪು;
ವರ್ಣಮಂಡಲ ರಚಿಸಿ ಆಗಸವ ತೊಯ್ಸಿ
ಮಂಜುಹನಿಯಾಗಿಳಿದ ಹಾಡಿನಿಂತು,
ಈ ಹಾಡಿಗೆಂದೆ ಶ್ರುತಿ ಮಾಡಿಟ್ಟ ವೀಣೆ-
ಕೃಷ್ಣೆ, ಕಾವೇರಿ, ವರದೆ, ತುಂಗಭದ್ರೆ!
ಜೋಗದಲ್ಲಿಳಿದು ಕಾಮನಬಿಲ್ಲನೊಡಮುರಿದು ಬರೆ ಶರಾವತಿ
ಬೆಳಕಿನಮರಾವತಿ,

ಇಲ್ಲಿ ದುಡಿಯುವ, ನಡೆವ, ದುಡಿದು ಪಡೆಯುವ, ಕೊಡುವ
ಇದನುಟ್ಟು ಇದನುಂಡು ಕೊಂಡು ಕೊನೆವ
ಈ ಜನದ ಬದುಕಿನ ಸೊಗಸು ಸಂಸ್ಕೃತಿಯರಳಿ ಪರಿಮಳಿಸಲೆಂದು
ಹೊಸತಿಲಲಿ ಹಚ್ಚಿಟ್ಟ ಹಣತೆ-
ಒಳಗು ಹೊರಗೂ ಕೂಡಿ ಬೆಳಗಲೆಂದು.

ಗಡಿಯಾಚೆ ಗಡಿಯೀಚೆ ಒಂದೆ ಕನ್ನಡ ಗುಡಿಯು
ಪೂಜೆಗೊಳ್ಳುವ ತಾಯಿ ಜನಶಂಕರಿ;
ಕಡಲಕರೆ, ಮಲೆನಾಡು, ಬೆಳುವಲೈಸಿರಿ ತೆನೆಯು
ಎಲ್ಲ ಹದ ರುಚಿ ಬೆರೆತ ಜೀವ ಲಹರಿ!

ಇಲ್ಲಿ ಕೂಡಲ ಬಾಳು, ಗೊಮ್ಮಟನ ಔನ್ನತ್ಯ
ವೀರ ನಾರಾಯಣನೆ ನುಡಿದ ಕಾವ್ಯ;
ಶಿಲೆಯ ಅಂತಃಪುರದಿ ಕಲೆಯ ಕಿಂಕಿಣಿನಾದ
ಸುಳಿವ ಶಾಸನವಾಗಿ ಮೆರೆದ ಜೀವ!

ಎದ್ದೇಳುತಿದೆ ಮುಂದೆ ದೀಪಮಾಲೆಯ ಕಂಬ
ಉದಯವಾಗಲಿ ಒಳಗೆ ಚೈತ್ಯಬಿಂಬ-
ಒಂದು ದೀಪಕೆ ಲಕ್ಷದೀಪ ಹೊತ್ತಿಸಿ ಹೊಗರಿ
ಬೆಳಗಲಿದೆ ಇನ್ನೇನು ಕಣ್ಣತುಂಬ!

## ರಂಜನಾ

ರಂಜನಾ-
ಎಲ್ಲಿ ಕುಳಿತರು ಬಂದು ಕಿವಿಗೆ ಝೇಂಕರಿಸುವುದು
ಮನೆ ತುಂಬ ಹರಿದಾಡಿ ಮರಿದುಂಬಿ ಗುಂಜನ;
ಕಣ್ಣು ನೀಲಾಂಜನ, ಕರಗಿಸಿದ ನಕ್ಷತ್ರ
ಮೂಗು ಹಟಮಾರಿತನಕೊಡೆದ ಮೊಗ್ಗು-
ಗೋಣು ಹೊರಳಿಸಿ ಸೋಗು ಮಾಡಿ ಕುಣಿವೀ ನವಿಲು
ಎತ್ತಿಕೊಂಡರೆ ಮುಗಿಲತನಕ ಹಿಗ್ಗು!

ದಿನದಿನದ ಬೆಳಗು ಹೊಂಗಿರಣದ ಕಿರೀಟ-
ನೂರು ಬಣ್ಣದ ಹೂವ ನರುಗಂಪನೊಮ್ಮೆಲೇ ಚಿಮ್ಮಿಸುವ ತೋಟ.
ಇದು ಯಾವ ಹಕ್ಕಿ-ಹಾಡಿನ ಮಧುರ ಸಂಪುಟ?
ಎಲ್ಲ ಸಂತೋಷಕೂ ಕನ್ನಡಿಯ ಹಿಡಿಯುವುದು ಈ ಮುಖದ
ಮುದ್ದು ಮಾಟ.

ಆನಂದ ಬಂದರಿವಳಾಡಿಸುವನು
ಚಂದ್ರ ಒಂದೇ ಸವನೆ ಕಾಡಿಸುವನು
ಮೂವರೂ ಕೂಡಿದರೆ ಮೂರು ಲೋಕಕು ದಾಳಿ
ಯಾವ ದೇವರು ಬಂದು ಬಿಡಿಸುವವನು?

ಮೂರು ಸಲ ಒಪ್ಪಂದ, ನೂರು ಸಲ ಯುದ್ಧ
ಅವರಿವರ ಸಂಧಾನ ಮೊದಲೇ ನಿಷಿದ್ಧ!
ಪಡುವಣಕೆ ಸಂದ ರವಿ ಮೂಡಣದಿ ಎದ್ದ
ರಂಗ ಭೂಮಿಗೆ ಮತ್ತೆ ರಥ ಕುದುರೆ ಸಿದ್ಧ.

ರಂಜನಾ
ಇವಳ ದೀರ್ಘಸ್ವರದ ನಡುವೆ ಅವರಿಬ್ಬರೂ ಬರಿ ವ್ಯಂಜನ,
ಸೆಡವು ಬಂದರೆ ಸುತ್ತಿ ಬೀಸುವ ಪ್ರಭಂಜನ!
ತಕ್ಷಣವೆ ಕೇಳುವದು ಗುಡುಗು ಮಿಂಚಿನ ತಾನ

ಮರುಚಣದಿ ಮಳೆಬರುವ ಮೇಳಗಾನ,
ಸುತ್ತಿ ಸುಳಿವುದು ಮತ್ತೆ ಮಂದ ಪವನ,
ಮುಗಿಲು ತೆರೆವುದು ತನ್ನ ಕಲೆಯ ಭವನ.

ನೀರಿನೊಳು ಆಡುವವು ಮೂರು ಮೀನ.
ದೇವಲೋಕದ ಸರಕು ಹೊತ್ತು ತಂದಿಹ ಹಡಗು
ಈ ದಡವ ತುಂಬಿರುವದಿದರ ಬೆಡಗು;
ಕ್ಷಿತಿಜದಂಚಿನವರೆಗೆ ತೆರೆ-ನೊರೆಯ ಕೌತುಕವು
ತೆರೆಯುವದು ದಿನಕೊಂದಮೌಲ್ಯವಸ್ತು.

ಇರುಳ ಮೌನಕೆ ಬೆಳಗು ತೊದಲು ನುಡಿದು,
ಮೂಡ ಪಡುವಣದಲ್ಲಿ ಜೀವ ಒಡನುಡಿದು;
ಬೆಳಕ-ಬಯಕೆಯ ಬಳ್ಳಿ ನಾಲ್ದೆಸೆಗು ಹಬ್ಬಿ
(ಮರ ಮರವನಾಡಿಸಿವೆ ತರತರದ ಗುಬ್ಬಿ)
ಹೂವ ಸೂಸಿದೆ ಸುತ್ತ ಪಾರಿಜಾತ
ಹಸುಳೆ ನಗೆ, ಹೂ ಬಿಸಿಲು ಓ! ಎಂಥ ಚಿತ್ರ.

ರಂಜನಾ
ರಂಜನಾ
ಕುಹೂ ಕುಹೂ ಕೂಜನ
ವಾತ್ಸಲ್ಯದ ಕೇತನ
ಇಲ್ಲಿ ಬಾ, ಹೆಜ್ಜೆಗಳ ಕುಣಿಸಿ ತೋರಿಸು, ಜಾಣೆ
ನೋಡೋಣ, ಕಾರಂಜಿ ಬೃಂದಾವನ!

ಈ ಸೃಷ್ಟಿ ನೂತನ
ನೀನೆಮ್ಮ ಚೇತನ
ತೃಣಮಪಿ ನ ಚಲತಿ ನಿನ್ನ ವಿನಾ, ನಿನ್ನ ವಿನಾ, ನಿನ್ನ ವಿನಾ.

## ಮೊದಲ ಮಳೆ

ಬಿಸಿಲೇರಿತು, ಬಾಯಾರಿತು
        ಹುರುಪಳಸಿತು ನೆಲವು,
        ಗುಟುಕರಿಸಿತು ಜಲವು;
ಬಾನುದ್ದಕು ಧೂಳೆದ್ದಿತು
        ತತ್ತರಿಸಿತು ಬಲವು.

ಮುಚ್ಚಂಜೆಯು ಮೈಚಾಚಿತು,
ಗರಿಬಿಚ್ಚಿತು ಮೋಡ,
ಹೊರಬಿದ್ದಿತು ಗೂಢ;
ಮುಂಗಾರಿನ ಮುಂಗೋಪಕೆ
ಬಾನೇ ದಿಙ್ಮೂಢ.

ಮಳೆವನಿಗಳ ಖುರಪುಟದಲಿ
ಮುಗಿಲಂಚನು ಸೀಳಿ
ಆಗೊ ಮಿಂಚಿನ ದಾಳಿ
ಕಣ್ಮುಚ್ಚಿತು ಕಣ್ ತೆರೆಯಿತು
ಬಿಗಿದಪ್ಪಿತು ಗಾಳಿ.

ನೆಲ-ಬಾನಿಗೆ ಜಲವೀಣೆಗೆ
ಪಕ್ಕದೊಳೇ ನಿದ್ದೆ
ಬೆಳಗಾಯಿತು ಎದ್ದೆ-
ಜಗವೆಲ್ಲವು ಮಿದುಬೆಲ್ಲವು
ಆಗೊ ಮಲ್ಲಿಗೆ ಮೊಗ್ಗೆ.

ಹಸುರೆಲ್ಲವು ಕುಸುರಾಯಿತು
ಹೂ ಮುಡಿಯಿತು ಬೇಲಿ
ತಂಗಾಳಿಗೆ ತೇಲಿ;
ಸೌಂದರ್ಯವೆ ಮೊಗವೆತ್ತಿತು
ಮುತ್ತಿಟ್ಟಿತು ನೀಲಿ.

ಒಂದಿರುಳಿನ ಒಡನಾಟದಿ
ನೆಲದಾಳಕೆ ನೀರು
ಚಿಗಿಯಿತು ತಾಯ್‌ಬೇರು
ಇಡಿ ವರುಷದ ಹೊಸಹರುಷಕೆ
ಹೂಗನಸಿನ ತೇರು.

## ಚಿಗುರಿತು ಈ ಹುಲುಗಲ

ಚಿಗುರಿತು ಈ ಹುಲುಗಲ-
ಶಿವ-ಪಾರ್ವತಿ ಅಪ್ಪಿದಂತೆ,
ಹೊಸ ಸೃಷ್ಟಿಗೆ ಒಪ್ಪಿದಂತೆ,
ಚಿಗುರಿತು ಈ ಹುಲುಗಲ!

ಯಾ ವಿಮಾನದಿಂದ ಬಂದು ಇಳಿದನೇನೊ ಚೈತ್ರ
ಬೇರಿನಿಂದ ತುದಿಯವರೆಗು ಮೂಕ ತಂತಿ ಮಿಡಿತ.
ಒಂದು ಇರುಳು, ಒಂದು ಬೆಳಗು, ಒಂದು ಸಂಜೆ ಕಳೆಯಿತು
ಹೇಗೊ ಒಂದು ನಸುಕಿನಲ್ಲಿ ಇದರ ಕನಸು ಫಲಿಸಿತು.

ಚುಗಿರಿ ಚಿಗುರಿ ಚಿಗುರಿ ಎದೆಯ ರಸವನೆಲ್ಲ ಚಿಮ್ಮಿತು,
ಬೆಳಗು, ಬೈಗು ತೊಳಗೆ ತನ್ನ ಅಂಗೈಯಲಿ ಕುಣಿಸಿತು;
ಹಸುರು ತೊಂಗಲಲ್ಲಿ ನೆಲವ ತಂಪಾಗಿಸಿ ಬಾಗಿತು,
ಹೂವು-ಮುಳ್ಳು ಹಾದಿಯಲ್ಲಿ 'ಶುಭಕೃತು'ವು ಸಾಗಿತು.

ಅದೇ ರಸ್ತೆ, ಅದೇ ಬಸ್ಸು, ಅದೇ ಧೂಳು ಇಂದಿಗು
ಅದೇ ಕೆರೆಯ ರಾಡಿನೀರು ಹಿತವಾಗಿದೆ ಮಂದೆಗು.
ಉರಿಯುತಿರುವ ಬಿಸಿಲಿನಲ್ಲಿ ತಣ್ಣಗಿಹುದು ಹುಲುಗಲ
ಮೈಯ ತುಂಬ ಹೂವಬಿಟ್ಟು ಕಾಯುತಿಹುದು ಹಂಬಲ.

ಗಾಳಿಯಲ್ಲಿ ಗಿಲಕು ಗಿಲಕು ಕಾಯಿಯಲ್ಲಿ ಬೀಜವು
'ಸಂಭವಾಮಿ ಯುಗೇ ಯುಗೇ' ಒಳಗಿನಮಲ ತೇಜವು.
ಈ ಮಣ್ಣಿನ ಮರೆಯೊಳೆಂಥ ಜೀವಸ್ಫೂರ್ತಿಯಡಗಿದೆ
ಇದರ ಒಂದು ಕಣ ಕಣವೂ ಹೊಸಸೃಷ್ಟಿಗೆ ತೊಡಗಿದೆ!

## ಗಗನದಿ ಸಾಗಿವೆ

ಗಗನದಿ ಸಾಗಿವೆ, ಬಾಗಿವೆ ಮೋಡ
ಹೋಗಿವೆ ನೀರನು ಸುರಿದು;
ಬರುವವು, ಬಂದೇ ಬರುವವು ನೋಡ
ತುಂಬಿಸಿ ತುಳುಕಿಸಿ ಹರಿದು.

ಇಳೆಗೂ ಬಾನಿಗು ಮಳೆ ಜೋಕಾಲಿ-
ತೂಗಿದೆ, ತಂಗಿದೆ ಚೆಲುವು;
ಹಸುರೇ ಹಬ್ಬಿದೆ, ಹಸುರೇ ತಬ್ಬಿದೆ
ಹೆಸರಿಗು ಕಾಣದು ನೆಲವು.
ನಸುಕೋ, ಸಂಜೆಯೊ, ಮಿಸುಕದು ಬೆಳಕು-
ತಾಯಿಯ ಮೊಲೆಗಿದೆ ಕೂಸು.
ಇರುಳೇ ಹೊರಳಿತು, ಹಗಲೇ ಮರಳಿತು
ಚಿಗುರೆಲೆ ಹೂವಿಗೆ ಹಾಸು.
ಬೇಸಗೆ ಬಣ ಬಣ, ಚಳಿಗೋ ಒಣ ಒಣ
ಶ್ರಾವಣ ತಣ್ಣಗೆ ನಡುವೆ;
ಎಲ್ಲಿದೆ ಬೆಂಕಿ? ಎಲ್ಲಿದೆ ಬೆಳಕು?
ಬೀಸುವ ಗಾಳಿಗೆ ಬಿಡುವೆ?
ನೀರೇ ಹರಿದಿದೆ, ನೀರೇ ಬೆರೆದಿದೆ
ನೀರೇ ಕರೆದಿದೆ ಮೊರೆದು;
ಯಾರೆ? ಎಂದರು ನೀರೇ ಬರುವದು
ಬೆನ್ನಿನ ಹಿಂದೆಯೆ ಸರಿದು.
ಬೆಚ್ಚಗೆ ಒಳಗೆ, ಹಚ್ಚಗೆ ಹೊರಗೆ
ಹುಚ್ಚನು ಬಿಡಿಸಿದೆ ಮಳೆಯು,
ಎಚ್ಚರು ಎಚ್ಚರು ಎನ್ನುತ ಹರಿದಿದೆ
ತುಂಬಿದ ಬಾಳಿನ ಹೊಳೆಯು.

## ಧಾರವಾಡದಲ್ಲಿ ಮಳೆಗಾಲ

ಏನಿದೀ ಹನಿಹನಿಯ ತೆನೆತೆನೆ ಸಿವುಡುಗಟ್ಟುತ ಒಗೆವುದು!
ಗುಡ್ಡ ಗುಡ್ಡಕೆ ಗೂಡು ಬಡಿಯುತ ಬೇರೆ ಸುಗ್ಗಿಯ ಬಗೆವುದು.
ಸೆಳಸೆಳಕು ಬೆಳೆ ಕೊಯಿದರೂ ಆ ಮೋಡದೊಕ್ಕಲು ತಂಗದು
ಬಾನ ಮೇಟಿಗೆ ಸೋನೆ ತೂರುತ ರಾಶಿಮಾಡದೆ ಹಿಂಗದು.

ಏನು ಬೆಳ್ಳಗೆ ಎಷ್ಟು ತೆಳ್ಳಗೆ ಮಳೆಯ ಮಸ್ಲಿನ್ ಪರದೆಯು!
ಒಳಗೆ ಸುಮ್ಮನೆ ಕುಳಿತು ನೋಡುವಳಾರು ಹೇಳಾ ಮುಗುದೆಯು?
ಹೂ ಬಿಸಿಲ ಕರವಸ್ತ್ರದಲಿ ತರತರದ ಹೆಣಿಕೆಯ ನಕ್ಷೆಯು
ದೂರ ಹೋದವರಿಂದು ಬರುವರೆ, ಎಂದು ಬರುವ ನಿರೀಕ್ಷೆಯು?

ನೋಡು, ಮೋಡದ ಬಸ್ಸು ಭರ ಭರ ತುಂಬಿಕೊಂಡೇ ಸಾಗಿವೆ
ಯಾವ ಗಿರಿ ಶಿಖರದಲಿ ಜಾತ್ರೆಯೊ, ಏಳುಕೊಳ್ಳಕೆ ಬಾಗಿವೆ.
ದೂರ ದೇಶದ ಯಾತ್ರಿಕರು ತಾ ಬೇರೆ ದೇಶಕೆ ಬಂದರು
ಕಂಡ ಗುಡಿ ಗೋಪುರಕೆ ಕೈ ಮುಗಿಯುತ್ತ ಅಲ್ಲಿಯೆ ನಿಂದರು.

ಏನು ಕಳಕೊಂಡಿರುವೆ ಗಾಳಿಯೆ ಏಕೆ ಈ ಪರಿ ಹುಡುಕುವೆ?
ಕಿಡಕಿ ಬಾಗಿಲು ಮುಚ್ಚಿರಲು ಕಿರು ಬಿರುಕಿನಲಿ ಬಿಸುಸುಯ್ಯುವೆ.
ಆ ಹಿಮಾಲಯದಿಂದ ನಿನ್ನನು ಬೀಸಿ ಒಗೆದರೆ ಇಲ್ಲಿಗೆ?
ಸಪ್ತಸಾಗರ ಸುತ್ತಿ ಬಂದೆಯ, ಮತ್ತೆ ಹೋಗುವದೆಲ್ಲಿಗೆ?

ಮೋಡ ನೂತೇ ನೂಲುವದು ಬಿಳಿ ದಾರ ಧಾರಾಕಾರದಿ
ಗುಡ್ಡ ಮರಡಿಗೆ ಸುತ್ತಿ ಕುಕ್ಕಡಿ ಮಾಡಿ ತುಂಬಿದೆ ಕೊಳ್ಳದಿ,
ಹಳ್ಳ-ಹೊಳೆ ಮಗ್ಗದಲಿ ನೇಯುತ ಹೊರಗೆ ಕಳಿಸಿದೆ ಮಾಲನು
ಗದ್ದೆ ಹೊಲ ತೋಟಕ್ಕೆ ಹೊಚ್ಚಿದೆ ಕೆಂಪು ಖಾದಿಯ ಶಾಲನು.

ಹಗಲು ಇರುಳೂ ಕೆಲಸವೇನಿದೆ ಮಳೆಗೆ?- ಬಂದೇ ಬರುವದು,
ನಡುವೆ ಚಕ್ಕನೆ ಹಸುರ ಮಧ್ಯಕೆ ಸೂರ್ಯ ಸರ್ಚ್‌ಲೈಟ್ ಕೆಡವಲು
ಹನುಮನೆದೆಯೊಳು ರಾಮ ಸೀತೆಯರಂತೆ ಕಣ್ಣಿಗೆ ಹೊಳೆವುದು
ಮರುಚಣವೆ ಆಕಾಶವೆಲ್ಲವು ಹರಿದು ಬಿದ್ದೊಲು ಸುರಿವುದು.

ಕಾರಹುಣ್ಣಿವೆ ಕರಿ ಹರಿದು, ಮಣ್ಣೆತ್ತು ನೀರನು ಕುಡಿದವು.
ಬಂತು ಪಂಚಮಿ ಬೋಲಬಗರಿಗೆ, ಹೆಣ್ಣು ತವರಿಗೆ ಮಿಡಿದವು.
'ಅರಳು-ಮರಳಿ'ನ ಕವಿಯು ಕರೆದನು 'ಬಾರೊ ಸಾಧನಕೇರಿಗೆ'-
ಬಂತು ಶ್ರಾವಣ ಬಳಗದೊಂದಿಗೆ 'ಮಳೆಯು ಎಳೆಯುವ ತೇರಿಗೆ'

ಗಣಪತಿಯು ಇಲಿಯೇರಿ ಭರ್ಜರಿ ವೇಷದಲ್ಲಿಯೆ ಬಂದನು
ಕರಿಕೆ ಪತ್ರಿಯ ಪೂಜೆ ಸಂದಿತು, ಕಡಬು ಹೋಳಿಗೆ ತಿಂದನು.
ಘಟಸ್ಥಾಪನೆಯಾಯ್ತು: ಮೋಡದ ಕೊಡವು ಬುಡಮೇಲಾಯಿತು
ಸೀಗೆ ಹುಣ್ಣಿವೆಗಾ ಮಸಾರಿಯು ಹಸುರು ಪುಚ್ಚವ ತೆರೆಯಿತು.

ಗೌರಿ ಹುಣ್ಣಿವೆ ಹಾಲ್ಗುಡಿದು ಬಿಳಿಜೋಳ ಧ್ವಜವನ್ನೆತ್ತಿತು.
ಗೋದಿ ಹೊಡೆಗಚ್ಚಿರಲು ಕಡಲೆಯ ಮಡಿಲು ಹೂಮಿಡಿ ತುಂಬಿತು;
ಕುಸುಬೆ ಹೂಗಳ ಜರದ ಪೀತಾಂಬರವ ಹಬ್ಬಕೆ ಉಟ್ಟಿತು
ಮೊದಲೆ ದೀಪಾವಳಿಗೆ ಒಲುಮೆಯ ದೀಪ ಬೆಳಗಿಸಿಕೊಂಡಿತು.

ಏನು ಈ ಗಿಡ ಬಳ್ಳಿ ಮರಳಿಗೆಲ್ಲ ಎಂತಹ ಜಳಕವು!
ಹಸುರು ಹಚ್ಚನೆ ನಿಮಿರಿ ನಿಂತಿಹ ನೆಲಕೆ ಹರ್ಷದ ಪುಳಕವು,
ಎಲ್ಲಿಯಾದರು ಕಸರು-ಕಡ್ಡಿಯ ಹುಡುಕಿ ತೆಗೆಯಿರಿ ನೋಡುವ-
ಕೆಸರೊ? ಬೇಕಾದಷ್ಟು-ನಡೆಯಿರಿ ನಗರ ಸಭೆಗೇ ತೂರುವ.

ಕೊಡೆ ಹಿಡಿದು ಕಾಯ್‌ಪಲ್ಲೆ ತಂದರೆ ಪ್ಯಾಂಟು ಕೂಡಲೆ ಪಚಡಿಯು.
ಕಾರು ಹಾಯ್ದರೆ ಬಾಯ್ಗೆ ಸಿಡಿವುದು ಕೆಂಪು ಗೋದಿಯ ಕಿಚಡಿಯು.
ಮಳೆಯ ಪಂಜರದಲ್ಲಿ ಸೆರೆಯಾಗಿಹೆವು ಸರ್ಕಸ್ ಹುಲಿಗಳು.
ಅಲ್ಲಿ ಹೊಲ ಗದ್ದೆಯಲಿ ಕೊಪ್ಪೆಯ ಹೊತ್ತು ಗೆಯ್ವರೆ ಕಲಿಗಳು.

ಬೂಟು ಚಪ್ಪಲು ಮಾಡದಲ್ಲಿಯೆ ಬುರುಸುಗಟ್ಟಿವೆ ಥಂಡಿಗೆ-
ಕೋಟು ಸ್ವೆಟರಿನ ಮೇಲೆ ಸ್ಕಾರ್ಫನು ಸುತ್ತಿ ಹೊರಟಿರ ದಂಡಿಗೆ?
ಬಿಸಿಲ ಮೋರೆಯ ಕಾಂಬುದಾಯಿತು ಬರಿಯ ಮನಸಿನ ಮಂಡಿಗೆ
ಜೀವ ಬೇಡಿದೆ ಕಾಫಿ ದೋಸೆಯ ಕರಿದ ಹಪ್ಪಳ ಸಂಡಿಗೆ.

ಒಲೆಯ ಬದಿಯಲಿ ತಲೆಯ ಹುದುಗಿಸಿ ಮಲಗಿಕೊಂಡಿಹ ಬೆಕ್ಕಿಗೆ
ಕನಸಿನಲ್ಲಿಯು ಇಲಿಯು ಬಾರದು, ಹಕ್ಕಿ ಗೂಡೊಳು ತೆಪ್ಪಗೆ.
ಮೈಯುಡುಗಿ ನಡುಗುತ್ತ ದನಕರು ಮೇದು ಬರುತಿವೆ ಒಟ್ಟಿಗೆ
ಮನೆಯ ಒಳಗೇ ಕುಳಿತು ಕಾತರಿಸಿಹೆನು ಗೆಳೆಯರ ಭೆಟ್ಟಿಗೆ.

ಬಿಸೇ ಚುರುಮರಿ ಕಡಲೆ ಮಾರುವ ಮುದುಕಿ ಬಂದರೆ ಕರೆಯಿರಿ
ಮಕ್ಕಳೊಂದಿಗೆ ಕುಳಿತು, ಕುರುಕುರು ತಿಂದು ಹೊರಜಗ ಮರೆಯಿರಿ.
ಅಷ್ಟುಮಿಕ್ಕೀ ಬೇಸರಾದರೆ ರೇಡಿಯೊ ಕಿವಿ ತಿರುವಿರಿ.
ರಾತ್ರಿಯಾಗಲು ಊಟ ತೀರಿಸಿ ಜೊತೆಗೆ ಬೆಚ್ಚಗೆ ಮಲಗಿರಿ.

## ನೀರು ಹರಿದಿದೆ ನಿರಾತಂಕ

ಆಗಸದ ಆಣೆಕಟ್ಟನು ಒಡೆದು ನುಗ್ಗಿದವು
ನೂರು ನಾಯ್ಗರಾ ತಡಸಲು!
ಕಣ್ಣುಕಟ್ಟಿ, ಗಿಮಿಗಿಮಿ ಗಾಣವಾಡಿಸಿತು ಗಾಳಿ
ನೆನೆ ನೆನೆದು ನೆಲವೆ ಕುಪ್ಪರಿಸಿತ್ತು.
ಮುಗಿಲು ಹೊಚ್ಚಿತು ಕಪ್ಪು ಕಂಬಳಿಯ ಕತ್ತಲು,
ರಮ್. . . . ರಮ್. . . . . ರಮ್. . . .

ರಣ ಹಲಗೆ ಸದ್ದಿನಲಿ ಜಿದ್ದುಕಟ್ಟೆದ್ದಿರುವ
ಜಡಿಮಳೆಯ ರುದ್ರಾವತಾರ!

"ಯಾ ಆಪೋ ದಿವ್ಯಾ ಉತ ವಾ ಸ್ರವನ್ತಿ ಖನಿತ್ರಿಮಾ
ಉತ ವಾ ಯಾಃ ಸ್ವಯಂ ಜಾಃ
ಸಮುದ್ರಾರ್ಥಾ ಯಾಃ ಶುಚಯಃ ಪಾವಕಾಸ್ತಾ
ಆಪೋ ದೇವೀರಿಹ ಮಾಮವನ್ತು".

ನೆಲದ ಆಧಾರದಲಿ ನಿಂತು ಹರಿಯುವ ನೀರು
ನೆಲದೊಡಲ ಕೊರೆದು ಮುಕ್ಕಿತು ಒಂದೆ ತೆಕ್ಕೆಯಲಿ
ಇಕ್ಕೆಲದ ಬಾಳು-ಬದುಕು,
(ಇರಬೇಕು ಎಲ್ಲೊ ಯಾರಿಗೋ ಮೈಸೊಕ್ಕು.
ನೆಲದ ಮೇಲಿಷ್ಟೆ ಅಲ್ಲ, ಆಕಾಶದಲ್ಲೂ ಇಹುದು
ನಮಗು ನಿಮಗೂ ಹಕ್ಕು.)
ಅಶ್ವಿನೀ ಭರಣೀ, ಕೃತ್ತಿಕಾ,
ರೋಹಿಣೀ, ಮೃಗಶಿರಾ, ಆರ್ದ್ರಾ,
ಪುನರ್ವಸು, ಪುಷ್ಯ. . .
ಒಬ್ಬೊಬ್ಬರೂ ನುಡಿದು ಹೋದರಯ್ಯ ಇವರು
ಪ್ರಳಯದ ಭವಿಷ್ಯ!
ಹೋದರೋ?- ಇವರು ನಾಪತ್ತೆ, ಮುಗಿಲ
ಹಿಂಡಿದರು ಒಂದು ಹನಿ ಹೊರಡದಂತೆ-
ಕೆರೆ, ಬಾವಿ, ಹಳ್ಳ, ಹೊಳೆ ಬತ್ತಿ, ಬೆನ್ನಿಗೆ ಹೊಟ್ಟೆ ಹತ್ತಿ
ನೆಲವೆದ್ದು ಬಡಿಯುವಂತೆ!
ಕಾರ ಮಳೆಯೆ, ಕಪ್ಪತ ಮಳೆಯೆ
ಸುರಿಮಳೆಯೆ, ಸುರಿಮಳೆಯೆ.
ಬಂದರೋ-ಈಗ ಬಂದಂತೆ ದಂಡೆತ್ತಿ, ಇದ್ದು-
ಬಿದ್ದುದನೆಲ್ಲ ಕೊಚ್ಚಿಕೊಂಡೊಯ್ಯುವರು
ತುಂಬುವರು ಕಡಲಿನೊಡಲು.

ಆಕಾಶ, ಪಾತಾಳ,-ಎರಡರಲ್ಲೂ ಇಲ್ಲ ತಾಳ ಮೇಳ.
ಭೂಗೋಳಕ್ಕೆ ಬೆನ್ನು ಹತ್ತಿಹುದು ಬೇತಾಳ-ಆದರೂ
ತಪ್ಪುವಂತಿಲ್ಲ ಕುರುಕ್ಷೇತ್ರದಲಿ ಕುಂಭಮೇಳ.

ಒಮ್ಮೊಮ್ಮೆ -ಮನಸು ತಿಳಿದಾಗೆಲ್ಲ
ನೂರು ಝುರಿ ತೊರೆಗಳಲಿ ಬಳುಕಿ ಕಚಕುಳಿಯಿಟ್ಟು

ಹಸುರ ನಗಿಸುತ, ಗದ್ದೆ ಹೊಲಗಳಲಿ ಹೊಂಬಿಸಿಲ ತುಂಬು ನಗೆ ಹರಿಸಿ
ಹರಿದಿಹುದು ನೀರು ನೀರೇ ನಿರಾತಂಕ-
ಗಿರಿಶಿಖರದಿಂದ, ನದಿನದಿಯ ಮುಖದಿಂದ
ಮರಳುಗಾಡಿನ ಒಡಲಿನಂತಃಕರಣದಿಂದ-
ನಿಂತದ್ದೆ ನೀರು ಹರಿದದ್ದೆ ತೀರ್ಥವಾಗಿ.
ನಿಂತಲ್ಲೆ ನಿಲ್ಲುವದೆ ನೀರು?- ಕೈಚಾಚಿ
ಹರಿಯುವುದು, ನೆಲದ ಒಳಸೇರುವದು,
ಕಾದು ಮೇಲೇರುವುದು
ದಿಕ್ಕು ದಿಕ್ಕಿಗೆ ಮೋಡ
ಪಕ್ಕ ಬೀಸುವದು.
ಎದುರು ಬಂದುದನಮರಿ ತೆಕ್ಕೆ ಹಾಯುವದು!
ಪೃಥ್ವಿ, ಅಪ್, ತೇಜ, ವಾಯು, ಆಕಾಶ-
ಐದರಾವರಣದಲಿ ತೋರಣವ ಕಟ್ಟಿ
ತೂಗಿರಲು ಮಾನವ ಯಥಾವಕಾಶ,
ನೆರೆಯೇರಿ ನೆರೆಯಿಳಿದು, ವರದೆ ಶಾಪವ ತೊರೆದು
ಕೂರಸಿಯ ಕಾರ್ಯ ಪೂರೈಸಿ, ಹರಿದಿಹುದು
ನೀರು ನಿರ್ಮಲ ನಿರಾತಂಕ.

## ಅಂತೂ ಕೊನೆಗೆ ಬಂತು ಮಳೆ

ಅಂತೂ ಕೊನೆಗೆ ಬಂತು ಮಳೆ-
ತಂತಿ ವಾದ್ಯವ ನುಡಿಸು, ಮದ್ದಳೆಯ ಬಡಿ, ಹೊಡಿ ಕೇಕೆ.
ಓಡಿ ಹೋಗುವ ಮೋಡಗಳ ಹಿಡಿದು ಹಿಂಡು.
ಬಳುಕಿ ಬಾಗುವ ಮಳೆಯ ಸೆಳಕುಗಳ
ಸೇವಿಗೆಯ ಸಿವುಡು ಕಟ್ಟಿಡು;
ಬೇಕು ಬೇಕಾದಾಗ ಹೊಡೆಯೋಣ ಪಾಯಸ.
ಮೊನ್ನೆ ಬೇಸಗೆಯಲ್ಲಿ ಲಟ್ಟಿಸಿದ ಹಪ್ಪಳ, ಇಟ್ಟ ಸಂಡಿಗೆ,
ತುಂಬಿಟ್ಟ ಉಪ್ಪಿನಕಾಯಿ ಭರಣಿ- ಎಲ್ಲ ತೆರೆದಿಡು;
ಒಲೆಯ ಮುಂದೆ ಬೆಚ್ಚಗೆ ಕುಳಿತು ಸವಿಯೋಣ.

ಹೊರಗೆ ಹೋದರೆ ಕತ್ತು ಹಿಡಿದು ಒಳನೂಕುವದು ಗಾಳಿ
ನಾವೇನು ಮಾಡೋಣ-
ಕದ ಹಾಕಿ, ಕಿಡಕಿ ಮುಚ್ಚಿ,
ಆರಾಮು ಕುರ್ಚಿಯಲಿ ಕೂಡೋಣ;
ವ್ಹಿಟ್‌ಮನ್, ಈಲಿಯಟ್, ಟಾಗೋರ್, ಬೇಂದ್ರೆ

ಒಂದೊಂದೆ ಪುಟವ ತೆರೆಯೋಣ-

[ಕುಣಿಯೋಣು ಬಾರ, ಕುಣಿಯೋಣು ಬಾ]

ಇಂಥ ದಿನಗಳಲಿ ರೇಡಿಯೋ ಕೂಡ
ಗೂಳಿಯ ಹಾಗೆ ಗುಟುರುವದು,
ವಿದ್ಯುದ್ದೀಪ ಕಣ್ಣು ಹೊಡೆಯುವದು;
ಬರ್ಫದಲಿ ಸಾರಿಸಿದಂತೆ ನೆಲವು ಜುಣುಗುಟ್ಟುವದು.
ಹೊರಗೊ?- ಜಗವೆಲ್ಲ ತೊಯ್ದು ಹೋಗಿದೆ,
ತಿಳಿಮಣ್ಣು ತೇಲಿ ಹೋಗಿದೆ;
ಬಂಡೆ ಬಂಡೆಗಳೆದೆಯ ಗೊಮ್ಮಟಗೆ ಕುಂಭಾಭಿಷೇಕ.
ತೊಯ್ದ ಪತ್ರಿಕೆಯಲ್ಲು ಬಂತು ಬಿಸಿಬಿಸಿ ಸುದ್ದಿ
[ಗಾಯ ಮಾಯ್ದರು ರಸಿಕೆಯಾಡುವದು ನಿಂತಿಲ್ಲ]
ಪ್ರಕ್ಷುಬ್ಧ ಸಾಗರಕೆ ಸಾಗಿದೆ ಶಾಂತಿ ಹಡಗದ ಹಂಸ.
ಬಿಳಿಯ ಮೈಯೊಳು ತೊಳೆದರೂ ಹೋಗದಿದೆ
ಕೆಂಪು ರಕ್ತದ ಕಲೆ.
ಕೆಂಪು ಕೋಟೆಯ ಮೇಲೆ ನಿಂತು ಹಾರಿಸಿದ ಬಿಳಿ ಪಾರಿವಾಳ
ಮರಳಿ ಗೂಡಿಗೆ ಬಂತೆ?
ಅಣ್ವಸ್ತ್ರಗಳ ಹಿಡಿದು ಹೊರಟವರ ತಲೆಯ ನುಣ್ಣಗೆ ಮಾಡಿ,
ಲಿಂಬಿ ಹುಳಿಯನು ಹಿಂಡಿ, ಸುಣ್ಣದ ಪಟ್ಟಿ ಎಳೆದು,
ಕತ್ತೆಯ ಮೇಲೆ ತಂದು,
ವಿಶ್ವಸಂಸ್ಥೆಯ ಮುಂದೆ ಮೆರೆಸೋಣ.
[ನಮ್ಮ ಬೆಂಬಲಕಿಹನು ಅಂಬಿಗರ ಚೌಡಯ್ಯ]

ಢಣ್, ಢಣ್. . . .
ಎಲ್ಲಿಹೋದರೂ ಬೆನ್ನು ಹತ್ತಿಯೇ ತೀರುವದು
ಗೋಪುರದ ಕಣ್ಣು ಗಡಿಯಾರ,-
ಮರೆತು ಕುಳಿತರೆ ತಲೆಯ ಕುಕ್ಕುವದು,
ನರೆತ ಕೂದಲು ಹಿಡಿದು ಒಂದೊಂದೆ ಎಣಿಸುವದು.
ಸುತ್ತು ಸುತ್ತಿಗೆ ಏನೊ ಕತ್ತರಿಸಿ ಒಗೆಯುವದು.
ವಿಶ್ವದಗಲವ ಸುತ್ತಿ ಬಿಚ್ಚುವದು, ಮತ್ತೆ
ಮುಚ್ಚುವದು ಸುರುಳಿ, ಸುರುಳಿ.
ದೂರದಲಿ ಯಾರೋ ಮಬ್ಬುಗತ್ತಲಲಿ
ಹುಬ್ಬುಗೈ ಹಚ್ಚಿ ನೋಡುತಿದ್ದಾರೆ ಹೊರಳಿ ಹೊರಳಿ. . .
ಅಂತೂ ಕೊನೆಗೆ ಬಂತು ಮಳೆ-
ಹುಚ್ಚು ಹೊಳೆ.

# ಹೊಸ ಬಾಳಿನ ಯೋಜನೆ

೧

ಇದು ನೆಲದ ತುಂಡಲ್ಲ
ಐದು ಖಂಡದ ಅಖಂಡ ಜೀವ ಪಿಂಡ.
ಇದರ ಬದುಕಿನ ಮೇರೆ ಭೋರ್ಗರೆವ ಸಾಗರವು
ಜೊಂಡು ಪಾಚಿಯ ಚಿಕ್ಕ ಹೊಂಡವಲ್ಲ.

ವಿಶ್ವದಂಚಿನವರೆಗು ತೇಲಿಬಿಡು ನೌಕೆಗಳ
ಸಪ್ತಸಾಗರಗಳನು ಸುತ್ತಿಬರಲಿ;
ಕಳಿಸಿದರೆ ಕಳಿಸು ಬೆಲೆ ಬಾಳುವಂತಹ ಸರಕು
ಎಲ್ಲ ಬಂದರುಗಳಿಗು ಹಾದು ಬರಲಿ.

ಹಿಮಗಿರಿಗೆ ದಾರಿಯನು ಕೊರೆದು ಏರುವ ವೀರ
ಏರಯ್ಯ ನೂರು ಶಿಖರ.
ಇಳಿದು ಬಾ ಮತ್ತೆ, ಭಾಗೀರಥಿಯ ತೆರದಲ್ಲಿ
ಆಲ್ಪರಿದು ಬೆಂಗಾಡಿನುದ್ದಕು ಸುರಿದು-
ದೂರವಿದೆ ನಮ್ಮ ತೀರ.

ಇಂಚುಪಟ್ಟಿಯ ಹಚ್ಚಿ ನಾಡಿನುದ್ದಗಲಗಳ
ಅಳೆಯುವದು ಬೇಡ ತಮ್ಮ,
ನಡು ನಡುವೆ ಗಡಿ ಕೊರೆದು ಆಡದಿರು 'ಹುಡುತುತು'
ಹೂಡದಿರು ಹೋರಿಗಳ ಸುಮ್ಮ ಸುಮ್ಮ.

ಕಾರ ಹುಣ್ಣಿವೆ ಬರಲಿ, ತೋರಣವ ಕಟ್ಟೋಣ
ಕರಿ ಹರಿದು ಮೆರೆಸೋಣ ಕಹಳೆ ಹಚ್ಚಿ-
ಆ ವರೆಗು ಈ ಹೊಲದ ಬದುಕು ಹದಗೊಳಿಸೋಣ
ರಂಟೆ ಕುಂಟೆಯ ಹಿಡಿದು ಬೆವರು ಹರಿಸಿ.

ಬಾ ಬಂಧು, ಹೆಗಲು ಕೊಡು, ನಡುದಾರಿಯಲಿ ನಿಂತ
ಈ ರಥವ ಸಾಗಿಸೋಣ.
ಮಿಣಿಗೆ ಸಾವಿರ ಕೈಗಳಾದರೂ ಸಾಲದೋ
'ದಣಿದೆ'ವೆಂದರೆ ಗಾಲಿ ಸಾವಿರ ಮಣ.

ಇದು ನಮ್ಮ ದೇವರ ಜಾತ್ರೆ, ತುಂಬು ಪ್ರಾಣದ ಪಾತ್ರೆ
ಗಂಟೆ ಬಡಿ, ಅಂಗಾರ ಹಣೆಗೆ ಹಚ್ಚು,
ಹೊರಡು ಪಂಡರಪುರದ ತನಕ ದಿಂಡೀಯಾತ್ರೆ
ಆಸೇತು ಹಿಮಗಿರಿಗೆ ಹಡದಿ ಹಾಸು.

ಏರು ದೇವರಗುಡ್ಡ, ಕೇಳದವನೇ ದಡ್ಡ:
'ಏಳ್ಕೋಟಿಗೇಳ್ಕೋಟಿಗೇಳ್ಕೋಟಿಗೋ'
ಇನ್ನು ಮುನ್ನೂರ್ಕೋಟಿ ಜಾಂಗಟೆಯ ಬಡಿದಿಹವು
ತೆರವಿರುವ ಕಡೆಯಲ್ಲಿ ಬರಮಾಡಿಕೊ.

ಕೊಲ್ಲಾರಿ ಚಕ್ಕಡಿಗಳೆಲ್ಲ 'ನಿನ್ನಾಲ್ಕುಧೋ'
ಏಳು ಕೊಳ್ಳದ ತಾಯಿ ಎಲ್ಲರಮ್ಮ;
ಎಲ್ಲ ಸುಖ ದುಃಖಗಳ ಹಡಲಿಗೆಯ ಹೊತ್ತೇವು
ಭಾರತದ ಭಂಡಾರ ಬೆಳೆಯಲಮ್ಮ.

೨

ಕಟ್ಟಬೇಕೀನಾಡ ತೊಟ್ಟು ಹೊಸ ದೀಕ್ಷೆಯನು
ಕಷ್ಟಗಳ ಕಂಕಣವ ಕೈಗೆ ಕಟ್ಟಿ,
ಹಳ್ಳಿ ದಿಳ್ಳಿಯವರೆಗೆ ನೂರು ದಾರಿಯ ಸಮೆದು
ಎಲ್ಲರಿಗು ಹಂಚೋಣ ಬುತ್ತಿ-ರೊಟ್ಟಿ.

ಹೆಣ್ಣು ಗಂಡೂ ಕೂಸು-ಕುನ್ನಿ ಮುಪ್ಪಿನ ಮುದುಕ
ಅವರವರ ಪಾಲಿಗಿದೆ ಪಂಚಾಮೃತ;
ಮಂತ್ರಿಗಳ ಮಂತ್ರಕ್ಕೆ ಉದುರುವುದೆ ಮಾಂಗಾಯಿ?
ಮಂತ್ರಶಕ್ತಿಯು ದೈವ ಪಂಚಾಯತ.

ತಾವು ಬಂದರದಾರು? ನಾಮಾಂಕಿತವದೇನು?
ಒಡನುಡಿವಿರಾ ಸ್ವಾಮಿ, ಇವ ಸಾರಥಿ.
'ಹೇಳುತ್ತೇನೆ ಕೇಳು,' 'ಅದೇನಿರುವುದು ಹೇಳು'
ಬೆಳತನಕ ಈ ಭೂಪರೊಂದೆ ರೀತಿ.

ಈಗ ಬೆಳಗಾಯಿತೆ? ಬಣ್ಣ ತೊಳೆಯಲಿ ಸೋಗು
ನಿಮ್ಮ ಕೆಲಸಕೆ ನೀವು ನಡೆಯಿರಣ್ಣ,
ರಾಮನಿಗೆ ಆರಾಮವಿದ್ದುದಾವಾಗಯ್ಯ?
ಭೀಮಾರ್ಜುನರು ಕೂಡ ಸೊರಗಿ ಸಣ್ಣ.

ಈ ಚರಿತ್ರೆಗೆ ನೂರು ಹೋರಾಟಗಳ ನಂಟು
ಪುಟಪುಟವ ಮೂಸೆಯಲಿ ಪುಟವಿಕ್ಕಲು-
ಅಲ್ಲಿ ಚಿನ್ನದ ಜೊತೆಗೆ ಮಣ್ಣು ಕಲ್ಲಿನ ರಾಶಿ
ಸತ್ತ ಎಮ್ಮೆಗೆ ಹತ್ತು ಸೇರು ಹಾಲು.

ಮಧುರ ಕವಿ ಶಾಸನದ ತಾಯಿ ಹಾಲೆರೆವಂದು
ನಾಡಮಕ್ಕಳ ಕಿವಿಯಳೊರೆದಳಿಂತು;
"ಕೆರೆಯಂ ಕಟ್ಟಿಸು, ಬಾವಿಯಂ ಸವೆಸು ದೇವಾ-
ಗಾರಮಂ ಮಾಡಿಸೆಂ" ಬೆದೆಯ ಮಾತು.

ಬನ್ನಿ ಯೋಚಿಸಿ ಕುಳಿತು, ಸಂಕೋಚ ಬದಿಗಿರಿಸಿ
ನಾಡಿನೇಳ್ಗೆಗೆ ಹುಡುಕಿ ಹಂಚಿಕೆಯನು;
ಧೂಳು ಜಾಡಿಸಿ ಸುರುಳಿ ಬಿಚ್ಚಿದ ನಕಾಶದಲಿ
ಮೂಡಿಸಿರಿ ಹೊಸಬಾಳ ಸಂಚಿಕೆಯನು.

೩

ಹರಿವ ಹೊಳೆಗಳು ಇಂತು ಕಾಲುವೆಯ ಕೈಚಾಚಿ
ಮೇಳದಲಿ ಕರೆಯುತಿವೆ ಹಾಲು ಜೇನು.
ಏಳಿ ಗುದ್ದಲಿ ಹಿಡಿದು ಬಡತನದ ಯುದ್ಧಕ್ಕೆ
ನೋಡಿ ನಾಚಲಿ ಮೋಡ, ತೆರೆದ ಬಾನು.

ನೆಲದೆಲ್ಲ ಹೊಲ-ಹಸಿರು, ಕಾಯಿ ತೆನೆಗಳ ಕುಸುರು
ದುಡಿವ ಬಡವನ ಹೊಟ್ಟೆ ತಣ್ಣಗಿರಲಿ;
ಗಿರಣಿ ಕಾರ್ಖಾನೆಗಳ ಕರ್ಕಶದ ತರ್ಕಕ್ಕೆ
ಗರತಿ ಹಾಡಿನ ಮಧುರ ಸಂಪರ್ಕವಿರಲಿ,

ಊರು ಕೇರಿಗೆ ನಿಲಿಸಿ ಸಾಲು ದೀಪದ ಕಂಬ
ಶಾಲೆಯಂಗಳ ತುಂಬ ನಗೆಮಲ್ಲಿಗೆ.
ಸೊಂಟದಲಿ ಕೊಡವಿಟ್ಟು ತುಂಟ ಮಗುವನ್ನೆತ್ತಿ
ಹೊಂಟ ಮುತ್ತೈದೆಯರ ತುಂಬಿದ ಬಗೆ.

ಎತ್ತು, ಚಕ್ಕಡಿ, ಕಾರು, ಬಸ್ಸು, ಟಾಂಗಾ, ರೈಲು
ಬೋಟು, ಹಡಗು, ವಿಮಾನ, ಚಂದ್ರಯಾನ;
ಅಂಚೆ, ಬಾನುಲಿ, ತಂತಿ ಇಡಿ ಪ್ರಪಂಚದ ಹಂತಿ-
ನುರಿಸಿ ಹೊಂದಿಸಿಕೊಳಲಿ ನವಜೀವನ.

ಯಂತ್ರ ನಡೆಯಲಿ, ಜನ ಸ್ವತಂತ್ರ ಬುದ್ಧಿಯದಿರಲಿ
ಪಂಚ ವರ್ಷದ ಹೊಸತು ಹಂಚಿಕೆಯಲಿ.
ಮಂತ್ರ ಮಾಟಗಳಿಂದ ಮಾವು ಕಾಯಾಗುವದೆ?
ನೀರು, ಗೊಬ್ಬರ, ಗಾಳಿ ಹೀರಿಕೊಳಲಿ.

ಎಲ್ಲು ಮಿನುಗುವ ತಾರೆ, ಕಲ್ಲು ಕಬ್ಬಿಣ ಗಾರೆ
ಕಣ್ಣು ತುಂಬುವ ಹೋರೆ ಬಾನಂಚಿಗೆ.
ಅಜ್ಜ ಬಿತ್ತಿದ ಬೀಜ ಮೊಳಕೆಗಂಡಿವೆ ಈಗ
ಕಸ ಕೀಟಗಳ ಕಿತ್ತು ಗುಡಿಸಿ ಹೊರಗೆ,

ಹೆಜ್ಜೆ ಹೆಜ್ಜೆಗೆ ನಿಧಿಯ ಕೊಪ್ಪರಿಗೆ ಕಾದಿಹುದು
'ಎತ್ತೊ ಕತ್ತೇ' ಎಂದು ಕೂಗಿಕೊಂಡು-
ಎಡವಿ ಬೀಳುವದೊಂದೆ, ಹಿಡಿದು ಅಗೆದವರಿಲ್ಲ
ನಡು ಕಟ್ಟಿ ನಿಂತವರು ಪಡೆಯಬಹುದು.

ವಿಶ್ವದೀ ವರ್ತುಲದ ಮಧ್ಯಬಿಂದುವಿನಲ್ಲಿ
ಕ್ರಿಸ್ತ, ಕೃಷ್ಣನು, ಬುದ್ಧ, ಬಸವ, ಗಾಂಧಿ-
ನೂರು ತೇಜದ ಗೋಲ ತಿರುಗುತಿವೆ ಪರಿಘದಲಿ
ಊರುಗೋಲಿಗೆ ಸಾಕ್ಷಿ ನಕ್ಷತ್ರವೀಧಿ.

ಕೂಡಿ ಬಾಳುತ ಕೂಡಿ ಬೆಳೆಯೋಣ ಕಾಂತಿಯಲಿ
ಸೂರ್ಯಪಾನದ ಹಾಗೆ ವೀರ್ಯ ತಳೆದು,
ಸಕಲ ಜೀವದ ಭಾವ ಹಿಗ್ಗಿ ಪರಿಮಳಿಸಿರಲಿ
ಬರುವ ಸುಗ್ಗಿಗೆ ನೂರು ಬೀಜ ಹಿಡಿದು.

## ಭಾವಕೇಂದ್ರ

ನೂರು ಹೂಗಳ ಕಂಪು ತೇಲುತಿದೆ ಗಾಳಿಯಲಿ
ಹೀರಿಕೋ; ಅಲ್ಲಿಳಿದ ಮಳೆಯ ನೀರು
ಇಲ್ಲಿ ಬಾವಿಗೆ ಸೋಸಿ ಬಂದಿಹುದು, ಸೇದಿಕೋ;
ಕಾಣುವುದೆ ಈ ಗಿಡದ ಬುಡದ ಬೇರು?

ಸುತ್ತ ಭೂಮಿಯ ಸಾರ ಇದರ ಆಹಾರ; ಹೂ
ಕಾಯಿ, ಹಣ್ಣಿನಲಿ ಬಗೆ ಒಗರು, ತಿಗುರು.
ಬಯಲ ಬಣ್ಣಿಸಿ, ಮುಗಿಲ ಹಣ್ಣಿಸುವ ಈ ಕೊರಡು
ಗಾಲಿಯಾಗಲು ಹೊರಟು ಬಂತು ತೇರು.

ಅವರವರ ತಾಯಿ-ನುಡಿ ಮೊಲೆವಾಲಿನಿಂಗಡಲು
ಬೆಳೆದಾಗ ಬೇರೆಡೆಯ ಧಾನ್ಯ-ದವಸ.
"ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ
ನ ಭವತಿ" -ಸರಸತಿಗೆ ಏಕೆ ವಿರಸ?

ಎಲ್ಲೆಲ್ಲಿ ಏನು ಕಸುವಿನಲಿ ಬೆಳೆವುದೊ ಬೆಳೆದು
ಆ ಬದುಕು ಹಸಗೊಂಡು ರಸವಾಗಲಿ,
ಹತ್ತು ತರಹದ ಪಲ್ಲೆ ಕೂಡಿ ಕುದಿಸಿದ ಅಡಿಗೆ
ರುಚಿಯೆಂದು ಹೇಳುವರು ಅಟ್ಟುಣ್ಣಲಿ.

ಹಬ್ಬಿ ಹರಡಿದೆ ತೋಟ; ಇದೊ ಪುರಾತನ ಬಾವಿ
ನೂರು ಮಡಿಗಳ ತಣಿಸಿ ಹರಿವ ನೀರು.
ಎಂಥ ಬೀಜಕು ಇಲ್ಲಿ ಮೊಳಕೆ ನಾಟುವ ಭಾಗ್ಯ
ಕಾಡ ಮಿಕ, ನರಿ ನುಸುಳಿ ಆರು-ಪಾರು.

ಕಟ್ಟು ಬೇಲಿಯ ಭದ್ರ, ಮೊಟ್ಟೆಹೊಡೆ ದಿನದಿನವು,
ಒಟ್ಟಿರುವ ಕಸಕಳೆಯ ಕಿತ್ತುಬಿಸುಡು;
ಹಾಕು ಗೊಬ್ಬರ ಬೆಳೆಗೆ ಕ್ರಿಮಿನಾಶಕವ ತೊಡೆದು;
ಎಲ್ಲರನು ಕರೆಕರೆದು ಹಬ್ಬಮಾಡು.

ನಿನ್ನ ತೋಟದಿ ನವಿಲು ಗರಿಗೆದರಿ ಕುಣಿಯುವದು
ತೋಪಿನಲಿ ಕೋಗಿಲೆಯು ಕೂಜಿಸುವದು;
ನೋಯಿಸದೆ ಆಳಿ ಬಂದು ಹೂವ ರಸ ಹೀರುವದು
ಗಿಳಿ ಹಣ್ಣಕದುಕಿ ನುಡಿ ಹದಗೊಡುವದು.

ಮನಮನವು ಮುಸುಕಿನೊಳಗಿನ ದೊಣ್ಣೆ, ಮಾತಿನಲಿ
ಜಾತಿ ಮಲ್ಲಿಗೆ, ಕೃತಿಯು ತೂತು ಮಡಕೆ-
ಇದರಪಶ್ರುತಿ ತಿದ್ದಿ ಅಪರಾಧಿ ಎನಿಸಿದರು-
ತಪವ ಕೆಡಿಸಲು ಸಿದ್ಧ ರತಿ, ಮೇನಕೆ.

ಹರಿದು ಚೆಲ್ಲಾಪಿಲ್ಲಿ ಎದೆಯ ಮುತ್ತಿನ ಸರವು
ದೊರೆಯಲೊಲ್ಲದು ಎಲ್ಲು ಮೊದಲ ಸೂತ್ರ:
ಕಣ್ಣಿದ್ದವರು ಮುತ್ತು ಹುಡುಕಿ, ಹಸುವಿದ್ದವರು
ಹೊಸ ಎಳೆಯ ಹುರಿಗೊಳಿಸಿ, ನೋಡಿ ಗಾತ್ರ.

ಮಧ್ಯಬಿಂದುವ ಮರೆತು ತಿರುಗದಿರಲೀ ಚಕ್ರ
ಕುರುಡಾಗಿ ಕಂಡಕಡೆ ಉರುಳದಿರಲಿ;
ಶಿಶುಪಾಲವಧೆಗಿರಲಿ; ಸೂರ್ಯಾಸ್ತ ಒದಗಿರಲಿ-
ಪಾರ್ಥಪ್ರತಿಜ್ಞೆಗಿದು ಮರುಗದಿರಲಿ.

ಪಂಚಶೀಲದ ಮರೆಗೆ ಹಂಚಿಕೊಳ್ಳುವರುಂಟು
ಹಾಲು ಬಟ್ಟಲವಿಲ್ಲ ಬರಿಯ ಗುಟುಕು.
ಶೀಲವಂತರ ಓಣಿಯಲ್ಲಿ ಕಣ್ಮರೆ ಕೋಳಿ-
ಮಗ್ಗ ಹೂಡುವ ಮುನ್ನ ತೊಡಕು ಬಿಡಿಸು.

ಎಂಟಲ್ಲ, ಹದಿನೆಂಟು ಸ್ಥಾಯಿಭಾವಗಳುಂಟು
ಇದರೊಳಗೆ ನೂರೆಂಟು ಉದ್ದೀಪನೆ-
ಸಂಚಾರಿ, ನಿನ್ನ ರಸಸಿದ್ಧಿಯೆಡೆ ಹೆಜ್ಜೆಯಿಡು
ಅನುಭಾವದಂಚಿನಲಿ ಮಿಂಚಿನ ಗೊನೆ-

## ಯುಗ ಯುಗದ ಹಾಡು

ಯುಗ ಯುಗಕೂ ಉರುಳುತಿಹುದು
ಜಗದ ರಥದ ಗಾಲಿ,
ಹಗಲು ಇರುಳು ಮರಳಿ ಮಸೆದು
ಸಾಹಸ ಮೈತಾಳಿ.

ಕಾಡು-ನಾಡು, ದೇಶ-ಕೋಶ
ಭಾಷೆ-ಭಾವ ದಾಟಿ,
ಭೂಮಿ-ಬಾನು, ಬೆಂಕಿ-ನೀರು
ಗಾಳಿ-ರಾಟಿ-ಧಾಟಿ.

ನವ ಜನಾಂಗ ಮೂಡಿ, ಮೊಳಗಿ
ಬದುಕು ತಿದ್ದಿ ತೀಡಿವೆ;
ಸೂರ್ಯ, ಚಂದ್ರ, ಚಿಕ್ಕೆ ಕೋಟಿ
ಕಣ್ಣರಳಿಸಿ ನೋಡಿವೆ.

ಊರು-ಕೇರಿ, ಭೂಮಿ-ಸೀಮಿ
ಮೀರಿ ಬೆಳೆದ ಮಾನವ,
ನೂರು ತಾರೆಗಳಲಿ ಹುಡುಕು-
ತಿಹನು ವಿಶ್ವಗಾನವ.

ಸುತ್ತು ಮುತ್ತು ಭಯ, ಸಂಶಯ
ಕೊಳ್ಳಿ ದೆವ್ವ ಕುಣಿದಿವೆ;
ಮನ ಮನಗಳ ಮುಳ್ಳುಬೇಲಿ
ಮಮತೆ ದೂರ ತಳ್ಳಿವೆ.

ಯುಗಪುರುಷರ ಜಗುಲಿಗಿರಿಸಿ
ಕೈಯ ತೊಳೆದುಕೊಂಡೆವು.
ಬಯಲಾಟದ ವೇಷ ಕುಣಿದು
ಬೆಳಗು ಬರಲು ದಣಿದೆವು.

ಪ್ರತಿಪದವೂ ಪ್ರಗತಿಗೆಂದು
ಹದವಿಲ್ಲದೆ ಮಿದಿದವು;
ಕುದಿಯಿಲ್ಲದೆ ಎಸರಿಲ್ಲದೆ
ಕಸುಕಿಗೆ ಬಾಯ್ದೆರೆದೆವು.

ನಿನಗೆ ಬೇವು, ನನಗೆ ಬೆಲ್ಲ-
ನವಯುಗಾದಿ ಗಾದೆಯು;
ಕೂಡಿ, ಕುಟ್ಟಿ ಸವಿಯಲಿಲ್ಲ
ಯುಗ ಯುಗಗಳ ಹಾಡಿದು.

ದೂರ ದೂರ ಬೇರು ಚಾಚಿ
ಟೊಂಗೆ, ಟಿಸಿಲು ಮನುಕುಲ;
ತಾಯಿ ಬೇರು ಕಾಯಬೇಕು
ಹಣ್ಣಾಗಲಿ ಹಂಬಲ

ಶುಭಾಶುಭದ ಫಲವ ಹೊತ್ತು
'ಶೋಭನ'ವಿದೊ ಬಂದಿದೆ;
ಇಳುಹಿಕೊಳ್ಳಿ ತಲೆಯ ಭಾರ
ಲಾಭ-ಹಾನಿ ಮುಂದಿದೆ.

## ಕಾಲಪುರುಷನಲ್ಲಿ ಕವಿಗಳ ಕೋರಿಕೆ

ಏನಯ್ಯ ಕಾಲಪುರುಷ
ನಿನ್ನ ಮುಖದರುಶನವನೊಮ್ಮೆ ದಯಪಾಲಿಸಯ್ಯ.
ಕಣ್ತುಂಬ ನೋಡಿ, ನಿನ್ನ ರೂಪವನೊಮ್ಮೆ ಅಚ್ಚೊತ್ತಿಕೊಳ್ಳುವೆವು
ಹಣೆಯ ಪಾದಕೆ ಹಚ್ಚಿ ನಮಿಸುವೆವು
ಸಾಷ್ಟಾಂಗವೆರಗುವೆವು, ಆಯಿತೋ?

ಈ ಸೃಷ್ಟಿ ಜೊತೆಗೇ ನಿನ್ನ ರಥವೂ ಹೊರಟು ಬಂದಿಹುದು-
(ಉರುಳುತಿದೆ ಕುರುಡು ಚಕ್ರ)
ನಮ್ಮಜ್ಜ ಮುತ್ತಜ್ಜರ ಕೈಗೆ ಕೋಲು ಕೊಟ್ಟು
ಕಣ್ಗೆ ಕನ್ನಡಕ ಹಚ್ಚಿ,
ಬೆನ್ನಿನಲಿ ಹೆಣಭಾರವಿಟ್ಟು
ಈಗ ನಮ್ಮ ಹೆಗಲಿಗೇ ಕೈ ಹಾಕಿ ನಡೆದಿರುವೆಯಲ್ಲ,
ಏನಯ್ಯ ಸಮಾಚಾರ?

ಇನ್ನೂ ಎಷ್ಟು ದೂರವಿದೆಯೋ ನಿನ್ನ ಪಾದಗಟ್ಟಿ?
ನೀನೇನು ತುಳಿದೆಯೋ, ಏನೇನು ಬೆಳೆದೆಯೋ
ಏನೆಲ್ಲ ಕೂಡಿಸಿ ಕಳೆದೆಯೊ
ಯಾರು ಎಲ್ಲ ಲೆಕ್ಕವ ಬರೆದು ಇಟ್ಟವರು?
ಹೊಳೆವ ನಕ್ಷತ್ರಗಳ ಕಣ್‌ಬೆಳಕಿನಲ್ಲಿ
ನೀನಿಟ್ಟ ಖಾತೆ-ಕಿರ್ದಿಯನೊಮ್ಮೆ ತೆರೆಯಬೇಕು;
ಎಷ್ಟೊ ತಾರಗೆ ಇದ್ದಕಿದ್ದಂತೆ ಆರಿದವು.
ಇನ್ನೆಷ್ಟೊ ತಮ್ಮ ಬೆಳಕನು ಇಳೆಗೆ ಮುಟ್ಟಿಸಲು ಪಣತೊಟ್ಟವು.
ಆಕಾಶಗಂಗೆಯಲಿ ಕಿಕ್ಕಿರಿದು ತಿಕ್ಕಿ ಮುಕ್ಕಿದವು ಕೆಲವು.
ಇಂಥದರಲ್ಲಿ-
ನಮ್ಮ ಕೃತಿಗಳು ನಿನ್ನ ಒರೆಗಲ್ಲಿನಲಿ ನಿಂತು ಬದುಕಬೇಕಂತೆ!
ಎಲ್ಲ ವಿಮರ್ಶಕರ ತಲೆ ಮೇಲೆ ಹತ್ತಿ

'ಅತ್ಯತಿಷ್ಠದ್ದಶಾಂಗುಲಂ' ಆಗಿರುವೆಯಂತೆ.
ಬೇಡ ಮಹಾರಾಯಾ
ನಿನ್ನ ಒರೆಗಲ್ಲನ್ನು ಹೊರಗೆ ತೆಗೆಯಬೇಡ.
'ಕಾಲಪುರುಷಂಗೆ ಗುಣಮಣಮಿಲ್ಲಂಗಡ!'
ಎಂದು ನಮ್ಮಜ್ಜ ಮೊದಲೇ ಹೆದರಿಸಿದ್ದಾನೆ.
ಅದ ಕೇಳಿ ನಮ್ಮೊಡಲೊಳೂ 'ಗುಡುಗುಟ್ಟುಗುಂ ಗಡ!'

ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ
ಈ ಲೋಕದಲಿ ನಾನಾ ನಮೂನೆ ಲೋಹವಿರುವಾಗ?
ಗಟ್ಟಿ ಕಾಳುಗಳನ್ನೆ ಮುಟ್ಟಿಗೆಯಲ್ಲಿ ಹಿಡಿಯಬೇಕೆಂದೇಕೆ ಚಪಲ
ಎಲ್ಲವೂ ಹೊಟ್ಟೆಗೇ ಹೋಗುವಾಗ?

ಇಗೋ
ನಮ್ಮ ಮನದಂಗಳದಿ ಬೆಳೆದಷ್ಟು ಕವಿತೆಗಳ
'ನಿನ್ನ ಮಡಿಲೊಳಗಿಡಲು ತಂದಿರುವೆವು';
ತುಂಬಿ ಹರಿಯುವ ಹೊಳೆಯ ನೀರಿನಲಿ
ಇವುಗಳನು ಹಾಯಾಗಿ ತೇಲಿಸಪ್ಪ
ಸ್ವಾಮಿ ನಮ್ಮಪ್ಪ.
ನಮ್ಮ ಕಣ್ಮರೆಯಲ್ಲಿ ಬೇಕಾದ್ದು ಮಾಡಿಕೊ
ನಾವಂತು ಪಾರಾದೆವು.
ಸರಿ, ನೀನಿಷ್ಟು ಮಾಡಿದರೆ, ನಿನ್ನ ಮೇಲೊಂದು
ಪದ್ಯವ ಬರೆದು, ಕನ್ನಡಿ ಕಟ್ಟು ಹಾಕಿ
ತುಂಬು ಸಭೆಯೊಳು ಮಾನಪತ್ರ ಸಲಿಸುವೆವು.
ಇಲ್ಲದಿದ್ದರೆ ವೃಥಾ ತಲೆದಂಡ
ಅಲ್ಲವೆ? ಅದಕಾಗಿ ಆಯುಷ್ಯದುದ್ದಕೂ ಚಿಂತೆ ಬೇಡ.
ಕಾಲಾಯ ತುಭ್ಯಂ ನಮಃ

## ಜಗದೇಕಮಲ್ಲ

ಯಾವುದಕ್ಕೂ ಇವಗೆ ಸಂಪೂರ್ಣ ಸ್ವಾತಂತ್ರ್ಯ-
ಬೇಕಾದಷ್ಟು ಉದ್ದ ನಾಲಗೆಯ ಹರಿಬಿಡಬಲ್ಲ,
ಯಾರೆಷ್ಟು ಒದರಿಕೊಂಡರೂ ಕೇಳಿಸದ ಲಂಬಕರ್ಣ.
ರಸ್ತೆಯಲಿ ಬದಿಗೆ ನಡೆದವರ ಮೇಲೆಯೇ

ಕಾರು ಹಾಯಿಸಬಲ್ಲ;
ಅದಕೆ ಬ್ರೇಕಿಲ್ಲ.
ಸೀದಾರಸ್ತೆ ಇವನೆಂದೂ ಕಂಡುದಿಲ್ಲ.
ಬೇಕಾದವರನೆತ್ತಿ ಮುಗಿಲಿಗೆ ತಲೆಯ ತಾಗಿಸಬಲ್ಲ
ಬೇಡಾದವರನೊತ್ತಿ ಪಾತಾಳಕ್ಕೆ,-
ಪದ್ಮಾಸನವ ಹಾಕಿ ಕೂಡಬಲ್ಲ.
'ಜನತೆ ಜನತಾ' ಎಂದು ಬುಡುಬುಡಿಕೆ ಬಾರಿಸುತ
ದೇಶದ ಭವಿಷ್ಯವನು ಸಾರಬಲ್ಲ.
ಓಡುವವರಿಗೆ ಅಡ್ಡಗಾಲು ಹಾಕುತ ಮುಂದೆ
ಮುಗ್ಗರಿಸಿ ಬೀಳುವುದ ನೋಡಬಲ್ಲ.
ಬೆನ್ನು ಚಪ್ಪರಿಸಿದರೆ ಬೆಳತನಕ ಬೇಸೂರು ಹಾಡಬಲ್ಲ.
ಎಮ್ಮೆಗಳ ಜೊತೆಯಲ್ಲಿ ರಾಡಿ ನೀರೊಳು
ಸಲೀಸು ಈಜಾಡಬಲ್ಲ.
ಕೊಂಬೆ ಕೊಂಬೆಗೆ ಜಿಗಿದು ಚಿಗುರು, ಹೂ, ಕಾಯಿಗಳ
ಕಡಿ ಕಡಿದು ಹಾಕಬಲ್ಲ.
ಗಿಳಿಗಿಂತ ಚೆನ್ನಾಗಿ ಮಾತಾಡಬಲ್ಲ,
ದೊಡ್ಡವರ ಬಾಲಕ್ಕೆ ಜೋತಾಡಬಲ್ಲ,
ಎಲ್ಲಿ ಏನಾದರೂ ಅನರ್ಥ ಸಂಭವಿಸಿದರೆ
ಅದರ ಅಡಿಗಲ್ಲಿವನ ಅಮೃತಹಸ್ತ.
(ಎಲ್ಲದಕ್ಕೂ ಬರಿಯ ಹಲ್ಲುಕಿಸ್ತ).
ದಿನದ ಇಪ್ಪತ್ನಾಲ್ಕು ತಾಸು ಪಿರಿಪಿರಿ ತಿರುಗಿ
ದೇಶದುದ್ಧಾರಕೆ ದೇಹವನು ತೇಯಬಲ್ಲ;
ಮಂದಿ ಹೊಲಗಳ ನುಗ್ಗಿ ಮೇಯಬಲ್ಲ.
ಇವನಿಲ್ಲದೆಯೆ ಯಾವ ಸಭೆ ಸಮಾರಂಭಕ್ಕು
ಶೋಭೆಯಿಲ್ಲ.
ಇಲ್ಲ, ಪುರಸೊತ್ತಿಲ್ಲ,
ಪಂಚೇತಿಯಿಂದ ಆ ವಿಧಾನಸೌಧದವರೆಗು
ಬಲೆ ಬೀಸಿ, ಬಕನಂತೆ ಕಾಯಬಲ್ಲ.
'ಎಲ್ಲ ಬಲ್ಲವರಿಲ್ಲ'
'ಬಲ್ಲಿದರು ಬಹಳಿಲ್ಲ'
ಏಕಿಲ್ಲ? ಇವನಿಲ್ಲವೇ ನಮ್ಮ ಜಗದೇಕಮಲ್ಲ?
ಕಳಿಸಿರಿವನನು ಮೊದಲು ದೂರದ ಹಿಮಾಲಯಕೆ
ಅಲ್ಲಿಯೇ ಹಿಡಿದಿರಲಿ ಜಯಪತಾಕೆ.

## ಕಾಲ ನಿಲ್ಲುವುದಿಲ್ಲ

೧

ಈ ಕಾಲನೆಂಬುವ ಪ್ರಾಣಿ
ಕೈಗೆ ಸಿಕ್ಕರೆ ಚೆನ್ನಾಗಿ ಥಳಿಸಬೇಕೆಂದಿದ್ದೆ;
ಎಲ್ಲೊ ತಲೆಮರೆಸಿಕೊಂಡು ಓಡಾಡುತಿದ್ದಾನೆ.
ಆಕಾಶದಲ್ಲಿ ಮಿಂಚಿ.
ಭೂಕಂಪದಲ್ಲಿ ಗದಗದ ನಡುಗಿ,
ಜ್ವಾಲಾಮುಖಿಯೊಳಗೆ ಸಿಡಿದು ನುಚ್ಚುನೂರಾಗಿ,
ನದಿನದಿಯ ಗರ್ಭವ ಹೊಕ್ಕು, ಮಹಾಪೂರದಲಿ ಹೊರಬಂದು
ನಮ್ಮೆದೆಯಲ್ಲಿ ತುಡಿವ ತಬಲವಾಗಿದ್ದಾನೆ.
ಹಿಡಿಯಿರೋ ಅವನ. . . . . . .
ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು
ಹೆಣಗಿದ್ದೇವೆ.
ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು
ಒದೆಸಿಕೊಂಡಿದ್ದೇವೆ.
ತುಡಿವೆದೆಗೆ ಕಿವಿಗೊಟ್ಟು, ಮಿಡಿವ ನಾಡಿಯ
ಹಿಡಿದು ನೋಡಿದ್ದೇವೆ;
ಒಳಹೊರಗೆ ಉಸಿರು ಆಡುತ್ತಿದೆ ನಿರಾಯಾಸ.
'ಬಯಲು ಆಲಯದೊಳಗೋ? ಆಲಯವು ಬಯಲೊಳಗೋ?'
ಕೊನೆಗೊಮ್ಮೆ ಅವನೇ ಎಲ್ಲ ಬಗೆಹರಿಸುತ್ತಾನೆ,
ಯಾರಿಗೂ ಅವಸರವಿಲ್ಲ ತಾನೆ?
ಈ ಕುದುರೆಯೇರಿ, ಲಗಾಮು ಬಿಗಿ ಹಿಡಿದು
ಸವಾರಿ ಮಾಡುವುದಷ್ಟು ಸುಲಭವಲ್ಲ.
ನಮ್ಮೆದೆಯ ಮೇಲೆಯೇ ಕಾಲಿಟ್ಟು ಓಡಿಹೋಗುವುದ
ನಾವೆಷ್ಟು ಸಲ ಅನುಭವಿಸಿಲ್ಲ?
ಸೆಕೆಂಡು, ಮಿನಿಟು, ತಾಸುಗಳ ಹಾಸು-ಹೊಕ್ಕಿನಲಿ
ಅಲ್ಲೊಂದು ಇಲ್ಲೊಂದು ಬಣ್ಣದ ನೂಲು
ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು.
ಹೆಜ್ಜೆಯಿಟ್ಟಲ್ಲೆಲ್ಲ ಜೋಲಿಹಿಡಿದಿದೆ ಮಣ್ಣು
ಧುಮುಕುತಿದೆ ನೀರು,
ಮೈಸುತ್ತಿ ಒಳಹೊಕ್ಕು ನೋಡಿದೆ ಗಾಳಿ,
ಹದ್ದು ಮೀರಿದೆ ಬಯಲು-

ಬೆಳಕು-ಕತ್ತಲೆ ಕುಂಡದಲ್ಲಿ ಮುಳುಗೇಳುತಿಹೆವು ದಿನವೊಂದಕ್ಕು
ನಿದ್ದೆ ತಿಳಿದೆದ್ದಾಗ ಭೂಮಿಯಾಕಾಶಕ್ಕೆ ದೊಡ್ಡ ಬಿರುಕು.

೨

ಸದಾ ಅದೇ ಸೂರ್ಯಚಂದ್ರರ ಸುಪರಿಚಿತ ಮೋರೆ,
ನಮ್ಮಂತೆಯೇ ಅವರಿಗೂ ತಿರುಗುವದೊಂದೆ ಹೋರೆ.
ಆದರೂ ಆಗೀಗ ಈಚೆಯ ದಡಕ್ಕು ಹಾಯುವದು ಬೆಳಕಿನ ತೆರೆ.
ಒಡಮುರಿದೆದ್ದು ನಾಲ್ಕೂ ಕಡೆಗೆ ಕೈ ಚಾಚಿ
ನಿಂತಲ್ಲೆ ಬೇರು ಬಿಟ್ಟಿವೆ ವೃಕ್ಷ
[ಅಗೆದು ನೋಡಲೆ ಬೇಕೆ?].
ಹರಡಿಕೊಂಡಿದೆ ಹಸಿರು ಸಂಸಾರ
ನಮಗು ಅದಕೂ ನಿತ್ಯ ಹೊಕ್ಕು ಬಳಕೆ.
ಆರು ಋತುಗಳು ಬಂದು ಆರೈಕೆ ಮಾಡುವವು
ಯಾವುದೋ ಹಾರೈಕೆ ಎದೆಯೊಳಿಟ್ಟು;
ತತ್ತಿಯೊಡೆದು ರೆಕ್ಕೆ ಬಲಿತಾಗ ಹಾರುವವು ಗೂಡು ಬಿಟ್ಟು.
ದೂರದಲ್ಲಿಯೆ ಸಾಲು ನಿಂತ ಪರ್ವತ ಶಿಖರ
ಆಗಿಲ್ಲ ಭೂಮಿಗೆ ಭಾರ.
ತೇಲುತಿವೆ ಅಂತರಾಳದಲಿ ನೂರು ಗೋಲ.
ಸೋತು ತಲೆಬಾಗಿಲ್ಲ ಆಕಾಶ,
ಮೂಲೆ ಹಿಡಿದು ತೂಕಡಿಸಿಲ್ಲ ಗಾಳಿ,
ಒಳಗು ಹೊರಗೂ ಹರಿದು ಸ್ವಚ್ಛವಾಗಿದೆ ನೀರು
ಆಣೆಕಟ್ಟೆಗೂ ಕೆಳಗೆ ಆರುಪಾರು.
ಎತ್ತಿನ ಬಂಡಿಯಿಳಿದು, ಬಸ್ಸಿನ ದಾರಿ ಕಾಯ್ದು, ಕಾರಿನಲಿ ತೂರಿ,
ಹಡಗ ಬಿಟ್ಟು ವಿಮಾನದಲಿ ಹಾರಿ
ಗೋಲಗಳ ಮೇಲೆ ದಾಳಿ ಮಾಡಿದ್ದೇವೆ.
ಮೈಕಿನಲಿ ಕೊಕ್ಕೊಕ್ಕೋ ಕೂಗಿ, ತುರಾಯಿ ಕುಣಿಸಿ
ಬೆಳಗಾಯಿತೆಂದು ಭ್ರಮಿಸಿದ್ದೇವೆ.
ಹೊಸದಾಗಿ ಹೂಡಿದ ಮೂಡಲ ಹೋರಿ ಮುಸುಗರೆದು
ಅಡ್ಡಾದಿಡ್ಡಿ ಜಗ್ಗುತಿದೆ,
ಜೊತೆಗಿರುವ ಸಾದು ಎತ್ತಿನ ಕೂಡ ಕಾದಾಟ.
ಹೌದು, ನಾವೆಲ್ಲ ಹೊಸಬರೆ;
ಅಜ್ಜ ಮುತ್ತಜ್ಜರಿಗೆ ಮಂಗಳಾರತಿ ಮಾಡಿ
ಕೈಯಲ್ಲಿ ಗಂಟೆ ಹಿಡಿದಿದ್ದೇವೆ.

ನೈವೇದ್ಯಕ್ಕೆ ಪಾಕವೇ ಸಿದ್ಧವಾಗಿಲ್ಲ, ಆಗಲೇ
ಪ್ರಸಾದ ಹಂಚಿದ್ದೇವೆ.
ಎದುರಿಗಿದ್ದದ್ದೆಲ್ಲ ಅದಲು-ಬದಲು ಕಂಚೀಬದಲು
ಹುಡುಕುತ್ತಿದ್ದೇವೆ ಕಣ್ಮುಚ್ಚಿ: ಇವರ ಬಿಟ್ಟವರಾರು?

೩

ದಿನವು ಬಿಸಿ ಬಿಸಿ ಅನ್ನ ದೇಹಕ್ಕೆ ಹಿತ.
ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು.
ಹಳಸಿದನ್ನವ ನಾಯಿ ಕೂಡ ಮೂಸುವದಿಲ್ಲ. ಅದೆ
ಅಕ್ಕಿ, ಜೋಳ, ಗೋದಿಗಳಿಂದ ವಿಧವಿಧದ ಪಕ್ವಾನ್ನ
ಗಮಗಮಿಸುವದು. ಉಪ್ಪು, ಕಾರ, ಹುಳಿ, ಸಿಹಿ
ತಕ್ಕಷ್ಟು, ಬದಲಾವಣೆಯೇ ಬಾಳಿನೊಗ್ಗರಣೆ.
ಬಾಡಿಸಿಕೊಳ್ಳಲೆಂದೆ ಉಪ್ಪಿನಕಾಯಿ.
[ಕದ ತಿನ್ನುವವಗೆ ಹಪ್ಪಳ ಈಡೆ?]
ಮಿತಿಮೀರಿದರೆ ಎಂಥ ಸುಗ್ರಾಸವೂ ಅಜೀರ್ಣ.
ಕುದಿಯುವುದು, ಮಿದಿಯುವುದು, ಹೊಂದಿ
ಹದಗೊಳ್ಳುವದು: ಬದುಕಿನಲಿ ಎಲ್ಲರಿಗು ತೆರೆದ ದಾರಿ.
ಶ್ರುತಿಗೂಡಿದಾಗ ಹೊಮ್ಮುವುದು ಹಾಡಿನ ಲಹರಿ
ಗಾಳಿಯ ಬೆನ್ನಮೇಲೆ ಮೋಡದ ಸವಾರಿ.

ಗುಡುಗಿರಲಿ, ಮಿಂಚಿರಲಿ, ಮುಂಗಾರಿಗಾರು ಕಾತರಿಸಿಲ್ಲ?
ಉರಿವ ಬೇಸಗೆ ಚಿಗುರು ಚಿಣ್ಣರನು ಎತ್ತಿ ಆಡಿಸಿಲ್ಲ?
ಥಂಡಿಯ ಮುಸುಗಿನಲ್ಲಿ ಬೆಚ್ಚಗೆ ಕನಸು ಕಂಡಿಲ್ಲ?
ಬೆಂಗಾಡಿನಂಗಾಗದಲ್ಲು ತುಂಗಭದ್ರೆಯು ತುಂಬಿ ಹರಿದಿಲ್ಲ?

ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು.
ಕಂದ, ವೃತ್ತಗಳ ಝುರಿ ತೊರೆಯ ನಡುವೆ
ಹಸುರಿಗೆ ಗದ್ಯದುದ್ಯಾನ;
ಹದಿನೆಂಟು ಬಣ್ಣನೆಯ ಹುಲ್ಲುಗದ್ದೆಯ ನಡುವೆ
ಚಂಪುವಿನ ತಂಪುಕೊಳ.
ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿ ಬಂಡಿ.
ಭಾವ-ಗೀತ ಒಪ್ಪಿದರೆ ಚೆಂದ ವಧೂವರ ಜೋಡಿ.
ಒಲೆ ಹೂಡಿದ ಮೇಲೆ ಅದರ ಬಿಸಿ ತಾಗುವದು
ಕುದ್ದು ಹಣ್ಣಾಗುವದು ನೂರು ಅನುಭವದ ನವ್ಯಪಾಕ.

ಬಗಲಗಸೆ ಅಂಗಿಯಿಂದ ಬುಶ್‌ಕೋಟಿನವರೆಗೂ
ತೊಟ್ಟು ಕಳಚಿದ್ದೇವೆ.
ಮಾಡಿ ಉಂಡಿದ್ದೇವೆ ನಮನಮಗೆ ಸೇರಿದ ಅಡಿಗೆ.
ಇರಬಹುದು ಇದರಲ್ಲಿ ಕೆಲಭಾಗ ಜೀವನಸತ್ವ ಕಡಿಮೆ.
ಇದ್ದ ಶಕ್ತಿಯಲಿ ತುಸು ದೂರ ನಡೆದಿದ್ದೇವೆ.
ರೂಢಿಯಾಗಿದೆ ಒಬ್ಬೊಬ್ಬರಿಗು ಒಂದೊಂದು ಬಗೆಯ ನಡಿಗೆ.
ಮುಖ್ಯ ಬೇಕಾದದ್ದು ಜೀವಂತ ಗತಿ, ಹೊಸ ನೆತ್ತರಿನ ಕೊಡುಗೆ.

ಕಾಲ ನಿಲ್ಲುವದಿಲ್ಲ; ನಾವು ಕೂಡುವದಿಲ್ಲ.
ಮಳೆಬಂದರೂ ಕಾಮನಬಿಲ್ಲು ಮೂಡುವದೆಂಬ ನಿಯಮವಿಲ್ಲ.
ಹಗಲಿರುಳ ಗಾಲಿಯಲಿ ಸೋಲು-ಗೆಲುವಿನ ಕೀಲು ಭದ್ರ.
ಪಂದ್ಯಾಟದಲ್ಲಿ ಯಾರೂ ಹೆಸರು ಕೊಡಬಹುದು
ನಿಂತವರಿಗೂ ಉಂಟು ನೋಡಿ ಸಂತಸ ಪಡುವ ಭಾಗ್ಯ.
ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಥಾಲು.
ಸೋತವರ ಸೊತ್ತು
ಗೆದ್ದವರನಳೆವ ಜಗದೆಲ್ಲ ಅನುಭವದ ಪಾಲು.

## ಪುಷ್ಪಾಂಜಲಿ

ಸ್ವಾಮಿಯಡಿಗೆ ಶಿರಬಾಗಿ ಬಂದೆವಿದೊ ಎಲ್ಲ ಸೀಮೆಯಿಂದ,
ಅರಿವು-ಮರೆವು ಕಣ್ದೆರೆದು ಕರೆದ ಆ ಪೂರ್ವಸ್ಮರಣೆಯಿಂದ.
ನೀಲದಲ್ಲಿ ತೇಲಾಡೆ ಗಾಳಿಪಟ ಕೃಪಾಸೂತ್ರದಿಂದ.
ಕಂಡೆವೇಸೊ ನೆಲ-ಜಲದ ಚೆಲುವ ನೀವಿತ್ತ ನೇತ್ರದಿಂದ.

ಎತ್ತರೆತ್ತರಕೆ ಹಾರಿ ಏರಿದರು ಕೋತಿ ಹೊಡೆಯದಂತೆ,
ದಿಕ್ಕು ದಿಕ್ಕುಗಳ ಗಾಳಿ ಜಗ್ಗಿದರು ಬಿಲ್ಲು ಮಣಿಯದಂತೆ,
ನೂರು ಸೊಲ್ಲು ಗುಲ್ಲಿನಲು ಎಲ್ಲೊ ಮಿಡಿದಿಹುದು ಏಕನಾದ
ಆ ನಾದ ಹಿಡಿದು ಬಂದೇವು ನಾವು ಕರುಣೆಸಿರಿ ತಮ್ಮ ಪಾದ.

ಶ್ರೀಮದಥಣಿ ಶಿವಯೋಗಿ ಸೇವೆಯಲಿ ಸಮೆದ ಭಾವಶುದ್ಧಿ
ಸಕಲಕೆಲ್ಲ ಶಿವಭಜನೆ, ಜೀವದಾಸೋಹ-ಕಾರ್ಯಸಿದ್ಧಿ.
ಧಾರವಾಡದುತ್ತರದಿ ಬಂದು ಬಿತ್ತರಕೆ ನೋಟ ಹರಿಸಿ
ಎಲ್ಲರನ್ನು ಹತ್ತಿರಕೆ ಕರೆದು ಹರಸಿದಿರಿ ಪರುಷವೆನಿಸಿ.

ಮನವ ನೆನೆಸಿ ಮಡಿಮಾಡಿ ಮತ್ತೆ ಮಾಡಿದಿರಿ ಕಂತಿಭಿಕ್ಷೆ.
ಆಕಾಶವನ್ನೆ ಜೋಳಿಗೆಯ ಮಾಡಿ ಬೇಡುವರೆ ಚಂದ್ರ ಚಿಕ್ಕೆ?
ಬಸವ ಪ್ರಮಥರಾ ಪುರಾತನರು ನೀಡಿರುವ ನೆರಳು-ನಕ್ಷೆ
ಅಲ್ಲೆ ಸಂಜೆ ಮುಂಜಾವಿನಲ್ಲಿ ತಂ ಪ್ರದಕ್ಷಿಣೆಯ ರಕ್ಷೆ.

ಭಕ್ತರಲ್ಲಿ, ನೆರೆ ಮುಕ್ತರಲ್ಲಿ, ಸಲೆ ಪರಿತ್ಯಕ್ತರಲ್ಲು
ಒಂದೆ ಉಕ್ತಿ, ಅವ್ಯಕ್ತ ಭಾವ ತೆರೆದಿಟ್ಟ ಹೃದಯದಲ್ಲು.
ಮುಖವು ಎಲ್ಲಿ? ಬರಿ ಮುಗ್ಧಹಾಸ, ಕಣ್ದೆರೆಯೆ ದುಗ್ಧಸಿಂಧು!
ಸಂಜೆಗಿರಣ ನೆಯ್ದಿರುವ ಕಾವಿ ಆ ಮೇಘಲಿಂಗಕೆಂದು!

"ವ್ಯರ್ಥವಲ್ಲ ಶಿವ ಕೊಟ್ಟ ವಸ್ತು ಕಸಬರಿಗಿ ಕಡ್ಡಿ ಕೂಡ.
ಅರ್ತಿಯಿಂದ ಪುಟ ತೆರೆಯಬೇಕು ಅಪನವರ ವಚನ ನೋಡ:
ಮಾವಿನೆಲೆಯ ನೀ ಮಾಡಬಲ್ಲೆಯಾ, ಯಾವ ಬಣ್ಣದಿಂದ?
ನಾನು ನೀನು, ಏನೇನೊ ಮೂಡಿ ಬಂತದೇ ಮಣ್ಣಿನಿಂದ.

"ದುಡಿಯಬೇಕು, ನೆಲ ಕಡಿಯಬೇಕು, ಹೋರಾಡಬೇಕು ಜೀವ
ಪಡೆದು-ಕೊಟ್ಟು ಕೊಂಡಾಡಬೇಕು ಸರ್ವಾಂಗಲಿಂಗ ಜಗವ.
ಕಟಕು ರೊಟ್ಟಿ ಮೆಣಸ್ಹಿಂಡಿ ತಿಂದು ಮೇಲೊಂದು ಗುಟುಕು ನೀರು-
ಕಟೆದ ಹಾಗೆ ಈ ಮೂರ್ತಿ-ಮಾಟ, ಆ ಮೇಲೆ ಗುಡಿಯು, ತೇರು".

ನಿಮ್ಮ ಮಾತು ದಿಟಪುಟವು ಸ್ಫಟಿಕ ಅದಕಿಲ್ಲ ಬೇರೆ ತಂತ್ರ,
ತಮ್ಮ ಗೀತ ತಾ ಭಕ್ತಿಸ್ತೋತ್ರ ಚಿನ್ಮಯದ ಸುಪ್ರಭಾತ.
ನಂಬಿ ನಚ್ಚಿ ನಮ್ಮೆದೆಯ ಬಿಚ್ಚಿ ದಯಮಾಡಿಸಿದಿರಿ ಬುದ್ಧಿ
ನಿಮ್ಮ ಕರುಣೆ ಕಂಡರಿಸಿತೆಮ್ಮ, ನಾವೇನು ಮಣ್ಣುಮುದ್ದಿ.

ತೆಂಗುಗರಿಯ ಚಾಮರವು, ಸುತ್ತು ಸಂಪಿಗೆಯ ತಂಪುಗಾಳಿ
ಚೆಂಗುಲಾಬಿ, ಮಲ್ಲಿಗೆಯು, ಬಕುಳ, ಸೇವಂತಿ ರಂಗುತಾಳಿ;
ನಡುವೆ ಬೆಳ್ಳಬೆಳಕಾಗಿ ಮಾಗಿ ಶಿವಯೋಗಿ ಕುಲುಕುಲೆಂದು
ನಗುತಲಿಹವು ಆ ಸೂರ್ಯ ಚಂದ್ರ ಸಾಷ್ಟಾಂಗದಲ್ಲಿ ಮಿಂದು.

ಎಲ್ಲಿ ನೋಡಿದರು ಬಿಲ್ವಪತ್ರಿ ಶಿವಕಳೆಯು ಚಿದ್ವಿಭೂತಿ
ಅಷ್ಟಕೋಟಿ ರೋಮಂಗಳೆಲ್ಲ ಶಿವಲಿಂಗವಾದ ರೀತಿ!
ಕೇಳು ಪ್ರಾರ್ಥನೆಯ ಗಂಟೆ, ಏಳು ಬರಲಿಹುದು ನಮ್ಮ ಸರತಿ
ಜಾತ್ರೆ ಮುಗಿದು ಶಿವರಾತ್ರಿಯಾಯ್ತು, ಶ್ರಾವಣಕೆ ತುಂಬುಭರತಿ

ನಿಮ್ಮ ಬಯಕೆ ಬಂಗಾರ ಖಣಿಯು ಅಸರಂತ ಗ್ರಂಥಮಾಲೆ
ತೋಡಿದಷ್ಟು ಹೊರಮೂಡಿಬಂತು ಅದು ನಿಮಗೆ ಬಾಲಲೀಲೆ.
ಬೇರೆಯಲ್ಲ, ಶಿವಯೋಗಿ ಪ್ರೇರಣಾಭರಣ ಶರಣಸತಿಗೆ
ಪ್ರಣವರೂಪಕರ್ಪಣವು ಸರ್ವಸಮರಸವು ಲಿಂಗಪತಿಗೆ.

ದೊರೆಯಬಹುದೆ ದರುಶನವು ದಿವ್ಯಸ್ಪರ್ಶನದ ಜೀವನಾದ?
ಎರೆದು, ಹೊಚ್ಚಿ ಎದೆ ಹಾಲು ತೊರೆವ ಪಾದೋದಕ ಪ್ರಸಾದ?
ಇರವಿನಲ್ಲಿ ಆ ತೆರವು ತುಂಬಿ ತೆರೆಯಾಡುವಂತೆ ಕಡಲು
ಅರಿವಿನೊಂದು ಹೊಸ ಬರವಿಗಾಗಿ ಹಾತೊರೆಯುತಿಹುದು ಒಡಲು.

ಹೋದರತ್ತ, ಇದು ಬಂದರಿತ್ತ, ಇದಕೆಲ್ಲಿ ಗಟ್ಟಿ ನೆಲೆಯು?
ಬುಟ್ಟಿಹೊತ್ತು ಮಾರುವರ ಕರೆದು ಕೇಳಿದರೆ ತುಟ್ಟಿಬೆಲೆಯು!
ಹರಗಿ ಬಿತ್ತಿ, ಹಂತಿಯಲಿ ತಿರುಗಿ ನೀ ಸ್ವಂತ ರಾಶಿಮಾಡು,
ಇಷ್ಟುದಿವಸ ಕಡಮಾಡಿ ಇನ್ನು ತಡಮಾಡಬಹುದೆ ಹೇಳು.

ಮರ್ತ್ಯವನ್ನೆ ಮಹಮನೆಯ ಗೈದ ಮೃತ್ಯುಂಜಯನ ಚರಣ
ಶರಣಭಾವದಲಿ ಕಿರಣಿಸಿಹುದು ಪುಷ್ಪಾಂಜಲಿಯ ಸ್ಮರಣ.
ಇರುಳು ಮೌನ ತಿಳಿಗೊಂಡು ಅರಳಿ ನರುಗಂಪು ನಸುಕು ಹರಿದು
ಕಿವಿಯೊಳಿಂತು ಉಚ್ಚರಿಸಿತಣ್ಣ ಎಚ್ಚರಿಸಿ ದೂರ ಕರೆದು.

ಆದಿ ಮಧ್ಯ ಮಂಗಳವು ಸರ್ವಮಂಗಳಕು ನೀವೆ ಮುಂದು
ಹಿಂದೆ ಎಂದು ಕಂಡಿರದ ಹೊಚ್ಚಹೊಸ ಪರ್ವಕಾಲವಿಂದು:
ತಂದೆ ಬಂದೆವಿದೊ ತುಂಬುನಂಬಿಗೆಯ ಹಡಗದಲ್ಲಿ ಕುಳಿತು
ಜಯಾಜಯ ನಮಃ ಪಾರ್ವತೀಪತೇ ಮಹಾದೇವ ಜಯತು.*

## ಸಮಾಧಿ ದರ್ಶನ

ಆ ಕೋಣೆಯಿಂದ ಕೆಳಗಿಳಿದು ಬಂದು ಈ ಮೇಣೆಯಲ್ಲಿ ಕುಳಿತು
ಎಲ್ಲ ವೀಣೆದನಿ ಹಿಂದೆ ಇರುವ ಓಂಕಾರದಲ್ಲಿ ಬೆರೆತು,
ಸ್ವಪ್ರಕಾಶದಲಿ ಇರುಳ ಬೆಳಗಿ, ಬೆಳಗಿನಲಿ ಶಾಂತವಾಯ್ತು
ನೂರು ಚಿಕ್ಕೆ ಚಂದ್ರಮರ ಪಕ್ಕದಲಿ ಚೊಕ್ಕ ಬೆಳ್ಳಿ ಬೆಳಕು.

---

* ಧಾರವಾಡ ಮುರುಘಾಮಠದ ಲಿಂ. ಮೃತ್ಯುಂಜಯ ಮಹಾಸ್ವಾಮಿಗಳ ೭ನೆಯ ವರ್ಧಂತ್ಯುತ್ಸವದ ಸಂದರ್ಭ.

ಅಲ್ಲಿ ಕಡಲ ತೆರೆತೆರೆಗಳೆದ್ದು ಬರಿ ನೊರೆಯ ಚೆಲ್ಲುತಿಹವು
ಇಲ್ಲಿ ಮೌನ ಮಹದಾಳಕಿಳಿದು ಮುತ್ತುಗಳ ಹುಡುಕುತಿಹುದು.
ಅಲ್ಲಿ ಏರಿ ಮುಗಿಲಲ್ಲಿ ತೂರಿ, ಹಗಳಿರುಳು ಸುತ್ತುತಿಹರು-
ಇದರ ಬಳಿಗೆ ಬಲವಂದು ಬೆಳಕು-ಹೆಜ್ಜೆಗಳ ಕಾಂಬ ಹಲರು.

ಅಲ್ಲಿ ಉಸಿರ ಕಟ್ಟಿಸುವ ಹೊಗೆಯು, ಧಗಧಗಿಸುವುರಿಯು ಒಳಗೆ,
ಇಲ್ಲಿ ಜೀವದುಸಿರಿನಲಿ ಬಸಿರು ಮಗಮಗಿಸುತಿಹುದು ಮರೆಗೆ.
ಅಲ್ಲಿ ಗಾಳಿ ಭೋರ್ಗರೆದು ಕಣ್ಣು, ಕಿವಿ, ಮೂಗಿನಲ್ಲಿ ಧೂಳಿ
ಇಲ್ಲಿ ಮಂದ ಸೌಗಂಧದೆಲರು ವಸುಧೈವ ದೈವಕೇಳಿ.

ಅಲ್ಲಿ ಗಿರಣಿ ಬಂಬುಗಳ ಧೂಮಿ ಬಾನೆಲ್ಲ ಕಪ್ಪು ಕಲೆಯು,
ಇಲ್ಲಿ ಊದುಬತ್ತಿಯಲಿ ಊರ್ಧ್ವಮತಿ ನೀಲವೊಂದೆ ನೆಲೆಯು.
ಅಲ್ಲಿ ಕೆರೆಯ ನೀರೆಲ್ಲ ಕಲಕಿ ಹೂಗಿಡಕೆ ಸಿಡಿವ ಕೆಸರು.
ಇಲ್ಲಿ ತೊರೆಯು ಜಲಜಲನೆ ಹರಿದು ಹೂ ಹೂವಿಗೊಂದು ಹೆಸರು.

ಅಲ್ಲಿ ಹೊಸ್ತಿಲಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜವು ತುಂಬಿ
ಮನೆಯ ಒಳಗೆ ಮನೆಯೊಡೆಯನಿಲ್ಲ, ನೀ ಹೌದೊ ಅಲ್ಲೊ ಎಂಬಿ,
ಇಲ್ಲಿ ನೆಲವು ಕನ್ನಡಿಯು, ಮೆಲ್ಲ ನಡೆ ಅಚ್ಚ ಹೊಸತು ಗುಡಿಯು.
ಎಲ್ಲಿ ಆಡಿದರು, ಬಳಲಿ ಬಾಡಿದರು ಒಂದೆ ತಾಯ ತೊಡೆಯು.

'ಅಂಬೆ' 'ಅಂಬೆ' ಎಂದೊರಲಿ ಬರುವವೋ ಅಲ್ಲಿ ನೂರು ಕರುವು.
ನಂಬಿದವಗೆ ತುಂಬಿಗೆಯ ತುಂಬ ನೊರೆವಾಲು ಕರುಣೆ ಕುರುಹು.
ಮನದ ಒಳಗೆ ಮಲಗಿರುವ ತೆರೆಯ ತುತ್ತೂರಿ ಬರುವ ಸೂರ್ಯ
ಮೋಡದೊಳಗೆ ತಂಗಾಳಿ ಸುಳಿದು ಹನಿಯಾಗಿ ಇಳಿವ ಕಾರ್ಯ.

ಇಲ್ಲಿ ಲೌಕಿಕವು ಪಾರಮಾರ್ಥದೊಳಗಲೌಕಿಕವ ತೆರೆದು
ತನ್ನದೊಂದು ಹೊಸಲೋಕ ಕಟ್ಟಿ ಸಂಪೂರ್ಣಯೋಗ ಬೆರೆದು.
ಅಲ್ಲಿ ಕಡಲು ಅಪ್ಪಳಿಸುತಿರಲು ಒಡಲಲ್ಲಿ ಸಪ್ಪಳಿಲ್ಲ
ತಪ್ಪು-ನೆಪ್ಪುಗಳ ಚಿಪ್ಪನೊಡೆದು ತೆಗೆದಪ್ಪಿದವನೆ ಬಲ್ಲ.*

---

* ಪಾಂಡಿಚೇರಿಯಲ್ಲಿ ಶ್ರೀ ಅರವಿಂದರ ಸಮಾಧಿ ದರ್ಶನ ಪಡೆದು.

## ಕೃಷ್ಣಾವತಾರ

ವಸುದೇವ-ದೇವಕಿಯರಂತರ್ಭಾವದಿ ಭಗವಜ್ಯೋತಿಯು ಹೊತ್ತಿರಲು
ಗಾಳಿಮಳೆಯು, ಕಾರ್ಗತ್ತಲು, ಕಾರಾಗೃಹವೇ ಬಾಗಿಲು ತೆರೆದಿರಲು,
ತುಂಬಿದ ಯಮುನೆಯು ಇಂಬಾದಳು, ಬಾ, 'ಅಂಬಾ' ಎಂದಿತು ಗೋಕುಲವು
ಶಂಖ, ಚಕ್ರ, ಗದೆ, ಪದ್ಮಧಾರಿ ಕೂಸಾಗಲು ಹರಿಯಿತು ವ್ಯಾಕುಲವು.

ಬೆಣ್ಣೆ ಮೊಸರು ತಿಂದಣ್ಣೆವಾಲು ಕುಡಿದಾಡಿದ ಗೋಪಾಲ
ಚಿಣ್ಣರ ಬಡಿಯುತ, ಹೆಣ್ಣನು ಕಾಡಿದ ಯಾರಿಗು ಇವ ಸೋಲ.
ಹಿಡಿ ಹಿಡಿಯೆಂದರೆ ಹಿಡಿಯಲಿ ಸಿಗುವನೆ ಬ್ರಹ್ಮಾಂಡವೆ ಆತ.
ನವಿಲುಗರಿಯ ನವನೀತ ಚೋರನಾಬಾಲವೃದ್ಧಪ್ರೀತ.

ಹತ್ತಿ ತುಳಿದ ಕಾಳಿಂಗನ ಹೆಡೆಗಳ ಅಹಂಕಾರ ಹಿಳಿದು,
ಎತ್ತಿದ ಗೋವರ್ಧನ ಗಿರಿಯನು ಆ ಇಂದ್ರನ ಮುಖದೆದುರು.
ಕಾಮಧೇನು ಅಭಿಷೇಕಿಸೆ ಗೊಕುಲಕಧಿಪತಿ ಗೋವಿಂದ.
ಇಲ್ಲಿ ಹುಡುಕಿದರೆ ಅಲ್ಲಿ ತೋರುವನು ಎಲ್ಲೆಡೆ ಸ್ವಚ್ಛಂದ.

ದೈತ್ಯಬಾಹು ಮುಗ್ಧತೆಯನು ಹಿಸುಕಲು ಚಾಚಿತು ಹಲಬಾರಿ
ಪೂತನಿ, ಶಕಟಾಸುರ, ಯಮಳಾರ್ಜುನ, ಧೇನು ಪ್ರಲಂಬರ ತೋರಿ;
ರಾಕ್ಷಸರೂಪದ ಭೌತಿಕ ಶಕ್ತಿಯ ಗೋಪುರ ನೆಲಕುರುಳಿ
ಕಂಸಾಸುರನೆದೆ ಕುಸಿಯಿತು ಧರ್ಮದ ಕೃಷ್ಣಶಕ್ತಿ ಕೆರಳಿ.

ಬೃಂದಾವನದೆದೆಯ ಮಿಡಿದು
ಬಂತು ಕೊಳಲ ಮೆಲ್ಲುಲಿ-
"ಕೈಯೊಳಿದ್ದುದಲ್ಲೆ ಬಿಟ್ಟೆ
ಮೈಯನೆಲ್ಲಿ ಚೆಲ್ಲಲಿ?"
ಝುಣ್ ಝುಣ್ ಝುಣ ಝುಣೆರು ಕುಣಿವ
ಗೋಪಿಕೆಯರು ಸುತ್ತಲು
ಕೃಷ್ಣ-ರಾಸಕ್ರೀಡೆ-ಹಾಸ
ರಮಿಸಿ ನಮಿಸಿ ಮುಕ್ತರು.

ಕೊಳಲೂದಿದ ತುಟಿಗಳಲ್ಲಿ
ಪಾಂಚಜನ್ಯ ಪುಟಿಯಿತು.
ಕುರು-ಪಾಂಡವ-ಕುರುಕ್ಷೇತ್ರ
ಧರ್ಮಕೆ ಜಯವೆಂದಿತು.

ಆಯುಧವನು ಹೂಡದೇನೆ
ಆದ ಪಾರ್ಥಸಾರಥಿ,
ಯುದ್ಧವೆ ಸ್ಥಿರವಾದರೂನು
ಶಾಂತಿಗಾಗಿ ಧಾವತಿ.

ಭೀಷ್ಮ, ದ್ರೋಣ, ವ್ಯಾಸ, ವಿದುರ
ಭೀಮಾರ್ಜುನ, ಯುಧಿಷ್ಠಿರ
ದುರ್ಯೋಧನ, ಜರಾಸಂಧ
ಶಿಶುಪಾಲ ವಿಶಿಷ್ಟರ-
ಗುಣಶಕ್ತಿಯ ರಂಗದಲ್ಲಿ
ಕೃಷ್ಣಪ್ರಭೆಯ ಬೆರಗದೋ
ಪುಣ್ಯ ಪಾಪದೆಲ್ಲೆಗೆಟುಕ-
ದಂತೆ ನಿಂತ ನಿಲವದೋ.

ಶ್ರೀಕೃಷ್ಣನು ಸೂತ್ರಧಾರ
ನೂರು ಪಾತ್ರ ಕುಣಿದವು;
ಯಾರುಳಿದರು, ಯಾರು ಇಲ್ಲ?
ಯಾರ ಹೊಟ್ಟೆ ತಣಿದವು?
ಎಂತಾದರು ಈ ದುರಂತ-
ಕಿಹುದೆ ಕೊನೆಯ ಅಂಕವು?
'ಸಂಭವಾಮಿ ಯುಗೇ ಯುಗೇ'
ಅಗೋ ಧರ್ಮಚಕ್ರವು.

## ವಿಶ್ವಗಾನದ ಬೆಳಕು

೧

ಗಾಳಿ-ಬೆರಳುಗಳಿಂದ ಆ ಮಹಾಕಾಶವಿದೊ
ಸೋಕುತಿದೆ ನೆಲದ ಮೈಯ-
ಪುಟ್ಟ ಎದೆ ಜಗದಗಲ ಬಾಯ್ ಬಿಟ್ಟು ನೋಡುತಿದೆ
ಆಕಾಶಕೊಡ್ಡಿ ಕೈಯ!
ಜಗದ ಪಾತ್ರೆಯು ಮತ್ತೆ ತೆರವಾಗಿ ತುಂಬುತಿದೆ
ವಿಶ್ವಗಾನದನಂತ ಸೆಲೆಗಳಿಂದ;

ಗಿರಿ, ಕೊಳ್ಳ, ಕಾನುಗಳ ಬಾಯಿ ನುಡಿಸಿದೆ ಕೊಳಲು
ಹೊಳಲುಗೊಟ್ಟಿಹುದದಕೆ ಮೌನದಳಲು;
ಸಂಜೆಗೆಂಪಿನ ಹಿಂದೆ ತುಡಿವ ತಾರೆಗಳಿಣುಕು
ಗಿಡಗಂಟಿ ಮೈಮನಕೆ ಹೊನ್ನೆ ಹುಳಗಳ ಮಿಣುಕು-
ಚಲಿಸುತಿಹ ದೀಪಾವಳಿ.
ಕೊನೆಯಿರದ ನೀಲಿಮೆಗೆ ತೇಲುತಿವೆ ನೂರೆಂಟು
ಕನಸು-ಮೋಡದ ತುಂಡು ಮುಕ್ತಾವಳಿ.

ಗರಿ ಬಿಚ್ಚಿ ಹಾರಿತಾರಾಧನೆಯ ಪಕ್ಷಿ
ಬಿತ್ತರದ ಕಡಲು ದಾಟಿ,
ಬಿರುಸು ನೆಲ, ತುರುಸು ಜಲ, ವಿರಸ ವಕ್ರತೆಯ ಬಲ
ಕರಗಿದಂತಃಕರಣದೆರಕವಾಗಿ,
ಬದುಕು ತೇಲಿತು ಬಾನ ಬೆಳ್ಳಕ್ಕಿ ಮಾಲೆಯಲಿ
ಚಿಕ್ಕೆ ನುಡಿಸುವ ಮಂತ್ರ-ಗೀತವಾಗಿ.

ನಿನ್ನ ಗಾನದ ಬೆಳಕು
ನೆಲ-ಬಾನುಗಳ ತಿಕ್ಕಿ ತೀಡುತಿದೆ
ಚಿಮ್ಮುತಿದೆ ನರನರದಿ ಜೀವದುಸಿರು-
ಕಲ್ಲುಬಂಡೆಯ ಕೊರೆದು, ಮರುಭೂಮಿಯಲಿ
ಹರಿದು, ಜಗದಹಂಕಾರಕ್ಕೆ ಜಲಪಾತವಾಗಿ ಸುರಿದು,
ಎಲ್ಲ ಗಿಡಗಳ ಬೀಜದಲ್ಲಿ ಅಡಗಿದ ತೇಜ
ಮೊಗ್ಗೆಯಲಿ ಕೈಮುಗಿದು, ಹೂವಿನಲಿ ಕಣ್ಣು ತೆರೆದು.
ಬೇಸಗೆಯ ನಿಟ್ಟುಸಿರು, ಮಳೆವನಿಯ ಪೈಜಣಕೆ
ಕುಣಿದು ಕೊನರುವ ಹಸಿರು-
ಮಿಡಿ, ಕಾಯಿ, ಹಣ್ಣುಗಳ ಹಂಪುಗಾಲದ ಸೊಂಪು
ಋತುಋತುಗಳಾಡಿಸಿದ ನೂರು ಚದುರು.
ಎದೆಯ ಮಿಡಿತಕೆ ನುಡಿದು ತುಡಿವ ಲಯ ಸಂಗೀತ
ಸಹಜ ಶ್ವಾಸೋಚ್ಛ್ವಾಸ-
ಹೊಂಬಿಸಿಲಿಗರಳಿ, ತುಂಬಿ ಸೂಸಿತು ಆತ್ಮದುಲ್ಲಾಸ
ಹಿಮಗಿರಿಯ ಮಂದಹಾಸ.

ಕಾದು ಕಾಯ್ದಿರುವೆದೆಗೆ ಬೇಸಗೆಯ ಮೊದಲ ಮಳೆ
ಜೀವ-ನದಿ ಬದಿಯ ಭಾವ ಬನದಲಿ ಕ್ಷೋಭೆ ರೆಕ್ಕೆ ಬಡಿದು
ಬಿರುಗಾಳಿ ಮೈದುಂಬಿ, ಆಗಸದ ಮೂಲೆಮೂಲೆಯಲಿ

ಸಿಡಿಲು ಮಿಂಚಿನ ಬಾರುಕೋಲು ಬೀಸಿ-
ಮಧುರ ಯಾತನೆ ಬಾಳ ಸುತ್ತುವರಿಯಿತು ಮೊರೆದು,
ಪ್ರಕ್ಷುಬ್ಧ ಸಾಗರದೊಲು;
ಮರುಚಣದ ಹೂಬಿಸಿಲ ಪ್ರೇಮದಾನಂದದಲಿ
ಬನಬನವು ತೊನೆದು ತೂಗಿತು, ಹಕ್ಕಿಯುಕ್ಕಿಸಿತು ಹಾಡು-ಹೊನಲು.

ಜಡದ ಪರ್ವತವರಳಿ ಗುಡ್ಡಗುಡ್ಡದ ಪಕಳೆ
ಹೀರುತಿದೆ ಸೂರ್ಯ ಬಿಂಬ,
ಯಾವ ಹಾಡನು ಹಾಡಬಂದೆಯೋ ತುಂಬಿಸಿದೆ
ಈ ಜಗದ ಅಮೃತ ಕುಂಭ.
ತಾರೆಗಣ್ಣನು ತೆರೆದು ಎಚ್ಚರದಿ ಕಾರಿರುಳು
ತಾಳ್ಮೆಯಲಿ ತಲೆ ಬಾಗಲು
ಬಂದ ರವಿ ರಥವೇರಿ, ಆಕಾಶವನು ತೂರಿ
'ಬಂಗಾರ ನೀರ ಕಡಲು'
ಕನಸಿನಿಂದೆಚ್ಚತ್ತ ಕಾರಂಜಿ
ಬಯಲ ಬಣ್ಣವ ತುಂಬಿ, ನೆಳಲ ಸಿಂಗರಿಸಿ
ನೆಲದಭೀಪ್ಸೆಯನೆತ್ತಿ ನಿಲ್ಲಿಸಿತು ಉತ್ತುಂಗ
ಶಿಖರ ಸಿಂಹಾಸನಕೆ ಬೆಳಕು ಹರಿಸಿ-
"Ages pass, and still thou pourest,
and still there is room to fill."

೨

ನೆಳಲು-ಬೆಳಕಿನ ಹಿಂದೆ ಸುಳಿವು ಹಿಡಿಯುತ ಬಂತು
ಕೊಳಲ ಕಣ್ಣಿಗೆ ತಾಗಿ ಮಿಂಚುವೆರಳು-
ಯಾರು ಹಾಯದ ಹಾದಿಯಲ್ಲಿ ಕಾಯುತ ನಿಂತೆ
ಮುಂಜಾವು ಮಂಜಿನಲಿ, ಸಂಜೆಯರಳು.
ಒಮ್ಮಿದೊಮ್ಮೆಲೆ ಹೊಮ್ಮಿ ಬರುವ, ಸೊಗ ಚಿಮ್ಮಿಸುವ
ಆ ಒಂದು ಗಳಿಗೆ ಜೋಡು.
ನೂರು ಭಾವದ ಲಹರಿ ಸಾವಿರದ ಹಾಡು.
ಒಡೆದು ಹೋಯಿತು ಹತ್ತು ದಿಕ್ಕುಗಳ ಸುತ್ತಿರುವ
ಶಬ್ದಗಳ ಕಟ್ಟುಪಾಡು.
ಹಗಲೆಲ್ಲ ಧಗಧಗಿಸಿ, ಇರುಳು ಮಗಮುಗಿಸಿ
ಬೆಳಗು ಬಂದಿತು ದುಃಖ ದುಮ್ಮಾನಗಳ ಕುಡಿದು
ಸುಖದ ಸುಮ್ಮಾನಗಳ ಹೆಜ್ಜೆಯಿರಿಸಿ.
ಅವನ ಪಾದಸ್ಪರ್ಶಕೆದೆಯು ಹಿಗ್ಗಿತು ಪಂಚ ಕರಣಗಳ ಪಕಳೆ ಬಿರಿದು.

ನೀರಡಿಸಿ ಬಂದನವನಾಜಗದ ದಾರಿಕಾರ,
ಹಗಲುಗನಸನು ಕೊಡವಿ ಅವನ ಕೈ ಬೊಗಸೆಯಲಿ
ಸುರಿದೆ ನೀನೀ ಜಗದ ಅಮೃತಪೂರ.
ತುಂಬಿ ತುಳುಕಿತು ಬೆಳಕು
ಕಣ್ಣು ಚುಂಬಿಸಿ ಎದೆಯನಿನಿದಾಗಿಸಿತು ಹೊಸತು-
ಹರುಷದ ಜೀವ ಕೇಂದ್ರ ಬಿಂದು.
ಬಾನು ಬಗೆ ತೆರೆದು ಭರವಸೆಯ ನರುಗಂಪಿನಲಿ
ನಗೆ ಸಾಗಿ ಹೋಯಿತೀ ಬುವಿಗೆ ಬಂದು.
ಬೆಳಕು ಕಡಲಲಿ ಹಾಯಿದೋಣಿಗಳ ಹರಹಿದವು
ಚಿಟ್ಟೆ, ಬಣ್ಣದ ತಟ್ಟೆ; ಅಂಚಿನಲಿ ತೇಲಿದವು.
ಅಂಚೆ, ಮಿರಿ ಮಿರಿ ಮಿಂಚಿ ನೈದಿಲೆಯು ಜಾಜಿ ಹೂವು.
ಮೋಡ ಮೋಡಗಳಲ್ಲಿ ಬೆಳಕು ಬಂಗಾರ ಹುಡಿ
ನೋಡನೋಡುತ ಸುರಿಯಿತೆಲ್ಲ ಕಡೆಗು.

೩

ಅತ್ತಿತ್ತ ಜಗ್ಗಿದಾನಂದದೆಳೆಗಳ ಹಿಡಿದು
ಒಂದೆಡೆಗೆ ಸುತ್ತಿರುವ ಕೊನೆಯ ಹಾಡು;
ಹುಲ್ಲುಗರಿ ಬಿಚ್ಚಿದಾನಂದದಲಿ ಮೈಮರೆತು
ಬುಗುರಿಯಾಡಿರುವ ಭೂಮಿ.
ಜೀವ ಸಾವಿನ ಅವಳಿ ಜವಳಿ ಗಿರಿಗಿರಿ ಗಿಂಡಿ-
ಬಾಳ ಬೇರನು ಹಿಡಿದು ಅಲ್ಲಾಡಿಸಿತು ಎಚ್ಚರಿಸಿ
ಬೀಸಿರುವ ಗಾಳಿ ಸ್ವಾತಂತ್ರ್ಯ ಧಮನಿ.
ನೋವು-ಕೆಂದಾವರೆಯ ದಳದಳದಿ ಸಂತೋಷ ಸವಿಗಂಬನಿ.

ಪ್ರೀತಿ ಮುಡಿಯಿತು ಹೂವು
ಪ್ರಕೃತಿ ರಿಂಗಣಗುಣಿದು ಮುಂದೆ ಚಾಚಿತು ಬಾಹು
ಬಾಳ ಬಟ್ಟಲು ತುಂಬಿ ಸೂಸಿರಲು 'ಬಾ' ಎಂದು ಕರೆದೆ ಸಾವು.
ಹಗಲಿರುಳು ತಿರುಗಿದವು ಜಗದ ಛಂದೋಗತಿಗೆ
ಅವನ ಬೆಳಕಿನ ಕುಡಿಗೆ ಹೊತ್ತಿಸಿದ ದೀಪಗಳು
ಹಳ್ಳ-ಹೊಳೆ, ಹೂವು-ತೊಳೆ, ಹಕ್ಕಿ ಕೊರಳು.
ಗಾಳಿಯಲಿ ಹೆಜ್ಜೆದನಿ-

"Have you not heard his silent steps
He comes, comes, ever comes"

ಬಾನ ಗಾಜಿಗೆ ಕೊರೆದ ನಕ್ಷತ್ರ ಚಿತ್ರಗಳು
ನೆಳಲು ಹಿಡಿದಿಟ್ಟ ಬೆಳಕಿನ ನೆನಪು ಬೆಳುದಿಂಗಳು.

"Every moment and every age
every day and every night
he comes, ever comes."*

## ರಾಷ್ಟ್ರದ ಕರೆ

ಹಸುರಿನ ಹೂವಿನ ಹೊದರಿನ ಒಳಗೆ
ಬುಸುಗುಟ್ಟಿದೆ ಘನ ಘಟಸರ್ಪ,
ನುಸುಳುತ ಕಾಲಿನ ಕೆಳಗೇ ಬಂದಿದೆ
ಹಿಮಗಿರಿ ಕೊಡವಿತು ದೀರ್ಘತಪ.

'ಬರಿ ಮೈ ತಣ್ಣಗೆ, ಮನದಲಿ ಬಿಸಿ ಹಗೆ'
ಉಸಿರೋ ಮೋಸದ ಬೆಂಕಿ ಬಲೆ!
'ಹೊಸನಾತೆ'ನ್ನುತ ಹಸುವನು ನುಂಗಿದೆ
ಬೀಸಿರಿ, ಎಲ್ಲಿದೆ ಭೀಮಗದೆ?

ಹಿಮಾಲಯದ ದರಿ ಕಂದರ ಕೂಗಿವೆ
ಉತ್ತರ ಕೊಡು ಓ! ಸಹ್ಯಾದ್ರಿ,
ನೆತ್ತರು ಕೊಡು ಓ! ಸಮಸ್ತ ಭಾರತ
ಸೊತ್ತಿದು ತಾಯಿಯ ಪದತಲದಿ.

ಬಿಡುಗಡೆಯೆಂದರೆ ಹುಡುಗಾಟವೆ ಮಗು?
ಗಡಿಯಲಿ ಗಿಡುಗವು, ತುಡುಗು ದನ-
ಬೆಳೆಯುವ ತೋಟಕೆ ಭದ್ರವೆ ಬೇಲಿ?
ನಿದ್ದೆಗೆ ಸಾಯ್ವರು ನಮ್ಮ ಜನ.

ಮರವೆಯ ಮಬ್ಬಿನ ಹಳೆಯ ಬಾವಿಯಲಿ
ಗೂಡು ಕಟ್ಟಿ ನೀವ್ ಕೊಳೆಯದಿರಿ.
ಇಂದಿನ ಬೆಳಕಿಗೆ ಕಣ್ಣುತೆರೆದು, ಧ್ವಜ-
ವೆತ್ತಿ ಹಿಡಿಯಲಿವೆ ಧವಳಗಿರಿ!

---

* ರವೀಂದ್ರನಾಥ ಠಾಕೂರರ ಶತಾಬ್ದಿ ಸ್ಮರಣೆ.

ಎಲ್ಲ ಮರೆತು ಮೇಲೆದ್ದಿದೆ ಭಾರತ
ಬಿಡುಗಡೆ ಕಾಯ್ದಿವೆ ವೀರಪಡೆ;
ನೆತ್ತರು ಹೊತ್ತಿಸಿ ಎತ್ತಿವೆ ಪಂಜು
ಮಡಿದವರಿಗೆ ತಲೆಬಾಗಿ ನಡೆ.

ಕೋಟಿ ಕೋಟಿ ಕೈ ಬಿಗಿದಿರೆ ಮುಷ್ಟಿ
ದಾಟಿ ಬರುವ ಎದೆ ಯಾರಿಗಿದೆ?
ನಮ್ಮ ತಾಯಿ-ನೆಲ ಬೆಟ್ಟ ಘಟ್ಟ ನದಿ
ಅದರ ಹೆಸರೆ ನಮ್ಮುಸಿರಿಗಿದೆ.

ಸಮತಾವಾದದ ಬುಲ್‌ಡೋಜರಿನಡಿ
ಅಳಿದಿವೆ ಆಶಾಂಕುರ ನೂರು;
ಗಾಳಿ ನೀರು ಬೆಳಕಿನಲಿ ತೂಗಿ
ತಲೆಯೆತ್ತಿ ನಿಂತವರೆ ಮಾನವರು.

ಸಾಗಲಿ ನೇಗಿಲು, ಕೂಗಲಿ ಗಿರಣಿ
ಮುನ್ನಡೆಯಲಿ ಆ ಯೋಧಪಡೆ;
ರಾಷ್ಟ್ರಪುರುಷನಲಿ ಸಮಷ್ಟಿಗೊಂಡಿದೆ
ಶಾಂತಿ, ಮಾನವತೆ ನಮ್ಮ ಕಡೆ.

## ಇಂದೆ ಸೀಮೋಲ್ಲಂಘನ

ಯುದ್ಧ ಬಂದಿತು ಸಿದ್ಧರಾಗಿರಿ
ಇಂದೆ ಸೀಮೋಲ್ಲಂಘನ!
ಪೂರ್ವ-ಪಶ್ಚಿಮ, ದಕ್ಷಿಣೋತ್ತರ
ನೀಡಿ ಹಸ್ತಾಂದೋಲನ.

'ಮಾಡು ಇಲ್ಲವೆ ಮಡಿಯಿರೆ'ನ್ನುತ
ಎಂತು ಬಿಡುಗಡೆ ಪಡೆದೆವು-
ನಾಡ ಕಟ್ಟುತ ಬೆವರು ಹರಿಯಿಸಿ
ದೂರ ಗುರಿಯೆಡೆ ನಡೆದೆವು.

ಬಂತು ಉತ್ತರದಿಂದ ಹತ್ತಿರ
ಹಳದಿ ಮಿಡಿತೆಯ ಹಾವಳಿ.
ಏಳಿ ಎಚ್ಚರಿ, ಬೆಂಕಿ ಹಚ್ಚಿರಿ
ತಿಂದು ದಕ್ಕಿಸಿಕೊಳ್ಳಲಿ.

ದೂರ ದಿಕ್ಕಿನ ಅಂಚಿಗಿದೆ ಹೊಸ
ಹೊಂಚು ಹಾಕಿದ ಜೇಡವು;
ಮಿಂಚುತಿದೆ ಆಗೀಗ, ಇರುಳಿಗೆ
ಏರಿ ಬರಲಿವೆ ಮೋಡವು.

ಇರುವೆ-ಗುದ್ದನು ಮೆಟ್ಟಿ, ಮಾಳಿಗೆ
ಸೋರದಂತೆಯೆ ತಡೆಯಿರಿ.
ಆ ಹಿಮಾಲಯ ಕೋಟೆ ಬಾಗಿಲು
ಅಲ್ಲಿ ಬಾವುಟ ಹಿಡಿಯಿರಿ.

ನಮ್ಮ ನೆಲವಿದು, ನಮ್ಮ ಹೊಲವಿದು
ನಮ್ಮ ನೆತ್ತರು ಬಿಡುಗಡೆ;
ನಮ್ಮ ತಾಯಿಯ ಪಾದಧೂಳಿಯು
ನಮ್ಮ ಪ್ರಾಣದ ನಿಲುಗಡೆ.

ಹಿಡಿದ ಕಾಯಕ ನಿಷ್ಠೆ ನಡತೆಗೆ
ಒಟ್ಟು ನಾಡಿನ ಒಕ್ಕಲು,
ಎಲ್ಲ ಶಕ್ತಿಯ ಝರಿ ತೊರೆಗಳಾ-
ರ್ಭಟಿಸಿ ಸಾಗರವುಕ್ಕಲು.

ಆಕ್ರಮಣ! ಮೈಸೊಕ್ಕು ಮುರಿಯಲಿ
ಒಕ್ಕೊರಲು ಒಂದಾಗಿರಿ;
ಕೊನೆಯ ರಕ್ತದ ಹನಿಯವರೆಗೂ
ಹೋರಿ ಗೆಲ್ಲುವೆವೆನ್ನಿರಿ.

ಶಿವನ ತಪಸಿಗೆ ಭಂಗ ಬಂದರು
ನವ ಕುಮಾರನ ಸಂಭವ-
ತಾರಕಾಸುರ ವಧೆಯು ಕಾದಿದೆ
ಭರತಕುಲ ವಿಜಯೀಭವ

## ಭೂಮಿ-ತೂಕ

ಮಾತು-ಬೆಳ್ಳಿ ಕತ್ತಲೆಯ ತಳ್ಳಿ ಸುತ್ತೆಲ್ಲ ಮಿನುಗುತಿರಲು
ಮೌನ-ಧ್ಯಾನ ಬಂಗಾರ ಕೃತಿಯು ಮೂಡಲಕೆ ಮೂಡಿ ಬರಲು
ಜಗದ ಅಂಗಳವ ದಾಟಿ ಒಳಗೆ ಭಾರತದ ಗರ್ಭಗುಡಿಗೆ
ಸೂರ್ಯಕಿರಣ ಶಿವಲಿಂಗ ತಾಗೆ ಹೂವಾಗಿ ಎಲ್ಲರೆದೆಗೆ.

ಹೊರಗೆ ಬರಲಿ ಬಂಗಾರ ಬೆಳ್ಳಿ, ಅದಕಿಹುದು ಭೂಮಿತೂಕ,
ತೆರೆಗೆ ಬರಲಿ ತಾದಾತ್ಮ್ಯ ಹೊಂದಿ ನಟ-ನಾಟ್ಯ ಜೀವಪಾಕ;
ಕುದಿದು ದೇಶ ತಳಮಳಿಸುತಿರಲು ತಳಕಿಳಿಯೆ ಕ್ಷುದ್ರ ಕಸವು.
ತುಪ್ಪವಾಗಿ ಮನಕೊಪ್ಪವಾಗಿ ಗಮಗಮಿಸಬಹುದು ಯಶವು.

ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಹಿಡಿದು,
ಬಾಗಬೇಕು ಬಿಲ್ಲಾಗಿ, ದೂರ ಗುರಿಯೆಡೆಗೆ ಜೀವ ಮಿಡಿದು,
ಕಾಯಬೇಕು ಹುಳಿಯೊಗರು ಮಾಗಿ ರಸತುಂಬಿ ತೂಗುವರೆಗು
ಇಂದೊ-ನಾಳೆ ಬಂದೀತು ಗೆಳೆಯ ಆ ಅಮೃತಗಳಿಗೆ ನಮಗು.

ದೂರ ಸಿಡಿದು ಕಿಡಿಯಂತೆ ಬದುಕು-ಬಣವೆಯನು ಉರಿಸಬೇಡ.
ಭಾರತವೆ ಇಹುದು ಕಣ್ಮುಂದೆ ಹಿಂದೆ ಜಡೆಗಟ್ಟಿ ನಿಂತ ಮೋಡ.
ಯಾರು ಹೇರಿಕೊಂಡೊಯ್ಯುವುದಿಲ್ಲ, ಹೋರಾಟವೊಂದೆ ಕೊನೆಗೆ
ತಾಯಿ ನೆಲದ ಈ ಮಣ್ಣು ಗಂಧ-ಕುಂಕುಮವು ನಮ್ಮ ಹಣೆಗೆ.

## ನೆಹರು : ಶ್ರದ್ಧಾಂಜಲಿ

ಬಾನ ನೀಲಿಯ ಕುಡಿದು, ನಕ್ಷತ್ರಗಳ ಮುಡಿದು
ಮೋಡ-ಕುಡಿ ಮಿಂಚುಗಳ ಧಾರೆ ಹಿಡಿದು
ನದಿನದಿಗೆ ಧುಮುಕಿಸಿದ ಆ ಹಿಮಾದ್ರಿಯ ಶಿಖರ
ನೆಲಕೊರಗಿ ನಿದ್ರಿಸಿತು; ಏಳ್ವುದೆಂದು?

ಯಾರು ಬಂದರು ತೆರೆವ ಬಾಗಿಲವು, ಸೋತವರ-
ನೆತ್ತಿಕೊಳ್ಳುವ ಹೆಗಲು, ತುಂಬಿದುಡಿಯು;
ಎಂಥ ಭಾರಕು ಜೋಲಿ ಹೊಡೆಯದಿಹ ತೂಗು-ತೊಲೆ,
ಆ ಮಹಾತ್ಮನು ತೆರೆದ ಗರ್ಭಗುಡಿಯು.

ಒಳಹೊರಗು ಸ್ವಚ್ಛ ಬಿಳಿ; ಹಾಲುಕ್ಕಿದಂತೆ ನಗು
ಪೂರ್ವ-ಪಶ್ಚಿಮ ಬೆರೆತಪೂರ್ವಕಾಂತಿ.
ಪುಟಿ ಪುಟಿವ ಕಾರಂಜಿ; ಹಳತು-ಹೊಸತನು ಹಿಂಜಿ
ಹೊಸೆದು ಹೊತ್ತಿಸಿ ಹಿಡಿದ ಶಾಂತಿ-ಪಣತಿ.

ತ್ಯಾಗವನು ಬಿತ್ತಿ ಬೆಳೆದಂಥ ಗೊಮ್ಮಟ ನಿಲುವು-
ರಸಿಕತೆಯ ಕಂಪೂಗೆವ ಚೆಂಗುಲಾಬಿ.
ಎರಡು ಕೈಯಿಂದಲೂ ಹೊಸ ಭಾರತವ ಮಿದ್ದಿ
ತಿದ್ದಿದನು ತಾನದರ ಕಣ್ಣುಗೊಂಬಿ.

ಈ ನೆಲದ ಮಣ್ಣವಗೆ ಕಸ್ತೂರಿ, ಕೇಸರವು
ಈ ಜನವ ಹೊಟ್ಟೆಯೊಳಗಿಟ್ಟುಕೊಂಡು,
ಕಾಂಗರೂವಿನ ಹಾಗಿ ಜಿಗಿದ ನೂರಡಿ ಮುಂದೆ,
ಹಸಿರು ಹೊಮ್ಮಿತು ತುಂಬು ತೆನೆಯ ಹಿಡಿದು.

ತುಂಬಿದೆಪ್ಪತ್ತೈದು ವರುಷದೀ ಶತಮಾನ-
ದಿತಿಹಾಸ ಸಂಪುಟದ ಹಾಳೆ ತೆರೆದು,
ಓದಿ ಹೋರಾಟಗಳ ಧೀರ ಕಥೆ, ಚಿಮ್ಮಿರುವ
ಮೂರು ಬಣ್ಣದ ಗುಡಿಯ ಭೇರಿ ಹೊಡೆದು.

ನಿನ್ನಿನಿರುಳೇ ಅವನು ಎಲ್ಲ ಕೆಲಸವ ಮುಗಿಸಿ
ಮಲಗಿದನು, ನಾಳೆಯನು ನಮಗೆ ಬಿಟ್ಟು;
ಅಲಸಿಗರು ನಾವು ನಮಗೊಟ್ಟಿಕೊಂಡಿವೆ ಬೆಟ್ಟ-
ಹಗಲಿರುಳು ಕಡಿದರೂ ತೀರದಷ್ಟು.

ಯಾವುದನು ಬರಬಾರದೆಂದು ನೆನೆದಿದ್ದೆವೊ
ಬಂದೆಬಿಟ್ಟಿತು ಕೊನೆಗೆ, ಹೊಸತಿಲೊಳಗೆ
ಈಗ ತಾಕಿತು ತಲೆಗೆ ಅವನು ಹೊತ್ತಿಹ ಭಾರ
ಎತ್ತು ಭಾರತ ಮಹಾರಥವ ಮೇಲೆ.

ಕಣ್ಣೀರು ತೊಳೆಯೆ ಕಲ್ಮಷ, ಪರಂಪರೆ ತೈಲ
ಹೀರಿ, ಹೊಸಬತ್ತಿಯಲಿ ಸ್ವಂತ ಬೆಳಕು
ಹಿಡಿದು, ಎದೆ ಹಣತೆಯಲಿ ಸಲಿಸು ಶ್ರದ್ಧಾಂಜಲಿಯ
ಅವನ ಹೊಂಗನಸುಗಳ ದೀಕ್ಷೆ ಪಡೆದು.

## ಭಾರತ ಸುಪುತ್ರನ ಕೊನೆಯ ಬಯಕೆ

ಭಾರತದ ನಾಲ್ವತ್ತು ಕೋಟಿಯ ನೆನೆದು ಎತ್ತಿಹೆ ಲೇಖನಿ,
ಸ್ವಚ್ಛ ಬಿಳಿ ಕಾಗದದಿ ಮೂಡಿದೆ ಹಾಡಿದೊಲು ನನ್ನೊಳದನಿ.
ಮೃತ್ಯುಪತ್ರವನೀಗಲೇ ನಾನೇಕೆ ಬರೆದೆನೊ ತಿಳಿಯದು
ವರ್ತಮಾನವು ಭೂತವಾಗದೆ ಆ ಭವಿಷ್ಯವು ತೆರೆಯದು.

ಇರುವ ಪ್ರೀತಿಯ ಧಾರೆಯೆರೆದಿರಿ, ಮಮತೆ ಹೂಗಳ ಸುರಿದಿರಿ.
ಹೊರದೆ ಹೊರಲಾರದೆಯೆ ಬಾಗಿದೆ; ನೀವೆ ಶಕ್ತಿಯನಿತ್ತಿರಿ.
ನಿಮ್ಮೆದೆಯ ಅಭಿಮಾನ ಧ್ವಜವನು ಎತ್ತಿ ಬಾನಿಗೆ ಹಿಡಿದಿರಿ.
ನಿಮ್ಮ ನಂಬಿಗೆಗೆರಡು ಬಗೆಯದೆ ತುಂಬುವದೆ ನನ್ನೊಳಗುರಿ.

ಕರಗಿದಂತಃಕರಣದಲ್ಲಿಯೆ ಎರಕಹೊಯ್ದಿರಿ ನನ್ನನೆ
ಹೋದ ಹೋದೆಡೆ ಲಕ್ಷ ಲಕ್ಷದಿ ಲಕ್ಷ್ಯಗೊಟ್ಟಿರಿ ಸುಮ್ಮನೆ.
ನಿಮ್ಮ ಕಂಡರೆ ಉಬ್ಬುವುದು ಮೈ, ಹಬ್ಬಿ ಪ್ರೀತಿಯ ದಾಂಗುಡಿ
ನಿಮ್ಮ ಸುಖ-ದುಃಖದಲಿ ಮೀಯುತ ಪಡೆದ ಚೇತನವಿಮ್ಮಡಿ.

ನನ್ನ ಹೆಗಲಿಗೆ ಹೆಗಲು ಕೊಟ್ಟಿರಿ, ಹಿಂದೆ ಬೆಂಬಲವಾದಿರಿ.
ಮುಗಿಲು ಮುಟ್ಟುವವರೆಗೆ ಜಯಜಯಕಾರಗೈಯುತ ನಡೆದಿರಿ.
ಜಗದ ಜೀವನ ರಥವು ಮುಂದಿರೆ ಹಿಂದೆ ಬೀಳದು ಭಾರತ
ಬಡವ-ಬಲ್ಲಿದ. ರೈತ-ಕಾರ್ಮಿಕ ಎಲ್ಲರಿಗು ಒಂದೇ ವ್ರತ.

ಈ ಹಿಮಾಲಯ ಕರೆವುದೆನ್ನನು ಮೊರೆವುದೇನೋ ಕಿವಿಯಲಿ,
ನಾನು ಕೊಟ್ಟಿಹ ವಚನ ತೀರಿಸದೆಂತು ಉಳಿದುದ ನೆನೆಯಲಿ?
ನಡೆಯ ತೊಡಗಿಹ ದಾರಿ ಮುಗಿಯದೆ ಎಲ್ಲಿ ಮನಸಿಗೆ ನೆಮ್ಮದಿ?
ನನ್ನ ದಿನಚರಿಯಲ್ಲಿ ಮೂಡಿದೆ ಕವಿಯು ಹಾಡಿದ ಚೌಪದಿ.

ಸಾವು ಬರುವುದು ಎಲ್ಲರಿಗೂ ಸಮನಾಗಿ ಸಂಧ್ಯಾರಾಗದಿ
ಜೀವ ಹೋರಾಡುವುದು ತನ್ನಯ ಗುರಿಯ ಮುಟ್ಟುವ ಜಾವದಿ.
ಸತ್ತನಂತರ ಏಕೆ ಧಾರ್ಮಿಕ ಕರ್ಮ? ಮರ್ಮವನರಿಯೆನು;
ನನ್ನ ಮಟ್ಟಿಗೆ ಇಂಥ ವಿಧಿ ಮರೆಮೋಸವೆಂದೇ ಬಗೆವೆನು.

ನನ್ನ ದೇಹದ ಬೂದಿಯೊಳಗೊಂದಿನಿತು ಗಂಗೆಯ ಸೇರಲಿ,
ಅಲ್ಲ ಧಾರ್ಮಿಕ ನಂಬಿಕೆಯು; ಅದು ನನ್ನ ಬಾಲ್ಯದ ಬಾನುಲಿ,
ನನ್ನ ನರ ನರದಲ್ಲಿ ನೆತ್ತರು ಗಂಗೆ ಯಮುನೆಯ ಅಲೆಗಳು
ದಂಡೆ-ಮಳಲಿಗೆ ಹೊಳಲುಗೊಟ್ಟಿವೆ ನೂರು ನೆನಪಿನ ಝರಿಗಳು.

ಅದರ ಏರಿಳಿತದಲಿ ಬೆಳೆಯುತ ತೂಗಿದೆನು ಋತು-ಲಹರಿಗೆ
ಯುಗ ಯುಗಾಂತರದಲ್ಲು ಮುಗಿಯದ ಕಾವ್ಯ, ಕಥೆ, ಇತಿಹಾಸಕೆ.
ಈ ಪುರಾತನ ಸೆಲೆಯು ಚಿಮ್ಮಿದೆ ಗಂಗೆಯುಗಮಸ್ಥಾನದಿ
ನೂರು ಕತ್ತಿಯ ರಕ್ತ ತೊಳೆದಿದೆ ಶಾಂತಿಮಂತ್ರದ ಪೂರದಿ.

ಹಿಮಶಿಖರದಿಂದಿಳಿದು ಕಹಳೆಯನೂದಿ ಕೊಳ್ಳಕೆ ಧುಮುಕಿದೆ,
ಬಯಲ ನೆನೆಯಿಸಿ ಹಸುರ ತೊನೆಯಿಸಿ ಜೀವ ದುಂದುಭಿ ಮೊಳಗಿದೆ.
ಭಾರತದ ಗತ ಸಾರ ಸ್ಮಾರಕ ವರ್ತಮಾನಕೆ ಹೊಯ್ಯುತ
ಆ ಭವಿಷ್ಯದಪಾರ ಸಾಗರ ಹೊಕ್ಕು ತೆರೆ ಹೊಡಮರಳುತ.

ಅರ್ಥವಿಲ್ಲದ ರೂಢಿ ಮೂಢತೆ ಕೊಡವಿ ಮೇಲಕೆ ನೋಡಿದೆ:
ವ್ಯರ್ಥವಾಗಿದೆ ವ್ಯಕ್ತಿಶಕ್ತಿಯಪಾರ್ಥಗೊಂಡಿದೆ ಗಂಡೆದೆ.
ಮೆಟ್ಟಿ ಪಾತಾಳಕ್ಕೆ ದೇಹವ ಆತ್ಮಕೊಡ್ಡಿವೆ ಬಂಧನ
ಸಕಲ ಸಂಕೋಲೆಗಳ ಕಿತ್ತೆಸೆದೇಳು ಭಾರತ ಚೇತನ!

ತೆರೆ ಪರಂಪರೆ ತೊರೆದು ಹರಿಯುವ ಹೊನಲಿಗೆಲ್ಲಿದೆ ಜೀವನ?
ನೊರೆಯ ಸರಿಸುತ ಬದಿಗೆ ತಿಳಿಜಲವೀಂಟೆ ಸ್ಫೂರ್ತಿಯ ಕೇತನ.
ನನ್ನ ಭಾವಕೆ ಸಾಕ್ಷಿಯಾಗೀ ಭಸ್ಮ ಗಂಗೆಗೆ ಸಲ್ಲಲಿ
ಇಂಥ ಸಂಸ್ಕೃತಿ ಸಾರ ಸಕಲೋದ್ಧಾರಕೀ ಶ್ರದ್ಧಾಂಜಲಿ.

ಉಳಿದುದೆತ್ತರ ಬಾನ ಸಂಪುಟದಡಿ ವಿಮಾನ ವಿತಾನದಿ
ನನ್ನ ನಾಡಿನ ಬಿತ್ತರದ ಹೊಲಗದ್ದೆಗಿಳಿಯಲಿ ಮೌನದಿ,
ರೈತ ಸುರಿಸಿದ ಬೆವರು ಮಣ್ಣಿಗೆ ನನ್ನ ದೇಹದ ಬೂದಿಯು
ಬೆರೆತು ಸಮರಸವಾಗುವದೆ ನಾ ತಿಳಿದ ಸ್ವರ್ಗದ ಹಾದಿಯು.*

## ನೆಲ-ಮುಗಿಲು

ಕಣ ಕಣದ ಗತಿ-ಮತಿಯ ಗುರುತಿಸು, ಆದರೀಗಲೆ
ಅದರ ಇತಿವೃತ್ತವನು ಬರೆಯದಿರು, ನೀನಾಗಿ
ಕೊರೆಯದಿರು ದಾರಿಯನು. ಬಯಲ ಬಿಡುಗಡೆ ನುಂಗಿ
ನೀರು ಹಿಡಿಯಲಿ, ವಿಶ್ವವೆಲ್ಲವು ತೆರೆದ ಬಾಗಿಲೆ.
ಹಾರಿ ಹಕ್ಕಿಯಾಗಲಿ: ತುತ್ತ ತುದಿಗಿದೆ ಚುಕ್ಕಿ.

---

* ಪಂಡಿತ ನೆಹರು ಅವರ ಮೃತ್ಯುಪತ್ರವನ್ನೋದಿ

ಮೀರಿ ಹರಿಯಲಿ ದಡವನೆರಡೂ ಕಡೆಗೆ ಬಾಚಿ.
ಬತ್ತಿತೋ? ಚಿಮ್ಮುವದು ಒರತೆ ನಾಲಗೆ ಚಾಚಿ.
ಆಕಾಶ ಕೈ ಹಿಡಿದು ಎತ್ತುವದು, ಮುತ್ತಿಕ್ಕಿ
ಭೂಮಿಗಿಳಿಸುವದು: ತೊಡೆಯ ಮೇಲಾಡುವದು ಮಗು.
ತಾಯ ಮೊಗ ಸೂರ್ಯಪಾನವು ಹೊರಳೆ ಹೊಂಬೆಳಗು!
ಎಲ್ಲೆಡೆಗು ಏಕಕಾಲಕೆ ಬಹುದೆ ಮಳೆ? ಹರಗು
ಒಳ ಹೊರಗು ಸಿದ್ಧವಿರು. ಹೊಸ ನೀರು ನಿಬ್ಬೆರಗು.
ಗುರುತ್ವಾಕರ್ಷಣ ಕರುಣೆ-ಕೇಂದ್ರ ನೆಲದೊಡಲು
ಬಾನತೀಂದ್ರಿಯ ಸ್ಪರ್ಶ-, ತುಂಬಿ ತೇಲಿವೆ ಮುಗಿಲು.

## ವರ್ತುಳ

ಈ ಮನದ ಮಧ್ಯಬಿಂದುವಿನಿಂದ ಹೊರಟ ವ-
ರ್ತುಳ ರೇಖೆ ಜೀವ ಜೀವಿಯ ಸುತ್ತಿ, ಬಾನಲೆವ
ಬೆಳಕನಾಲಿಂಗಿಸಿದೆ; ಗಾಳಿಯಲಿ ಯಾವುದೋ
ಗುಡಿಯ ಘಂಟಾನಾದ, ನಾದದೊಳಗೂ ಪ್ರತಿಮೆ.

ನೆಳಲು ಬೆಳಕಿನ ನಡುವೆ ಮಡುವಾಗಿ ಮಲಗಿಹುದು
ಯುಗ ಯುಗದ ನೆನಹು; ಬಿಟ್ಟೂ ಬಿಡದೆ ಜಿನುಗುವುದು.
ಒಂದು ಅಂಗುಲ ಜಾಗ ಬಿಡದೆ ಹೆಣೆದಿವೆ ತಂತಿ.
ತಂದೆ-ಮಗು, ಮಗು-ತಂದೆ 'ಇಲ್ಲಿಗೇಕೈತಂದೆ?'

ಎಲ್ಲಿ ಹುಡುಕಿದರು ಕುಂದು ಕಲೆ ತೋರದಾಕಾಶ.
ಅಂಚಿನಿಂದಂಚಿಗೆ ರೆಕ್ಕೆ ಬೀಸೆ ಬೆಳ್ಳಕ್ಕಿ-
ಅಲ್ಲೆ ಕಾಮನ ಬಿಲ್ಲು, ಮೋಡ-ಮಿಂಚಿನ ಸೆಳೆತ
ಗುಡುಗು-ಸಿಡಿಲಿನ ಹೊಂಚು, ಕೊನೆಗೆ ಕರುಣಾವೃಷ್ಟಿ-

ತ್ರಿಕೋಣ, ಚೌಕೋಣ, ಅಷ್ಟಕೋಣದ ಸುತ್ತು
ವರ್ತುಳ. ಸೃಷ್ಟಿ ಪರಿಘದ ನಡುವೆ ದೃಷ್ಟಿ ಬಿಂದು.

## ಪ್ರಣಯ-ಪ್ರೀತಿ

ಹಚ್ಚ ಹಸುರಿನ ಹೊರೆಯ ಹೊಚ್ಚ ಹೊಸ ಪ್ರಾಯ. ನಗೆ
ತುಂಬಿ ತುಟಿಬಿಗಿದ ಚೆಂಗುಲಾಬಿಯ ಮೊಗ್ಗೆ. ನರ
ನರಗಳಲ್ಲಿ ಹುಚ್ಚೆದ್ದು ಪುಟಿವ ಬಿಸಿನೆತ್ತರ
ಬುಗ್ಗೆ, ನೂರು ಮದ್ದಾನೆಗಳು ಇರುಳ ಬಾನಿಗೆ
ನುಗ್ಗಿ ಢಿಕ್ಕಿಯಾಡಿವೆ. ಗಾಢಾಂಧಕಾರದೆದೆ
ಬೆದೆಗೊಂಡ ಬೆಳ್ಳಕ್ಕಿ-ಮಿಂಚು. ಮಳೆಯ ಬರಸೆಳೆದು
ಗಟಗಟ ಕುಡಿದು, ಕೊಳ್ಳದಲಿ ಧುಮ್ಮಿಕ್ಕಿ ಹರಿದು
ಜುಮ್ಮುದಟ್ಟಿಸಿತು ಹೊಳೆ. ಮೂಲೋಕ ಮೂಕವಿದೆ.
ಬಿಸಿಲು ಚಳಚಳ ಕಾದು ನೆಲಕೆ ಆರಿಕೆಯಾಗಿ
ಮುಳ್ಳು ಬೇಲಿಯ ಹೂವ ತುಂಬುಗಣ್ಣೊಳು ಪ್ರೀತಿ-
ಪಣತಿ.-ಎಣ್ಣೆಯಲಿ ಬೇರಿಳಿದ ಬತ್ತಿ, -ಸಮರತಿ.
ಗಾಳಿಗೆದೆಯೊಡ್ಡಿಹುದು ಸೊಡರು-ಕುಡಿ ಹಾಯಾಗಿ.
ಕತ್ತಲೆಯ ಗರ್ಭದಲಿ ಬಿದ್ದ ಬೆಳಕಿನ ಬೀಜ
ಬೆಳೆದು ಬ್ರಹ್ಮಾಂಡವನೆ ತಬ್ಬಿಕೊಂಡಿತು ಸಹಜ.

## ದಾಹ

ಸುತ್ತು ಹತ್ತೂ ನಿಟ್ಟಿನಿಂದ ಸುತ್ತಿಗೆ ಹಿಡಿದು-
ನೆತ್ತಿ ಬಿರಿಯುವ ಬಿಸಿಲು ಕತ್ತೆತ್ತಿದರೆ ಮೇಲೆ
ಕಾದ ತಗಡಿನ ಮುಗಿಲು. ಕೆಳಗೆ ಕಮ್ಮರ ಶಾಲೆ
ಉಸಿರ ತಿದಿಯೊತ್ತಿನಲಿ ನಿಟ್ಟುಸಿರುಗಳ ಬೆಸೆದು-
[ಗಾಳಿಗೆಲ್ಲೋ ಗಲ್ಲು, ಇಲ್ಲವೆ ಗಡೀಪಾರು]
ಕುಲಿಮೆ ಇದ್ದಲಿಯೊಳಗೆ ಕಾದು, ಕರಗಿದೆ ಪ್ರಾಣ
ಬದುಕಿನಡಿಗಲ್ಲಿನಲಿ ನೂರು ನೋವಿನ ಭ್ರೂಣ-
ತಾಳ-ಕುಡ-ಕುಳಗಳನು ಹಣೆದು ಕುಡಿಸಿದೆ ನೀರು.
ಅಡ್ಡಮಳೆ, ಸದ್ದು ಹೊಡೆಯುವ ಸಿಡಿಲು, ಸಿಕ್ಕುದನು
ತೆಕ್ಕೆ ಬಡಿಯುವ ಗಾಳಿ, ಬಯಲು ಟರಪರ ಹರಿದು
ನುಚ್ಚು ನೂರ್ಕಡಿ-ಮಿಂಚು, ಗುಡುಗು-ಗುಮ್ಮಟ ಬಾನು.
[ನೆಮ್ಮದಿ ವಸುಂಧರೆಗೆ ಗಂಡುಮಗುವನು ಹಡೆದು.]
ಬತ್ತಿರುವ ಬಾವಿ ತೊರೆಬಿಟ್ಟ ಕೆಚ್ಚಲು-ಚಿಲುಮೆ
ದಾಹವಾರಲಿಕೆಷ್ಟು? ಎಷ್ಟಿದ್ದರೂ ಕಡಮೆ.

## ಉಪ್ಪು ನೀರು

ಜಗದ ಕಡಲನು ಸುತ್ತುತಿದೆ ಹಗಲಿರುಳ ಹಡಗು
ನಿಮಿ ನಿಮಿಷದೊಂದು ತೆರೆ ತೆರೆವ ಅನಿಮಿಷ-ಮಿಣುಕು.
ಗಾಳಿ-ಬಿರುಗಾಳಿ-ಸುಳಿ ಕರುಣೆ-ಕ್ರೌರ್ಯದ ತೊಡಕು.
[ರಟ್ಟೆ ಸೋತರು ಮತ್ತೆ ಹುಟ್ಟು ಹಾಕುವ ಬೆಡಗು!]
ಮೂಡ-ಪಡುವಣ ಮುಖಕೆ ರಕ್ತ ಚಿಮ್ಮುವ ಹೊತ್ತು
ಜೀವ ಜೀವದ ನೀರು ಪುಟಿದು ಸಾಗರವರಿದು
ಒಡಲ ಕಡೆವುದು, ದಂಡೆಗಪ್ಪಳಿಸಿ ಮೊರೆಯುವುದು.
ಹಿಮಗಿರಿ ತಿಮಿಂಗಿಲಗಳಜ್ಜಗಾವಲು ಸುತ್ತು!
ಮಳಲಿನಂಚಿಗೆ ಬಾಯಿ ಬಿಡುವ ಭಾವದ ಸಿಂಪು.
ತಳದ ಕತ್ತಲ ಗವಿಯ ತೊಳೆವ ಜೀವದ ಮುತ್ತು,
ನಡುವೆ ಅಪರಂಪಾರ ಮುಳುಗಿ ಏಳುವ ಬದುಕು.
ಸಂತತ ಸ್ವತಂತ್ರವಿದು ಯಾರೆ ಹೂಡಲಿ ಸಂಪು-
ತಪ್ಪು ಯಾರದು?- ಎಲ್ಲ ಉಪ್ಪು ನೀರಿಗೆ ಗೊತ್ತು:
ಈ ಸರಕು ಬಂದರಿಗೆ ಒಯ್ದು ಒಗೆದರೆ ಸಾಕು.

## ದೀಪಾವಳಿ

ಹತ್ತಿರಿದ್ದರು ದೂರ, ಹೃದಯ ಗಹ್ವರದಲ್ಲಿ
ಮಿಣಿ ಮಿಣಿ ಎನುವ ಪಣತಿ,- ನಮ್ಮ ಜೀವದ ಗೆಣತಿ,
ಹೊಮ್ಮಿ ಹೊಡಕರಿಸಿದರೆ ಹೊಸ ಬೆಳಕಿನಾಕೃತಿ.
ಇಡಿಯ ವರುಷದ ಹರುಷ ಆಕಾಶಬುಟ್ಟಿಯಲಿ-
ಬಣ್ಣದೊಟ್ಟಿಲದಲ್ಲಿ ಕಣ್ಣು ತುಂಬುವ ಕಂದ.
ಎರೆ ಹೊಲದ ಎದೆ ಅರಳೆ-ಬೆಳ್ಳಿಯಾಯಿತು ಮಣ್ಣೆ,
ಹಗಲಿರುಳ ಗಾಣದಲಿ ಹಿಂಡಿ ಬಂದಿರುವೆಣ್ಣೆ-
ಲಕ್ಷದೀಪದ ಕುಡಿಗೆ ಬೆಳಕು-ಮುಡಿ, ಬಿಸವಂದ.
ಹಿಂದೆ ಚಾಚಿದೆ ನೆರಳು (ಬೆಳಕು ಬಾಚಿದ ಹೆರಳು)
ಕೈಗೆ ದೀಪವು ಸಿಗಲು ಕತ್ತಲೆಯ ಹುಡುಕುವರು.
ಚಿಗುರು-ಹೂ-ಹಣ್ಣುಗಳ ತಳದೊಳೆಲ್ಲಿಯೊ ಬೇರು.
ಆಚೆ ಹೊರಳಿದೆ ಪೃಥ್ವಿಗೋಳದ ಒಂದು ಹೋಳು.
ಕಲ್ಲಾಗಿ ನಿಂತಿರುವ ಹೆಣ್ಣು, ದೀಪದ ಮಲ್ಲಿ-
ಬಿಲ್ಲು ಬಾಣವ ತೊಟ್ಟು ಹೊರಟವನ ಗುರಿಯೆಲ್ಲಿ?

## ಕತ್ತಲೆ-ಬೆಳಕು

ಈ ಮನಸಿನೊಳಗೊಬ್ಬ ಸೂರ್ಯ ಸುತ್ತಲು ಕಿರಣ
ತೂರಿಹನು. ಇಲ್ಲ ಉದಯಾಸ್ತಮಾನಗಳವಗೆ.
ಹೃದಯ ಕಮಲದಿ ಸದಾ ನಿಗಿನಿಗಿ ಕೆಂಡ ಸುರಿವ.
ಕೆಂಡವರಳಿದ ಹೂವು, ಮುಡಿದು ನಿಂತಿವೆ ಹರಣ.
ನೂರು ಗುಹೆಗಳ ಹೊಕ್ಕು ಹುಡುಕುತಿವೆ ಸಾವಿರದ
ಕಿರಣ. ದಾರಿಯುದ್ದಕು ಎಡವಿ ಬಿದ್ದಿದೆ ಸ್ಮರಣೆ.
ಅರಿವುಗೊಡದೊಲು ಎಲ್ಲೊ ತಾನೆ ಜಿನುಗಿದೆ ಕರುಣೆ.
ತೆರವಿಲ್ಲ, ತುಂಬಿಲ್ಲ, ತುಳುಕುತಿಹುದೆಲ್ಲಿಂದ?
ಹಗಲಿನಲಿ ಮುಳುಗು ಹಾಕಿದ ತಾರೆ ಮೇಲೆದ್ದು
ಬಹವು ಸಂಜೆ, ಕಿಡಿಹಾರಿಸುವವು ಕಾಡಿನಂಚಿ-
ನಲಿ ಮಿಂಚುಹುಳ, ಎಲ್ಲಿ ನಾರದ-ಹರಿ-ವಿರಿಂಚಿ?
[ಶಾಲೆ ತಪ್ಪಿಸಿ ಹೋದ ಧ್ರುವನ ಬೆನ್ನಿಗೆ ಗುದ್ದು]
ಇರುಳಾಗಲು ಬೆಳಕು ಸೋಸುವದು ಬಾನ ಜರಡಿ
ಹಗಲಿನಲು ಬಂದು ಮೂಸುವದು ಕತ್ತಲೆ-ಕರಡಿ.

## ರಾತ್ರಿ

ಅರಿತರೂ ಅರಿವುಗೊಡದಂತೆ ಕಪ್ಪು ಮುಸುಕನು
ಎಳೆದು, ಧಾತ್ರಿಯನು ತನ್ನೆದೆಗೆ ಸೆಳೆದುಕೊಂಡಿದೆ
ರಾತ್ರಿ, ಜಾರು ಬಂಡೆಯ ಮೇಲೆ ಕುಳಿತು ಜಾರಿದೆ
ಹೀಗೆ ಪ್ರತಿಸಲವು ಖಾತ್ರಿ. ಬೆಳಗು ಬೈಗನು
ದುಃಖ ಸುಖದ ಸಮಶೀತೋಷ್ಣದೊಳಗದ್ದಿ, ನಡು-
ವಗಲು ಕುದಿಸಿ, ಒಣಗಿಸಿ; ನಟ್ಟಿರುಳು ಮೆತ್ತಗೆ
ಹಾಸಿ ಮೈಮರೆಸಿ, ಸಣ್ಣಗೆ ದೀಪ ಜಿನುಮಿನುಗೆ-
ಏನೊ ತೀರದ ಅಥವ ತೋರಲಾರದ ಕುರುಡು
ದಂಡೆಯೊಳಾಟ. ನಡುನೀರ ತಿರುಗಣೆಗೆ ಕನಸು
ಕಾಣುವ ದೋಣಿ, ಮುಂದೆಲ್ಲೊ ಜಲಪಾತದಬ್ಬ-
ರ. ತಳದ ಸೆಳವಿನ ಗುಂಟ ಕರಂಟು, ಇವನೊಬ್ಬ-
ಕಣ್ಣಂಡ ಹಬ್ಬದಲಿ ಇವನಿಗೆಲ್ಲೋ ಮನಸು.
ಇರುಳಿನಲಿ ಬಾನಿಳೆಯ ಬಿಚ್ಚಲಾರದ ಬೆಸುಗೆ
ಹಗಲು ಹೆಚ್ಚಿದ ಹೋಳು, ಮುಚ್ಚಿಕೊಂಡುದು ಹೇಗೆ?

## ಕಣ್ಣಿರುವಷ್ಟು ನೋಟ

ಕಣ್ಣಿರುವಷ್ಟು ನೋಟ, ಕಾಲು ಸೋಲುವ ತನಕ
ಓಟ, ಹೊಟ್ಟೆಯಲಿ ಡೊಂಬರಾಟ. ಮನಕೆ ಬಿರುಕು
ಬಿದ್ದಲ್ಲೆಲ್ಲ ಎಲುವಿನ ತುಂಡು-ಬೇಟ. ಹರಕು
ಚಿಂದಿಗೆ ಮುರುಕು ಕೋಲಿನ ಕೂಡ ಕುಣಿವ ತವಕ.
ಅಸ್ತಿಪಂಜರದೊಳಗೆ ಕುಸ್ತಿ ನಡೆದಿದೆ ಬನ್ನಿ:
ಚಡ್ಡಿಯಿಲ್ಲದೆ ಹೊರಟ ಕಣಕೆ ನಮ್ಮೀ ಗಡಿ,
ಸಡ್ಡು ಹೊಡೆಯುವ ಮೊದಲೆ ಅಡ್ಡ ಬಿದ್ದನೇ? ಬಿಡಿ
ಅಡ್ಡಿಯಿಲ್ಲ, ಗೊಡ್ಡೆಮ್ಮೆ ಹಾಲು ಕುಡಿಯಲು ತನ್ನಿ.
ಯುದ್ಧಕ್ಕೆ ಹೋಗುವೆನೆಂದು ದಿನವು ಒಂಬತ್ತು
ಕೋಳಿಯ ತಿಂದು ಬಿದ್ದುಕೊಂಡನು ನಮ್ಮ ಭೂಪ.
ನೆಲ ಒದ್ದು ನೀರು ಬರಿಸುವೆಯ? ಆ ಪ್ರತಾಪ
ನಿನಗಿಲ್ಲ, ಬರಿಯ ತೂಕದಲಿಲ್ಲ ತಾಕತ್ತು.
ಆಹಾರಕ್ಕೆ ತಕ್ಕ ಅಂಗ ಸಾಧನೆ-ಶಕ್ತಿ
ಬುದ್ಧಿ-ಭಾವದ ಮುತ್ತಿಗವಚಿಕೊಂಡಿದೆ ಶುಕ್ತಿ.

## ಏನಾಗಬೇಕಿಹುದೊ. . . .

ಏನಾಗಬೇಕಿಹುದೊ ಎಲ್ಲ ಆಗಲೆ ಬೇಕು:
ಆವರೆಗು ತೂಗುವದು ಮನದ ತಕ್ಕಡಿ ಪರಡಿ.
ಅದಕಿಲ್ಲ ಕಾಣಿ, ಸಮದಂಡಿಗೆಯ ತೂಕ ಬರೆ
ತೆರಬೇಕು ತಕ್ಕ ಬೆಲೆ. ಪೇಟೆಧಾರಣಿ ಬೇರೆ.

ಕೂಡಿಸುವದು, ಕಳೆದು, ಗುಣಿಸಿ, ಭಾಗಿಸಿ ನೋಡಿ
ತೂಗಿ ಲೆಕ್ಕಾಚಾರ ಹಾಕಿ, ಯಾವುದೊ ಅಂಕಿ
ಪ್ರಶ್ನೆಗುತ್ತರಿಸುವದು, ಶೇಷವೇನೊ ಸೊನ್ನೆ.
ಆದಿಶೇಷನು ಹೊತ್ತ ಪೃಥ್ವಿ ಬರಿ ಕೆಮ್ಮಣ್ಣೆ?

ಅಚ್ಚರಿಯ ಬಚ್ಚಿಟ್ಟು ಹುಡುಕ ಹಚ್ಚಿದೆ ಬಾಳ
ನೀಳ ಪಯಣದ ಹಾದಿ. ಬೆಟ್ಟ ಬಂಡೆಗಳಲ್ಲಿ
ಮೇಣ ಬಸದಿ ವಿಹಾರ. ಮುಳ್ಳು ಕಂಟಿಗಳಲ್ಲಿ

ಹೂವು ಮೊಗ್ಗೆಯ ಭಾರ. ಬಯಲ ಗೋಪುರದಲ್ಲಿ
ತಾರೆ-ಬೆಳಕು-ತುಷಾರ. ಕತ್ತಲೆಗು ಕಣ್ಣುಂಟು.
ಹೊಸೆದು ಹುರಿಗೊಳ್ಳುವದು ಜೀವ ಜೀವದ ನಂಟು.

## ಹಂಸ-ಕ್ಷೀರ

ಬೆಳ್ಳಗಿದ್ದದ್ದೆಲ್ಲ ಹಾಲೆಂದು ಕುಡಿದೆವೋ-
ಹೊಟ್ಟೆ ತೊಳಸುತ್ತಿಹುದು. ಮುಟ್ಟಿದರೆ ಮಾಸುತಿಹ
ಬೆಳ್ಳಕ್ಕಿಯೆಂದು ಬಕದ ಬಾಯಲಿ ಬಿದ್ದೆವೊ-
ಸುಖವಾಯ್ತು. ಬಂದು ಕೂಡಿದವೆಲ್ಲ ಅಷ್ಟಗ್ರಹ.

ಮಂದಗಿನ ಹಾಲು ಕರೆಯುವದನ್ನೆ ತೊರೆದವೋ
ನಮ್ಮ ಹೆಮ್ಮೆಯ ಎಮ್ಮೆ? ಅವಕೆ ಎರಡೇ ಕೋಡು!
ಅಂಗೈದಪ್ಪ ಕೆನೆಯ ಮೊಸರು ತಿಳಿದುಪ್ಪವೋ-
ಅಯ್ಯ ನಮ್ಮಪ್ಪ! ಬಾ ಮುಂಗೈ ಮೂಸಿ ನೋಡು.

ತಪ್ಪು ಹಸುಗಳದಲ್ಲ. ನೀರು ಬೆರೆಸಿದ ಹಾಲು
ನೋಡಲಿಕೆ ಯಂತ್ರವಿದೆ. ಮನುಜನೆದೆ ತಳಪಾಯ
ಭಾವಶುದ್ಧಿಯನಳೆಯಲಾವ ಮಂತ್ರ-ಸವಾಲು?
ಮಾನಸ ಸರೋವರದಿ ಹಂಸ-ಕ್ಷೀರನ್ಯಾಯ.

ಹೆಪ್ಪುಂಡ ಹಾಲು ತುಪ್ಪವಾಗುವದೊಂದು ಕ್ರಮ.
ತಪ್ಪಲಿ, ಒಡೆದ ಹಾಲನು ಕಡೆದು ನೋಡುವ ಶ್ರಮ.

## ಕಾಣಿಕೆ

ಎಣಿಸದಿದ್ದರು ಕಾಲ ಉರುಳುವದು. ಚಿಕ್ಕೆಗಳ
ಗಣಿಸದಿದ್ದರು ಬೆಳಕು ತುಡಿಯುವುದು. ತಂತಾನೆ
ನೆಲದಾಳದಲ್ಲಿ ಹದಗೊಂಡ ಬೀಜದ ಮೊಳಕೆ
ಮಣ್ಣ ಬೀರಿದೇಳುವದು; ಚೈತ್ರ ವೈಶಾಖಗಳ
ಸೂತ್ರವಾಡಿಸಿದಂತೆ ಚಿಗುರುವುದು ಮೋಟುಮರ.

ಹೊಳೆಯ ದಾಟಿದ ಮೇಲೆ ಕೊಳೆಯ ತೊಳೆವವರಾರು?
ಈಜಿದರೆ ಈಜುವದು ಹರಿವ ನೀರಿನ ಎದುರು.
ಮೋಜಲ್ಲ-ಸೋಜಿಗದ ಬದುಕು-ಗಾಜುಗೋಪುರ.
ಸೂಜಿಯ ಮೊನೆಗೆ ದಾರಿಬಿಡು, ದಾರವಾಡುವದು
ಹೂವಿನ ಕಸೂತಿ; ಮಾವು ತಳಿತರೆ ಕೋಗಿಲೆಯ
ಕುಕಿಲ ಸಾರ್ಥಕ. ನೆಲಕುದುರಿ ಬಿದ್ದ ಹಣ್ಣೆಲೆಯ
ಮಣ್ಣು ಗೊಬ್ಬರಮಾಡಿ ತನ್ನೊಳಗೆ ರುಬ್ಬುವದು.
ಹೂವು-ಹಣ್ಣೂ ಗಿಡದ ಎಡೆಬಿಡದ ಕಾಣಿಕೆ.
ಸಾವು-ನೋವೂ ನಮ್ಮ ದಿನದ ಹೊಂದಾಣಿಕೆ.

## ಅರುವತ್ತರೈಸಿರಿ

ಎತ್ತರದ ನಿಲವು; ಮನದಲಿ ನೂರು ನಕ್ಷತ್ರ-
ಗಳ ವಿಲಕ್ಷಣ ಹೊಳವು. ವಿಸ್ತಾರದನುಭವದ
ಸ್ವಸ್ತಿ ಬಿತ್ತರದ ಹಣೆ; ಸುಸ್ಥಿರನೋಟ ಬಲಿದ
ಯೋಧ್ಯವಾಣಿಯ ನಿಷ್ಠೆ. ಕೃತಿ ಮಹೋನ್ನತ ಪಾತ್ರ.
ದೊಡ್ಡ ಮಳೆ ಜಡಿದು, ನೆಲವೆಲ್ಲ ನೀರನು ಕುಡಿದು,
ಹಳ್ಳ ಹೊಳೆ ಭೋರ್ಗರೆದು ಕಡಲ ಕೂಡುವ ರೀತಿ.
ಬೆಳಗಾಗುವೊಳಗೆ ಬೆಳುಗೊಳದಲ್ಲಿ ಆತ್ಮರತಿ
ಗೊಮ್ಮಟನ ಕಂಡರಿಸಿದೊಲು ಜೀವ ಬಲ್ವಿಡಿದು,
ಮೂರ್ತಿಗೊಂಡಿಹುದು ಕರ್ನಾಟ ವಿದ್ಯಾಪೀಠ:
ಕನ್ನಡ ಸರಸ್ವತಿಯ ಕಣ್ಣಾಗಿ; ಭಾರತಿಯ
ಹೃದಯ ವೀಣಾಧ್ವನಿಯ ಶ್ರುತಿಯಾಗಿ, ಸಂಸ್ಕೃತಿಯ
ಜೇನು ಹುಟ್ಟಿಗೆ ವಿಶ್ವಚೇತನದ ಹೂದೋಟ!
ಅರುವತ್ತರೈಸಿರಿಯ ಅರಳು ನಂದಾದೀಪ
ಬೆಳಗಿ ಪ್ರತಿಬಿಂಬಿಸಲಿ ವಿದ್ಯೆಯ ವಿಶ್ವರೂಪ.*

---

* ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿ ಶ್ರೀ ಡಿ.ಸಿ. ಪಾವಟೆಯವರಿಗೆ ಅರುವತ್ತು ತುಂಬಿದಾಗ.

## ವಿದ್ಯಾಭವನ

ಹತ್ತು ನಿಟ್ಟಿನ ಗಾಳಿ-ಬೆಳಕು-ಸವಿ-ಭಾವನೆಗೆ
ಸ್ವಚ್ಛಂದದಲಿ ನೂರು ಕಿಟಕಿ ಬಾಗಿಲು ತೆರೆದು;
ಭವ್ಯ ವಿದ್ಯಾಭವನ ಜ್ಞಾನ-ವಿಜ್ಞಾನ, ಅದು
ಇದು- ಎಂಬುದೆಲ್ಲ ಹದವರಿತಿಲ್ಲಿ ಹುದುವಾಳ್ಗೆ.
ವೀರ ಅಶ್ವಾರೋಹಿ ಚೆನ್ನಮ್ಮ, ನಾಡವರ
ನುಡಿಯೊಡೆಯ ವಿಶ್ವಮಾನವ ಮೂರ್ತಿ ಸರ್ವಜ್ಞ.
ಅದೊ ಐನ್‌ಸ್ಟೀನನೇಕಾಗ್ರಚಿತ್ತ, ಗಣಿತಜ್ಞ
ಭಾಸ್ಕರಾಚಾರ್ಯ, ಲೀಲಾವತಿಯು- ಇಂತಹರ
ನೆನಹು ನನೆಕೊನೆಯೇರಿ ದ್ವಾರಶಿಲ್ಪದಿ ಚಿತ್ತ-
ವರಳುತಿರೆ, ಎತ್ತ ಹೊರಳಿದರು ನೂತನ ಸೃಷ್ಟಿ.
ನವ ಚೇತನಾಸ್ಪಂದ ರಸಭಾವ ಸಂತುಷ್ಟಿ.
ದೂರ ದೃಷ್ಟಿಗೆ ಹೋಳೆದಪಾರ ದರ್ಶನ ಚಿತ್ರ
ಮೂಡಿ ಮೈದಾಳಿಹುದು ಹಿರಿಬಾಳ ಹೊಂಗನಸು.
'ಸರ್ವಭಾಷಾ ಸರಸ್ವತಿ'ಯೆ ಆವಿರ್ಭವಿಸು.*

## ವಿದ್ಯಾಭವನದ ಗೋಪುರದಿಂದ

ಅತ್ತ ಬೆಳುವೊಲ, ಇತ್ತ ಮಲೆನಾಡ ಜರಿ ಸೆರಗು.
ಸುತ್ತು ಪರ್ವತ ನೀಲಿ. ಗುಡ್ಡ ಕೊಳ್ಳವ ಇಳಿದು-
ಏರಿ ಚಿಗುರಿದ ಹಸಿರು. ಕೆಲದಿ ಕನ್ನಡಿ ಹಿಡಿದು
ನಿಂತ ಕೆಲಗೇರಿ ಕೆರೆ. ಗೆರೆ ಕೊರೆದು ಬರುವ ಜುಗು-
ಜುಗು ರೈಲು. ತಗ್ಗು ದಿನ್ನೆಯನೇರಿ ಯಾವುದೋ
ಹಿಗ್ಗಿನಲಿ ನುಗ್ಗಿ ಬರುತಿವೆ ಬಸ್ಸು. ನಿತ್ಯದು-
ದ್ಯೋಗದಲಿ ಅತ್ತ ಹೊರಳಿದೆ ನಗರ. ನೆತ್ತಿಯಲಿ
ಹತ್ತು ದಿಕ್ಕಿನ ಮೋಡ; ಏರೇರಿ ಬಂದವದೊ!
ಸಂಜೆಸೂರ್ಯನ ಹೊನ್ನ ಕಿರಣಗಳ ಸ್ಪಂಜಿನೊಲು
ಹೀರಿ ಹಿಂಜಿದ ಕಣಿವೆ-ಕಂದರದ ಸೌಂದರ್ಯ.
ಕೈ ಎತ್ತಿದರೆ ನಿಲುಕುವಾಗಸದ ಔದಾರ್ಯ.
ಇರುಳು ದೀಪಾವಳಿಯ ಹೆಜ್ಜೆಯಲಿ ಬಂದವೊಲು
ಸಾಲು ವಿದ್ಯುದ್ದೀಪ. ಗೋಪುರದ ತುತ್ತತುದಿ-
ಗಡಿಯಾರ ನುಡಿಯುತಿದೆ; 'ಕಾಲೋऽಹಿ ನಿರವಧಿಃ'.

---

* ಕರ್ನಾಟಕ ವಿಶ್ವವಿದ್ಯಾಲಯದ 'ವಿದ್ಯಾಭವನ'ವನ್ನು ಕುರಿತು.

## ಬಿಸಮಿಲ್ಲಾರ ಶಹನಾಯಿವಾದನ ಕೇಳಿ

ಒಂದೆ ಉಸಿರಿಗೆ ಹಸಿರ ಹೊಮ್ಮಿಸುವ; ನೂರು ಬಗೆ
ಭಾವ ಕುಸುಮವನೆತ್ತಿ ಗಾಳಿಸುಳಿಯಲಿ ಹೀಗೆ
ನರುಗಂಪ ತೇಲಿಸುವ; ಹಂಬಲದ ಸವಿದನಿಗೆ
ತುಂಬಿ ಆಲಿಸುವ; ಮನಸಿನ ಮಧ್ಯಬಿಂದುವಿಗೆ
ಕನಸು-ಕಾಮನಬಿಲ್ಲು ವರ್ತುಳವ ರಚಿಸಿ, ನೆಲ-
ಮುಗಿಲನೊಂದು ಸಲ ಬಂಧಿಸಿ ಜೀವ ಸ್ಪಂದಿಸುವ;
ಮೋಡದೊಡಲಿಗೆ ಮಿಂಚು ಸಂಚರಿಸಿ ಹನಿಗರೆವ
ರಾಗ ಲಹರಿಯ ತೊರೆಗಳೋಡಿ ತಬ್ಬಿವೆ ಕಡಲ.
ಕೋಟಿ ಮೈಲಂತರದ ನೀಹಾರಿಕೆಯ ನಾಡಿ-
ಮಿಡಿತ ತಟ್ಟಿತು ಕಿವಿಗೆ; ನಾದದ ಕೂದಲೆಳೆಯಲಿ
ಪೃಥ್ವಿತೂಗಿರೆ, ಸೂರ್ಯಚಂದ್ರರಿಗು ಜೋಕಾಲಿ.
ಪಾತಾಳಗವಿಗೆ ತೆರೆದವು ನೂರು ಬೆಳಕಿಂಡಿ.
ಹೊಕ್ಕಳ ಹುರಿಯ ಕತ್ತರಿಸಿ ಮುಗಿಯೆ ಶಹನಾಯಿ
ಅಗಸದ ಚಿಪ್ಪೊಡೆದು ಜೀವ ತೆರೆಯಿತು ಬಾಯಿ.

## ಶತಾಯುಷಿ ವಿಶ್ವೇಶ್ವರಯ್ಯನವರು

ಘನತೆ-ಗೌರವ-ಸಮತೆಗಿಷ್ಟಗಲ ತೆರೆದ ಕಿವಿ.
ಕ್ಷಿತಿಜದಂಚಿಗೆ ತಾಗಿ ಆಚೆ ಹೊಳೆಯುವ ದೃಷ್ಟಿ.
ಯೋಜನೆಯ ಮೇಜು ಹಣೆ, ತುಟಿ-ವಿನಯ-ಸಂತುಷ್ಟಿ.
ನೇರ ಬಾಳಿದ ಮೂಗು, ದುಡಿಮೆ-ದೀಕ್ಷಾ-ತವಸಿ.
ಶುಭ್ರ ಜರಿಪೇಟ: ಮೇಧಾಕಿರೀಟ; ಶಾಂತರಸ.
ಓರಣಕೆ ತೋರಣವಕಟ್ಟಿದುಡುತೊಡುಗೆ. ನಡಿಗೆ-
ನೂರು ಸಂವತ್ಸರದ ಕೊಡುಗೆ; ಕನ್ನಡ ಗುಡಿಗೆ
ಚಂದನದ ತೇರು, ಕೋಲಾರ-ಚಿನ್ನದ ಕಳಸ.
ಸಂಕಲ್ಪ ಮಾತ್ರದಲಿ ಶತಮಾನಗಳ ಕನಸ
ಕಡೆದು ನಿಲಿಸುವ ಶಿಲ್ಪಿ; ಯಂತ್ರ-ಗಡಗಡ-ಗಾಲಿ
ಉಕ್ಕು-ಕಬ್ಬಿಣ-ಸೊಕ್ಕು, ವಿದ್ಯುಚ್ಛಕ್ತಿ ಮೈಲಿ!
ವೃಂದಾವನದಿ ಮತ್ತೆ ಜೀವ ಪುಟಿಯುವ ರಾಸ.
ಅಜ್ಜನದ್ಭುತ ಕಥೆಗೆ ಮೊಮ್ಮಗನ ಮೈನವಿರು
ಉಜ್ಜು ಭಾರತವಜ್ರ ಜಂಗುತಿಂದವರಿವರು.

## ಉತ್ತಂಗಿಯವರನ್ನು ನೆನೆದು

ಉತ್ತಂಗಿ! ಜೀವನದ ಸತ್ವದಿಂದೆತ್ತರಕೆ
ಬೆಳೆದು ಬಾಗಿದ ವೃಕ್ಷ: ಎಲ್ಲ ಋತುಮಾನಕ್ಕು
ಎದೆಗೊಟ್ಟು, ಎಂಥ ಕಾಲಕು ಚಿಗುರುನಗೆ ನಕ್ಕು
ಹೂಗೊಂಚಲವ ಹಿಡಿದು; ಎಲೆಯ ಮರೆಗಿವೆ ಹರಕೆ
ಹೊತ್ತ ಹಣ್ಣುಗಳೆಷ್ಟೊ [ಇಳಿಸಿಕೊಳ್ಳುವರಾರು?]
ಮನೆಯಿಂದ ಮನೆಗೆ ಸರ್ವಜ್ಞಮೂರ್ತಿಯ ನಿಲವ
ಕಂಡರಿಸಿ, ಪರ್ವಕಾಲದ ತಿರುಳುಗನ್ನಡದ
ತಿರುಕನಾಗಿಯೆ ಹೊರಟ ಮಹದಾನಿ. ಉತ್ತಮರು
ಸತ್ತರೆನಬೇಡ; ಇನ್ನಷ್ಟು ಹತ್ತಿರ ಬಂದು
ಭಾವದೊಡಗೂಡುವರು; ತಂಪು ಬೆಳಕಾಗುವರು.
ತನ್ನ ನೋವನು ತೋರಗೊಡದಂತೆ ದುಡಿದುಡಿದು
ಬೆಳ್ದಸವನಾಂತ ತಲೆ; ಬಾಗಿ ಮೆಲ್ಲನೆ ನಡೆದು
ನೆಲವ ದಿಟ್ಟಿಸಿ ನಿಧಿಯ ತೋಡಿದರು ಉತ್ತಂಗಿ
ಕನ್ನಡದ ಭಕ್ತಿಯಲಿ ಮುಕ್ತಿಪಡೆದಿಹ ಭಂಗಿ.

## ನಮಿಸು: ಗೋವಿಂದ ಪೈ

ಕಣ್ಮುಟ್ಟ ಕಂಡಿಲ್ಲ; ಆದರು ಮನದೊಳೆಂದೊ
ಮೂರ್ತಿಗೊಂಡಿದೆ ಚಿತ್ರ. ಎಲೆ-ಹೂವ ಕಂಡರೂ
ಮೂಲ ಆಧಾರವನು ಕಾಂಬ ಕಣ್ಣಿನ ಹೊಳಪು.
ಎಲ್ಲವನು ಎಣಿಸಿಟ್ಟ ಬೆಳ್ಳಿಯ ತಿಜೋರಿ. ಆಗೊ
ನೆನಹು ಬೀಗದ ಕೈ, ನಮಿಸು: ಗೋವಿಂದ ಪೈ.
ಮಾನವೀಯತೆಗೆ ಹಂದರ ಹಾಕಿ ನಿಂತವನೆ
ಹುಬ್ಬು; ಅಂತಃಕರಣದುಬ್ಬು; ತಾಯ ಸೇವೆಗೆ
ಭಾಷೆಕೊಟ್ಟು ಹೊತ್ತರು ಮೀಸೆ, ಮುಡಿಪಿದರು ಮೈ.
ಗಿಳಿವಿಂಡಿಗೇಕೆ ಆದಿಪ್ರಾಸ? ಹಾರ ಬಿಡು.
ತೆಂಕನಾಡಿನ ಕಡಲತಡಿ ತೆರೆಯ ತೇರಿನಲಿ
ಕ್ರಿಸ್ತ ಬುದ್ಧರು ಬಂದರೋಲಾಡು. ಸಿಂಪಿನಲಿ
ಸುನೀತಗಳ ಮುತ್ತು. ಶಂಖದಲಿ ನಾಡ ಹಾಡು.
ದಿಗ್ಗಜದ ಭಾರವನು ಹೊರಲಿಕೆಲ್ಲಿದೆ ಹೆಗಲು?
ಎಲ್ಲಿದೆ, ಅಗ್ಗದರದಂಗಡಿಯೊಳಿಂಥ ಮಾಲು?

## ದ.ಬಾ.ಕು. ಸ್ಮೃತಿ

ದ.ಬಾ.ಕು. ಮೂರಕ್ಷರವೆ ಸಾಕು: ದಣಿವುದೋರದ
ಆ ಮುಖದ ಮುಗುಳುನಗೆ, ಸ್ನೇಹ ತುಂಬಿದ ಜೀಕು.
ಕಣ್ಣಕಾಂತಿಗೆ ಏಕೆ ಬೇರೆ ಬಣ್ಣದ ಮಾತು?
ಇರುವ ಕೊರಗೆಲ್ಲವನು ಸೋಸಿ ಕರಗಿಸಿ ತೆಗೆದ
ಮನಸಿನುಲ್ಲಾಸ; ಮಣಿದು ಬದುಕದ, ಇದ್ದುದಿನಿ-
ದಾಗಿಸುವ ಜೀವಹದ. ಓ ಅವಕಂಡ ಶತಪತ್ರ!
ನಾವು ಕಂಡೆವೆ ಇವನ ಹೃದಯ ರೇಖಾಚಿತ್ರ?
ಏನಿದು ವಿಚಿತ್ರ! ಕುಗ್ಗಿ-ಹಿಗ್ಗಿರುವ ಲೇಖನಿ
ಜಗ್ಗಿ ಕಸಿದವರಾರು? ಆರಿಲ್ಲ ಬರೆದ ಮಸಿ,
ತೀರಿಲ್ಲ ಬಿಳಿ ಹಾಳೆ, ಮೀರಿಲ್ಲ ಈ ಬಾಳ
ನಟ್ಟು ನಡುರಾತ್ರಿ, ಎಲ್ಲ ಕತ್ತಲೆಯೊಳಗೆ ತಳ
ಕಂಡು, ಕಣ್ಮುಚ್ಚಿ ಕಣ್ಣು ತೆರೆದಂತೆ ತೋರಿಸಿ
ಬತ್ತಲೆ ಬಯಲು; ಮತ್ತೆ ಸಾಗಿವೆ ಹೀಗೆ ಹಗಲು-
ಉತ್ತರವ ಹುಡುಕುವ ನೂರು ಪ್ರಶ್ನೆಗಳ ಸಾಲು.

## ಹಳಕಟ್ಟಿಯವರು

ಯಾವುದೋ ಅಮೃತಗಳಿಗೆ, ನಿಮ್ಮ ದೃಷ್ಟಿಗೆ ಬಿತ್ತು
ಹೂತಿಟ್ಟ ಹೊನ್ನಗಣಿ! ತೋಡಿದಿರಿ ಹಗಲಿರುಳು
ಮೈಮರೆತು; ಹೊರದೆಗೆದು ಹೇರಿದಿರಿ ಬಂಡಿ ಬಂಡಿ
ಚಿನ್ನದ ಅದಿರು; ಹಿಂಗಿತು ಹಸಿವು ನೀರಡಿಕೆ.
ತಾಳೆಗರಿ ಗರಿಯೊಡೆದು ಮರಮರವೇರಿ ಕುಕಿಲಿ
ಬೆಳಕನೆಚ್ಚರಿಸಿದವು; ನಡುವೆ ಮೂಡಿತು ಶರಣ-
ರನುಭಾವ ಮಂಟಪದ ಮಾಣಿಕ್ಯದೀಪ್ತಿ, ನಡೆ-
ನುಡಿಯ ಜ್ಯೋತಿರ್ಲಿಂಗ! 'ತನ್ನರಿವೆ ಗುರು' ಎಂಬ
ವಚನ ಕೊಟ್ಟಿರಿ. ನಿಮಗೋ? ಶೂನ್ಯ-ಸಂಪಾದನೆ.
ರೂಮಾಲದ ಕಟ್ಟು ಬಿಚ್ಚಿಲ್ಲ. ತೆಗೆದಿಲ್ಲ ಇಟ್ಟ
ಕನ್ನಡಕ. ಉಡುಗಿಲ್ಲ ಉಟ್ಟ ಧೋತರ ಮಡಿಯು.
ಮೆಲುದನಿ-ಮಾತು ಭಕುತಿ ಬಳ್ಳಿಗೆ ಬಿಟ್ಟ ಕುಡಿಯು.
ಗೋಳ-ಗುಮ್ಮಟ ತಾನೆ ತಲೆ ಬಾಗಿಸಿತು ನಿಮಗೆ.
ಏಳು ಸಲ ಕರೆದರೂ ಎಚ್ಚರಾಗದು ನಮಗೆ.

## ಮುಕ್ಕಿ ಮೊಗೆಯುವೆ ಕಾಲ!

೧

ಮುಕ್ಕಿಮೊಗೆಯುವೆ ಕಾಲ! ಮೊಂಡಗೊಳಿಸುವೆ ಸಿಂಹ
ಪಂಜಗಳ; ನಿನ್ನಿಂದ ತನ್ನ ಮಕ್ಕಳ ತಾನೆ
ನುಂಗುತಿಹುದೀ ಭೂಮಿ. ಉಗ್ರವ್ಯಾಘ್ರನ ಹರಿತ
ಹಲ್ಲು ಕಿತ್ತೆಸೆವೆ. ಪುರಾತನ ಪಕ್ಷಿ ಫೀನಿಕ್ಸ್
ತನ್ನ ರಕ್ತದಿ ಬೂದಿ. ನಿನ್ನ ಪುಟಿಗಾಲಿನಲಿ
ಹರ್ಷ-ದುಃಖದ ಋತು. ನೀನೊ, ನಿನ್ನೀ ಜಗವೊ
ಬೇಕಾದ್ದು ಮಾಡು. ಬಾಡುವುದೆಲ್ಲ ಮಾಧುರ್ಯ.
ಆದರೊಂದನು ಮಾತ್ರ ಮಾಡದಿರು, ನಿನಗಾಣೆ.
ಚಣದ ಚಾಣಗಳಿಂದ ಕೆಡಿಸದಿರು ಕುಡಿ ಹುಬ್ಬು,
ಹಳೆಯ ಲೇಖನಿಗೆರೆಯ ಹಣೆಗೆ ಮೂಡಿಸಬೇಡ.
ಬಿಟ್ಟುಬಿಡು ಎನಿತು ಕೊಂಕಿಸದಂತೆ ಇನಿಯಳನು
ಮುಂಬರುವ ಜನಕಿದೇ ಚೆಲುವು ಮಾದರಿಯಾಗಿ.
    ನಿನ್ನ ಕೈ ತೋರಿಸದೆ ಬಿಡುವೆಯ ಮುದಿಯ, ಇರಲಿ
    ನನ್ನ ಕವಿತೆಯೊಳಾಕೆ ಚಿರಯುವತಿ, ನೆನಪಿರಲಿ.*

## ಅಮೃತ ಶಿಲೆಯಲ್ಲ

ಅಮೃತಶಿಲೆಯಲ್ಲ, ಅರಸರಟ್ಟಹಾಸದ ಸ್ವರ್ಣ-
ಸ್ಮಾರಕವಲ್ಲ- ಈ ಕವನ ಭವನದ ಎದುರು;
ದಿನ ದಿನಕೆ ಮಾಸಿ ಬುರುಸುಗಟ್ಟುವದು ಕಲ್ಲಿನ
ಪ್ರತಿಮೆ; ನುಡಿಯೊಳಗೊ ಮತ್ತಿನಿತು ಹೊಳೆದು ಹೊಡಕರಿಸಿ
ನಿಲ್ಲುವೆ ನೀನು; ಕಾಳಗದಲೆಲ್ಲ ವಿಗ್ರಹ ಹಾಳು.
ಗಲಭೆಯಲಿ ಭಾರಿ ಕಟ್ಟಡವೆನಿತೊ ಬುಡಮೇಲು.
ರಣಚಂಡಿ ಕತ್ತಿಕಡಿಯದು, ಯುದ್ಧ ಸುಡಲರಿದು
ನಿನ್ನ ನೆನಪಿನ ಕವನ ಜೀವಂತ ದಾಖಲೆಯು.
ಮೃತ್ಯುವನು, ಮಹಾವಿಸ್ಮೃತಿಯನೂ ದಾಟಿರುವೆ,
ನಿನ್ನ ಸ್ತುತಿಗಿಂಬುಂಟು ಇನ್ನೂ, ಮುಂದಿನೆಲ್ಲ
ತಲೆಮಾರುಗಳ ಜನದ ಕಣ್ಣಿನಲಿ, ಜಗವೆಲ್ಲ
ಜೀರ್ಣವಾಗುತ ಕೊನೆಯ ಗತಿಯ ಮುಟ್ಟುವವರೆಗು.

---

* ಷೇಕ್ಸ್‌ಪಿಯರನ ಸಾನೆಟ್ ನಂ. ೧೯.

ಮತ್ತುದಿಸಿ ದೇವನೆಡೆ ಕೊನೆಯ ತೀರ್ಪಿನವರೆಗು
ಇಲ್ಲಿ ಬದುಕಿರುವೆ. ಪ್ರಣಯಿಗಳ ಕಣ್ಣ ಬೆಳಕು.*

## ಒಡಲ ನರಕದ ಭಾಂಡ

ಒಡಲ ನರಕದ ಭಾಂಡ ಕುದಿಸಿ ಭಟ್ಟಿಯ ತೆಗೆದ
ಮೋಹಿನಿಯ ಕಣ್ಣೀರ ಗುಟುಕನೆಷ್ಟೋ ಕುಡಿದೆ.
ಭರವಸೆಗೆ ಅಂಜಿಕೆಯ, ಶಂಕೆಗಾಸೆಯ ಸವರಿ
ಕಳಕೊಂಡೆ ಗೆದ್ದೆನೆನ್ನುತ ಕೈಗೆ ಬಂದುದನು.
ನಾ ಸುದೈವಿಯು ಎಂದು ಹಿಗ್ಗಿ ಹಾರೈಸಿರಲು
ಯಾವ ಅಪರಾಧಕೀ ಶಿಕ್ಷೆ? ಎಂಥ ಹತಭಾಗ್ಯ!
ಇರುವ ಕಣ್ಣನು ಕಿತ್ತು ಹತ್ತಿಸಿದಂತೆ ಮತ್ತೆ
ಈ ಜ್ವರದ ಸನ್ನಿಪಾತದ ಹುಚ್ಚು ದಿಗ್ಭ್ರಮಣೆ.
ಅನಿಷ್ಟದುಪಚಾರ ಈಗ ಹೊಳೆಯಿತು ಸ್ಪಷ್ಟ.
ಕೇಡಿನಿಂದೊಳಿತು ಮತ್ತಿನಿತು ಲೇಸೆನಿಸುವದು.
ಮುರಿದ ಒಲವಿನ ಮನೆಯ ಬಿಚ್ಚಿ ಕಟ್ಟಲು ಹೊಸತು
ಮೊದಲಿಗಿಂತಲು ಚೆಂದ, ಗಟ್ಟಿ, ಗೌರವ ಘನತೆ
ಆಕ್ಷೇಪಣೆಯ ಹೊತ್ತು ಮರಳಿದೆನು ಸಾಕಷ್ಟು.
ಕಾಯಿಲೆಯ ನಷ್ಟಕೊದಗಿದ ಲಾಭ ಮೂರುಪಟ್ಟು.+

## ನನಗೆ ನನ್ನವಳೆ

ನನಗೆ ನನ್ನವಳೆ ಹೆಂಡತಿಯಿರುವಳು
ಉಳಿದರ ಜೊತೆ ನಾ ಕೂಡಿಲ್ಲ;
ಯಾರೂ ಅನ್ನರು "ಜಾರೆಯ ಗಂಡ"
ಬೇರೆ ಮಿಂಡರದು ಭಯವಿಲ್ಲ.

ಖರ್ಚಿಗಿಹುದು ಒಂದಾಣೆ ನನ್ನ ಬಳಿ
ಯಾರುಪಕಾರವು ಬೇಕಿಲ್ಲ;
ಕೈಗಡ ಕೊಡುವದಕೇನೂ ಇಲ್ಲ,
ಮಂದಿಗೆ ಸಾಲವ ಬೇಡಿಲ್ಲ.

* ಷೇಕ್ಸ್‌ಪಿಯರನ ಸಾನೆಟ್ ನಂ. ೫೫

+ ಷೇಕ್ಸ್‌ಪಿಯರನ ಸಾನೆಟ್ ನಂ. ೧೧೯.

ಯಾರ ಮೇಲು ನನ್ನೊಡೆತನವಿಲ್ಲ,
ಯಾರ ಗುಲಾಮನು ನಾನಲ್ಲ:
ಹದನವಾದಗಲ ಕತ್ತಿ ಕೈಯೊಳಿದೆ
ಯಾರಿಗೆಂದು ನಾ ಬಾಗಿಲ್ಲ.

ಉಲ್ಲಾಸದಿ ನಾ ಸ್ವತಂತ್ರನಿರುವೆ
ಯಾರಿಗು ದುಃಖವ ಪಟ್ಟಿಲ್ಲ.
ಯಾರೂ ನನ್ನಯ ಕಾಳಜಿಮಾಡರು-
ಯಾರ ಲಕ್ಷ್ಯವೂ ನನಗಿಲ್ಲ.*

## ಇರುವ ಅಲ್ಪದರಲ್ಲಿ ತೃಪ್ತಿಯು

ಇರುವ ಅಲ್ಪದರಲ್ಲಿ ತೃಪ್ತಿಯು, ಅಧಿಕವಿದ್ದರೆ ಮೋದವು.
ಚಿಂತೆ ಕಾಳಜಿಯಿಂದ ಕೂಡಿಡುವಂತೆ ಬಂದರೆ ಸಮಯವು
ನುಸುಳಿ ನನ್ನೆಡೆ ಬರುವ ಹೊತ್ತಿಗೆ ಅವಕೆ ರುಚಿ ತೋರಿಸುವೆನು:
ಬುಂಡೆಯಲಿ ನೊರೆ ಹೆಂಡವೀಯುತೆ ಹಳೆಯ ಹಳ್ಳಿಯ ಹಾಡನು.

ಪೀಡಿಸುವ ಯೋಚನೆಯ ಮೊಳಕೈ ಪರಚುವೆನು ಒಮ್ಮೊಮ್ಮೆಗೆ;
ಆದರೀ ಮಾನವನು ಯೋಧನು, ಜೀವನವೆ ಹೋರಾಟವು.
ನನ್ನ ಉಲ್ಲಸ ನಡೆ, ವಿನೋದವೆ ನನ್ನ ಚೀಲದ ನಾಣ್ಯವು
ನನ್ನ ಬಿಡುಗಡೆಯೆನ್ನ ಒಡೆತನ,- ಮುಟ್ಟಲಾರಿಗೆ ಧೈರ್ಯವು?

ತೊಂದರೆಯೆ ಹನ್ನೆರಡು ತಿಂಗಳು ನನ್ನ ಭಾಗಕೆ ಬಂದರೆ
ಒಂದಿರುಳು ಒಳಿತಾದ ಗೆಳೆತನ ಬೆಸಿಗೆ ಹಾಕುವದೆಲ್ಲಕೆ:
ಒಮ್ಮೆ ಯಾತ್ರೆಯು ಮುಗಿದು ಹೋಗುವ ಸಂತಸದಿ ನಾವಿರುತಿರೆ
ಯಾವನಾದರು ಚಿಂತೆ ಪಡುವನೆ ಗತಿಸಿ ಹೋಗಿಹ ದಾರಿಗೆ?

ಕುರುಡು ದೈವವು ಬರಲಿ ಎಡವುತ ಹಾದಿಯಲಿ ತನ್ನಷ್ಟಕೆ;
ಒಳಿತು ಮಾಡಲಿ, ಕೇಡು ಬಗೆಯಲಿ, ಅದರುಸಾಬರಿ ಯಾರಿಗೆ?
ಸುಖವೆ ಬರಲಿ, ಕಷ್ಟ ಬರಲಿ, ಬರಲಿ ಇಷ್ಟಾನಿಷ್ಟವು;
ಬರುವುದೆಲ್ಲಾ ಬಂದು ಹೋಗಲಿ ಯಾರಿಗಿದರೊಳು ನಷ್ಟವು!+

---

* ರಾಬರ್ಟ್ ಬರ್ನ್ಸ್ : 'I have a wife of my own'.

+ ರಾಬರ್ಟ್ ಬರ್ನ್ಸ್ : 'Contented with little'.

## ಆರಿದ ಕುಲುಮೆ

೧

ಈಗ ಅಂತರ ಬಿಟ್ಟು ಮಲಗುವರು, ಇಬ್ಬರದು ಹಾಸಿಗೆ ಬೇರೆ;
ಅವನ ಕೈಯೊಳಗೊಂದು ಗ್ರಂಥ, ಬಹಳ ಹೊತ್ತಿನವರೆಗು ರಾತ್ರಿಯಲಿ ದೀಪ;
ಬಾಲ್ಯದ ಕನಸು ಕಾಣುವ ಮುಗ್ಧ ಹುಡಿಗೆಯಂತಿವಳ ಮುಖ ಚಹರೆ,
ಅಲ್ಲಿ ಗಂಡಸರೆಂಬ ಸುಳಿವಿಲ್ಲ - ಯಾವುದೋ ಒಂದು ಹೊಸ ಘಟನೆ ಸಂಭವಿಪ
ಸಮಯ ಕಾದಿರುವಂತೆ: ಇವ ತೆರೆದ ಪುಸ್ತಕದ ಪುಟವ ತಿರುವಿಲ್ಲ.
ಮೇಲೆ ಆಡುವ ನೆರಳಿನಲ್ಲಿ ಆಕೆಯ ಕಣ್ಣು; ಬೇರೆ ಸದ್ದಿಲ್ಲ.

೨

ತೆರೆಗೆ ತೂರುತ ಬಂದ ಒಡೆದ ಹಡಗಿನ ಚೂರು: ಹೊಸತರಲಿ ಮಸೆದ ರಾಗೋದ್ವೇಗ
ಈಗೆನಿತು ಹಾಯಾಗಿಹರು. ಒಬ್ಬರೊಬ್ಬರನಿಷ್ಟು ಮುಟ್ಟಲಾರರು ಕೂಡ,
ಮುಟ್ಟಿದರು ಏನೊ ಪ್ರಾಯಶ್ಚಿತ್ತ, ಯಾವುದೋ ತಪ್ಪನೊಪ್ಪಿದ ಹಾಗೆ; ಆಗ
ಒಂದೆ ತುಸು ಭಾವ ಸಂವೇದ- ಅಥವ ಇನ್ನೂ ಗಾಢ;
ವೀತರಾಗ ಭಾವಕೋಲೈಸಿ ನಿಂತವರು; ಇಡಿಯ ಜೀವನ ತೇದು
ಇದಕಾಗಿ ಹಮ್ಮಿ ಹದಗೊಂಡಿರುವ ಬದುಕು, ಎಲ್ಲ ಮದವಳಿದು.

೩

ಅಗಲುವರು ಅಪರಿಚಿತರಂತೆಯೆ, ಹಾಗೆಯೇ ಹತ್ತಿರಕೆ ಬಂದು ಕೂಡುವರು;
ನಡುವೆ ನಿಡಿದಾಗಿರುವ ಮೌನ ಇಬ್ಬರನು ಎರಡೂ ತುದಿಗೆ ಹಿಡಿದು-
ಕೊಂಡಿಹ ದಾರ; ಸುತ್ತಿ ಬಿಗಿವುದಕಲ್ಲ. ಕಾಲವೂ ಕೂಡ ನವುರು-
ಗರಿಯಂತಿವರ ಮೃದುವಾಗಿ ಸೋಕಿಹುದು. ಮುದುಕರಾದುದು
ಅವರು ಬಲ್ಲರೆ, ಈರ್ವರೂ ಈ ನನ್ನ ಹಡೆದು ಹೊರೆದವರು?
ಯಾರ ರಾಗದ ಕುಲಿಮೆಯೆನ್ನ ಹೊರಹೊಮ್ಮಿಸಿತೊ, ಅದು ಆರಿ ತಣ್ಣಗಿಹುದು?*

---

* ಎಲಿಜಾಬೆಥ್ ಜೆನ್ನಿಂಗ್ಸ್ - 'One Flesh'

## ಯಾರವನು?

ಯಾರವನು ಒಬ್ಬೊಂಟಿ ಎಚ್ಚರಿರುವವನು
ಮಲಗಿ ನಿದ್ರಿಸುತಿರುವ ಈ ಪೃಥ್ವಿಯಲ್ಲಿ?
ನಿಶ್ಶಬ್ದ ಎಲೆಗಳಲಿ ತೂಕಡಿಪ ಗಾಳಿಯಲ್ಲಿ?
ಮೌನ ಮಲಗಿದೆ ಹಕ್ಕಿಗೂಡಿನಲಿ
ಹೂವು ಮೊಗ್ಗುಗಳೆದೆಯ ಗುಪ್ತಕೇಂದ್ರದಲಿ?

ಯಾರವನು ಏಕಾಕಿ ಎಚ್ಚರಿರುವವನು?
ಇರುಳಿನೆದೆಯನು ತುಡಿಯುತಿರುವ ತಾರಾಗಣದಿ
ನನ್ನ ಇರವಿನ ನೋವಿನಾಳದಲ್ಲಿ
ಯಾರವನು ಒಬ್ಬೊಂಟಿ ಎಚ್ಚರಿರುವವನು?*

## ಮೋಡಗಳು ನಾವು

ಬಾನು ತನ್ನನವರತ ನೀಲಿಮೆಯ ದಿಟ್ಟಿಸುತ
ಕನಸುಗಳ ಕಾಣುತಿಹುದು;
ಮೋಡಗಳು ನಾವದರ ವಿಪರೀತ ಹುಚ್ಚುಗಳು
ನಮಗಿಲ್ಲ ಮನೆಯಾವುದೂ.

ನಿತ್ಯತೆಯ ಮುಕುಟದಲಿ ನಕ್ಷತ್ರ ಹೊಳೆಯುತಿವೆ
ಸ್ಥಿರ ಲಿಖಿತ ರೂಪವಿಹುದು;
ನಮ್ಮದೋ ಬರಿ ಸೀಸಕಡ್ಡಿ ಬರೆದಂತಿಹುದು-
ಮರು ಚಣದಿ ಅಳಿಸಬಹುದು.

ವಾಯುರಂಗದಿ ಬಂದು ಮದ್ದಲೆಯ ಬಡಿಯುವರು
ನಗೆ ಮಿಂಚನೆಸೆವ ಪಾತ್ರ,
ಅಲ್ಲದೆಯೆ ನಮ್ಮ ನಗೆ ಮಳೆ ಸುರಿಸುವದು ಸತ್ಯ
ಹುಡುಗಾಟವಲ್ಲ ಗುಡುಗು.

---

* ರವೀಂದ್ರರ 'Crossing': 15

ಈಗಲೂ ಪ್ರತಿಫಲಕೆ ಕಾಲಪುರುಷನ ಕೂಡ
ಹಕ್ಕು ಸಾಧಿಸುತಿಲ್ಲ ನಾವು.
ಜೀವ ತುಂಬಿದ ಉಸಿರೆ ಊದಿಬಿಡುವದು ದೂರ
ಹೆಸರೊಂದನೀವ ಮೊದಲು.*

## ಮೋಡ ಉಸುರಿತು. . . . .

ಮೋಡ ಉಸುರಿತು ನನಗೆ; "ನಾಶ ಹೊಂದುವೆನು".
ಇರುಳು ನುಡಿಯಿತು: "ನಾನು ಜಿಗಿವೆನರುಣೋದಯದ
ಅಗ್ನಿಕುಂಡದೊಳು".
"ಅವನ ಹೆಜ್ಜೆಯ ಗುರುತಿನಂತೆ ಮೌನದಲಿರುವೆ"
ಒಡನುಡಿಯಿತಿಂದು ನೋವು.
ನನ್ನ ಬಾಳೆನಗೆ ಹೇಳಿತು: "ಮಾನವತೆಯಲ್ಲಿ ಕರಗುವೆನು"
"ನನ್ನ ಬೆಳಕುಗಳೆಲ್ಲ ನಿನ್ನ ಭಾವನೆಗಳನು
ಚಣ ಚಣಕು ಮುದ್ರಿಸುವವು"
ನುಡಿಗೊಟ್ಟಿತಿಂತು ಇಳೆಯು.
ಪ್ರೇಮವೆಂದಿತು: "ದಿನಗಳುರುಳುವವು, ಆದರೂ,
ನಿನಗಾಗಿ ನಾನಂತು ಕಾದೆ ಕಾಯುವೆನು."
ಸಾವು ಹೇಳಿತು: "ನಿನ್ನ ಬಾಳದೋಣಿಯ ನಾನು
ಕಡಲಾಚೆ ದಾಟಿಸುವೆನು".+

## ನೆರಳು-ಬೆಳಕು

ನಿನ್ನ ದೀಪವ ಬಾನಿನಲ್ಲಿ ನೀ ಹಿಡಿದಾಗ
ಬೆಳಕು ಬೀಳುವುದೆನ್ನ ಮೊಗದ ಮೇಲೆ
ಅದರ ನೆರಳಾಡುವದು ನಿನ್ನಮೇಲೆ.

---

* ರವೀಂದ್ರರ 'Lover's Gift': 46
+ ರವೀಂದ್ರರ 'Fruit-Gathering': LIV

ನಿನ್ನ ಹೃದಯದಿ ನಾನು ಪ್ರೇಮ ದೀಪವ ಹಿಡಿಯೆ
ಅದರ ಬೆಳಕಾಗುವದು ನಿನ್ನ ಮೇಲೆ
ನಾನು ನಿಂತೆನು ಹಿಂದೆ ನೆರಳಿನಲ್ಲಿ.*

## ನನ್ನ ಜೀವನದಿಂದ. . . . .

ಜನಕೆ ಪೂಜಿಸಲೆಂದು ನಿನ್ನ ಪ್ರತಿಮೆಯನೊಂದು
ನನ್ನ ಜೀವನದಿಂದೆ ರೂಪುಗೊಳಿಸೆ,
ನನ್ನ ಮಣ್ಣನು, ಮನೋರಥಗಳನು ಮತ್ತೆಲ್ಲ
ಬಣ್ಣಗನಸನು ಭ್ರಾಂತಿಗಳನು ತಂದೆ.

ನನ್ನ ಜೀವನದಿಂದ ನಿನ್ನೆದೆಯ ಮೂರ್ತಿಯನು
ನಿನ್ನ ಪ್ರೀತಿಗೆ ರೂಪುಗೊಳಿಸೆನ್ನಲು,
ಸಿದ್ಧಗೊಳಿಸಿದೆ ನಿನ್ನ ಅಗ್ನಿ, ಸತ್ಯತೆ, ಶಕ್ತಿ
ಸೌಂದರ್ಯ, ಶಾಂತಿಗಳ ಪರಿಕರವನು.+

## ಬೆಳಕು-ಪರದೆಯ ಹಿಂದೆ

ದಿನಗಳೆಲ್ಲವು ನನ್ನ ದಾರಿ ಗಾಬರಿಸಿಗೊಳಿಸಿ
ಸೋಮಾರಿ ಧೂಳಿಯನ್ನೊಟ್ಟಬಹುದು;
ಆದರೂ ಒಂದು ದಿನ ನನ್ನೊಳಗೆ ಹುದುಗಿರುವ
ಜೀವಾಳವನು ನಾನು ಕಾಣಲಿಹುದು.
ಜೀವನದ ಆಳದಲ್ಲಡಗಿದಾನಂದವನು
ನಾನೊಮ್ಮೆ ಕಡೆಮುಟ್ಟಿ ನೋಡಲಿಹುದು.
ಸುಳುಹು-ಹೊಳವುಗಳಲ್ಲಿ ನಾನದನು ಕಂಡಿರುವೆ,
ನನ್ನ ಮೇಲದರುಸಿರು ಹಾಸಿ ಬೀಸಿ

---

* ರವೀಂದ್ರರ 'Fruit-Gathering': LXX
\+ ರವೀಂದ್ರರ 'Fruit-Gathering': XXXIII

ಹರಿದಾಡಿಹುದು,- ನನ್ನ ಯೋಚನೆಗಳನು ಇನಿತು
ಸಮಯ ಪರಿಮಳದಿಂದ ತುಂಬಿ ಸೂಸಿ.
ಬೆಳಕು ಪರದೆಯ ಹಿಂದೆ ನನ್ನನುಳಿದಿರುವ ಆ
ಆನಂದವನು ಒಮ್ಮೆ ಕಾಣಲಿರುವೆ;
ನಿಲ್ಲುವೆನು ಅಲ್ಲಿ, ಹೊರಸೂಸುವೇಕಾಂತದಲಿ
ಸಕಲ ವಸ್ತುಗಳೆಲ್ಲ ಸೃಷ್ಟಿಕರ್ತನ ಕೂಡ
ಒಂದಾಗಿ ತೋರುವಲ್ಲಿ.*

## ನೂರು ವರುಷದ ಮೇಲೆ

ನೂರು ವರುಷದ ಮೇಲೆ ಆ ನನ್ನ ಕವಿತೆಗಳ-
ನೋದುತಿಹ ಓದುಗನೆ ನೀನು ಯಾರು?
ಈ ವಸಂತದ ವಿಫುಲ ವೈಭವದ ಸಿರಿಯಿಂದ
ಕಳುಹಲಾರೆನು ಹೂವನೊಂದಾದರೂ.

ಬಾನಿನಂಚಿಗೆ ತೇಲುತಿರುವ ಮೋಡಗಳಿಂದ
ಕಳಿಸಲಾರೆನು ಹೊನ್ನಿನೆಳೆಯೊಂದನು.

ನಿನ್ನ ಬಾಗಿಲುಗಳನು ತೆರೆದು ನೋಡು:
ಅರಳಿರುವ ನಿನ್ನ ಹೂದೋಟದಲಿ ಸಂಚಯಿಸು
ನೂರು ವರುಷದ ಮೊದಲು ಮರೆಯಾದ ಹೂವುಗಳ
ನರುಗಂಪು-ನೆನಹುಗಳನು.

ಆ ಹಿಂದೆ, ವಸಂತದೊಂದು ಮುಂಜಾವದಲಿ ಹಾಡಿ
ನೂರು ವರುಷಗಳಾಚೆ ಚಿಮ್ಮಿಸಿದ ಹರ್ಷಧ್ವನಿಯ
ಜೀವಂತ ಸಂತಸವನನುಭವಿಸಬಹುದು.+

---

* ರವೀಂದ್ರರ 'Fruit-Gathering': XXI
+ ರವೀಂದ್ರರ 'Gardener': 55

## ಮೃತ್ಯುವಿಗೆ

ಏಕಿನಿತು ಮೆಲ್ಲಗೆ ಕಿವಿಗೆ ಪಿಸುಗುಟ್ಟಿತಿರುವೆ
ಮೃತ್ಯು, ಓ, ನನ್ನ ಮೃತ್ಯು!
ಸಂಜೆಯಾಗುತ ಹೂವು ಬಾಡುತಿರಲು
ಕೊಟ್ಟಿಗೆಗೆ ಮರಳುತಿರೆ ದನಕರುಗಳು
ಕಳ್ಳ ಹೆಜ್ಜೆಯನಿಡುತ ಬಂದು ನನ್ನೊಡನೆ
ತಿಳಿಯದಾವುದೊ ಭಾಷೆ ನುಡಿಯುತಿರುವೆ.

ಜೋಂಪಿಸುವ ಕಲರವದ, ತಣ್ಣಗಿನ ಮುತ್ತುಗಳ
ನಿದ್ರೆಯೌಷಧಕೊಟ್ಟು, ನನ್ನೊಳಿಂತು
ಪ್ರೇಮಯಾಚನೆಯಿಂದ ಒಲಿಸಿಕೊಂಬುವ ಬಗೆಯೆ
ಓ ಮೃತ್ಯು! ಬಾಳ್ವೆಯೇ ನಿನ್ನ ಹೊರತು?

ಏನು ನಮ್ಮೀ ಮದುವೆಗಿಲ್ಲವೆ ಸಮಾರಂಭ?
ಮುಡಿವುದಿಲ್ಲವೆ ಚೆಲುವ ಹೂಮಾಲೆಯನು ನೀನು
ಕಂದುಗೂದಲ ಹೆಳಲ ಸಿಂಗಾರಕೆ?
ನಿನ್ನ ಮುಂಗಡೆ ಧ್ವಜವನೆತ್ತಿ ಸಾಗುವರಿಲ್ಲೆ?
ಇರುಳೆಲ್ಲವೂ ಕೆಂಪು ದೀವಟಿಗೆ ಬೆಳಕಿನಲಿ ಉರಿವುದಿಲ್ಲೆ?

ಮೃತ್ಯು, ಓ, ನನ್ನ ಮೃತ್ಯು!
ಬಾ, ನಿನ್ನ ಶಂಖನಾದದ ನಿರಾತಂಕ ನಿರುಪಾಧಿಯಲಿ
ನಿದ್ದೆ ಪೆರಸಾರಿರುವ ರಾತ್ರಿಯಲ್ಲಿ
ತೆಗೆದುಕೊ, ತೊಡಿಸೆನಗೆ ಕೆಂಪು ಗೌಸಣಿಗೆಯನು
ಕೈ ಹಿಡಿದು ಕರೆದುಕೊ; ಎಂಥ ಚೆನ್ನಿಗನು!

ಎಲ್ಲಿ, ಬಾಗಿಲದಿ ನಿನ್ನ ಸಾರಥಿ ಸಿದ್ಧನಾಗಿರಲಿ
ಕುದುರೆಗಳು ಆತುರದಿ ಕೆನೆಯುತಿರಲಿ.
ಮೇಲುದವನೋಸರಿಸಿ ನೋಡೆನ್ನ ತುಂಬಿದಭಿಮಾನದಲಿ
ಮೃತ್ಯು, ಓ, ನನ್ನ ಮೃತ್ಯು!*

---

* ರವೀಂದ್ರರ 'Gardener': 81

## ಮಿಂಚು-ಹುಳ

ಸಂದಿಹ ಸೂರ್ಯನ ನೆನಪಿಗೆ ಬಾನು
ಎಣಿಸುವದಿರುಳೆಲ್ಲವು ತಾನು
ಅಗಣಿತ ತಾರಾ ಜಪಮಾಲೆಯನು:

*   *   *

ದೇವ ತನ್ನಯ ತಾರೆ-ದೇಗುಲದಿ ಕಾಯುವನು.
ತನ್ನ ಹಣತೆಯ ತನಗೆ ತರಲು ಮಾನವನು.

*   *   *

ಗಾಳಿಯಲಿ ರೆಕ್ಕೆಗಳ ಗುರುತನಿರಿಸಿಲ್ಲ
ಆದರೂ ಎಂಥ ಸುಖ, ಹಾರಿಬಂದಿಹೆನಲ್ಲ!

*   *   *

ಎಲೆಯಲಿ ಮಿನುಗುವ ಮಿಂಚು -ಹುಳ
ಸೋಜಿಗ ಪಡಿಸಿವೆ ತಾರೆಗಳ

*   *   *

ಭೂಮಿಯ ಕೊನೆಯಿಲ್ಲದ ಸಾಹಸವೀ ಗಿಡಗಳು
ಕಿವಿಗೊಡುತಿಹ ಸಗ್ಗದೊಡನೆ ಎದ್ದಿವೆ ಮಾತಾಡಲು

*   *   *

ನಸುಕು-ನಾನಾಬಣ್ಣದೊಂದು ಹೂ-ಬಾಡುವದು
ಆಮೇಲೆ ಬರಿಯ ಬೆಳಕಿನ ಹಣ್ಣು.-
ಸೂರ್ಯ ಮೂಡುವನು.

*   *   *

ದೂರದ ಸಮುದ್ರವನು ಬೆಟ್ಟ ಮುಟ್ಟುವದೆಂತೊ
ತನ್ನ ಜಲಪಾತದಿಂದ,
ಅಂತು ದೇವನ ಹಿಡಿವೆ ಹಾಡಿನಿಂದ.*

---

* ರವೀಂದ್ರರ 'Fire flies' ದಿಂದ

## ಹೊಸವರುಷ

ಚೈತ್ರನ ತನಿಸೆಳಕಿನ ಸೋಂಕಿಗೆ ಮಧುಮಯವಾಗಿದೆ ಗಾಳಿ.
ಥಳಥಳಿಸಿವೆ ಗಿಡದೆಲೆ ಹುಲ್ಲೂ ಹಸುರಿನ ಕಾಂತಿಯಲಿ.
ಯಶವೆತ್ತಿಹ ದೇವತೆ ಈ ಹೊಸ ಹಸುರಿನ ರೂಪದಲಿ,
'ಆವಿರ್' ಹೆಸರಿನಲಿ.

"ಆವಿರ್ಭೈಃ ನ ಮೋ ದೇವತಾ. . . .
ತಸ್ಯಾ ರೂಪೇನೇಮೇ ಹರಿತಾ ಹರಿತಾಸ್ರಜಃ"
ಈ ಪಸುರಿನ ಪಚ್ಚೆಯ ದೇವತೆಗೆ
ವಂದನೆ ವರ್ಷಾರಂಭದಲಿ.

ಚಳಿಗಾಲಕೊಣಗಿ ಬರಡಾದ ಗಿಡಗಂಟೆಯಲಿ
ಹುಯ್ಯಲಿಟ್ಟಿತು ಗಾಳಿ ಈಸು ದಿವಸ;
ಜೂಜುಕುದುರೆಯನೇರಿ ಓಡಿತು ಅನಿರ್ಬಂಧ
ಹೊಲದುದ್ದ ನೆಲದಗಲ ಆ ದಿಗಂತ.

ಇಂದು ವೈಶಾಖದೀ ಗಂಗೆ ತಿಳಿನೀರಿನಲಿ
ನಸುಕಿನಿಂದಲು ಎಸೆವ ನೆಳಲು-ಬೆಳಕು
ಪಾರದರ್ಶಕ ಜಲವ ತೂರಿ ಹೋಗುವ ದೋಣಿ
ಚಿಮುಕಿಸುವ ಮಿಂಚು-ಮಿಣುಕು.

ಆಚೆ ದಂಡೆಗೆ ವಿವಿಧ ಬಣ್ಣದಾಕಳ ಹಿಂಡು
ಅತ್ತಿತ್ತ ಅಲೆದಾಡುತಿರುವುವೆಳಹುಲ್ಲು ಹೊಸ ಚಿಗುರು ಕಂಡು.

ಗಂಡು ಹೆಣ್ಣಿಗು ಹೀಗೆ ಬಣ್ಣ ತಿರುಗುವುದುಂಟೆ?
ಕೆಲವರೆದೆ, ಬಾಹು ಕುತ್ತಿಗೆ, ಕಣ್ಣು-ಗೊಂಬೆಯಲಿ
ಕಂಡಿರುವೆನೊಂದೊಂದು ಮಿಂಚುಗಿರಣ;
ಅದರಿಂದ ಬೆಳಕು ಬೀಳದು ದಾರಿಗೊಂದಿನಿತು ಬಾರದೋ ಬೆಡಗು ಬಣ್ಣ.
ಬಣ್ಣದಲೆಗಳಲವರ ಮೈ ತುಂಬಿ ತುಳುಕಿಸುತ
ವರ್ತಿಸಲಿ ನವಿಲಿನೊಲು ತುಂಬಿ ಕಣ್ಣ.

ಹೊಳೆವ ಕನ್ನಡಿಯಂತೆ ಅರಳಿದಾಕಾಶದಲಿ
ಪೃಥ್ವಿ ಪ್ರತಿಬಿಂಬ ಮೂಡಿ,
ನಗರ ಮಧ್ಯದ ಗಗನ ಮಹಲು ಮೆಟ್ಟಿಲನೇರಿ

ಬಂದನದೊ ಚಂದ್ರ ನೋಡಿ.
ಆಗಸದ ಅಂಗಳದಿ ಚಿಕ್ಕೆ ತೂಗಾಡುತಿವೆ
ಮಿಂಚು ಹುಳ ತೊಳಗುತಿರುವಂಥ ಮೋಡಿ

ಇಂದು ಹೊಸದಿನದಂದು
ಹೊತ್ತಿಸಿಹನಲ್ಲಿ ಅದೊ, ಆವಿರ್ ದೇವತೆ
ಪಟ್ಟಣದ ಬೋಳು ಮರಗಳ ಮೇಲು
ಹಸುರು ಮುರಿಯುವ ಲಕ್ಷ ಹೊನ್ನ ಹಣತೆ.
ಅವನು ಮುಟ್ಟಿದುದೆ ತಡ, ಬಹುರೂಪಿಣೀ ನಗರ
ಒಮ್ಮೆಲೇ ತಾಯಿಯಾಗಿ,
ಹಸಿರು ತೊಂಗಲ ನಡುವೆ ತಿರುಗುವಳು ಹಾಯಾಗಿ ಜೀವ ರಮಿಸಿ
ಆ ದೇವತೆಯೆ ಎನ್ನ ಭಾರವಾದೆದೆಯಿಂದ
ಹಿರಿದುಕೊಂಡನು ಚುಚ್ಚಿದೊಂದೊಂದೆ ಚೂಪಾದ ಗುಂಡು ಸೂಜಿ.*

---

* ಶ್ರೀ ದಿನೇಶದಾಸ ಅವರ ಬಂಗಾಲಿ ಕವಿತೆ 'ನವವರ್ಷ'.

# ಎರಡು ದಡ

## ೧೯೬೫-೧೯೬೯

### ಹೊಸ ವರುಷದ ಸ್ವಾ(ಸ್ವ)ಗತ ಭಾಷಣ

ಯಥಾಪ್ರಕಾರ
ತಿಥಿ ನಕ್ಷತ್ರಗಳ ಅಕ್ಷಮಾಲೆಯ ಹಿಡಿದು
ಹಬ್ಬ-ಹುಣ್ಣಿಮೆ- ಅಮಾವಾಸ್ಯೆಗಳ ರುಬ್ಬುಗುಂಡಿನಲಿ ಸಜ್ಜಾಗಿ
ಯಾವ ಹೂರಣ ತುಂಬಿ ಕೊಡಬಂದೆ ವಿಶ್ವಾವಸು?
ಏನೇನು ಹೆಚ್ಚಿ ಹೆರಚಿ ಪಚಡಿ ಮಾಡುವೆ ಹೇಳು:
ಏನೆಲ್ಲ ಕೂಡಿಸಿ, ಕುಟ್ಟಿ ಚಟ್ನಿ ಅರೆಯಲಿಕಿರುವೆ?
ಯಾವ ಕಾಳನು ಕುದಿಸಿ ಗುಗ್ಗರಿ ಮಾಡಿ, ಒಗ್ಗರಣೆ ಭಗ್ಗೆನಿಸುವೆ?
ಯಾವ ಬೆಂಕಿಯ ಮೇಲೆ ಇಟ್ಟು ಹಪ್ಪಳ ಸುಡುವೆ?
ಯಾವ ಬಾಣಲೆಯಲ್ಲಿ ಏನ ಬಡಿಸುವೆ ಬಡಿಸು
ನಾವು ಹಸಿದಿದ್ದೇವೆ.

ದಿನವೂ ನಮಗೆ ಶಿವರಾತ್ರಿ
ಪ್ರತಿಯೊಂದು ಹಗಲಿರುಳ ಸಂಧಿಕಾಲವೂ ನಮಗೆ ಸಂಕ್ರಾಂತಿ.
ಎತ್ತರದ ಬಾನಿನಲಿ ಬಿಳಿಯ ಕುಸುರೆಳ್ಳುಗಳ ಹರವಿ
ಆಶೆ ತೋರಿಸಬೇಡ:
ಕೊಡುವುದಾದರೆ ನೆಲದ ಉಡಿತುಂಬ ಕೊಡು
ಹೊಡೆಯೆತ್ತಿ ನಿಲ್ಲಲಿ ಬದುಕು.

ಉಂಡು ಉಪವಾಸಿಗಳು ನಾವು
ಬಳಸಿದ ಬ್ರಹ್ಮಚಾರಿಗಳು.
ಸರ್ವಧರ್ಮ ಸಹಿಷ್ಣುತೆಯ ಜಗಜ್ಜಾಹೀರುಗೊಳಿಸಿ
ಜಾತಿಕೂಪಕೆ ಮತ್ತೆ ಜಾರಿಕೊಂಡವರು;
ಗಾಳಿ ಬೀಸಿದ ಹಾಗೆ ತೂರಿಕೊಂಡವರು.

ಹೊಸ ವರುಷವೇ ಬಾ, ಹಿಂಜರಿಯದಿರು
ನಿನಗು ಗೊತ್ತಿರಬೇಕು: ನಾವು ಸತ್ಕಾರಶೂರರು ಎಂದು.
ತತ್ಕಾಲದಲಿ ಸಭೆಗೂಡಿ, ಕೊರಳಿಗೆ ಪುಷ್ಪಹಾರವ ಬಿಗಿದು
ಪುಕ್ಕಟೆಯಾಗಿ ಚಪ್ಪಾಳೆ ತಟ್ಟುವವರು.
ಪೇಟೆಯಲಿ ಸಿಗದ ಸಕ್ಕರೆಯನೆಲ್ಲ ಮಾತಿನಲಿ ತಂದು ಸುರಿವವರು
ಘಾಯದ ಮೇಲೆ ಅಹಿಂಸಕ ಜೇನುತುಪ್ಪವ ಸವರಿದವರು.
ಬೆಳ್ಳಗಿನ ಬಟ್ಟೆ ತೊಟ್ಟ ಬೆಳ್ಳಕ್ಕರಿಗರು.
ಮನದ ಬೇವೆಲ್ಲ ಹರಿದು ನಾಲಗೆ ತುದಿಯ ಬೆಲ್ಲದಲಿ ಕೂಡಿ
ರಸಸಿದ್ಧಿ ಪಡೆದವರು.
ಸತ್ಯದ ಮಿಸುನಿ-ಮಿಂಚನು ಅಸತ್ಯದ ಖನಿಯ ತೋಡಿ ಹುಗಿದವರು.

ಇಷ್ಟಾದರೂ ನಾವು ಬದುಕಿದ್ದೇವೆ, ಬಾ
ಈ ಮಿಶ್ರಿತಬೆಣ್ಣೆಯನ್ನು ಸಳಮಳ ಕುದಿಸಿ, ಸೋಸಿ
ತುಪ್ಪ ಬಂದರೆ ಉಳಿಸು;
ಇಲ್ಲ, ತಪ್ಪು ದಂಡವ ಕೊಡಿಸು.
ವರುಷದ ವಸಂತಕ್ಕೆ ಹರುಷದಲಿ ಪಲ್ಲವಿಸಿ
ಭುಲ್ಲವಿಸಿ ನಿಂತಿವೆ ಹೊಂಗೆ, ಮಾವು, ಬೇವು.
ನಾವೇನು ಪಾಪ ಮಾಡಿದ್ದೇವೆ?
ಭೂತದ ಬೇರಿನಿಂದ ವರ್ತಮಾನದ ಟೊಂಗೆ ಟಿಸಿಲೊಡೆದು
ಭವಿಷ್ಯದ ಚಿಗುರು, ಹೂ, ಹಣ್ಣುಗಳ ನೀಡು ನಮಗೆ:
ನಾವು ಹಸಿದಿದ್ದೇವೆ.

ಅಂತೂ ಸಕಾಲಕ್ಕೆ ಆಗಮಿಸಿ, ವೇದಿಕೆಯ ಮೇಲೆ
ವಿರಾಜಮಾನನಾಗಿರುವ ವಿಶ್ವಾವಸು-
ದಯವಿಟ್ಟು ಅಧ್ಯಕ್ಷತೆಯ ವಹಿಸು
ನಮ್ಮ ಮುಂದಿನ ಕಾರ್ಯ ಸಾಂಗಗೊಳಿಸು.
ಹಿಂದಿನ ಮಹಾಶಯರು ಇದೇ ಕುರ್ಚಿಯಲಿ ಕುಳಿತು
ಮಾಡಿದ ಕಮಾಯ, ನಡೆಸಿದ ಕಾರಭಾರ

ಎಲ್ಲವನು ವರದಿಯಲಿ ಸಾದರಗೊಳಿಸಿ ಒಪ್ಪಿಸಿದ್ದೇವೆ.
ಕಾರ್ಯಕ್ರಮದ ಪಟ್ಟಿ ತುಂಬ ಭಾರವಾಗಿದ್ದರೂ
ಕೊನೆಗೆ ಆಭಾರಮನ್ನಣೆಯುಂಟು;
ಕೆಲವರಿಗಾದರೂ ಆಲ್ಪೋಪಹಾರದ ವ್ಯವಸ್ಥೆಯುಂಟು.
ನಿನಗೂ
ನಿನ್ನ ಪರಿವಾರಕ್ಕೂ
ಮತ್ತೊಮ್ಮೆ ಸುಸ್ವಾಗತ.

## ದಾಸರ ದರ್ಶನ

"ಊರಿಗೆ ಬಂದರೆ ದಾಸಯ್ಯ! ನಮ್ಮ
ಕೇರಿಗೆ ಬಂದ್ಹೋಗೊ ದಾಸಯ್ಯ"

ಓ, ಅಂದ ಹಾಗೆ ಬಂದೇ ಬಿಟ್ಟಿರಾ! ಬನ್ನಿ-
ಎಷ್ಟು ವರುಷದ ಮೇಲೆ ನಿಮ್ಮ ದರ್ಶನವಾಯ್ತು;
ನೋಡಿ, ನಮ್ಮ ಗಡಿಬಿಡಿಯಲ್ಲಿ ನಿಮ್ಮ ಹೆಸರೇ ಮರೆತುಹೋಯ್ತು.
'ಏಳಯ್ಯ ಬೆಳಗಾಯಿತು' ಎಂದು ಮೊನ್ನೆ ಮೊನ್ನೆಯೆ
ಬಂದು ಎಚ್ಚರಿಸಿದರು; ಕನಸಿನಲಿ ಗೆಜ್ಜೆ ಕಟ್ಟಿ ಕುಣಿದಾಡಿದರು.
ನಿಮ್ಮನ್ನು ಕಂಡಾಗ ಅವರದೇ ನೆನಪಾಯ್ತು: ಇಬ್ಬರದು ತದ್ರೂಪ.
ನೋಡಿದಿರಾ: ನಿಮಗಾಗಿ ಏನೆಲ್ಲ ಸಿದ್ಧತೆ, ಸಂಭ್ರಮ, ಸಮಾರಂಭ
ನಿಮ್ಮ ಒಪ್ಪಿಗೆಯ ಕೇಳದೆಯೆ ಆಮಂತ್ರಣವ ಅಚ್ಚು ಮಾಡಿದ್ದೇವೆ
ಆದರೂ ದೊಡ್ಡ ಮನಸ್ಸು ಮಾಡಿ ಬಂದಿರಿ, ತುಂಬ ಸಂತೋಷ.

"ಮಾನವ ಜನ್ಮ ದೊಡ್ಡದು. ಇದ ಹಾನಿ ಮಾಡಬೇಡಿ ಹುಚ್ಚಪ್ಪಗಳಿರಾ"

ಇಲ್ಲ; ನಾವು ಜಾಣರು:
ಸ್ವಂತ ಲಾಭವಿಲ್ಲದೆ ಯಾವ ಕೆಲಸಕ್ಕೂ ಕೈ ಹಾಕುವುದಿಲ್ಲ.
ನೂರು ವರುಷಕ್ಕೊಮ್ಮೆ, ನಾನೂರು ವರುಷಕ್ಕೊಮ್ಮೆ
ಹಿಂದೆ ಹೂತಿಟ್ಟ ಧನ, ಕನಕ, ವಜ್ರ, ವೈಡೂರ್ಯಗಳ ಹೊರದೆಗೆದು
ಪ್ರದರ್ಶನಕ್ಕಿಟ್ಟು ನಾಲ್ಕು ದಿನ ಹೀಗೆ-
ಮತ್ತೆ ಮೊದಲಿನಂತೆಯೆ ನೆಲದ ಮರೆಗಿಟ್ಟು
ಏಳು ಹೆಡೆ ಸರ್ಪಗಾವಲಿಗೆ ಒಪ್ಪಿಸುತ್ತೇವೆ.

"ನಗೆಯು ಬರುತಿದೆ, ಎನಗೆ ನಗೆಯು ಬರುತಿದೆ" ಎಂದಿರಾ?

ಇಷ್ಟಾದರೂ ನಿಮ್ಮ ಪುಣ್ಯ
ಇಲ್ಲವಾದರೆ ನಿಮ್ಮ ಹೆಸರು ನಾಲ್ಕೂ ಕಡೆಗೆ ಕೇಳಿಬರುತ್ತಿತ್ತೆ ಹೇಳಿ-
ನೀವು ಕರುಣಿಸಿ ಕೊಟ್ಟ ಕಲ್ಲುಸಕ್ಕರೆ ಸವಿದು
ಒಂದೆರಡು ಹನಿ ಒಳಗೆ ಇಳಿಸಿದ್ದೇವೆ.

"ಸವಿಯು ಸಕ್ಕರೆಯೊಳಗೊ, ಸಕ್ಕರೆಯು ಸವಿಯೊಳಗೊ?"

ಸುಳ್ಳಲ್ಲ; ಪೆಪ್ಪರಮಿಂಟು, ಚಾಕಲೇಟಿಗಿಂತ
ಇದರ ರುಚಿ ಬೇರೆ ಕಂಡಿದ್ದೇವೆ.

"ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ
ವಿಠಲನಾಮ ತುಪ್ಪವ ಬೆರೆಸಿ ಬಾಯಿ ಚಪ್ಪರಿಸಿರೋ"

ಎಂದು ಹೇಳಿದಿರಲ್ಲ, -ಹೇಳಿದ್ದೆ ತಡ, ನಮ್ಮ ನಾಲಗೆಯಲ್ಲು ನೀರೂರಿ
ನಾವೂ ಬಾಯಿ ಚಪ್ಪರಿಸಿದೆವು: ರಾಮ, ಕೃಷ್ಣ, ವಿಠಲರನ್ನು ಸ್ವಲ್ಪ ಬದಿಗಿಟ್ಟು.
ಭೇದವಿಷ್ಟೇ, ಹರಿದಾಸರೆ ನಾವು ನರದಾಸರು.
ದಾಸ್ಯದ ನೊಗವ ಕಿತ್ತೊಗೆದರೂ, ಯಾರೋ ಮೂಗುದಾಣವ ಹಾಕಿ
ಜಗ್ಗಿದಂತೆ, ಮತ್ತಾರೋ ಬಾಲವ ಹಿಡಿದು ತಿರುವಿದಂತೆ
ನಮ್ಮ ಅನುಭವ ನಮಗೆ ತಪ್ಪಿಲ್ಲ.

"ತಲ್ಲಣಿಸದಿರು ಕಂಡ್ಯ ತಾಳು ಮನವೇ"

ತಾಳಿಕೊಳ್ಳಲು ನಮಗೆ ಸಮಯವಿಲ್ಲ.

ನಿಮ್ಮದೊಂದೇ ದಾರಿ: ಏಕತಾರಿಯ ಹಾಗೆ
ನಾದ ಒಂದೇ, ನಡಾವಳಿಯು ಒಂದೇ.
ನಮ್ಮ ತಂಬೂರಿಯಲಿ ನೂರಾರು ತಂತಿಗಳು
ಒಂದು ಕಿವಿ ಹಿಂಡಿದರೆ ಇನ್ನೊಂದು ಬಾಯ್ ತೆರೆಯುವದು
ಒಂದೊಂದರದು ಕಿರಿಚು ತಿರಿಚು ಬೇರೆ.
ವಿವಿಧತೆಯಲ್ಲಿ ಏಕತೆಯ ಮಂತ್ರ ಒಂದೇ ಸವನೆ ಜಪಿಸಿದರೂ
ಜಗ್ಗಲಾರದು ಖೋಡಿ,
'ತಂಬೂರಿ ತುಂಬೆಲ್ಲ ಕೀಸರುಬಾಸರು ಬೇಸರು ಬಂದೈತಿ'
ಹೇಗೂ ಅನಾಯಾಸ ದಯಮಾಡಿಸಿದ್ದೀರಿ-

ಏನು ಮಾಡುತ್ತೀರೋ ಮಾಡಿ,
ಯಾವ ರಾಗ ಹಾಡುತ್ತೀರೋ ಹಾಡಿ;
ನಮ್ಮ ಕೈಗೂ ತಾಳ ಕೊಟ್ಟು ನೋಡಿ.
ಓಣಿ ಓಣಿಗಳಲ್ಲ, ದೇಶ ದೇಶವ ತಿರುಗಿ ಬಂದರೂ
ತುಂಬಿಲ್ಲ ನಮ್ಮ ಗೋಪಾಳಬುಟ್ಟಿ
ನಾಮದ ಬಲದ ಮೇಲೆಯೇ ತಿರುಗುತ್ತಿದೆ ನಮ್ಮ ಸೃಷ್ಟಿ.

"ಎಲ್ಲಾರು ಮಾಡುವದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ, ತುತ್ತು ಹಿಟ್ಟಿಗಾಗಿ"

ಭಿಕ್ಷಕ್ಕೆ ನೀವು ಬೇಡಿದ ರಾಗಿ
ನಾವಿನ್ನೂ ಬಿತ್ತಿ ಬೆಳೆದಿಲ್ಲ:
ಕುಳಿತಿದ್ದೇವೆ ರಾಗಾನುರಾಗಗಳ ಬಲೆಯಲ್ಲಿ ಸಿಕ್ಕು ಕಂಗಾಲರಾಗಿ.
ಕ್ಷಮಿಸಿ, ಮುಂದಿನ ಮನೆಗೆ ಹೋಗುವಂಥವರಾಗಿ.
ಯೋಗ್ಯರಾಗಿ, ಭೋಗ್ಯರಾಗಿ, ಭಾಗ್ಯವಂತರಾಗುವವರೆಗೂ
ದಾಸರೆ, ನೀವು ಪ್ರತಿದಿನವು ಬಂದು ಹಾಡಿ, ಹರಸಿ ಹೋಗಿ.

## ಯುದ್ಧ

೧

ಪೂರ್ವ-ಪಶ್ಚಿಮಕೆರಡು ಹೋಳಾದ ಪಾಕ
ಎಲಾ! ಏನಿದೀ ಅವಿವೇಕ?
ಒಂದು ವ್ಯವಹಾರಕೂ ಇಲ್ಲ ಸಮತೂಕ.
ಪಾಕವೆ ಹಸಿ-ಬಿಸಿಯು, ಹಂಡ-ಬಂಡ?
ಹಾಕಿ ಮಾತಿನ ಲಾಗ ಕೋತಿ ಕುಣಿಸುತ್ತಿರುವೆ
ಕೃತಿಯು ಕಂಡದ್ದೆ ಇದೆ; ತೆರು ನೀನೆ ದಂಡ.
ಕೂಡಿ ಬಾಳಲಾರದ ನೀನೆ ಬೇರಾದೆ
ಕಿತ್ತೆಸೆದೆ ಹೊಳೆವ ಕನ್ನಡಿ ಹರಳು;
ಅತ್ತಿತ್ತ ಆರಿಸಿಕೊಂಡು ಚೂರು, ಚೂರಿ ಮಸೆದೆ.
ಇಡಿಯ ಮನೆತನ ಒಡೆದು
ನಡುವೆ ಗೋಡೆಗಳೆದ್ದು
ಕರಿನೆರಳು ಚಾಚುವುದ ಕಂಡ ತಂದೆ:
ಕೈಮುಗಿದು ಪ್ರಾರ್ಥನೆಯ ಮಾಡಿದರು

ಕಂಬನಿಯ ಹಣತೆಗಳ ಬೆಳಕ ನೀಡಿದರು:
"ಈಶ್ವರ ಅಲ್ಲಾ ತೇರೆ ನಾಮ್
ಸಬ್‌ಕೊ ಸನ್ಮತಿ ದೇ ಭಗವಾನ್"
ಊರುಗೋಲಿಗೆ ನೂರು ಹೆಜ್ಜೆ ಮುಂದಕೆ ನಡೆದು
ನಿನ್ನ ಮಕ್ಕಳ ಕಣ್ಣ ನೀರನೊರಸಿದರು;
ಸೋಜಿಗಕೆ ಸೋಜಿಗವೆನಿಸಿ ತಾವೆ ಬಲಿಯಾದರು.
ಈ ನಮ್ಮ ಹಿರಿಯಣ್ಣ
(ಹೆಸರಿಗೆ ತಕ್ಕ ರನ್ನ)
ನಿನ್ನ ದ್ವೇಷವ ನಿನ್ನ ಪಾಲಿಗೇ ಬಿಟ್ಟು ಹರಸಿದರು
ಕಿರುಕುಳವನೆಲ್ಲ ತಡಕೊಂಡು ಸಂಬಾಳಿಸಿದರು.
ಕಾದ ಹೆಂಚಿನ ಮೇಲೆ ತಮ್ಮ ಮನವನು ಹೇಗೊ ತಾಳಿಸಿದರು
ಕಥೆಯಲ್ಲವಿದು ತಮ್ಮ: ಒಡೆದ ಬಾಳಿನ ವ್ಯಥೆ
ಹಿಂದಿನಿತಿಹಾಸವನು ನೀನು ಮರೆತೆ.

೨

ಮನಬಲ್ಲಂತೆ ಅಡ್ಡಾತಿಡ್ಡ ಗಡಿ ಕೊರೆದು
ಆಡತೊಡಗಿದೆ ನೀನೆ ಹುಡುತುತು;
ಆಡಾಡ್ತ ಅಡವಿ ಬಿದ್ದೆ.
ನುಗ್ಗಿ ಬೇಲಿಯ ಬರುವ ಪೋಲಿ ದನಗಳ ಕಾಟ,
ತಿರುತಿರುಗಿ ತುಡುಗು ಮೇಯುವದೊಂಬೆ ಪರಿಪಾಠ-
ಕೊನೆಗೊಮ್ಮೆ ಹಿಡಿದು, ಮೈಹುಳೇ ಬಡಿದು, ಕಟ್ಟಿ
ಕೊಂಡವಾಡೆಗಟ್ಟುವ ಸರದಿ ಬಂತು.
ಹುಡುಗಾಟ ಹುಚ್ಚಾಟಗಳನೆಲ್ಲ ಸಹಿಸಿಕೊಂಡದ್ದಾಯ್ತು;
'ಛೀ, ಹಚಾ' ಎಂಬ ಬರಿ ಬಾಯಿಮಾತಿಗೆ ನೀನು ಹಣಿಯದಾದೆ;
ಕಚ್ಚತೊಡಗಿದೆ ಹುಚ್ಚುನಾಯಾಗಿ-
ಅದಕಾಗಿ
ನಿನಗೆ ಗುಂಡಿಕ್ಕದೆಯೆ ಬೇರೆ ಮಾರ್ಗವಿಲ್ಲ.

೩

ಯುದ್ಧ ಯಾರಿಗೆ ಬೇಕು?
ತಂತಮ್ಮ ಮನೆಯೊಳು ತಾವು ಚೆಂದಾಗಿ ಬಾಳಿದರೆ ಸಾಕು.
ಮನಮನದ ಮಂದಾರವರಳಿ ಹಾಡಿನುಯ್ಯಾಲೆ ತೂಗಬೇಕು:
ಇದು ನಾವು ಕಂಡ ಕನಸು.

ನಿನ್ನದೋ ಬೇರೆಡೆಗೆ ಮನಸು.
ಹಿಟ್ಲರ್ ಮುಸೋಲಿನಿಯ ಬೂಟುಗಾಲಿನ ಹೆಜ್ಜೆ ಹಿಡಿದು
ಜನಮನದ ಬುಗ್ಗೆಯನ್ನೊತ್ತಿ, ಹೂವು, ಮೊಗ್ಗೆಯ ತುಳಿದು
ಸರ್ವಾಧಿಕಾರದ ಪಟ್ಟವೇರಿ ಕುಳಿತೆ.
ಅವರಿವರ ಮದ್ದು-ಗುಂಡುಗಳ ಕಡ ತಂದು
ಅಬಡಾಜಬಡ ತಿಂದು ತೇಗಿದೆ.
ನಿನ್ನ ಕಾಲಮೇಲೆಯೆ ಕಲ್ಲು ಚೆಲ್ಲಿಕೊಂಡು
ನೀತಿ ನಿಯಮಗಳ ಗೆರೆ ದಾಟಿ ಹೂಂಕರಿಸಿದೆ.
ಎದ್ದ ಮೇಲಾಳಲ್ಲ ಸನ್ನದ್ಧ ಭಾರತ:
ಸೊಂಡಿಲದೊಳಗೆ ಸುತ್ತಿ ಎತ್ತೆತ್ತಿ ಒಗೆವ ಮದ್ದಾನೆ ತುಳಿತ.
ಲಾಸ್ಯಕ್ಕು ತಾಂಡವಕು ಶಿವನೆ ಅಧಿದೈವತ.
"ಸಾಧುಗೆ ಸಾಧು, ಮಾಧುರ್ಯಂಗೆ ಮಾಧುರ್ಯ
ಬಾಧಿಪ್ಪ ಕಲಿಗೆ ಕಲಿಯುಗವಿಪರೀತ"-
ಈ ರೀತಿ ನಾವು ಶಾಸನಬದ್ಧ.
ಬುದ್ಧಿಗಲಿಸುವುದಕ್ಕೆ ಕೋಟಿ ಕೋಟಿ ಜನ ಸಿದ್ಧ.
ಹೇಳು: ಯಾರಿಗೆ ಬೇಕು ಯುದ್ಧ?
ನಿನ್ನ ಪಿತ್ತಕ್ಕೆ ನಮ್ಮ ಯೋಧರೆ ತಕ್ಕ ಮದ್ದು.
ಹದ್ದುಮೀರದಿರು, ಸಾಕು ಆ ಪೀತಾಂಬರದ ವಿಷಕನ್ಯೆ- ಮುದ್ದು.

ಅಡು-ಅಡುತ ಆರು ಸಲ ಹಳಸಿರುವ ಪಾಕ
ದೈವ ದುರ್ವಿಪಾಕ.
ದ್ವೇಷ - ಮಾತ್ಸರ್ಯಗಳನ್ನೆಲ್ಲ ಒಟ್ಟಿಗೆ ಸುಟ್ಟು ಈ ಸಮರಭೂಮಿಯಲಿ
ಯಾವ ಚಿಗುರೊಡೆಯುವದೊ: ಅದು ಯಾರ ಕೈಲಿ?
ನಮ್ಮ ಕೈಯೊಳಗುಂಟು ಪಾಂಚಜನ್ಯವು-ಮುರಲಿ.

## ಗಡಿಯಲ್ಲಿ ಮಡಿದ ಯೋಧರು

ನುಗ್ಗಿದರು ಮುಂದೆ: ಬಾನ ಮಿಂಚಿಗೆ ಕಡೆದ ಸಿಡಿ-
          ಲಾಗಿ, ಗುರಿಯಿಟ್ಟ ಗುಂಡು ವೈರಿಯೆದೆ ನೆಟ್ಟಿಗೆ
          ತಾಗಿ, ಭಾರತದ ದಶದಿಕ್ಕು ಒಂದೆ ನಿಟ್ಟಿಗೆ
ಬಾಗಿ: ಅಟ್ಟಿದರು, ಬೆನ್ನಟ್ಟಿದರು ನಾಡಗುಡಿ
ನಡುನೆತ್ತಿಯಲಿ ಮುಡಿದು: ಹುಟ್ಟಿದುದು ಸಾರ್ಥಕ-

ವೆನಿಸಿ, ಬಿಡುಗಡೆಯ ಬಾಗಿಲಕೆ ಹಿಂದು, ಮುಸ್ಲಿಂ,
ಕ್ರೈಸ್ತ ಪಾರ್ಸಿ ತೋರಣವಾಗಿ. ನೆತ್ತರಿನ ತಳಿ,
ಪ್ರಾಣದೂದಿನಕಡ್ಡಿ ಪರಿಮಳದ ಸ್ಮಾರಕ
ಗುಂಡಿಯೊತ್ತಿದರೆ ಬಲ್ಬು ಇದ್ದಲ್ಲೆಲ್ಲ ಬೆಳಕು
ಝಗ್ಗೆನುವಂತೆ ನಾಡಿನುದ್ದಗಲಕ್ಕು ಅವರ
ನೆನಪು: ಕಲ್ಲು, ಕಟ್ಟಿಗೆಯಲ್ಲು ಕಿಡಿ. ಮಡಿದವರ
ಮೇಲೆ ನಕ್ಷತ್ರಮಾಲೆ; ಬಾನ ಮೌನದ ಮಿಡುಕು.
ಹುಟ್ಟು-ಸಾವಿನ ನಡುವೆ ಕವನ ಕಟ್ಟಿದೆ ಬದುಕು-
ಇರಲಿ ಹೆಗಲಿನ ಮೇಲೆ ಅವರಿಟ್ಟ ಬಂದೂಕು.

## ರಸಿಕರಂಗ

ಜೀವನದ ಯಾತ್ರೆಯಲಿ ಕಣ್ಣೀರ ತೀರ್ಥವ
ಕುಡಿದು, ನೋವುಗಳ ತಗ್ಗಿನಲಿ ನುಗ್ಗುನುರಿಯಾಗಿ
ಮುಗ್ಗರಿಸದೆಯೆ ಮುಂದಕಡಿಯಿಟ್ಟು, ಮುಡಿ ಬಾಗಿ
ಹಿಗ್ಗು-ದಿಣ್ಣೆಯನೇರಿ ನಿಂತ ರಸಿಕ! ಭೈರವ
ರೂಪದೆದುರು ಸೌಮ್ಯ ನಂದಾದೀಪ. ಮಲ್ಲಿಗೆ,
ಬಕುಲ, ಸಂಪಿಗೆಯ ತಂಪನು ಜೀವಕೋಲಯಿಸಿ
ಸಖ್ಯದ ಕಂಪನುಂಡು, ತಂಬೂರಿ ನಾದದಲಿ
ತುಂಬಿ ಕರುಣೆಯ, ಪಡೆದೆ ರಸಸರಸ್ವತಿ ಹರಕೆ.
ನಾಡಗಡಿಯಲಿ ಒಲವು-ಗುಡಿ ಕಟ್ಟಿ, ಚೆಲುವಿಗೆದೆ
ತೆರೆದು, ಸಜ್ಜನಿಕೆಯಲಿ ಹಾಲು-ಜೇನನು ಕರೆದು
ಹಲವು ಪಣತಿಗೆ ಎಣ್ಣೆಯೆರೆದು, ಮಕ್ಕನು ತೆಗೆದು
ದೀಪಾವಳಿಯ ಗೈದೆ: ಮುಳ್ಳಿನಲು ಮುಗುಳೊಡೆದೆ.
ನಂದನದ ಮಂದಾರ ಒಂದಾರ ಕೊಳ್ಳೋಣ-
ಲೋಕದೀ ಹೂವದಕೆ ಬಾಸಿಂಗ, ಬಾಗಿನ.

## ವಿನೂತನ ಕವಿಯ ಕೈಫಿಯತ್ತು

"ಏನೋ ಚಂದ್ರ ಪೆಂಗೆ
ನಾಚ್ಕೆ ಇಲ್ವೆ ನಿಂಗೆ!"
ಹೀಗೆ ಸಿಕ್ಕಾಬಟ್ಟೆ ಬೆಳುದಿಂಗಳನು ಚೆಲ್ಲಿ
ಹಾಳು ಮಾಡಿ, ಹತ್ತೀಬಿತ್ತುವದು ಸರಿಯಲ್ಲ.

ಅದನೆಲ್ಲ ಸಂಗ್ರಹಿಸಿ, ಭಟ್ಟೀ ಇಳಿಸಿ, ಗೊಟ್ಟಾ ಹಾಕು!
ಅಜೀರ್ಣವಾಗಿ ಹೊಟ್ಟೆ ಝಾಡಿಸಿದರೂ ಚಿಂತೆಯಿಲ್ಲ
ನಾವು ಕುಡಿಯಲು ತಯಾರು.
ನಿನ್ನ ಬೆಳಕೇನೊ ತಂಪಾಗಿ, ಸೊಂಪಾಗಿ ಹಿತವಾಗಿರಬಹುದು
(ಹಾಗೆಂದು ಹೇಳುತ್ತಾರೆ ಮುಗ್ಧರು).
ಆದರೆ, ಮಟಮಟ ಮಧ್ಯಾಹ್ನದ ಸೂರ್ಯನಂತೆ
ನಮ್ಮ ಕಣ್ ಕುಕ್ಕಿಸಿಲ್ಲ;
ಒಮ್ಮೆಯಾದರೂ ತಲೆಯನಾಸ್ಫೋಟಿಸಿಲ್ಲ;
ಮೇಲಾಗಿ ನಿನ್ನಲ್ಲಿ ಬೆಳವಣಿಗೆಯೇ ಇಲ್ಲ.
(ಇದ್ದರೂ ಇರಬಹುದು ಒಂದು ಪಕ್ಷ.)
ಬೆಳೆಬೆಳೆದು ತಳ ವಿತಳ ಪಾತಾಳವನ್ನು ಕಲಕಿ ಕಾಲಾಡಿಸಿಲ್ಲ.
ನೋಡಿಲ್ಲಿ; ಎಷ್ಟು ಬೆಳೆಸಿದ್ದೇವೆ-
ನಮ್ಮ ತಲೆ.
(ಇಂದಿನ ಪರಿಸ್ಥಿತಿಯಲ್ಲಿ ಇದೇ ಶ್ರೇಷ್ಠ ಕಲೆ.)
ಭಾವಕೋಶದ ಮಾತೇಕೆ?
ಅದಕೆ ಟಾಚಣಿ ಚುಚ್ಚಿ ಚುಚ್ಚಿ ಪಿನ್‌ಕುಶನ್ ಮಾಡಿ
ಎದೆಯ ಮೇಜಿನ ಮೂಲೆಯಲ್ಲಿ
ಇಟ್ಟಿದ್ದೇವೆ.
ನಿನ್ನ ಸುತ್ತಲೂ ಒಂದೇ ನಮೂನೆಯ, ಅದೇ
ಮಿಣಮಿಣಕು ಚಿಕ್ಕೆಗಳ ಥಕ್ಕಥೈ;
ವಿವಿಧ ಪ್ರತಿಮೆಗಳ ಬಾವುಟವನೆತ್ತಿ ಹಿಡಿದಿದೆ
ರಂಗುರಂಗಿನ ನಮ್ಮ ಬುಶ್‌ಕೋಟು ತೊಟ್ಟ ಮೈ.
ನೀ ತಯಾರಿಸಿದ್ದು ಸ್ಪೆಶಲ್ ಮಸಾಲೆ ದೋಸೆಯಲ್ಲ.
(ನಮ್ಮ ದೋಸೆಗೆ ಮಾತ್ರ ತೂತಿಲ್ಲ;
ಸಂಪ್ರದಾಯದ ಗಾದೆಮಾತಿಗೆ ನಾವು ಬೆಲೆ ಕೊಡುವುದಿಲ್ಲ)
ಅಥವಾ ಗಮಗಮಿಸುವ ಆಮ್ಲೆಟ್ ಅಲ್ಲ-
ಬರಿಯ ಕೆನೆಮೊಸರಿನ ಬಿಳಿಜೋಳದ ರೊಟ್ಟಿ.
(ಅದನ್ನು ತಿನ್ನಲು ಹಳ್ಳಿಯ ಮುಕ್ಕರೇ ಗಟ್ಟಿ.
ಹೊಸ ರುಚಿ ಬೆಳೆಸಿಕೊಂಡ ನಮಗೆ ಅದೆಲ್ಲ ಲೊಳಲೊಟ್ಟಿ.)

ಅಯ್ಯ, ಚಂದ್ರಾಮ ಚೆಲುವ
ತಿಂಗಳಿಗೊಮ್ಮೆ ಮೈತುಂಬಿಕೊಂಡು, ದುಂಡಾಗಿ
ಗಲ್ಲ ಉಬ್ಬಿಸಿಕೊಂಡು ಬಂದರೂ ನಾವು ನೋಡುವದಿಲ್ಲ.

(ನಮಗೆ ಹೊಟ್ಟೆಕಿಚ್ಚು.)
ಕದ ಹಾಕಿ, ಕಿಟಕಿ ಮುಚ್ಚಿ, ನಾವೆ ಹುಟ್ಟಿಸಿಕೊಂಡ ಚಿಂತೆಗಳ
ಕಂತೆ ಬಿಚ್ಚಿ ಹಾಯಾಗಿ ಮಲಗುತ್ತೇವೆ.
ಬೇಕಾದರೆ ನೂರು ಕ್ಯಾಂಡಲ್ ಬಲ್ಬು ಹಾಕಿ
ಗುಂಡಿಯೊತ್ತುತ್ತೇವೆ;
ಬಂದು ಬಡಿಯುವ ನೂರು ಪತಂಗಗಳ ಬಾಲ್ ಡಾನ್ಸು
ನೋಡಿ ಛಾನ್ಸು ಹೊಡೆಯುತ್ತೇವೆ.
ಕಾಜಿನ ಕಿಟಕಿಯಲ್ಲಿಣಿಕಿ ಮುಗುಳುನಕ್ಕರೆ ನೀನು
ಕರಿ ಪರದೆಯೆಳೆದು ಕೈ ತೊಳೆದುಕೊಳ್ಳುತ್ತೇವೆ.
ಆಕಾಶನೌಕೆಯ ಕಳಿಸಿ
ನಿನ್ನ ಷೋಡಶ ಕಲೆಗಳ ಛಾಯಾಚಿತ್ರ ತೆಗೆದು
ದೊಡ್ಡದು ಮಾಡಿ
ಪತ್ರಿಕೆಯ ಮುಖಪುಟದಲ್ಲಿ ಪ್ರಕಟಿಸುತ್ತೇವೆ.
ಆಗಲಾದರು ನಿನ್ನ ಬಣ್ಣ ಹೊರಬೀಳುವದು
ಯುಗಯುಗಗಳಿಂದ ತಂಗುಳಾಗಿದೆ ನಿನ್ನ ಬೆಳುದಿಂಗಳು.

ಅವರಿವರು ಯಾತ ಹೊಡೆದು ತೋಟವ ಮಾಡಿ
ಹಣ್ಣು ಹಂಪಲು-ಹೂವು ಬೆಳೆದು ಕೊಟ್ಟಿರಬಹುದು.
ನಮ್ಮಂತೆ ಬದುಕಿನ ಬಾವಿಯಾಳಕ್ಕಿಳಿದು
ಜೊಂಡು ಪಾಚಿಯ ಕಂಡು ಉಂಡವರೆಷ್ಟು ಮಂದಿ?
ಆಕಾಶದಲ್ಲಿ ಮೇಲೆ ಮೇಲೆ ತೇಲುತ್ತಿರುವ ನೀನು
ನಮ್ಮ ಬಾವಿದಂಡೆಗೆ ಹಣಿಕಿ ಹಾಕಬೇಡ:
ಅನುಭವಕೆ ತೆಕ್ಕೆಬಡಿದು, ಗುದುಮುರಿಗೆ ಹಾಕಿ, ಕಬ್ಬಾಡಿ
ಕೆಸರು ರಾಡಿಯ ಹಿಡಿಸಿ, ತಳಕಿಳಿದು
ಮೇಲೆ ಗುಳ್ಳೆಗಳ ಬಿಡುವದಿದ್ದರೆ ಮಾತ್ರ ಬಾ.
ನಮಗೆ ಬೇಕಿಲ್ಲವೋ ಆ ದೂರಲೋಕದ ಅತೀಂದ್ರಿಯ ದೃಶ್ಯ-
ನಮಗೆ ಹಿತ: ಇಲ್ಲೆ ಈ ಬಾವಿಯ ತಲಸ್ಪರ್ಶ.
ಹೋಗು, ನಮ್ಮಂತೆ ಸದಾ ಅಸ್ಪಷ್ಟನಾಗು
ಬೇನೆಯಿರದಿದ್ದರೂ ನರಳು:
(ಅದೇ ವಾಸ್ತವದ ಬಾಳು.)
ಕೃಷ್ಣ ಪಕ್ಷದ ಕತ್ತಲಲಿ ಮುಳುಗು ತಲೆಕೆಳಗು.

ನಮ್ಮ ಕುದುರೆಗೆ ಕಣ್ಣುಪಟ್ಟಿಯ ಬಿಗಿದು
ಹುಲ್ಲುಗಾವಲದ ಹಸುರು ಕನಸುಗಳನೆಲ್ಲ ಎಲ್ಲಿಯೋ ಹುಗಿದು

ನೋಡು: ಹೇಗೆ ಹೊರಟಿದ್ದೇವೆ: ಆಸ್ಪತ್ರೆಗೆ.
ಗ್ರಹಣ ಹಿಡಿದರೆ ಅದರಲ್ಲೆ ಒದ್ದಾಡುವದೆ ಒಳಿತು;
(ಇದು ನಮ್ಮ ಅನುಭವದ ಮಾತು.)
ಹೊರಬಂದು ಬೆಳುದಿಂಗಳನು ಚೆಲ್ಲುವ ಗೋಜಿಗೆ ಮರ್ರ್ಯೋ ಹೋಗಬೇಡ
ಚಂದಪ್ಪ, ಎಂದೆಂದಿಗೂ ಚೆಲುವಿನ ಹೆಸರು ಎತ್ತಬೇಡ.

## ಸುಗ್ಗಿ

ತೆಕ್ಕೆಯೊಳು ತಕ್ಕೈಸಿ, ತೆನೆತೆನೆ ಹಿಡಿದು ಹಿಗ್ಗಿ
ನೆಟ್ಟಗೆ ಮೇಟಿ ಸುತ್ತ ಹಂತಿಯ ಕಟ್ಟಿ, ಹಾಡಿ
ಬೆಳುದಿಂಗಳಿಗೆ, ತಿಕ್ಕಿಮುಕ್ಕಿ ಥಂಡಿಗೆ ತೀಡಿ,
ಪ್ರಾಣವಾಯುವಿನಲ್ಲಿ ತೂರಿ, ನೆತ್ತರು ನುಗ್ಗಿ
ಬಾಂದು-ಬದುವನು ಮೀರಿ, ಹೊಕ್ಕು ಹೊರಬಂದು ಒಕ್ಕಿ
ಖಂಡುಗ ರಾಶಿ, ಕೊಲ್ಲಾರಿ ಬಂಡಿಯಲಿ ಹೂಡಿ
ಮೂಡಲ ಹೋರಿ, ಕತ್ತಲೆಗೆ ಪಂಜು ಹಿಡಿದಾಡಿ
ಕಹಳೆಯನೆತ್ತಿ ಊದಿ, ಬಾನ ಮುಟ್ಟಿತು ಸುಗ್ಗಿ.
ಕರಣಂಗಳ ಕಣ ಬಣಬಣ, ಹೊಲವೆಲ್ಲ ಹಕ್ಕಲು.
ಹಕ್ಕಿ-ಪಕ್ಕಿ ಗೂಡಿಗೆ ಸೇರಿ ಬರಿಗಾಳಿ ಬಯಲು.
ಚಿಕ್ಕೆಗಳ ಸೊಕ್ಕಿಳಿದು ಶೂನ್ಯವಾಯಿತು ಮುಗಿಲು.
ಮೂಲೆಯಲಿ ಮಲಗಿತು ಕುನ್ನಿ: ಹಗೆ ತುಂಬ ಕಾಳು.
ಕಾಲಕಾಲಕ್ಕೆ ಮಳೆ ಬಂದು ಬೆಳೆ ಕಂಗೊಳಿಸೆ
ಅಂಗಾಂಗದಲ್ಲಿ ಸುಗ್ಗಿ: ಋತು ಕೊಟ್ಟ ಭಾಷೆ.

## ಎಪ್ಪತ್ತರ ಬೇಂದ್ರೆ

ಕಣ್ಣು ಮಿಂಚಿಸಿ, ನೂರು ಹಂಚಿಕೆಯ ಸಂಚಿಕೆಯ
ತುಂಬಿ-ತಲೆಯಾಡಿಸುತ, ಯಾವುದೋ ಒಳದನಿಗೆ
ನಾದ ಕೂಡಿಸಿ, ನೆಲಕೆ ನೀರು ಬರಿಸುವ ಹಾಗೆ
ಬೀಸುಗಾಳಿಯ ಜೊತೆಗೆ ಬಂದರದೊ ಬೇಂದ್ರೆ! ಕೈಯ
ಮಾಟಕ್ಕೆ ಮಾತು ಮಾಂತ್ರಿಕನಾಟಃ ಅರಗಳಿಗೆ-

ಹೊರ-ಒಳಗೆ ತುಂಬಿ ತುಳುಕುವ ಬೆಡಗು. ಕಡಲ ಗುಟು-
ಕರಿಸಿ, ಚಿಕ್ಕೆಗಳ ಮುಕ್ಕಳಿಸುವರು; ತಟ್ಟನೆ ಒಗಟು
ಒಡೆಯುವ ಒಡಪು-ನುಡಿ: ಕುಡಿಮಿಂಚು ಬಾನ ಗುಡಿಗೆ.
ಇಪ್ಪತ್ತೊ? ಎಪ್ಪತ್ತೊ? ಮುಪ್ಪತ್ತು ಮುಂದೆ ನಡೆ;
ಅಂಬಿಕಾತನಯನಿಗೆ ದತ್ತುಕೊಟ್ಟಂದು ಇವ-
ರೊಪ್ಪತ್ತು. ಜಗದಂಬೆ-ಹಡಲಿಗೆ ಹೊತ್ತು ಕುಣಿವ-
ಗೆಲ್ಲಿ ಪುರಸತ್ತು? ಹಣ್ಣಾದ ಕೇದಿಗೆಯ ಹೊಡೆ:
ಚೂಪಾದ ಗರಿ: ಹುಷಾರಿ; ಕಂಪಿಗೆಲ್ಲಿಯ ಕೊರತೆ?
ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ.

## ಲಾಲಬಹದ್ದೂರ ಶಾಸ್ತ್ರೀ

ನಮ್ಮ ಮಧ್ಯೆ ಇವನಿದ್ದನೆಂದರೆ ನಂಬುವೆಯ
ಇಷ್ಟು ಸಾದಾ ಸೀದಾ ಮನುಷ್ಯ? ಬಡತನದ
ಪಲ್ಲಕ್ಕಿ ಹೊತ್ತು ಮೆರೆಸಿದ ಪ್ರಾಮಾಣಿಕತೆಯ.

ಹೆಂಡತಿ ಮಕ್ಕಳಿಗೆ ಆಸ್ತಿ ಸಂಪಾದಿಸದ
ಮನೆಯಿರದ ಪ್ರಧಾನಿ; ಇವನೆಂಥ ಭಾರತೀಯ?!
ಬಂದದ್ದು ಹಂಜಿಯ ಮಾಡಿ ರಾಟೆ ತಿರುಗಿಸಿದ.
ಗದ್ದುಗೆಯನೇರಿದರು ಕಾಣಿಸಿಕೊಳದ ಕಿರಿಯ
ಬಾಜಾಬಜಂತ್ರಿಯ ನಿಲಿಸಿ ಸಹಜ ತಂತಿಯ ಮಿಡಿದ.
ಎಲ್ಲರಿಗೂ ಕಿವಿಗೊಟ್ಟು ತನ್ನ ಒಳದನಿ ಮರೆಯ.

ಮಹಾಪೂರವ ಧೀರ ತೆಪ್ಪದಲಿ ದಾಟಿಸಿದ;
ಮಾಯಿಸಿದ ಮೈಮೇಲೆ ಬಂದು ಬಿದ್ದವರ ಗಾಯ.
ಯಾರಿಗೂ ಸಿಗದ ಬಿಳಿ ಪಾರಿವಾಳವ ಹಿಡಿದ.

ಮಧ್ಯರಾತ್ರಿಯಲಿಂತು ಕೊರೆದು ಮಿಂಚಿನ ಗೆರೆಯ
ಮರೆಯಾದ: ದಡಕ್ಕೆ ಮುಟ್ಟಿಸಿದ ಹೊತ್ತ ಹೊರೆಯ.

## ಕಲಾಕೃತಿ

ದುಂಡು ಮಂಡಿಸಿದ ಪಕಳೆಯ ಹೃದಯ ಮೃತ್ಪಿಂಡ
ಚಿತ್ತ ಚಿತ್ರಾಕಾರ ಪತ್ರಪುಷ್ಪವಖಂಡ,
ಕೆಂಪು ಹಳದಿಯ ಒಳಗೆ ಬಾನ ನೀಲಿಯ ನುಣುಪು;
ಒಲವಿನೊನಪು. ಜನ್ಮಾಂತರದ ನೆನಪು; ಅಲರಿಪು
ಕುಣಿತ, ಘುಮ್ಮೆಂದು ಜುಮ್ಮೆಂದು ನೆತ್ತರು ತಿದಿಯ
ತುತೂರಿ. ಹತ್ತು-ಹತ್ತಿರ ಬಂದು ಕತ್ತುರಿಯ
ತೆನೆ ಮುಡಿದು ಮುತ್ತುವದು: ಲೀಲೆಗೆ ಸತ್ತು ಬದುಕಿ
ಕೊಟ್ಟು ತೀರುವುದೆಲ್ಲ ಹಿಂದು-ಮುಂದಿನ ಬಾಕಿ.

ವಕ್ರರೇಖೆಯ ಸೊಬಗಿನಾಕೃತಿಯ ಮಧ್ಯದಲಿ
ಹೊಕ್ಕುಳ ಬಿಂದು, ಸಮದ್ವಿಭುಜ ತ್ರಿಕೋಣದಲಿ
ಶಿರಃಕೋಣವ ದ್ವಿಭಾಗಿಸಿ ಹೊರಟರೆ ಲಂಬ-
ತಳರೇಖೆ ಮುಟ್ಟೆ ಕಾಟ್ಕೋನ: ದೀಪದ ಕಂಬ.
ಪ್ರಕೃತಿಯಾಕೃತಿಯೊಳಗೆ ವಕ್ರ-ಸರಳತೆ ಜೋಡಿ:
ಒಂದರೊಳಗೊಂದಾಡಿ ಮೂಡುವ ಕಲಾಕೃತಿ.

## ಮಣ್ಣಿನ ವಾಸನೆ

ಸಂಜೆ ಉದುರಿದ ಮಳೆಗೆ
ಮಣ್ಣವಾಸನೆ ಬೇರೆ.
ಮಲ್ಲಿಗೆಯ ಕಂಟಿ- ಮೈಗಂಟಿರುವ ಮೊಗ್ಗೆ
ಪರಿಮಳದ ಗೆಜ್ಜೆ.
ಬೇಲಿಮಗ್ಗುಲಿಗೆ ಛತ್ತರಿ ಹಿಡಿದ ಪಪ್ಪಾಯಿ
ಬಣ್ಣದುಂಬಿದ ಹಣ್ಣು-
ಹಸುರಿನಲಿ ಕೆಂಪು ಮೀಟುವ ಕೊಂಬು.

ಇರುಳೆಲ್ಲ ಸೆಖೆ:
ಗಾಳಿಯಿರದಿದ್ದರೂ ಅಲ್ಲಾಡುತಿರುವ ನೌಕೆ;
ನಿದ್ದೆ-ಬಂದರು ದೂರ.
ಕಣ್ಣು ಮಿಟುಕಿಸಿವೆ ಚಿಕ್ಕೆ.

ಬೆಳಗಿನಲಿ ಮಂಜು
ಕಣ್ಣು ರೆಪ್ಪೆಯ ಭಾರ.

ಗಿಡಗಿಡದಲ್ಲಿ ಒಡಮುರಿವ ಚಿಗುರು
ಬುಡದಲ್ಲಿ ಡಿಕ್ಕೀ ಹೊಡೆವ ಟಗರು.
ತೆರೆದ ಕಿಟಕಿಯ ಅಡ್ಡಪಟ್ಟಿಯ ಮೇಲೆ
ಒಂದರಮೇಲೊಂದು
ಚಿಂವ್ ಚಿಂವ್ ಚಿಲಿಪಿಲಿ ಗುಬ್ಬಿ.

ಮಧ್ಯಾಹ್ನ
ಕೆಟ್ಟ ಬಿಸಿಲು.
ಭೂಮಿ ಕಾ. . . ದಿ . . . . ದೆ

ಅರಗಬ್ಬಾಗದೇ ಮಳೆ ಹೊಡೆದು
ನೀರು ಹೊರಳಾಡಿದರೆ
ಮಣ್ಣಿವಾಸನೆಯೆಲ್ಲ ಹರಿದು, ಹಿಂಗಿ
ಕಣ್ತುಂಬ ನಿದ್ದೆ ಬರದೆ?

## ಬೆಡಗು

ಗಾಡಿಗೊಂಡೆರಡು ನುಣುಪುಗಂಬದ ಮೇಲೆ
        ಮಾಟಾದ ಗುಡಿಯ ಕಂಡೆ.
ಒಂದೆ ಗುಡಿಯಲಿ ಜೋಡು ಹೊಂಗಳಸ ಕಂಡೆ-
        ಕಡೆದದ್ದು ಏಕ ಬಂಡೆ.
ಮೇಲೆರಡು ನೀಲಮಣಿ ಬೆಳಕಿಂಡಿ
        ಕೆಳಗೆ ಪಂಚಾಮೃತದ ಗಿಂಡಿ.
ಚೆಂಬವಳದ ನಡುವೆ ಮುತ್ತು ಕೆತ್ತಿ
        ಒಳಗೆಲ್ಲ ರತ್ನ ಭಿತ್ತಿ.
        ಕಳಸದ ಮೇಲೆ ಹತ್ತಿ
ಜೋಲಿ ಹಿಡಿದವರ-ಹೊಡೆದವರ ಕಂಡೆ.

        ಶಿಲ್ಪಕ್ಕೆ ಬೆರಗಾಗಿ
                ಬಾಗಿ
ಮಹಾದ್ವಾರವ ದಾಟಿ
ಗಂಟೆ ಜಾಗಟೆ ಬಡಿದು, ಬಾರಿಸಿ ನಗಾರಿ
        ಝುಗ್ಗನೆ

ಹತ್ತುಸಾವಿರ ಹಣತೆ ಹೊತ್ತುವುದು ಕಂಡೆ.
ಸಮರ್ಪಣದ ಸಾಷ್ಟಾಂಗ ಹಾಕಿ
ಕಪ್ಪುರ ಉರಿಸಿ, ಕಾಯೊಡೆದು
ಹಾಲು ಚಿಲ್ಲನೆ ಸಿಡಿದು
ಎರಡು ಹೋಳಾದದ್ದು ಕಂಡೆ.

ಗುಡಿಯು ಉರುಳಿತ್ತು
ಶಿಲ್ಪ ಕರಗಿತ್ತು
ಮೂಲ ಉದ್ಭವಮೂರ್ತಿ
ಇದ್ದಲ್ಲೆ ಇತ್ತು-
ಮುಗುಳು ನಗುತಿತ್ತು.

## ತೀ.ನಂ.ಶ್ರೀ. ಯವರ ಪಯಣ

ಮೈಸೂರು-ಧಾರವಾಡದ ಉತ್ತರೋತ್ತರಕೆ
ಸಂದಿತು ಹರಕೆ. ದಿಲ್ಲಿಯನು ದಾಟಿ ಕಲಕತ್ತೆ;
ಕನ್ನಡದ ಕಲಶ ತುಳುಕಿತ್ತೆ? ಕೈಯ ಹೊತ್ತಗೆ
ಜಾರಿ, ಸರಸತಿಯ ವಜ್ರದ ಓಲೆ ಕಳಚಿತ್ತೆ?

ಕಲ್ಪವೃಕ್ಷದೆಳನೀರು, ಬಾಗಿರುವ ಗೊನೆಬಾಳೆ,
ವಸಂತದ ಚಂದನ ಗಂಧ, ಒಲುಮೆ ಹೂಮಾಲೆ,
ಸ್ನೇಹದೂದುಬತ್ತಿಯ ನವುರು, ನರುದಂಬುಲದ
ರುಚಿ-ಶುಚಿಗೊಳಿಸಿ, ನಸುನಗೆಯ ರೇಶಿಮೆ ವಸ್ತ್ರ
ಹೊದಿಸಿ, ನುಡಿಯ ಕನ್ನಡಿ ನೋಡಿ, ತಿದ್ದಿ ತೀಡಿ,
ಜನಪದದ ಭಾವ-ಬುದ್ಧಿಯ ಬೃಹತ್ ಕೋಶದಲಿ
ಪ್ರೀತಿ ಪಾಥೇಯವನು ಕೈಕೊಂಡು ಬಲುದಿನದ
ಪಯಣಕ್ಕೆ ಹೊರಟುಬಿಟ್ಟರು: ನಮ್ಮ ತೀ. ನಂ. ಶ್ರೀ.

ಇಂದಿಲ್ಲ ನಾಳೆ ಬಂದು, 'ಎಲ್ಲಿಗೆ ಬಂತು ಕೆಲಸ?'
ಎಂದಾರು; ಈ ಗುಡಿಗೆ ಯಾರಿಡಬೇಕು ಕಳಸ?

## ಉತ್ಸವ

೧

ಶತಮಾನಗಳ ಬಾಳ ಗೋಪುರದ ಹೊಂಗಳಸ
ಕನ್ನಡ ಶಕ್ತಿ: ಗರ್ಭಗುಡಿ ತುಂಬ ಬೆಳಕು;
ಪ್ರಾಣಪಣತಿಯನೊಡ್ಡಿ ಜ್ಯೋತಿ ಮುಟ್ಟಿಸಿಕೊಳದೆ
ಹೊರಟೆವೇ ಎತ್ತ ಕಡೆ? ಎಲ್ಲಿ ನಸುಕು?

ಮತ್ಸರದಿ ಮುಳುಗಿ ಮೇಲೆದ್ದ ಉತ್ಸವಪ್ರಿಯರು:
ಹಿಡಿದು ಮುಖಕೆ ತಾತ್ಸಾರದ ಪತಾಕೆ
ಒಡಕಿನುದ್ಘೋಷದಲಿ ಮತಮತದ ಮದ್ದು ಕಿಡಿ
ಸಿಡದು ನುಗ್ಗಿದೆ ನಮ್ಮ-ನಿಮ್ಮ ಮೆರವಣಿಗೆ.

ದಾರಿ ಬಿಡಿ: ತೂಗಾಡಿ ತೇರು ಯಾವ ದಾರಿಯಲಿ
ಬರುವುದೋ; ತೂರುವ ಹಣ್ಣು-ಕಾಯಿ
ಯಾರ ಮೂಗಿಗೆ, ತಲೆಗೆ ತಾಗೂವದೊ; ಮಿಣಿಹಿಡಿದ
ಬಂಟರ ಸೊಂಟ ಬಾಗದು; ಓ ತಾಯಿ-

ಎಳೆಯುತಿದ್ದಾರೆ ಹತ್ತೂ ಕಡೆಗೆ; ಹೂಮಾಲೆ
ಹಾಕಿ ಜಗ್ಗುವರು, ನೂಕಿ ನುಗ್ಗುವರು;
ತಾಳವಿಲ್ಲದ ಭಜನೆ, ಮೇಳವಿಲ್ಲದ ಕುಣಿತ
ಜಯಕಾರದಲಿ ಮಾತ್ರ ನಿನ್ನ ಹೆಸರು.

ಹೊರಟಿದ್ದೆ ಅಪರಾತ್ರಿ, ಪಾದಗಟ್ಟೆಯ ಮುಟ್ಟಿ
ಮಜಲು ಮರಳುವದೆಂದು? ಹೆಗಲು ಮುಟ್ಟಿ
ನೋಡಿಕೊಂಡಿರ? ಹತ್ತು ವರುಷದ ಮಣ್ಣು ಹೊತ್ತು
ಸಾರ್ಥಕವಾಯ್ತು; ಆಯ್ತೆ ತಳಹದಿ ಗಟ್ಟಿ?

೨

ಒಂದಾಗಿ ಒಲೆ ಹೂಡಿದರೂ ಎರಡು ಹೋಳಾಗಿ
ಬೇಳೆ ಬೇಯಿಸಿಕೊಂಬ ಚಪಲ; ಒಳಗೆ
ಹೊಗೆ ಹಾಕಿ ಧೂಪವೆಂಬರು; ಗಂಡಭೇರುಂಡ
ಹೆಸರಿಗೆ: ಮನೆವಾರ್ತೆ ಹಂಡಬಂಡ.

ಗಂಡಹೆಂಡಿರ ಜಗಳದಲ್ಲಿಯು ಕೂಸು ಗಾಸಿ-
ಗೊಳ್ಳದೆಯೆ ಬೆಳೆದು ನಿಂತದ್ದೆ ಹೆಚ್ಚು;
ಅಜ್ಜ ಮುತ್ತಜ್ಜರಾಶೀರ್ವಾದ, ಸ್ವಂತ ಬಲ,
ನೆಲದ ಗುಣದೆರಕದಲಿ ಮೂಡಿದಚ್ಚು.

ಇನ್ನು ಭಯವಿಲ್ಲ ಬಿಡಿ, ಹೊರಡಿ; ಕಾವೇರಿಯಲಿ
ತಲೆದೊಳೆದು, ತುಂಗಭದ್ರೆಯಲಿ ಮುಳುಗಿ
ಸಂಗಮದಿ ಮಿಂದು, ಶರಾವತಿ-ಆರತಿ ಹಿಡಿದು
ತಪ್ಪನೊಪ್ಪಿ, ಭುವನೇಶ್ವರಿಗೆ ಬಾಗಿ.

೩

ನಾಡಿನೆದೆಗೂಡಿನಲಿ ನಮ್ಮ ನುಡಿ-ಹಾಡಿನಲಿ
ಬಂಗಾರದ ಮೊಟ್ಟೆ; ಕಾವು ಕೂರದೆ
ಒಡೆಯಬಹುದೆ? ಪಿಳಿಪಳಿ ಕಣ್ಣುಬಿಡುತಿವೆ ಕೆಲವು
ರೆಕ್ಕೆ ಬಲಿವುದೆ ತಕ್ಕ ಉಣಿಸನಿಡದೆ?

ಆಹ! ಈ ನೆಲದ ಜಲದ ಕಾಡುಮೇಡಿನ ಬಣ್ಣ
ಅದರ ಗರಿ; ಬಿರುಸೆಲ್ಲನಗಿವ ಚುಂಚು.
ಭೂತ-ಭವಿಷತ್ತುಗಳ ತೂಕ ಹಿಡಿಯುವ ಪುಕ್ಕ
ಇಂದನೆದುರಿಸಬಲ್ಲ ಕಣ್ಣ ಮಿಂಚು.

ಹೊಮ್ಮಿ ಬೆಳೆದಿರುವೆಲ್ಲ ವೃಕ್ಷಗಳ ಹಣ್ಣ ರಸ
ಹೀರಿ ಹದಗೊಂಡ ಕೊರಳು; ಹೊಸ ಚಿಗುರ
ಟೊಂಗೆಯಲಿ ತಂಗಿದ ಬೆರಳು; ಭೂಮಿಯಾಕಾಶ
ಮೋಡ-ಮಳೆ-ಮಿಂಚುಗಳ ಆರಭಾರ.

ಅದರ ಹಾಡಿಗೆ ನಮ್ಮ ಜೀವ ತೇಂಕಾಡುವದು
ನಾಡ ದಶದಿಕ್ಕುಗಳ ದನಿಯ ಪಡೆದು-
ಆ ಮುಹೂರ್ತಕೆ ಕಾದು, ನರನಾಡಿಗಳು ತುಡಿದು
ನಿಲ್ಲಿಸಬಲ್ಲೆವೆ ಅಂಥ ಶಿಲ್ಪ ಕಡೆದು?

## ದಾಸೋಹ ದೀಪ

ಚುಮುಚುಮು ನಸುಕು: ಮೈತುಂಬ ಚೆಂಗಾವಿ ಹೊದೆದು
ಬಾನ ಬಟ್ಟೆಯಲಿ ಹರದಾರಿ ಹೆಜ್ಜೆಯನಿಟ್ಟು
ನೆಲದೆದೆಯ ಬಾಗಿಲು ತೆರೆಯೆ: ಬೆಳ್ಳಂಬೆಳಕು.
ಜೋಳಿಗೆ ತುಂಬ ಶಿವಯೋಗಿಧ್ಯಾನ ಹೋಳಿಗೆ:
ಕಂಡವರಿಗೆಲ್ಲ ನಿಚ್ಚಪ್ರಸಾದ. ಕಾಯಕದಿ
ಸೇವೆ-ಸೆರಗೊಡ್ಡಿ ಹಾಡಿದರು ಮಂಗಲಗೀತ.
ಮನದ ಅಂಗಳದಂಗುಲಂಗುಲದಿ ದಾಸೋಹ-
ದೀಪ ಹೊತ್ತಿಸಿ, ಪುರಾತನರ ನೂತನ ಹಾದಿ
ಕಂಡವರು. ಅಂತರಂಗದಿ ಕಡೆದ ಆನಂದ-
ಸಾಗರದಿ ಸಾವಿರ ಹೃದಯ-ದೋಣಿ ಚುಕ್ಕಾಣಿ-
ಯಾಗಿ ತೆರೆ ತೂಗಿದರು: ದಿಗಂತ ಮೌನಶ್ರೇಣಿ.
ನಂಬಿಗೆಯ ನಡುಗಡ್ಡೆಯಲಿ ನಡೆ-ನುಡಿಯ ಛಂದ.
ದಡದಿಂದ ದೂರ ಕಂಬದ ದೀಪ ತಿರುಗುವುದು;
ಬಿರುಗಾಳಿಯಲಿ ಸಿಕ್ಕ ನಾವೆ ಕಣ್‌ತೆರೆಯುವುದು.

## ಗೊಮ್ಮಟೇಶ

ಮಣ್ಣ ಮೋಹದ ತಿಗುರಿ: ನಟ್ಟ ನಡುವೆದ್ದ ಗಿರಿ
ಹುಟ್ಟು-ಸಾವಿನ ಮೆಟ್ಟಲಾಚೆ ನೀಲಿಯ ಡುಬರಿ.
ಜಾರುಬಂಡೆಯ ತುದಿಗೆ ನಿಮಿರಿ ನಿಂತಿಹ ದೊರಿ.
ಬಯಲೆಲ್ಲವೂ ಬಸದಿ, ಕ್ಷಿತಿಜದಂಚನು ತೂರಿ.
ಬೆಳಕಿನ ತುತೂರಿ, (ಸ್ತಬ್ಧವಿದೆ ಸಮರಭೇರಿ).
ಹಿಡಿದಿಹರೆ ಹಿಡಿತುಂಬ, ಬಿಟ್ಟಿಹರೆ ಜಗತುಂಬ: ಇಂಥ
ಎತ್ತರಕೇರಲಿಹುದೆ ಮಾನವಬಿಂಬ? ಹಂತ-
ಹಂತದಲಿ ಅರುಹಂತ ತುಳಿದ ಬೆಂಕಿಯ ದಾರಿ.
ಮಳೆಗೆ ಮೈದೊಳೆದು, ಗಾಳಿಯ ಹೊದೆದು, ಬಯಲಿನಲಿ
ಆತ್ಮದೊಳಮುಗುಳ ತೆರೆದು ನಿಂತಿಹ ನಿರಾಲಂಬ-
(ನಾಲ್ಕು ಗೋಡೆಯ ನಡುವೆ ಮಡಗಿದೆ ನಮ್ಮ ಜಂಬ)-
ತಳಮಳ ಸೋಸಿ ತಿಳಿದ ಬಿಳಿಗೊಳದ ಹಂಸದುಲಿ.
ತ್ಯಾಗ-ಭೋಗದ ಕೈಯ ಚಾಣಕೆಮ್ಮೆದೆ ಬಂಡೆ
ಪೆಣಿಕೆ ಹಾರಿದೆ: ಚಿತ್ತದಿ ಭಗ್ನಮೂರ್ತಿ ಕಂಡೆ.

## ಮಂದಿ

ಇರುವ ದಾರಿಯ ತುಂಬ ನಡೆದಿದ್ದಾರೆ ಮಂದಿ
ನಗರದೊಳಹೊರಗೆ: ನೋಡುತ್ತ ಮೇಲೆ ಕೆಳಗೆ.
ಆಯಕಟ್ಟಿನ ಜಾಗದಲ್ಲಿ ಕಾದಿದ್ದಾರೆ: ಬಸ್ಸಿಗೆ, ಬಡತಿಗೆ.
ಮನೆಯೊಡತಿ ಹೇಳಿದ್ದನ್ನೆಲ್ಲ ನೆನಪಿಗೆ ತಂದು, ಹಿಗ್ಗಿ
ಒಳನುಗ್ಗಿ, ಬಗ್ಗಿ ಕುಳಿತು ಅಥವಾ ಬಾಗಿ ನಿಂತು
ಗಂಟೆ ಬಡಿದೊಡನೆ ತಿಕೀಟಿನ ಹಾಸಲು ಮುಗಿದು
ಕೈಯೂರಿ ಎದ್ದು ಇಳಿಯುತ್ತಾರೆ ದಬದಬ ಕೆಳಗೆ.
ಈ ನಡುವೆ ಅವರಿವರ ಭೆಟ್ಟಿ: ಒಂಟಿಗೈಯೆತ್ತಿ
ಪರಿಚಯದ ಬಿಟ್ಟಿ ಭಾಷಣಕುಟ್ಟಿ, ನುಚ್ಚು-
ತವುಡಿನ ಚೀಲ ಹೊತ್ತು ಹೊರಡುತ್ತಾರೆ.

ಪೇಟೆಯಲಿ ಸಾಮಾನು ವಿಪರೀತ ತುಟ್ಟಿ-
ರೊಟ್ಟಿಯ ಕೂಡ ಬದನೆಕಾಯಿ ಪಲ್ಲೆ, ಎಳೆ ಸವುತೆಕಾಯಿ:
ಸವುಳುಗಜ್ಜರಿ ಬೇಡ, ಇರಲಿ ಉಳ್ಳಾಗಡ್ಡಿ.
ಕೆಂಪುಧೂಳಿನ ಬೆವರಿನಲ್ಲಿ ಪೌಡರಿನ ವಾಸನೆ.
ಕಾರು, ಸ್ಕೂಟರು ಫಟಫಟೀ ಗಾಡಿ: ನಾಯಿ
ಬೆನ್ನಹತ್ತಿದಂತೆ ಓಡುತ್ತಾರೆ; ಓಡುವದೆ ರೂಢಿ.
ಕಣ್ಣುಮಿಟುಕಿಸಿ ಝಗ್ಗನಲ್ಲಲ್ಲಿ ಟ್ಯೂಬ್‌ಲೈಟು.
ಕತ್ತೆತ್ತಿ ಹೊಗೆಯಾಡಿಸಿದವು ಬೀಡಿ, ಸಿಗರೇಟು,
ಅಂಗಡಿಯ ಅಂಗಾಂಗದಲ್ಲು ಕನ್ನಾಡಿಸಿರಲು
ಕಾಜಿನ ಕಪಾಟಿನಲ್ಲಿಟ್ಟ ಗೊಂಬೆ ಗೋಣಾಡಿಸಿತು.
ನಾಲಗೆಯ ಅಂಟಂಟಿಗೆರಡು ಪೆಪ್ಪರಮಿಂಟು.
ಚಪ್ಪರಿಸುತ್ತ ಬಂದ ದಾರಿಯಲಿ ಹೊರಡುವರು.

ಮಿಂಚುದೀಪದ ಕೆಳಗೆ ಹುಡುಗ-ಹುಡುಗಿಯರ ಚಕಚಕ
ನಡಿಗೆ, ಪಾರ್ಕಿನಲಿ ಗುಬ್ಬಿ, ಗಿಳಿ, ಗೊರವಂಕಗಳ ಚಿಲಿಪಿಲಿ ಕೇಕೆ.
ವಿರಾಮವಾಗಿ ಗಾಳಿಯ ಕುಡಿದು, ಹೆಜ್ಜೆಯೆಣಿಸುತ್ತ
ಹೊರಟ ಪಿಂಚಣಿದಾರ: ಹಿಡಿದು ಪ್ರಶ್ನೆಯ ಬಡಿಗೆ.
ಗಂಟಲು ಹರಿದುಕೊಂಡು ಚೀರಿದೆ ಹೋಟಲಿನ ರೇಡಿಯೋ-
ಸಿಂಗಲ್ ಚಹಾ ಕುಡಿದು, ಹೊತ್ತಾಯ್ತು ಹೋಗಬೇಕಯ್ಯ ಮನೆಗೆ.
ಕತ್ತಲಾದರೆ ಬಂದು ಮುತ್ತುವವು ಗುಂಗಾಡು.
ದಟ್ಟಕಾಡಿನ ನಟ್ಟನಡುವಣ ಗವಿಗೆ ಬ್ಯಾಟರಿ ಬಿಟ್ಟು

ಹಗಲು ಕಾಣದ ಬಾವಿಯಲ್ಲಿ ಮುಳುಗಿ, ಎಚ್ಚರದಪ್ಪಿ-
ಬೆಳಗಿನಲಿ ಎದ್ದು ಬ್ಲೇಡಿಗೆ ಮುಖವನೊಡ್ಡಿ ಕನ್ನಡಿ ಹಿಡಿದು
ಇಸ್ತ್ರಿಬಟ್ಟೆಯ ತೊಟ್ಟು ಹೊರಡಬೇಕು:
'ಬಟ್ಟೆಬಟ್ಟೆಯೊಳೆಲ್ಲ ಹೊಟ್ಟೆಜಾಲಿಯ ಮುಳ್ಳು'

ಇರುವ ದಾರಿಯ ತುಂಬ ನಡೆದಿದ್ದಾರೆ ಮಂದಿ
ನನಗೆಲ್ಲಿ ಬೇರೆ ಹಾದಿ?

## ನಂಬಿಕೆ

ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು.
ನೀಲವೆಂದರೂ ನೂರುಬಣ್ಣದ ಲೀಲೆಗವಕಾಶವುಂಟು.
ಭೂಮಿಯ ಮೇಲೆ ಕಾಲೂರಿ ನಡೆದಿದ್ದರೂ ಇದರ
ಸ್ತರಗಳ ನಡುವೆ ಸ್ಥಿರಗೊಂಡ ಒಡನಾಟ, ನಿರಂತರ ನಂಟು.
ಹಗಲೆಲ್ಲ ಹಸುರಾಗಿ, ತುಂಬು ಕೆಂಪಾಗಿ, ರೆಂಬೆ-
ಕೊಂಬೆಗಳೆಲ್ಲ ಸಂಜೆ ಬಾನಿನ ನಿರಾಳ ಮನದೊಳಚ್ಚೊತ್ತಿ
ಚಿತ್ತಾರವಾಗಿ ಕಪ್ಪುಮುಸುಕಿನ ಒಳಗೆ ಹುದುಗುವವು
ಇದ್ದು ಇಲ್ಲದ ಹಾಗೆ. ಇರುಳಿನಲಿ ಒಮ್ಮೆಲೇ ಚಿಗುರೊಡೆದು
ಅಂತರಂಗವೆ ಬಿಚ್ಚಿ ಬಯಲಿಗಿಡುವದು ಬಾನು:
ಎಚ್ಚರಾಗದ ಹಾಗೆ ನೆಲದ ಮೈದಡವಿ ಮುದ್ದಿಸುವದು.
ಆಗ ಎಲ್ಲರಿಗೂ ನಿದ್ದೆ. ಬೆಳಗಿನ ಜಾವ ಯಾವುದೊ
ಕನಸು: ಬೆಳಗಾದಮೇಲೆ ಮರೆತು ನೆನೆಸುವದು-
ತಿರುಗಾಡಿ ಬರುವಾಗ ಗೆಳೆಯರಿಗು ಹೇಳಿ ನಕ್ಕು
ನಗಿಸುವುದು; ಹೂ ಗಿಡಕೆ ನೀರು ಹಣಿಸುವದು

*  *  *

ಚಳಿಗಾಲದಲ್ಲಿ ಒಂದೊಂದೆ ಎಲೆಯುದುರಿ ನೆನಪು ಕಳಚು-
ತ್ತಿರುವಾಗ ಯಾರಿಗೂ ಕಾಣದ ಹಾಗೆ ಬೇರಿಂದ ರಸ ಹೀರಿ
ಚಿಗುರಿ ನಿಂತವರಾರು? ಬಿರುಗಾಳಿ ಬೀಸಿ ಆಕಾಶದುದ್ದ
ಧೂಳಡರಿ ದಿಕ್ಕುತಪ್ಪಿಸಿ, ಮನೆಮನೆಯ ಕಿಡಕಿ ಬಾಗಿಲು
ಬಡಿದು ಪಟಪಟ ಹನಿಯುದುರಿದಾಗ ಯಾರು ನೆಲಕಿಳಿದು

ಬಂದವರು? ಮರುದಿನ ಬೇಲಿಗುಂಟ ಹೂವರಳಿದಾಗ ಯಾರು
ಕಿಲಕಿಲ ನಕ್ಕು ಹೋದವರು? ನಿರ್ಮಲವಾಗಿ ನಿಂತ ಮೋಡ
ಹೊಯ್ದಾಡಿ ಎಲ್ಲೊ ಇಳಿಯುವುದು-ಭೂಮಿ ಗುಟುಕರಿಸುವದು
ಆಗೀಗ ಮಿಂಚಿ ಅಂತರಿಕ್ಷದಲೇನೊ ಹೊಳೆಯುವದು:

*     *     *

ಯಾವುದೋ ಗಳಿಗೆಯಲಿ ಹಠಾತ್ತನೆ ಒಳಗೆ ಅನಿಸುವ-
ದೊಂದು; ಬೆಟ್ಟದ ಮುಡಿಯ ಕಲ್ಲುಬಂಡೆಯಲಿ ಚಿಲ್ಲನೆ ಬುಗ್ಗೆ
ಚಿಮ್ಮಿ ಮುಂದೆ ಹರಿದದ್ದೆಲ್ಲೊ. ಹಗಲಿರುಳು ಜಾರುವವು
ದಿನದಿನವು ನನ್ನೊಳಗಿಂದ ಏನೊ ಹೀರುವವು: ಮತ್ತೆಲ್ಲೊ
ತಿರುಗಿ, ಪತ್ತೆಯಿಲ್ಲದ ಹಾಗೆ ಜೇನಿಟ್ಟು 'ಬಿಡಿಸಿಕೊ' ಎಂದು
ದುಡಿಸುವವು. ಜೇಂಗೊಡವ ಕಂಡು ಅಚ್ಚರಿಗೊಂಡರೂ
ಅವಸರಪಡುವ ಹಾಗಿಲ್ಲ; ದಾಹ ತೀರಿಸಲು ನೀರಲ್ಲ.
ಮತ್ತು ಬರಿಸುವ ಮದ್ಯವಲ್ಲ. ಅಂಗೈಯಲ್ಲಿ ಹನಿಹನಿ
ಹಾಕಿ, ನೆಕ್ಕಿ ನಾಲಗೆ ತುಂಬ ಸವಿದು, ಕಣ್ಮುಚ್ಚಿ
ತೆರೆಯಬೇಕು.

*     *     *

ನನ್ನ ನಂಬಿಕೆಯೊಂದು ಆಕಾಶ:
ನಿಜ, ಅದಕೆ ತಳಬುಡವಿಲ್ಲ, ನಾನೆಷ್ಟು ಬೆಳೆದರೂ
ನನಗೆ ನಿಲುಕುವುದಿಲ್ಲ. ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ. ಮೇಲೆ ನೋಡದೆ ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯ ಮೇಲೆ.
ಹಗಲುಹೊತ್ತಿನಲಿ ಅದರೆಡೆಗೆ ಲಕ್ಷ್ಯವಿಲ್ಲ. ನಮ್ಮ ಬದುಕಿನಲಿ
ನಾವು ಮಗ್ನರಾದರೆ ಸಾಕು, ಅದಕೆ ಚಿಂತೆಯಿಲ್ಲ.
ರಾತ್ರಿ ವಿದ್ಯುದ್ದೀಪ ಕೈಕೊಟ್ಟು, ಮಿಣಿಮಿಣಿ ಮೇಣ-
ಬತ್ತಿಯ ಹಚ್ಚಿ, ಅಂಜಿ ಆಕಳಿಸುತ್ತ ಕುಳಿತಾಗಲೂ
ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲೆಕ್ಕವಿಲ್ಲ.

## ಎರಡು ದಡ

ಮಂಜಿನಾಚೆಗೆ ಜಡೆಗಟ್ಟಿ ಕುಳಿತ ಬೆಟ್ಟದಡಿ ಏಳು-
ಕೊಳ್ಳದಲಿ ಹುದುಗಿದೆ ಭೂತ. ಪಾತಾಳದಿಂದ
ಪುಟಿದು, ನೆಲದ ವಾಸನೆ ಹಿಡಿದು, ಮುಗಿಲ ಕೆಚ್ಚಲ
ಗುಮ್ಮಿ, ಹಗಲ ಬೆಳಕನು ನೆಕ್ಕಿ, ಇರುಳ ಕತ್ತಲೆ-
ಯೊಡನೆ ಬಿದ್ದು ತೆಕಿಮುಕ್ಕಿ, ಕಂಡು ಕಾಣದ ಕಾಡು-
ಮೇಡಿನ ನೂರು ಝುರಿ-ತೊರೆಗೆ ಸೊಕ್ಕಿ, ಉಕ್ಕಿ ಹರಿ-
ದಿದೆ ಊರೂರ ಮೈಗೆ ತಾಗಿ ತಿಕ್ಕಿ. ಹೊಸ ನೀರು
ಹಳೆನೀರ ಕೊಚ್ಚಿ ಹುಚ್ಚೆದ್ದು ಎರಡೂ ದಡವ ಬಾಚಿ
ಬಗ್ಗಡವಾಗಿ, ತಟಸ್ಥ ತರು-ಮರದ ಬೇರಿಗೂ
ಕೈಚಾಚಿ, ಉರುಳಿ ಹೊರಳಾಡಿ ಮೈತುಂಬ ರಾಡಿಯ
ಬಡಿದು, ಈಗೀಗ ಶರತ್ಕಾಲದ ನಿಧಿಧ್ಯಾಸದಲಿ ಮೆಲ್ಲ
ತಿಳಿಗೊಂಡಿಹುದು.

ಪಶ್ಚಿಮದಲ್ಲಿ ಇಳಿದ ಕೆಂಬೆಳಕು
ಪೂರ್ವದಲಿ ಹೊಂಬೆಳಕ ತೂರುವುದು. ನಿಂತಿರುವ
ದಂಡೆ ವಾಸ್ತವವೆನಲು ಆಚೆ ದಡ ಕಲ್ಪನೆಯೆ? ಈಸು
ಬಂದರೂ ಸಲೀಸು ತಲುಪವೆವೆಂಬ ಭರವಸೆಯುಂಟೆ?
ನೆಲ-ಮುಗಿಲ ನಡುವೆ ಆಗೀಗ ಕಾಮನಬಿಲ್ಲು ಸೇತುವೆಯು.
ಸುಖದುಃಖಗಳ ತಡಿಗೆ ಬಡಿದು, ತೆರೆಗೆ ಹೊಯ್ದಾಡಿ
ಸೋಲು-ಗೆಲುವಿನ ತೋಳತೊಟ್ಟಿಲವಾಗಿ, ಎಡ-ಬಲದ
ತೋಟಪಟ್ಟಿಗೆ ನೀರ ಮೊಗೆದು ಸಾಗಿದೆ ಹೀಗೆ.

ಎರಡು ದಡಗಳ ನಡುವೆ ಏಸು ಸಂಸಾರ ಮುಳು-
ಗೆದ್ದು ಗಾಸಿಗೊಂಡಿವೆ ಈಸುಗುಂಬಳಕಾಯಿಗಾಸೆಪಟ್ಟು.
ನಿದ್ದೆ-ಎಚ್ಚರದ ನಡುವಣಚ್ಚರಿ ಬದುಕೆ? ಕೆದಕಿದರೆ
ಒಂದಿಷ್ಟು ರಕ್ತ, ಮಾಂಸ; ಮೂಲದಲಿ ಮೂಳೆ; ನಿನ್ನೆಗೂ
ನಾಳೆಗೂ, ಯುಗಯುಗದಿಂದ ಬರೆದು ಗೀಚಿದ್ದೆಲ್ಲ
ಹಾಳೆ? ಜೋಗಿತಿಯಾದಳಂತೆ ಮುಪ್ಪಾದ ಸೂಳೆ.

ಮಳಲ ದಂಡೆಯಲಿ ಕುಸಿದಿವೆ ಕಾಲು. ಆಚೆ ತೋಪಿನಲಿ
ಕೋಗಿಲೆಯ ಜೋಗುಳ ಲಾಲಿ. ಎದುರಿಗೆ ನೀರ
ಭೋರ್ಗರೆತ. ಎಳೆತ-ಸೆಳೆತ: ಸ್ವಚ್ಛಂದ ಛಂದೋಬಂಧ,

ಕ್ಷಿತಿಜದಂಚಿಗೆ ತನ್ನ ಉದ್ಬಾಹುಗಳ ಚಾಚಿ, ಒಡಲ
ತೆರೆದಿದೆ ಕಡಲ ಕುಡಿವೆನೆಂದು, ಹಿಡಿದು ಕಡೆವೆ-
ನೆಂದು, ತಳ ಸೋಸಿ ಮುತ್ತುಗಳ ಪಡೆವೆನೆಂದು.

ಎರಡು ದಡಗಳ ನಡುವೆ ಹಾಯಿ ಬಿಚ್ಚಿವೆ ದೋಣಿ,
ಮುಳುಗಿ ಮಿನುಗಾಡುತಿವೆ ಮೀನು: ದೂರ ನೀಲಶ್ರೇಣಿ.

## ಗಾಂಧಿ

೧

ಇರುವ ನೀರೆಲ್ಲ ಸುರಿದು
ಹಸಿದ ನೆಲ ಹಸುರಾಗಿ ಕಳಕಳಿಸಿ
ಬಾನು ಥಳಥಳಿಸಿರಲು-
ಬೆಳ್ಳಗೆ ಮೇಲೆ ಹೊರಟಿತ್ತು ಮಂದಹಾಸದ ಮೋಡ:
ಗಾಧಿ ನೋಡ,
ಮಹಡಿಮನೆ, ಗುಡಿಸಲು
ಪಡುಭೂಮಿ, ಹೊಲ-ಗದ್ದೆ, ಸುಡುಗಾಡ ಸುತ್ತಲು
ಒಂದೆ ಸಮ
ಮೋಡದೊಡಲ ಕರುಣಾವೃಷ್ಟಿ,
ಕತ್ತಲೆ-ಎದೆಗೆ ಜಗ್ಗನೆ ಬೆಳಕ ಹೊತ್ತಿಸುವ ಮಿಂಚುದೃಷ್ಟಿ-
ಗುಡುಗಿಗಿಂತಲು ಘೋರ ಮೌನ.
ನೀಲದಲಿ ಪ್ರಾರ್ಥನೆಯ ಮೂಲ ತಾನ-ವಿತಾನ
ಮಳೆಗೆ ಮೈದೊಳೆದು ಎದೆಯನರಳಿಸುವ
ಸೃಷ್ಟಿ-ಸಂತುಷ್ಟಿ.

೨

ಬೆಳಗಾಗುವುದೆ ತಡ, ಹೊರಟದ್ದೆ ಪ್ರಭಾತಫೇರಿ-
ಯುಗಯುಗದ ಭಾರದಲಿ ಸುಂದು ಹಿಡಿದು ಮಲಗಿ
ಮುಲುಗಿರುವ ಕಿವಿ-ಗವಿಗಳಲಿ ಹೊಡೆದನು ನಗಾರಿ.
ನರನರವೂ ಹೊತ್ತ ನೆತ್ತರಿನ ತುತ್ತೂರಿ.
ಕ್ಷಿತಿಜದಾಚೆಯ ಯಾವ ಪ್ರೇರಣೆಗೂ ಹೊರಹೊಮ್ಮಿರುವ

ಹೊಂಗಿರಣಗಳ ಕಸಬರಿಗೆ ಹಿಡಿದು
ಉಡುಗಿದ್ದೆ ಉಡುಗಿದ್ದು
ಸಂದಿ-ಗೊಂದಿ, ಗಟಾರು, ಊರು, ಹೊಲಗೇರಿ,
ಮರಳಿದ್ದು ಯಾವ ಸಂಜೆಗೊ-
ಮತ್ತೆ ಕರೆದಿತ್ತು ನೂರು ದಾರಿ.
ಎಡ-ಬಲಕೆ ಮಂದಿ-ಮಕ್ಕಳು
ಹಿಂದೆ ನೆರಳಿನಲಿ ಹೆಜ್ಜೆಯ ಹಿಂದೆ ಹೊಸ ಒಕ್ಕಲು,
'ನಕ್ಕಳಾ ತಾಯಿ',
ಮೈದುಂಬಿ ತುಂಬುಹೊಳೆ ದಾಟಲು
ನಂಬಿಗೆಯ ಗುಡಿಸಲು ಕಣ್ಣ ಕಂಬನಿಯನೊರಸಲು
ಮೂಕತಂತಿಯ ನಾದ ಹಿಡಿದು.
ಗಡಬಡಿಸಿ ಹೊರಟ ದುಡುದುಡು ನಡಿಗೆ
(ಕೈಯಲ್ಲಿ ಭದ್ರವಿದೆ ಸತ್ಯಾಗ್ರಹದ ಬಡಿಗೆ.)
ತನ್ನ ಉಪವಾಸದಗ್ನಿ ಕುಂಡದಲಿ ಕರಗಿ ಮಿರುಗಿಸಿದ
ಕೋಟಿಕೋಟಿ ಜನದೆದೆಯ ಕಲ್ಮಷ-ಬಗೆ.
ಹೆಡಮುರಿಗೆ ಬಿಗಿದ ಹಾವ ಕೊಲ್ಲದೆ, ವಿಷವ ಕಕ್ಕಿಸಿ
ಹುತ್ತ ಸೇರಿಸಿದ ಗಾರುಡಿಗ.
ನಿತ್ಯಚಕ್ರದಖಂಡ ಸತ್ಯಸ್ನೇಹದ ನೂಲ
ತೆಗೆದು ಸುತ್ತಿದನು ಖಂಡ ಖಂಡ.
ಎಂಥ ಬಿರುಗಾಳಿಯಲು
ಮಾತು-ಕೃತಿಗಳ ಪರಡಿ ಏರು-ಪೇರಾಗದೊಲು
ಹಿಡಿದ ಸಮತೂಕ.
'ನಾ', 'ನೀ' ಎಂಬ ಘಟಾನುಘಟಿಗಳನೆಲ್ಲ ಹಿಡಿದು ಪುಟವಿಕ್ಕಿ, ತಿಕ್ಕಿ
ಹೂಡಿದನು ತಾಯ ರಥಕೆ -
ಪಾದಗಟ್ಟೆಗೆ ತಂದು ನಿಲ್ಲಿಸಿದ, ಸಲ್ಲಿಸಿದ ತನ್ನನೇ ನೈವೇದ್ಯಕೆ.
ಜನದ ಸೇವೆಯ ಸಾಣೆಕಲ್ಲಿನಲಿ ತಿರುತಿರುಗಿ ತೆಯ್ದು
ಗಂಧವಾದನು ಅವರ ಹಣೆಗೆ.
ಆಗದಿದ್ದರೂ ಕಾಲಕಾಲಕ್ಕೆ ಮಳೆ
ಬಾರದಿದ್ದರೂ ಬೆಳೆ
ಬೆವರು ಸುರಿಸುತ ಜೀವಸತ್ತ್ವವಾದನು ಕಪ್ಪು ನೆಲದಲ್ಲಿ
ನಿಂತಿರುವ ತೆನೆಯ ಧ್ವಜಕೆ

೩

ಯಾರು ಹೇಳಿದರು ನಾವೆಲ್ಲ ನಿನ್ನ ಮರೆತೆವೆಂದು?
ಹಗಲೆಲ್ಲ ಕಟಕಟಿ ಬೇಡವೆಂದು
ಕಟೆದು ನಿಲಿಸಿದ್ದೇವೆ
ಕೂಟುಕೂಟಿನಲಿ ನಿನ್ನ ನಗುವ ಮೂರ್ತಿ:
ಕಂಡು ಕಾಣದ ಹಾಗೆ ದಾಟಿ ಹೋಗುತ್ತೇವೆ-
ಮರುಗುವುದು ಒಳಗೊಳಗೆ
ಪಾರದರ್ಶಕದಂಥ ನಿನ್ನ ಅಂತಃಕರಣ;
ಕಾಡಿಗೆ ಬಳಿದ ಕಾಜಿನಲಿ ಮಾತ್ರ ಕಾಣುವುದು
ನಮಗೀಗ ಹಿಡಿದ ಗ್ರಹಣ.
ನೀನಿಂದು ಬದುಕಿದ್ದರೊಂದು ವೇಳೆ
ಗರತಿಯಾಗಬಹುದಿತ್ತೇನೊ ರಾಜಕಾರಣದ ಸೂಳೆ.
ಸತ್ಯಕ್ಕೆ ತಲೆ ತೆಗೆದು ನಿಂತವ ನೀನು
ನಿನಗೆ ಟೊಪ್ಪಿಗೆ ಹಾಕುವ ಧೈರ್ಯ ಯಾರಿಗಿತ್ತು?
ಕರುಣೆಯೊ, ಕನಿಕರವೊ, ಕ್ಷಮೆಯೊ
ನೀನು ನಗುತ್ತಲೇ ಇರುವಿ:
ಅಂತೆಯೇ
ದಿನವೂ ನಮಗೆ ಬೈಗು-ಬೆಳಗುಂಟು,
ಇರುಳ ಬಾನಿನ ತುಂಬ ನೀನೊಬ್ಬನೇ ಕೋಲೂರಿ ನಡೆದಂತೆ
ಚಿಕ್ಕೆಗಳ ಗುರುತುಂಟು.
ಬರಗಾಲದಲ್ಲಿಯೂ ಗುಟುಕು ಗಂಜಿಯುಂಟು;
ನಮ್ಮೊಳಗೆ ನಾವು ಗುರುಗುಟ್ಟಿದರೂ
ನೆಲವ ಕಾಯುವ ನಿಷ್ಠೆಯುಂಟು:
ಉಂಟು; ಉಂಟು;
ನಾವೆಲ್ಲ ಪೂಜಿಯ ಗಂಟು.
ಆದರೂ
ನಿನ್ನ ಹೆಸರಿನಂಕಿಯ ಮುಂದೆ ನಮಗೂ ಒಂದು ಬೆಲೆಯುಂಟು.

## ಆಗೀಗ ನಾಲ್ಕು ಸಾಲು

### ಚಿಗುರೆಲೆ-ಕಗ್ಗೊಲೆ

ಅಲ್ಲಿ ಥಳಥಳ, ಇಲ್ಲಿ ಥಳಥಳ
ಹುಲುಗಲದ ಚಿಗುರೆಲೆಗಳು:
ದಿನವು ಮುಂಜಾವದಲಿ ಪತ್ರಿಕೆ
ಸಾರುವದು: ಕಗ್ಗೊಲೆಗಳು.

### ವಸಂತೋತ್ಸವ

ತಳಿರುನುಟ್ಟಿದೆ ಹೂವ ತೊಟ್ಟಿದೆ
ಮಾವು ಹೊರಟಿದೆ ಎತ್ತರೀ?
ಕಾಮ ಬಿಸಿಲಲಿ ನಡೆದು ಬರುವನು
ಅದಕೆ ಹಿಡಿದಿವೆ ಛತ್ತರಿ.

### ಸಂಜೆಯ ಸೂರ್ಯ

ಬಾನ ಹೆಗಲಿಗೆ ಸಂಜೆ-ಸೂರ್ಯನ
ಜರದ ಸೆಲ್ಲೆಯ ಹೊದಿಸಲು-
ಇಳೆಗೆ ಇಳಕಲ್ ಸೀರೆ, ಕುಪ್ಪುಸ,
ಹಣೆಗೆ ಕುಂಕುಮ ಬಟ್ಟೊಲು.

### ತುರ್ತು ಪರಿಸ್ಥಿತಿ

ಹುಲ್ಲುಕಾಡಿಗೆ ಬೆಂಕಿಹತ್ತಿತು
ಚಿಣಿಚಿಟಿಲ್ ಉರಿದೆದ್ದಿತು.
ಅಂತೆ ಜನತೆಯ ತುರ್ತು ಸಿದ್ಧತೆ
ಮೂರುಸಂಜೆಗೆ ನಂದಿತು.

### ರೈತ-ಸೈನಿಕ

ಯುದ್ಧ ಬಂದರು, ಬುದ್ಧ ಬಂದರು
ರೈತ ಹಿಡಿವನು ಗುದ್ದಲಿ;
ಹಿಮಾಲಯದಡಿ ನಮ್ಮ ಸೈನಿಕ-
ರೆದೆಯು ನಿಗಿನಿಗಿ ಇದ್ದಲಿ.

### ಕವಿಯ ಮಾತು

'ಎತ್ತು ಬಾವುಟ, ನುಗ್ಗು ಮುಂದಕೆ'
ಕವಿಯ ಮಾತಿನ ಗುಂಡಿಗೆ
ಹಿಮದ ಮೈ ಬಿಸಿರಕ್ತವೇರಿತು
ಬೆಚ್ಚಗಾಯಿತು ಥಂಡಿಗೆ.

### ಭಾಷಣ

ಭಾಷಣದ ಸುರಿಮಳೆಗೆ ತಕ್ಷಣ
ಮುರುಕು ಮನೆಗಳು ಬಿದ್ದವು;
ಮರುದಿನವೆ ಎಲ್ಲೆಲ್ಲು ತಣ್ಣಗೆ:
ನಾಯಿಕೊಡೆಗಳು ಎದ್ದವು.

### ಹೊಸ ಆಯುಧ

ಹೊಸ ಕಾಲಕೆ ಹೊಸ ಆಯುಧ ಮಸೆಯುತ
ಎಸೆಯಲು ಬಲ್ಲೆಯ ಬಲ್ಲಿದನೆ?
ಹಿಮಗಿರಿ ಕೋಟೆಯು ಅಭೇದ್ಯವೆಂದರೆ
ನಗಾಧಿರಾಜನು ನಗದಿಹನೆ?

### ಮಾನ-ದಂಡ

ಪೃಥಿವಿಯನಳೆಯುವ ಮಾನದಂಡದಲಿ
ನಮ್ಮವಮಾನವು ಸೇರಿಹುದು;
ಗಂಗೆ, ಯಮುನೆ, ಓ ಬ್ರಹ್ಮಪುತ್ರೆಯರೆ
ಜಗದ ಮಾಳಿಗೆಯು ಸೋರಿಹುದು.

### ರಾಷ್ಟ್ರಪಕ್ಷಿ

ಮೊದಲೇ ಡೌಲಿನ ನವಿಲೇ ನಿನಗಿದೊ
'ರಾಷ್ಟ್ರಪಕ್ಷಿ' ಎಂಬಭಿದಾನ;
'ಪದ್ಮಭೂಷಣ'ವ 'ಭಾರತರತ್ನ'ವ
ಕೊಡದಿರುವುದು ನಿನಗವಮಾನ.

### ಜಗದ್ಗುರು

ನಾಡಿನ ತುಂಬಾ ನೂರು ಜಗದ್ಗುರು:
ಇರುವುದು ಜಗವೊಂದೇ;
ಕಾಡಿನ ತುಂಬಾ ಬಣ್ಣದ ಹೂಗಳು:
ವಾಸನೆ ಕೆಲವೊಂದೇ.

### ಸಂಸ್ಥೆ-ಸಂತೆ

ಆಡೆ: ನೀನು ಮುಟ್ಟದಿರುವ
ಗಿಡವೆ ಇಲ್ಲ, ಅಂತೆಯೆ-
ನೋಡು; ನಾವು ಕಟ್ಟುತಿರುವ
ಸಂಸ್ಥೆಯೆಲ್ಲ ಸಂತೆಯೆ.

### ದೇಹ-ಯಂತ್ರ

ಎನಿತೌಷಧ ಕುಡಿದು, ಗುಳಿಗೆ
ನುಂಗಿ, ಚುಚ್ಚಿಕೊಂಡರೂ
ಈ ದೇಹದ ಯಂತ್ರ ಬೇರೆ-
ಬಲ್ಲ ಬ್ರಹ್ಮದೇವರು.

### ಮ್ಯಾಕ್‌ಮೋಹನ್ ರೇಖೆ

ನಮ್ಮ ಹಣೆಯ ಬರಹದಂತೆ
ಮ್ಯಾಕ್‌ಮೋಹನ್ ರೇಖೆಯು;
ಅದನು ಅಳಿಸಬಂದೆ ಚೀನ:
ಅಳಿಸನಾ ಪಿನಾಕಿಯು.

### ಹತ್ತಿಯ ಹೊಲ

ಹಸಿರು ಮಗ್ಗಿಯ ಸಾಲಿನಲಿ ಚಿಟ-
ಗುಬ್ಬಿ ಕುಳಿತಿವೆ ಬೆಳ್ಳಗೆ-
ಕುಸುಬೆಹೂವಂಚಿನ ಕಸೂತಿಯು
ಜರದ ಕಣ ಮುತ್ತೈದೆಗೆ.

## ಮಗುವಿನ ನಗು

'ಕರುಣಾ' ಎಂದರೆ ಅರುಣೋದಯ ತೆರ
ತುಟಿಯಂಚಿಗೆ ನಗೆ-ಬೆಳಕು;
ನಮ್ಮೆದೆಭೂಮಿಯ ಕಸವನು ಕಿತ್ತು
ಬಿತ್ತುವ ಸಕ್ಕರೆ ಹಳಕು.

## ಹುಣ್ಣಿಮೆ

ಹುಣ್ಣಿಮೆ ಇಟ್ಟಿತಗೋ ಬಾನಂಚಿಗೆ ಬಂಗಾರದ ತತ್ತಿ
ಮಿಸುಕಾಡಿತು ನಸು, ತುಸುವೇ ಇಣುಕಿತು ಬೆಳ್ಳಿಯ ನಡುನೆತ್ತಿ;
ದುಂಡಾಯಿತು, ಹೊರಬಂದಿತು ವ್ಯೋಮದ ಕಾಮದ ಬೆಳಕಿನ ಪಿಂಡ
ಶೂನ್ಯವನೆಲ್ಲಾ ತುಂಬಿತು ತುಳುಕಿತು: ಜಗವೋ ಹಾಲಿನ ಹೊಂಡ.

## ಬೇಕು

ತೇಗಬೇಕು ಸಂತೃಪ್ತಿಗೊಂಡು
ಆತಿಥ್ಯ ಪಡೆದಮೇಲೆ
ರಾಗ ಬೇಕು ಆಲಾಪದೊಡನೆ
ಸಂಗೀತವೆಂದಮೇಲೆ.

## ಗೃಹಿಣಿ

ಏನು ಕುಡಿದರೆ ತಾನೆ ನೀರು ಕುಡಿದಂತಹುದು?
ಎಲ್ಲ ಹೂವಿನ ರಸಕು ಒಸರುವುದೆ ಜೇನು?
ಏರುವದು ಇಳಿಯುವದು ಸ್ವರದ ತಾನಿನ ತಾನು-
ನೀರಮಡಿ, ಜೇನಸವಿ, ಗೀತಸುಧೆ ನೀನು.

## ಗುಳಿಗೆ

ದುಂಡುಮೊಗದಲಿ ಮಂದಹಾಸ ಬೀರುವ ಗುಳಿಗೆ
ನಿನ್ನನಿದೊ ನುಂಗಿ ನಾ ನೀರು ಕುಡಿವೆ;
ಡಾಕ್ಟರರು ಹೇಳಿದುದನೆಲ್ಲ ತಪ್ಪದೆ ಮಾಡು
ಹೊಟ್ಟೆಯೊಳಗೇ ನೀನು ಮೋಕ್ಷಪಡೆವೆ.

## ಸೋನೆ

ಸುರೀ ಸುರಿವ ಸೋನೆಯೇ
ಮುಗಿಲಿಗಾವ ಬೇನೆಯೇ?
ಕಣ್ಮುಚ್ಚಿದ ದಾನಿಯೇ
ಕಣ್ದೆರೆದರೆ ಹಾನಿಯೇ?

## ಮಧ್ಯಾಹ್ನ

ತಿರುಗೇ ತಿರುಗುತ್ತಿದೆ ಬಿಡುವಿಲ್ಲದೆ
ತಲೆಮೇಲಿನ ಪಂಖ;
ಆಫೀಸಿನ ಟೈಪರೈಟರು ಹೊಡೆದೇ
ಹೊಡೆಯುತ್ತಿದೆ ಶಂಖ.

## ಆಯುಷ್ಯವರ್ಧಿನಿ

ಮೂಡುವ ಮುಳುಗುವ ಸೂರ್ಯನ ಜೊತೆಯಲಿ
ಓಡುವದೆಂಬರು ಆಯುಸ್ಸು-
ತಡಮಾಡುವ ಈ ರೈಲಿಗೆ, ಬಸ್ಸಿಗೆ
ಇದರಲಿ ನಿಜಕೂ ಶ್ರೇಯಸ್ಸು.

## ಗುಲ್‌ಮೊಹರ್

ಮೇ ತಿಂಗಳ ಉರಿಬಿಸಿಲಿನ ಕೆಂಡವ
ಕೆದರಿದೆ ಗಾಳಿಯು ಎಂಬ ತೆರ
ದಾರಿಯ ಎಡಕೂ ಬಲಕೂ ಕೆಂಪಗೆ
ಹೂವನು ಹರಡಿವೆ ಗುಲ್‌ಮೊಹರ.

## ಅಡ್ಡಮಳೆ

ಬಿಸಿಲಿಗೆ ಒಳಗೇ ನರಳುವ ಭೂಮಿಗೆ
ಬಂದಿತು ರಭಸದ ಅಡ್ಡಮಳೆ;
ನಾಲ್ಕನೆ ದಿನ ಎರಕೊಂಡಿಹ ನೀರೆಗೆ
ಮುಖದಲಿ ಹೊಮ್ಮಿತು ಬೇರೆ ಕಳೆ.

**ಕೊಡೆ**

ನಾ ಕೊಡೆ, ನೀ ಕೊಡೆ, ಕೊಡದಿದ್ದರೆ ಬಿಡೆ
ಏರಿಸಿ ಹಿಡಿ, ನಡೆ ಯಾರ ಭಿಡೆ-
ಬಿಸಿಲಿಗೆ ಕಾಯದೆ, ಮಳೆಯಲಿ ತೋಯದೆ
ಎಲ್ಲರ ಮೇಲಿದೆ ನೀಲ ಕೊಡೆ.

**ಸ್ವಾತಂತ್ರ್ಯದ ಸವಿ**

ನಾಡಿಗೆ ದೊರೆತಿಹ ಸ್ವಾತಂತ್ರ್ಯದ ಸವಿ-
ಹತ್ತಿದೆ ಕೆಲವರಿಗೆ-
ಎಡಗೈ, ಬಲಗೈ ಬೆಚ್ಚಗೆ ಇಡದಿರೆ
ಕೊಡುವರು ಕಸಬರಿಗೆ.

**ಪಯಣ**

ದಿನವೂ ಗದ್ದಲ, ಗಡಿಬಿಡಿ ರೈಲಿಗೆ
ಕೂಡಲು ಜಾಗವೆ ಇಲ್ಲ;
ನಮ್ಮ ಪ್ರಯಾಣವ ಮುಗಿಸಿದಮೇಲೆ
ತೀರಿತು, ಯೋಚನೆಯಿಲ್ಲ.

**ದಿಲ್ಲಿ ದರಬಾರು**

ಹತ್ತಿ ಸ್ಕೂಟರು ಹಿಂದೆ, ಮುಂದೆ, ಎಡಬಲಗಳಲಿ
ಸಕುಟುಂಬ ಪರಿವಾರ ಸಹಿತ ಹೊರಟ
ಧೀರ ಪಂಜಾಬಿಗಳು ದಿಲ್ಲಿ ರೋಡಿನ ಮೇಲೆ-
ಸಂಸಾರ ತೂಗಿಸುವದೊಂದು ಆಟ.

**ಮುಂಬೈ**

ಮನೆ, ಮನೆ, ಮನೆ: ಗೂಡು, ಗೂಡು, ಗೂಡು
ಜನ, ಜನ, ಜನ: ಹೊರಚೆಲ್ಲಿದೆ ರೋಡು,
ರೈಲು, ಬಸ್ಸು ರೆಕ್ಕೆಯಾಗಿ ಮುಕ್ಕುತಿಹನು ವೇಳೆಯ
ಮುಂಬೈಯಲಿ ಇವನು ಹೀಗೆ ಬೇಯಿಸುವನು ಬೇಳೆಯ.

## ಕದನವಿರಾಮ

ಮಚ್ಚರದಾನಿಯ ನಾಲ್ಕೂ ಬದಿಯಲಿ
ಸೊಳ್ಳೆಯ ಸೈನ್ಯದ ಜಮಾವಣೆ-
ಕದನವಿರಾಮದ ರೇಷೆಯ ಗುಂಟ
ಪಾಕಿಸ್ತಾನದ ಚಿತಾವಣೆ.

## ವಿಶ್ವಭಾರತಿಗೆ ಕನ್ನಡದಾರತಿ

ವಿಶ್ವವಿನೂತನ ವಿದ್ಯಾಚೇತನ ಸರ್ವಹೃದಯಸಂಸ್ಕಾರಿ
ಜಯ ಭಾರತಿ, ಕರುನಾಡ ಸರಸ್ವತಿ
ಗುಡಿಗೋಪುರ ಸುರಶಿಲ್ಪಕಲಾಕೃತಿ
ಕೃಷ್ಣೆ, ತುಂಗೆ, ಕಾವೇರಿ ಪವಿತ್ರಿತ ಕ್ಷೇತ್ರ ಮನೋಹಾರಿ
ವಿಶ್ವವಿನೂತನ.... ||೧||

ಗಂಗ ಕದಂಬಾ ರಾಷ್ಟ್ರಕೂಟಬಲ
ಚಲುಕ್ಯ, ಹೊಯ್ಸಳ, ಬಲ್ಲಾಳ
ಹುಕ್ಕ-ಬುಕ್ಕ, ಪುಲಕೇಶಿ ವಿಕ್ರಮರ, ಚೆನ್ನಮ್ಮಾಜಿಯ ವೀರಶ್ರೀ
ವಿಶ್ವವಿನೂತನ ... || ೨ ||

ಆಚಾರ್ಯತ್ರಯ ಮತ ಸಂಸ್ಥಾಪನ
ಬಸವಾಲ್ಲಮ ಅನುಭಾವ ನಿಕೇತನ
ಶರಣ-ದಾಸ-ತೀರ್ಥಂಕರ ನಡೆ-ನುಡಿ ವಿಶ್ವತಮೋಹಾರಿ
ವಿಶ್ವವಿನೂತನ . . . . || ೩ ||

ಪಂಪ, ರನ್ನ, ನೃಪತುಂಗ, ಹರೀಶ್ವರ
ರಾಘವಾಂಕ, ಸರ್ವಜ್ಞ, ಪುರಂದರ
ಕುವರವ್ಯಾಸ, ರತ್ನಾಕರ, ಜನಪದ ಕಾವ್ಯ ಸಮುದ್ರವಿಹಾರಿ
ವಿಶ್ವವಿನೂತನ .... || ೪ ||

ಸಾಯಣ, ವಿದ್ಯಾರಣ್ಯ, ಭಾಸ್ಕರ
ಮಹಾದೇವಿ, ಮುಕ್ತಾಯಿ, ಮಹಂತರ
ಕಂತಿ-ಹಂಪ, ಸುಮನೋರಮೆ-ಮುದ್ದಣ; ಸರಸಹೃದಯ ಸಂಚಾರಿ
ವಿಶ್ವವಿನೂತನ... || ೫ ||

ತ್ಯಾಗ-ಭೋಗ-ಸಮಯೋಗದ ದೃಷ್ಟಿ
ಬೆಳುವೊಲ, ಮಲೆ, ಕರೆ, ಸುಂದರ ಸೃಷ್ಟಿ
ಜ್ಞಾನದ, ವಿಜ್ಞಾನದ, ಕಲೆಯೈಸಿರಿ ಸಾರೋದಯ ಧಾರಾನಗರಿ
ವಿಶ್ವವಿನೂತನ ... ॥ ೬ ॥

ಅರಿವೇ ಗುರು, ನುಡಿ ಜ್ಯೋತಿರ್ಲಿಂಗ,
ದಯವೇ ಧರ್ಮದ ಮೂಲತರಂಗ:
ವಿಶ್ವಭಾರತಿಗೆ ಕನ್ನಡದಾರತಿ! ಮೊಳಗಲಿ ಮಂಗಲ ಜಯಭೇರಿ!
ವಿಶ್ವವಿನೂತನ .... ॥ ೭ ॥

## ಭದ್ರಮಾಸ

ಗಣಪತಿ ಕಳುಹಿಸಿ ಬಣಬಣ ಎನಿಸಿದೆ
ಈ ಮನೆ-ಮಕ್ಕಳ ಪಾಡು;
ನಾಡಿಗೆ ನಾಡೇ ಭದ್ರತೆಗೊಲಿದಿದೆ
ಭಾದ್ರಪದಕೆ ಹೊಸ ಹಾಡು.

ಅನಂತಹುಣ್ಣಿವೆಗನಂತ ವ್ರತಗಳು
ದಿಗಂತ ಕಣ್ಣನು ತೆರೆಯೆ-
ಪಚ್ಚೆಯ ಪೈರಿಗೆ ಮುಗಿಲಿನ ಬೆಳ್ಗೊಡೆ
ಗುಡಿಯಲಿ ಪಲ್ಲಕಿ ಸೇವೆ.

ಉತ್ತರಿ ಮಳೆ ತಾನುತ್ತರ ಕೊಡುವುದೆ?
ಹಸ್ತಾ ಮುಂದಕೆ ಚಾಚಿ.
ಮಳೆ ಬಂದರೆ, ಮಗ ಉಂಡರೆ ಕೇಡೆ?
ಎರೆಯಲಿ ಮಲೆ-ತಲೆ ಬಾಚಿ.

ಬೆಳವಲ ಸೀಮೆಯ ಭಾಗ್ಯವು ತೆರೆದಿದೆ
ಮುತ್ತಿನ ತೆನೆ ತಲೆದೂಗಿ,
ಬತ್ತದ ಹಸುರಿನ ಹೊನಲೇ ಹರಿದಿದೆ
ಸುತ್ತಲು ಚೆಲುವಿಗೆ ಬಾಗಿ.

ಮಳೆಮಾರಿನ ದಿನ ಕಳೆದವು, ತಿಳಿದವು
ಹೊಳೆ, ಕೆರೆ, ಕಾಲುವೆ ನೀರು.
ಥಳಥಳ ನೀಲಿಯ ಬಾನಂಗಣದಲಿ
ಶಾರದ ನೀರದ ತೇರು.

ಬಿಸಿಲಿಗೆ ಬೆಳ್ಳಗೆ ಮಿನುಗಿವೆ ಹೂಗಳು:
ಹಾರಿವೆ ಬಾನಿಗೆ ಮೇಲೆ
ಬೆಳ್ಳಕ್ಕಿಯು: ಗಿಳಿ ಗೊರವಂಕದ ರವ
ಹರುಷವನುಕ್ಕಿಸಿ ತೇಲೆ.

ರಕ್ಕಸ ಬೀಜವ ಬೆಳೆಯದಂತೆ ತಡೆ
ಚಾಮುಂಡಿಯೆ ದಯ ಮಾಡು;
ಮುಗಿಯಲಿ ಆಯುಧಪೂಜೆ, ವರದೆ ನವ-
ಧಾತ್ರಿಗೆ ದೀಪವ ನೀಡು.

## ನೀಲಾಂಬಿಕೆ

೧

ಸದುವಿನಯದ ತುಂಬಿದ ಕೊಡ
ತಂದಳು ನೀಲಾಂಬಿಕೆ,
ಕಲ್ಯಾಣದ ಅಂಗಳದಲಿ
ತಳಿ ಹೊಡೆದಳು ಛಂದಕೆ.
ಸಮಚಿತ್ತದ ರಂಗೋಲಿಯು
ಒಳ-ಹೊರಗೂ ಧೂಪವು.
ಹಾದಾಡುವ ಹೊಸತಿಲಲ್ಲಿ
ಹೊಯ್ದಾಡದ ದೀಪವು.

೨

ಮಹಾಮನೆಯ ಮಹಾತಾಯಿ
ಮಾಸದ ಮಡಿ ಹಾಸಲು,
ದಾಸೋಹಕೆ ಮೀಸಲಾದ
ತೃಪ್ತಿಯ ನಗೆ ಸೂಸಲು,

ಎಲ್ಲೆಲ್ಲಿಯ ಗಣ ತಿಂಥಿಣಿ
ತಣಿದು ಹಾಡಿ ಹರಸಲು
ಭಕ್ತಿಯ ಭಂಡಾರ ತುಂಬಿ
ಹರಡಿತು ಬೆಳುದಿಂಗಳು

೩

ಅಯ್ಯನ ಕೈ ನೋವುದೆನಲು
ಆಭರಣವ ಕೊಟ್ಟಳು-
ಅನುಭಾವದ ಅಲಂಕಾರ
ಆಚರಣೆಯ ತೊಟ್ಟಳು.
ನೆರಳಾದಳು ಬಸವಣ್ಣನ
ಹರಳಾದಳು ಬೆರಳಿಗೆ,
ಅರಳಾದಳು ಲಿಂಗದಲ್ಲಿ
ಪರಿಮಳಿಸುತ ಪೂಜೆಗೆ.

೪

ಏನು ನೋವೊ ಹೇಳಲಿಲ್ಲ
ಕೇಳಲಿಲ್ಲ ಮಡದಿಗೆ,
ಹಾಗೆ ಹೊರಟು ಹೋದರಣ್ಣ
ಕಲ್ಯಾಣದ ಹುಡದಿಗೆ.
ಕೂಡಲದಲಿ ನೀರು ಹರಿದು
ತಿಳಿಗೊಂಡಿತು ಬನ್ನಿರಿ-
ನೀಲಾಂಬಿಕೆ ನೆನಪಾದಳು
ಬೇಗನೆ ಕರೆತನ್ನಿರಿ.

೫

ಕರಸ್ಥಲದಿ ಬಸವ ರೂಪು
ಪರಿಣಾಮವ ಮೀರಿಸಿ,
ಬಸವಯ್ಯನು ಮಾಡಿದಾಟ
ಲಿಂಗದೆಡೆಗೆ ತೋರಿಸಿ,
ಅಲ್ಲಿ ಇಲ್ಲಿ ಉಭಯವಳಿದು
ಅಂಗೈಯಲಿ ಸಂಗಮ
ಅಲ್ಲಿದ್ದರು, ಇಲ್ಲಿಲ್ಲವೆ?
ಜಗದ ಜೀವ ಜಂಗಮ.

೬

ನೀಲಾಂಬೆಯ ನಿಲವಿನಲ್ಲಿ
ಮಹಾಲಿಂಗ ಹೊಳೆಯಲು
ಬಸವಣ್ಣನ ಭಕ್ತಿಕಲಶ
ಸಂಗಮನಡಿ ತೊಳೆಯಲು-
ಗಾಳಿಯಲ್ಲಿ ಗಾಳಿಯಾಗಿ
ಮಹಾಬೆಳಗು ಸಂದಿತು:
ಪ್ರಾಣ ಲಿಂಗದಲ್ಲಿ ಕರಗಿ
ನೀಲಾಂಬರ ಮಿಂಚಿತು.

## ಬಸವಣ್ಣನ ಬೆಳಗು

೧

ಎಂಟು ಶತಮಾನಗಳ ಶತಪತ್ರವರಳುತಿದೆ
ಎಂಟು ದಿಕ್ಕಿಗೂ ಗಂಧ-ಗಾಳಿ ತೀಡಿ,
ಗಗನದಲಿ ಗಂಟೆ ಜಾಗಟೆ ನುಡಿದು, ಈ ಜಗದ
ನಂಟ ಸಂಗಮದೇವ ಕಣ್ದೆರೆದ ನೋಡಿ.
ಕೃಷ್ಣಾ ಮಲಪ್ರಭೆಯರೊಡಲ ಮಡು ತಿಳಿಗೊಂಡು
ಮುಂಬರಿದು ತೊಳೆವ ಪಾದ
ಭಕ್ತಿ-ಜ್ಞಾನ-ಕ್ರಿಯೆಯ ರಂಗ ಕೂಡಲ ಸಂಗ
ಮಿಡಿವ ಮಂಗಲ ನಿನಾದ.

೨

ಬಾಗೆವಾಡಿಯ ಭಾಗ್ಯ ರೂಢಿಜಡತೆಯನೊಡೆದು
ತೋಡಿ ಮೂಡಲಕಂತರಂಗ ಮೊರೆಯೆ,
ಹರನ ಕರುಣೋದಯದ ಹೊಂಗಿರಣದಾರತಿಯು
ಸಂಗಮೇಶ್ವರಲಿಂಗ ಗರ್ಭಗುಡಿಗೆ.
ಉದಕದಲಿ ಬಚ್ಚಿಟ್ಟ ಬಯಕೆ ಕಿಚ್ಚಿನ ಕಿಡಿಯೊ-
ಲುರಿದೆದ್ದು ಬಂದ ಬಸವ
ಏಳು ಜನುಮದ ತಂದೆ ಏಳನೆ ಭವಾಂತರದಿ
ಬಂದಿಹನು ನವಮಾನವ.

೩

ಕರಗಿ ಕಾಳಿಕೆ ಕಳೆದು, ಒರೆಗೆ ಬಣ್ಣಕೆ ಬಂದು
ದಿಟಭಕುತಿ ಪುಟಗೊಂಡು ಗೆಲುವ ಭಾಷೆ;
ಕರುಣೆ-ಕಾರಂಜಿಯಲಿ ಸಕಲ ಜೀವರ ತೊಳೆದು
ಷಟ್‌ಸ್ಥಲದ ಸಂಪುಟದ ಕಂಪು ಸೂಸೆ-
ಏಳು ಮಂಗಳವಾಡಕೇಳು ಕಲ್ಯಾಣಕ್ಕೆ
ಏಳಯ್ಯ ಬೆಳಗಾಯಿತು;
ಏರಿಳಿತಗಳ ದಾಟಿ, ಶರಣಧರ್ಮದ ಭೇರಿ
ಹೊಗರೇರಿ ದುಂದುಮಿಸಿತು.

೪

ದೇಹ-ದೇಗುಲದೊಳಗೆ ಭಾವಶುದ್ಧಿಯ ಸೊಡರು
ಅರಿವು-ಲಿಂಗಕನಂತಕಾಲ ಪೂಜೆ;
ಕಾಯಕದಿ ಬಂದ ಎಡೆ, ನುಡಿ-ನಡೆಯ ಮೋಡ-ಮಳೆ
ಹೊಡಕರಿಸೆ ಕುಡಿಮಿಂಚು ವಚನದೋಜೆ.
ಅನುಭಾವದನುವಿಡಿದು ಅಂತರಾಳವ ಕಡೆದು
ಹೊಮ್ಮಿರುವ ಚಿಜ್ಜ್ಯೋತಿಯೆ
ಧರೆಯ ಮೇಲಣ ಶೂನ್ಯಸಿಂಹಾಸನವನೇರು
ಮುಗಿಲಗುರು ಗುಂಭ ದೊರೆಯೆ.

೫

ಜಂಗಮಪ್ರಸಾದಿ, ಸ್ವಯಲಿಂಗ, ಸಂಗನಬಸವ
ಲಿಂಗಗೊಂಚಲವೆತ್ತ ಭಕ್ತಿರಸವು,
ಲಕ್ಕ ಗಣಗಳ ಒಕ್ಕು ಮಿಕ್ಕ ಪ್ರಸಾದದಲಿ
'ಕುಕ್ಕು ಹೂ' ಬಯಲೆಲ್ಲ ಚಿಗುರು-ಹೂವು.
ಭವದ ಸಾರವ ಹೀರಿ, ದಿವದ ಬಣ್ಣವ ಬೀರಿ
ಮಗಮಗಿಸುತಿರುವ ಶರಣ-
ಇಲ್ಲಿ ಸಲ್ಲುತ ಎಲ್ಲ ಜೀವಭಾವವನಪ್ಪಿ
ಇಹ-ಪರಕೆ ಗುಡಿತೋರಣ.

೬

ಮರ್ತ್ಯದ ಮಹಾಮನೆಯ ಮಣಿಹ ಮುಗಿಯಿತು ತಂದೆ
ಕರ್ತೃ ಕೂಡಲಸಂಗನೊಡಲು ತೆರೆದು-

ಹಳುವ ದಾಟಿದರುಳಿವೆ, ಹದುಳಗೊಂಡಿರೆ ಕದಳಿ
ಮಿಕ್ಕ ಪ್ರಮಥರ ಲಕ್ಷ್ಯ ದಿಕ್ಕಿಗೊಂದು.
ಬಯಲ ರೂಪಿಸಿ, ರೂಪ ಬಯಲಾಗಿ ತುಂಬು ಬೆಳೆ
ಕೊಯಲಾಗಿ ಸಂಗಮೇಶ-
ಕಲ್ಯಾಣದಲಿ ರಾಶಿ ಸೂರೆಗೊಂಡಿತು ಏಳು
ತಲ್ಲಣಿಸಿ ದೇಶ-ಕೋಶ.

೭

ಅವಧಿ ಮೀರಿದ ಮೇಲೆ ವ್ಯವಧಾನವೆಲ್ಲಿಯದು?
ಅವಧಾರು; ಬಚ್ಚಬರಿ ಬಸವರಾಜ,
ಕಪ್ಪಡಿಯ ಸಂಗಮದ ಅಂಗಳದ ಕೂಸಾಗಿ
ಆಡು ಕೂಡಲಸಂಗ ರಾಜತೇಜ.
ತುಂಬಿ ಕಂಗಳು ಮನವು, ಹೃದಯಕಮಲದಿ ತುಂಬಿ
ಸಂಗಮದಿ ತುಂಬು ಭರತಿ:
ಬೆಳಗಿನೊಳಗಣ ಮಹಾಬೆಳಗಿನಲಿ ಮುಳುಗೆದ್ದು
ಅರಳಿಹುದು ದಿವ್ಯಸ್ಮೃತಿ.

## ಅಕ್ಕಮಹಾದೇವಿಗೆ

ಶರಣು ಮಾದೇವಿಯೆ, ಕರುಣೆಯ ನಲ್ದಾಯಿ
ಅರುಣೋದಯವಾಯ್ತು ಜಗಕೆ,
ವಿಷಯದಾವರಣವು ಕೊಸರಿಕೊಂಡ್ಹೋಯಿತು
ಮಲ್ಲಿಕಾರ್ಜುನ ಲಿಂಗ ಪದಕೆ.

ಕಾಯದ ಜೀವದ ಭಾವದ ಲಜ್ಜೆಯ
ಒಜ್ಜೆಯ ಇಳುಹಿದೆ ತಾಯಿ,
ಕತ್ತಲೆ ಬೆಳಗಿಗೆ ಬತ್ತಲೆಯಾಯಿತು
ಅತ್ತಲೆ ಹೋಯಿತು ಮಾಯಿ.

ನೆಚ್ಚುಗೆ, ಮೆಚ್ಚುಗೆ, ಸಲ್ಲುಗೆ, ಸೋಲುಗೆ
ನಿಚ್ಚಟ ಕಲ್ಲೊಳು ಬೀಸಿ-
ಕೊರಗುವ ಮರುಗುವ ಕಸಕಡ್ಡಿ ತೂರಿದೆ
ಅರಿವು-ಸಾಣೆಗೆಯಲ್ಲಿ ಸೋಸಿ.

ಹಿಗ್ಗಿ ಹಾರೈಸದೆ, ಪೂಜೆ ಪೂರೈಸದೆ
ಹಾಡದೆ ಪಾಡದೆ ಎದೆಯು
ಸೈರಿಸದಾಯಿತು, ಅಂತಃಕರಣದಿ
ಕಿಚ್ಚಿಲ್ಲದ ಬೇಗೆ-ಕುದಿಯು.

ಮಾಮರ, ಕೋಗಿಲೆ, ತುಂಬಿ, ಬೆಳುದಿಂಗಳು
ನವಿಲು, ಹಂಸೆಯು, ಗಿಳಿ ತವಕ-
ಅಕ್ಕನ ಹೃದಯದ ಚೊಕ್ಕ ಹಂಬಲ ತುಂಬಿ
ಗಿರಿ ನದಿ ಬನಕೆಲ್ಲ ಪುಲಕ.

ಆರೂ ಹೊಗಬಾರದ ಕಲ್ಯಾಣ ಹೊಕ್ಕಳು
ಮುಚ್ಚುಮರೆಯೆಲ್ಲವ ತೊರೆದು
ಅನುಮಾನ ಜಕ್ಕಿಸಿ ಆಂತರ್ಯ ಉಕ್ಕಿಸಿ
ಅನುಭಾವದಾರತಿ ಹಿಡಿದು.

ತಿಕ್ಕುತ ತೇಯುತ ಮಿಕ್ಕುತ ಮೀರುತ
ಚೊಕ್ಕಬಂಗಾರವೆ ನಡೆಗೆ:
ಅಕ್ಕನ ವಚನವೆ ಕುಂದಣವಿಕ್ಕಿತು.
ಮಿಕ್ಕಿನ ಶರಣರ ನುಡಿಗೆ.

ಆದಿ ಅನಾದಿಯ, ಕಾಮಸಂಗ್ರಾಮದ
ನಾಮ-ನೇಮಗಳೆಲ್ಲ ಹುರಿದು,
ಸ್ವಾನುಭಾವದ ಒಳಗೆ ತಾನು ತಾನಾದಳು
ಅನುವನರಗಿಸಿ ಘನವ ಬೆರೆದು.

ಬಸವಣ್ಣ ಅಲ್ಲಮರೆಲ್ಲರ ಮಲ್ಲಿಗೆ
ಕದಳಿಯ ಬನ ಬಿಟ್ಟ ಗೊನೆಯೆ:
ಉರಿಯ ಕೊಳ್ಳವ ಹಾಯ್ದು ಶ್ರೀಶಿಖರವೇರಿದೆ
ವಿರತಿ-ಸಂಕ್ರಾತಿಯ ತೆನೆಯೆ.

ಶರಣು ಮಾದೇವಿ ಹೊಂಗಿರಣವ ಬದುಕಿನ
ಭರಣಿಗೆ ತುಂಬಿಸಿ ತೆರೆಯೆ-
ತೆರಣೀಯ ಹುಳುವಿನ ಸರಣಿಯ ಬಿಡಿಸವ್ವ
ಶತಮಾನಗಳ ಮಬ್ಬು ಹರಿಯೆ.

## ಸಂಕ್ರಮಣ

(ಗೀತ ಶ್ರವಣಿಕೆ)

ನಿವೇದಕ:
ಮಾಸಕೊಮ್ಮೆ ಮಾಸದಂಥ ಹಾಸಭಾಸ ಪೃಥಿವಿಗೆ
ರಾಶಿಯಿಂದ ರಾಶಿಯೆಡೆಗೆ ಹೊರಟ ಸೂರ್ಯ ಮೈತ್ರಿಗೆ.
ತನ್ನ ಅಕ್ಷದೊಡನೆ ಸುತ್ತಿ ಭೂಮಿ ಸೂರ್ಯನತ್ತಲು
ಹಗಲು-ಇರುಳು ಅದೇ ಕಾರ್ಯ. ಅದೇ ಬೆಳಕು-ಕತ್ತಲು.

ಭೂಮಿ:
ಮಾರ್ಗಶೀರ್ಷ ಮಾರ್ಗದಲ್ಲಿ ಮೈಲುಗಲ್ಲು ದಾಟಿತು
ಪೌಷ್ಯದ ಹೊಸವೇಷದಲ್ಲಿ ಬೇರೆ ತಿರುವು ಮೀಟಿತು.
ವಿಷುವದಿಂದ ದೂರ ದೂರ ದಕ್ಷಿಣಕ್ಕೆ ಅಯನವು,
ಸುಕರವಾಗಿ ಮಕರದೆಡೆಗೆ ಹೊರಳೆ ದೇವನಯನವು.

ನಿವೇದಕ:
ಇಳೆಯು ತಲೆಯ ಬಾಗಿಸುತ್ತ ಬಂತು ರವಿಯ ಕೆಲದಲಿ
ಒಲಿದು ಒಲಿಯೆ ಬೇರೆ ಹೊಳಪು, ಬೇರೆ ಭಾವ ನೆಲದಲಿ.
ದಾಕ್ಷಿಣ್ಯದ ಮೂಕಪ್ರಶ್ನೆ ಉತ್ತರಕ್ಕೆ ಕಾಡಿತು:
ಉತ್ತರಾಯಣಕ್ಕೆ ತಿರುಗಿ ಸಂಕ್ರಮಣವೆ ಮೂಡಿತು.

*   *   *

[ಸುಗ್ಗಿಯ ಕುಣಿತದ ಹರ್ಷಧ್ವನಿ]
ರೈತ ೧: ಆಹಾ! ಚಳಿಯು ಕಳೆದುಹೋಯ್ತು
ಬಿಸಿಲಿಗೆಲ್ಲ ಬನ್ನಿರೋ
ರೈತ ೨: ಗೋದಿ-ಬೆಳಸಿ ತಿನ್ನಿರೋ
ರೈತ ೧: ಕಂಬಳಿಯನು ತೆಗೆದು ಇಟ್ಟು
ಮುಗಿಲಿಗೆ ಕೈಮುಗಿಯಿರೋ
ರೈತ ೨: ಹಗಲಿಗೆ ಮೈ ತೆರೆಯಿರೋ
ರೈತ ೧,೨: ಆಹಾ! ಚಳಿಯು ಕಳೆದುಹೋಯ್ತು
ಬಿಸಿಲಿಗೆಲ್ಲ ಬನ್ನಿರೋ,
ರೈತ ೩: ಸುಗ್ಗಿಯನ್ನು ಮುಗಿಸಿ ನಾವು
ಬಂದೆವಣ್ಣ ಬಯಲಿಗೆ-

ರೈತ ೪: ಒಟ್ಟಿ ಮೇವು ಬಣಿವೆಗೆ.
ರೈತ ೩: ಗೋದಿ ತಿರುಗಿ ಹುಗ್ಗಿಯಾಯ್ತು
ಕುಸುಬೆ ಬಂತು ಕೊಯಿಲಿಗೆ-
ರೈತ ೪: ಹಸಿವು ಹಬ್ಬ-ಹುಣಿವೆಗೆ.

[ತೋಟದಲ್ಲಿ ಕಾಲುವೆಯ ಜುಳುಜುಳು ದನಿ]
ರೈತ ೧, ೨: ಕೈಯೆತ್ತರ ಬೆಳೆದ ಕಬ್ಬು
ಹಸುರು ಗರಿಯ ಬಿಚ್ಚಿದೆ
-ಹೊಸ ತುರಾಯಿ ಚುಚ್ಚಿದೆ.
ರೈತ ೩, ೪: ತೋಟದಲ್ಲಿ ನವಿಲ ಕುಣಿತ
ನಮಗು ಕುಣಿಯಹಚ್ಚಿದೆ.
-ಕೇಕೆ ಹೊಡೆಯಹಚ್ಚಿದೆ.

ರೈತನ ಹೆಂಡತಿ:
ಕುಸುಬೆ ಹೂವ ಕುಸುರಿನಂಥ
ಕುಬಸ ಕೊಡಿಸುತಾನೆ;
ಹಸುರು ಹತ್ತಿ-ಹೊಲದ ನಡುವೆ
ತೊಳೆಯ ಬಿಡಿಸುತಾನೆ.

ಮತ್ತೊಬ್ಬ ರೈತನ ಹೆಂಡತಿ:
ಒಡೆದ ತುಟಿಗೆ ಕಡಲೆ ಗಿಡದ
ಹುಳಿಯ ತೊಡೆಯುತಾನೆ,
ಕಾಯಿ ಸುಲಿದು, ಕಾಳು ಮಾಡಿ
ನನಗೆ ತಿನಿಸುತಾನೆ.

ಇನ್ನೊಬ್ಬ ರೈತನ ಹೆಂಡತಿ:
ಕಾಲ ಪಿಲ್ಲೆ, ಮೂಗುಬಟ್ಟು
ಮಾಡಿ ಕೊಡಿಸುತಾನೆ;
ಜರದ ಪಟಕ ಸುತ್ತಿಕೊಂಡು
ಹೂವ ಮೂಡಿಸುತಾನೆ.

ರೈತರು ಹಾಗೂ ಅವರ ಹೆಂಡಂದಿರು:
ಹಬ್ಬ ಬಂತು ಹಬ್ಬವೊ
ನಮ್ಮ ದುಡಿಮೆ ದಿಬ್ಬವು;
ದೀನರನ್ನು ದಲಿತರನ್ನು

ತಬ್ಬಿಕೊಂಡ ಕಬ್ಬವೊ,
ಹಬ್ಬ ಬಂತು ಹಬ್ಬವೋ
ನಮ್ಮ ದುಡಿಮೆ ದಿಬ್ಬವು.
[ಹಾಡು ಮೆಲ್ಲಮೆಲ್ಲನೆ ದೂರ ಸರಿಯುವುದು]

*      *      *

ಕವಿ:

ಮೂಡಗಾಳಿ ಎಡವುತಿರೆ
ಪಡುವಗಾಳಿ ತಡವುತಿರೆ
ಕುಳಿರು ಕುಳಿತು ನಡುಗುತಿರೆ
ನೋಡಿದ ರವಿಯು;

ಬಿಸಿಲು ಕಾಸಿ ಬೆಚ್ಚಗಿರೆ
ಗಿಡದ ತೊಗಟೆ ಬಿಚ್ಚುತಿರೆ
ಕುಡಿಯು ಮುಡಿಗೆ ಚಾಚುತಿರೆ
ಹಾಡಿದ ಕವಿಯು.

ಹಿಂದೆ ಹೋದ ಎಳ್ಳವಸೆ
ಹಿಂಗಾರಿಯು ತುಂಬಿ ದಿಸೆ
ಸೀಗೆಗುಂಡ ಆ ಉಣಿಸೆ
ಈಗಲು ರುಚಿಯು;

ಬನದ ಹುಣಿವೆ ತುಂಬಲಿದೆ
ಬನಶಂಕರಿ ಹಂಬಲಿದೆ
ಸಂಕ್ರಾಂತಿಯ ನಂಬಲಿದೆ
ಇಂದಿನ ಶುಚಿಯು.

ಅಗಲಿದವರು ಕೂಡಿಕೊಂಡು
ತಮತಮಗೇ ಹಾಡಿಕೊಂಡು
ಬಂಧುಬಳಗ ನೋಡಿಕೊಂಡು
ಸಾಗಲಿ ಬದುಕು.

ದಕ್ಷಿಣದಿಂದುತ್ತರಕ್ಕೆ
ಪೂರ್ವದಿಂದ ಪಶ್ಚಿಮಕ್ಕೆ
ಸಂಕ್ರಮಣವು ಹಾಸು-ಹೊಕ್ಕು
ಮೂಡಲಿ ಬೆಳಕು.

*  *  *

[ನದಿಯ ಕಲಕಲ ರವ; ಹಕ್ಕಿಗಳ ಚಿಲಿಪಿಲಿ ಧ್ವನಿ]

ಗಂಡು: ಮೊರೆಮೊರೆಯುತ ಹರಿವ ಕೃಷ್ಣೆ
ಕಳೆವಳೆಮ್ಮ ತೃಷ್ಣೆ.

ಹೆಣ್ಣು: ತೆರೆತೆರೆಗಳ ಮಲಪ್ರಭೆ
ತೆರೆಗಳೆಂಥ ಶೋಭೆ!

ಗಂಡು: ತೂಗಿ ತೊನೆವ ತುಂಗಭದ್ರೆ.
ಪುಣ್ಯದ ಚಿರಮುದ್ರೆ.

ಹೆಣ್ಣು: ಕಲಕಲರವ ಕಾವೇರಿಗೆ
ಶ್ರೀರಂಗನ ನಿದ್ರೆ.

ಗಂಡು: ಬನವಾಸಿಯ ಕಾನನದೆದೆ
ತಣಿಸುವ ಶರ ವರದೆ.

ಹೆಣ್ಣು: ಹೊಳೆ-ನದಿಗಳ ತಿಳಿಜಲದಲಿ ಮೀಯುವ ಬಾರಾ
ಮೈಮನಗಳ ಕೊಳೆ ತೊಳೆಯುವ, ಮಾರ್ಪೊಳೆಯುವ
ಬಾರಾ

ಗಂಡು: ಈ ತೀರ್ಥದಿ ಮುಳುಗೇಳುವ, ತಲೆತೊಳೆಯುವ ಒಮ್ಮೆ
ಸರ್ವರಿಗೂ ಪರ್ವಕಾಲ, ಹೊಸ ಬಾಳಿನ ಹಿರಿಮೆ.

ಗಂಡು - ಹೆಣ್ಣು ದನಿಗೂಡಿ:
ಕೂಡಲದಲಿ ಮೌನ ಧ್ಯಾನ
ಸಂಗಮವೇ ಶಿವನ ತಾಣ
ಹರಿಯುವುದೇ ಜೀವತ್ರಾಣ
ಜಗವೆಲ್ಲವು ಜಂಗಮ.

ಸೊಗಲದಲ್ಲಿ ಜೋಗ-ಯೋಗ
ನವಿಲುತೀರ್ಥ ಏಕಭೋಗ
ಸೋಮೇಶ್ವರ ನಿಂತ ಜಾಗ
ಶಾಲ್ಮಲೆಗಿದೆ ಉಗಮ.

ಗಂಡು : ದೂರದಿಂದ ಬಂದೆವೊ
ಹೆಣ್ಣು : ದಡದಡದಲಿ ನಿಂದೆವೊ
ಗಂಡು : ಆಹಾ ನೀರ ಮಿಂದೆವೊ
ಹೆಣ್ಣು : ಹೊಸತೇನೊ ಕಂಡೆವೊ

ಗಂಡು ಹೆಣ್ಣು ದನಿಗೂಡಿ:
ಈ ಚೆಲುವಿಗೆ ಈ ಒಲವಿಗೆ
ನಮೋ, ಎಂದು ಅಂದೆವೊ
ನಮೋ, ಎಂದು ಅಂದೆವು

*　　*　　*

[ಮನೆಮನೆಗೆ ಎಳ್ಳು-ಬೆಲ್ಲ ಸವಿದುಕೊಳ್ಳುವ ಸಂಭ್ರಮ]
(ಹಿನ್ನೆಲೆಯಲ್ಲಿ)
ಎಳ್ಳೀಗೆ ಎಣ್ಣೀಗೆ, ಮಿಂಚುವ ಕಣ್ಣೀಗೆ
ಹಂಚುವ ಬೆಲ್ಲದ ಕಣ್ಣಿಯಿದೆ.
ಮಿರಿಮಿರಿ ಮಿಂಚುವ ಸೀರೆಯು ಕುಪ್ಪಸ
ತರತರದೊಡವೆಯ ಬಣ್ಣವಿದೆ.
ಎಳೆಯರು ಗೆಳೆಯರು, ಕುಲುಕುಲು ನಗುವರು
ಕಲಕಲ ಹಚ್ಚಿದ ಹೆಂಗಸರು;
ಹಳಬರು, ಹೊಸಬರು, ಮಕ್ಕಳು ಮರಿಗಳು
ಚಕ್ಕಂದವಾಡುತ ಕುಳಿತಿಹರು.

ಹೆಂಗಸರು: ಹಳ್ಳೀಗೆ ದಿಳ್ಳೀಗೆ ಬಳ್ಳಿಬಳ್ಳೀಯಾಗಿ
ನೇಹದ ನೆಂಟನು ಸುರಿದವರು
ಹಸುರೀಗೆ ಕುಸುರೀಗೆ ಹಲವಾರು ಹೆಸರಿಗೆ
ಪ್ರೀತಿಯ ಮಳೆಯನು ಕರೆದವರು.
ಎಳ್ಳು-ಬೆಲ್ಲಾ ಕೊಳ್ಳಿ, ಒಳ್ಳೊಳ್ಳೆ ಮಾತಾಡಿ
ಸುಳ್ಳಿಗೆ ಸೊಟರಿಗೆ ಕಿವಿಗೊಡದೆ.
ಕಳ್ಳು-ಬಳ್ಳೀಗೊಗೆದ ಹೂವಾಗಿ ಬಾಳೋಣ
ಜಳ್ಳನು ಗಾಳಿಗೆ ತೂರೋಣ.

(ಹಿನ್ನೆಲೆಯಲ್ಲಿ)
ಎಳ್ಳಿಗೆ ಎಣ್ಣಿಗೆ ಮಿಂಚುವ ಕಣ್ಣಿಗೆ
ಹಂಚುವ ಬೆಲ್ಲದ ಕಣ್ಣಿಯಿದೆ.

ಗಂಡಸರು: ತಮಿಳಿನ ಪೊಂಗಲ, ನಾಡಿಗೆ ಮಂಗಲ
ಹಾಲು ಬೆಲ್ಲದಕ್ಕಿ ಪಾಯಸವು,
ಸಕ್ಕದವಾದರು ಸಂಕ್ರಾಂತಿ ಕನ್ನಡ-
ಹತ್ತು ದೀನಸಿನಡಿಗೆ ಹೊಸ ರುಚಿಯು.
ಬಾಲ್ಯದ ಚಿಗುಳೀಯ, ಹರೆಯದ ಮರೆಯದ
ಒನಪು ಒಯ್ಯಾರದ ಸಂಗತಿಯ
ನೆನೆಯುತ ನಲಿಯೋಣ, ಹೊಸತೆಲ್ಲ ಕಲಿಯೋಣ
ಸಂಸಾರದೊಗಟನ್ನು ಒಡೆಯೋಣ.

ಹೆಣ್ಣು-ಗಂಡು ದನಿಗೂಡಿ
ಎಳ್ಳಿಗೆ ಎಣ್ಣೆಗೆ ಮಿಂಚುವ ಕಣ್ಣಿಗೆ
ಹಂಚುವ ಬೆಲ್ಲದ ಕಣ್ಣೆಯಿದೆ.
ಎಳ್ಳು-ಬೆಲ್ಲಾ ಕೊಳ್ಳಿ, ಒಳ್ಳೊಳ್ಳೆ ಮಾತಾಡಿ
ಸುಳ್ಳಿಗೆ ಸೊಟರಿಗೆ ಕಿವಿಗೊಡದೆ.
[ಹಾಡಿನ ಅಲೆಗಳು ಬರುಬರುತ್ತ ದೂರ ಸರಿಯುವವು.]

## ನೆಲದ ಮಕ್ಕಳಿಗೆ ನಲ್ವಾಡು
**(ರೂಪಕ)**

**ತುಂಗಭದ್ರೆ:**

ಬಾನಿನಲ್ಲಿ ಕಿರುಮೋಡವಾಗಿ ಕರುಮಾಡದಲ್ಲಿ ಬೆಳೆದೆ
ಗಾಳಿಯೊಡನೆ ತೇಲಾಡಿ ಹೀಗೆ ಓಲಾಡಿ ದಿನವ ಕಳೆದೆ;
ಚಿಕ್ಕೆ-ಚಂದ್ರಮರ ಮೇಳದಲ್ಲಿ ಚಕ್ಕಂದವಾಡುತಿರಲು
ನೆಲದ ಮಕ್ಕಳಕ್ಕರೆಯ ಕರೆಗೆ ನನ್ನೆದೆಯು ಕರಗುತಿರಲು-

ಮೆಲ್ಲನಿಳಿದೆ ಗಿರಿಶಿಖರದಲ್ಲಿ ಸಹ್ಯಾದ್ರಿ ಸೆರಗಿನಲ್ಲಿ
ನೆಲದ ಮೈಯ ತೊಳೆದಂತೆ ಮಿಂಚಿ ಮೈಗರೆದೆ ಬೆರಗಿನಲ್ಲಿ.
ನೀರಾಗಿ ಹರಿದು ಪಾರಾಗಿ ಬಂದೆ ಝುರಿ-ತೊರೆಯ ತೋಳಿನಲ್ಲಿ
ತುಂಗೆಯಲ್ಲಿ ನಾ ಭದ್ರೆಯಾಗಿ ತುಂತುಂಬಿ ಹಂಪೆಯಲ್ಲಿ.

ಮೈಮುರಿದು ಬಂದೆ, ಕೈಚಾಚಿ ನಿಂದೆ, ಭೋರ್ಗರೆದು ಹರಿದೆ ಮುಂದೆ
ಹೊಲ-ಗದ್ದೆ-ತೋಟಪಟ್ಟಿಯಲಿ ಕಣ್ಣುಮನವೆಲ್ಲ ತುಂಬಿಕೊಂಡೆ.
ಹಳೆಕೋಟೆಗಳನು ಹೊಸಪೇಟೆಗಳನು ನಾ ದಾಟುತಿರುವ ಹಾಗೆ
ರಾಟಿಯಲ್ಲಿ ಹೊಸನೂಲು ಹೊರಟು ನಡೆದಲ್ಲೆ ಬಟ್ಟೆಯಾದೆ.

ನಿಮ್ಮ ಮನಸು ಹೊಸ ಕನಸು ಕಂಡು ನಡುದಾರಿಯಲ್ಲಿ ತಡೆದೆ
ಜಲಾಶಯದ ವಿಸ್ತೀರ್ಣದಲ್ಲಿ ಹೊಸಹುಟ್ಟು ಕಟ್ಟು ಪಡೆದೆ.
ಆ ವಿರೂಪಾಕ್ಷನಡಿಯ ತೊಳೆದು, ಗೋಪುರದ ಗಂಟೆ ನುಡಿದು-
ಹತ್ತು ಕಡೆಗು ಕರೆದತ್ತ ಹರಿದೆ ಒಕ್ಕಲಿಗೆ ಒಡಲು ತೆರೆದು.

**ರೈತ:**

ಜುಳು ಜುಳು ಜುಳು ಬಂದಳಣ್ಣಾ
ತಾಯಿ ತುಂಗಭದ್ರೆಯು;
ಏಳಿರಣ್ಣ ಏಳಿರೋ
ಸಾಕು ನಮಗೆ ನಿದ್ರೆಯು.

ಹಳ್ಳಿ-ಪಳ್ಳಿ, ಹಾಳು-ಬೀಳು
ಹೊಸ ಹಸುರಿನ ಮುದ್ರೆಯು;
ನಮ್ಮಾಸೆಯು ತವರುಮನೆಯು
ತಾಯಿ ತುಂಗಭದ್ರೆಯು.

**ರೈತನ ಹೆಂಡತಿ:**

ಬಡವರ ಮನೆ ಭಾಗೀರಥಿ
ಬೆಳಗುವೆನಿದೊ ಆರತಿ;
ಮಣ್ಣಿನಲ್ಲಿ ಚಿನ್ನವಾಗಿ
ಬಂದೆಯಮ್ಮ ಭಾರತಿ.

ನಿನ್ನ ತಂಪು ಜಗದ ಸೊಂಪು
ಬೆಳೆಯ ಕಂಪು ಬೀಸಿದೆ;
ನೀನೆ ನಮ್ಮ ಓಲೆಭಾಗ್ಯ
ನಿನಗೆ ಹಡದಿ ಹಾಸಿದೆ.

**ರೈತನ ಸಮೂಹ:**

ನಾವೆಂದಿಗು ಮೈಮರೆಯುತ
ಕೈ ತುರಿಸುತ ನಿಲ್ಲೆವು;
ಮೈಮುರಿಯುತ ದುಡಿವೆವಿನ್ನು
ಉಳಿದುದನೇನೊಲ್ಲೆವು.

ನಮ್ಮ ಹೊಲವ ಹದಗೊಳಿಸುತ
ತಿರುಗಿ ಹರಗಿ ಬರುವೆವು;
ಒಂದು ಬಿತ್ತಿ ಹತ್ತು ಬೆಳೆದು
ಮನೆಗೆ ಮುತ್ತು ತರುವೆವು.

ದನಗಳ ಮೈತೊಳೆದು, ಹೊಟ್ಟೆ-
ತುಂಬ ಮೇವು ಕಣಿಕೆಯು;
ಹಾಲು, ಮೊಸರು. ಮಜ್ಜಿಗೆಯಲಿ
ಕೈತೊಳೆಯುವ ಎಣಿಕೆಯು.

ಪಂಚಾಯತಿ ಕಟ್ಟೆಯಲ್ಲಿ
ಎಲೆಯಡಕೆಯನುಗುಳುತ
ಕೂಡೆವಿನ್ನು ನೊಣ ಹೊಡೆಯುತ
ಅವರಿವರನು ತೆಗಳುತ.

ಗುದ್ದಲಿಯಿದೊ ಹೆಗಲ ಮೇಲೆ
ಗಳೆ ಬಿಟ್ಟೆವು ಬೆಳಗಿಗೆ-
ಕಳೆ ತೆಗೆವೆವು, ಕೊಳೆ ಒಗೆವೆವು
ಸುಳಿದೆಗೆವೆವು ಬಾಳಿಗೆ.

ಶಾಲೆಯ ಕಿರುಮಕ್ಕಳ ನಗೆ
ಅಕ್ಕರಗಳು ದುಂಡಗೆ-
ಜನಗಣಮನ ಜಯಕಾರವು
ಕಿವಿ ತುಂಬಿದೆ ಹಾಡಿಗೆ.

**ಪಶ್ಚಾತ್ತಾಪ ಪಡೆದ ರಾಜಕಾರಣಿ:**

ಸುಳ್ಳುಕನಸು ಸಿಂಗರಿಸೆ
ಜೊಳ್ಳುಕಾಳು ತಂದಿರಿಸೆ
ಮಳ್ಳುಮಾಡಿ ಮೈಮರೆಸೆ
ಇದೊ ನೀಡುವೆ ಭರವಸೆ.

ವೋಟಿಗಾಗಿ ಬೇಟೆಯಲಿ
ಕಳ್ಳಸಂತೆಪೇಟೆಯಲಿ
ಭಾಷಣಗಳ ರಾಟೆಯಲಿ
ಪಿಸಿನೂಲನು ತೆಗೆಯೆ.

ಗಾಳಿ ಗುದ್ದಿ ಕೈನೋಯಿಸೆ
ಗೂಳಿಯಂತೆ ಮೈಬಾಯಿಸೆ
'ನಾಳೆ' ಎಂದು ಜನ ಕಾಯಿಸೆ
ಮಾಡೆನು ಅತಿಯಾಸೆ.

ಟೊಪ್ಪಿಗೆಯನು ಒಪ್ಪಿಸಿದೆ
ಬೊಕ್ಕಣಗಳ ಝಾಡಿಸಿದೆ
ತಪ್ಪು-ನೆಪ್ಪು ಮುಂದಿರಿಸಿದೆ
ಜನತೆಗೆ ಕೈಮುಗಿದೆ.

ಕವಿ:

ನೆಲವು ಕರೆದದ್ದಾಯ್ತು, ನೀರು ಹರಿದದ್ದಾಯ್ತು
ಆಕಾಶ ನುಡಿಯುತಿದೆ: ಕೆಳಗೆ ನೋಡು;
ನಿನ್ನ ತೋಳಿನ ಬಲದ ಮೇಲೆ ತೂಗಾಡುವದು
ನಿನ್ನ ನಾಡಿನ ಚೆಲುವು ಕಾಡು-ಮೇಡು.

ಅಂಗುಲಂಗುಲ ನೆಲವು ಮಂಗಳವ ತೆರೆಯುತಿದೆ
ತಿಂಗಳಿನ ಬೆಳಕಿನಲಿ ಹಂತಿ-ಹಾಡು;
ಕಣಕಾಲ ರಾಶಿಯಿದೊ ಮೊಣಕಾಲ್ಗೆ ಬಂದಿಹುದು
'ಬಸವ ಬಸವಾ' ಎಂದು ಪಂಕ್ತಿ ಮಾಡು.

ಒಕ್ಕಲಿಗ ದುಡಿದದ್ದು ದಂಡಕ್ಕೆ ಹೆಂಡಕ್ಕೆ;
ಹಂಡಬಂಡರ ಮಾತು ಸುಳ್ಳುಮಾಡು;
ಕೋರ್ಟಿನಲಿ ಸುಳಿಯದಿರು, ಪಾರ್ಟಿಗಳ ಬೆಳೆಸದಿರು
ಸೋಮಾರಿಗಳ ಹಿಡಿದು ಛೀಮಾಡಿಸು.

ನಿನ್ನ ಮನೆ ಮಠ-ಮಾನ್ಯ, ನಿನ್ನ ಹೊಲ ಧನ-ಧಾನ್ಯ
ನೀ ಬೆಳೆದ ತೆನೆಗಳೇ ಹೊಂಬಾವುಟ;
ನಿನ್ನ ಬಂಡಿಯ ಗಾಲಿಯಲ್ಲಿ ತಿರುಗಿದೆ ಜಗವು
ನಿನ್ನಿಂದಲೇ ದಿಲ್ಲಿ, ಮಂತ್ರಿ-ಮಕುಟ,

ಕಲ್ಲು-ಕಟ್ಟಡದಲ್ಲು ಹುಲ್ಲು ಗರಿ ಚಾಚುವದು-
ಎಲ್ಲೊ ಬಿದ್ದರು ಬೀಜ ಬೆಳೆವ ಬಯಕೆ;
ನಮ್ಮ ಅಬ್ಬರವೆಲ್ಲ ಅದಕೆ ಗೊಬ್ಬರವಾಗಿ
ಹಬ್ಬುವದು ಮುಗಿಲಹನಿ ಬಂದು ಸೋಕೆ.

ಗಡಿ ಕಾಯ್ದು ಮಡಿದವರು, ನೀವದಕೆ ದುಡಿದವರು
ಹೊಡೆಹಾಯ್ದು ಬಾಗುವುದೆ ಹಿರಿಯ ಬದುಕು;
ನಿಮ್ಮ ನುಡಿಯನೆ ಹಿಡಿದು, ಮಿಡಿದು, ಕೇಕೆಯ ಹೊಡೆದು
ಪಡೆದ ಹಾಡಿದು; ಅಲ್ಲ ಬೇರೆ ಸರಕು.



# ನಗರದಲ್ಲಿ ನೆರಳು

೧೯೬೯-೧೯೭೪

## ನಗರದಲ್ಲಿ ನೆರಳು

ಮಟ ಮಟ ಮಧ್ಯಾಹ್ನದಲ್ಲಿ
ನೆರಳು ಹುಡುಕುತ್ತ ಹೊರಟಿದ್ದೇನೆ.
ಹಿಡಿದ ಕೊಡೆಯೂ ಕಾದು
ಭಾರವಾಗಿ ಬೇಸರಾಗಿದೆ ಅದೂ.
ದಾರಿಯಿಕ್ಕೆಲಕು ತಣ್ಣಗೆ ಮೈಚಾಚಿ
ನಿಂತಿರುವ ಗಿಡದ ಟೊಂಗೆಗಳನ್ನು, ಕೈ ಚಾಚಿ
ವಿದ್ಯುತ್ತಂತಿಗಡ್ಡ ಬರುತ್ತವೆಂದು
ಅಡ್ಡಾತಿಡ್ಡ ಕಡಿದುಹಾಕಿದ್ದಾರೆ.
ಒಪ್ಪೋರೆ ನೆರಳೊ? - ಬಿದ್ದಿದೆ ಅಸಡ್ಡಾಳ ಮುಳ್ಳುಬೇಲಿಯ ಮೇಲೆ.

ಎಷ್ಟೋ ದಿನಗಳಿಂದ ಇಷ್ಟೆತ್ತರ ಬೆಳೆದು
ಸುತ್ತೆಲ್ಲ ಛತ್ತರಿ ಹಿಡಿದು
ಅಮರವಾಗಿದ್ದ ಮರಗಳನ್ನು
ಟ್ರಕ್ಕು ಬಂದು ಹಾಯುತ್ತವೆಂದು
ದನ ಬಂದು ನಿಲ್ಲುತ್ತವೆಂದು
ದಾರಿಯನ್ನೆಲ್ಲ ಇನ್ನಿಷ್ಟು ಅಗಲ ಮಾಡುತ್ತೇವೆಂದು

ಉದಾರಿಗಳು
ಕಡಿದು ಸೌದೆ ಒಟ್ಟಿದ್ದಾರೆ.

ಅಲ್ಲಲ್ಲಿ ತೋಟದ ತುಂಬ ಬಾಬ್ ಕಟ್ ಮಾಡಿದ,
ಆದರೂ ಹೂಮುಡಿದ
ನಾನಾ ನಮೂನೆಯ ಕಮಾನಿನ ಗಿಡಬಳ್ಳಿಗಳು-
ನೆಲಕೆ ತೊನ್ನು ಹತ್ತಿದ ಹಾಗೆ ನೆರಳು.
ಉದ್ದಕ್ಕೂ ಚುರುಗುಡುತ್ತಿರುವ ಟಾರು ರೋಡು;
ಅದಕ್ಕೂ ಮೂಡುತ್ತವೆ ನೂರೆಂಟು ಕೋಡು.
ಹಾಯಿಸಿಕೊಂಡು, ದಬಾಯಿಸಿಕೊಂಡು
ನಿಭಾಯಿಸಿಕೊಳ್ಳುವುದೇ ನೆಟ್ಟಗೆ ದಾರಿ ಹಿಡಿದವರ ಪಾಡು.
ಸಣ್ಣವನಿದ್ದಾಗ-
ನಮ್ಮೂರ ಹೊರಗಿನ ಆಲದ ಮರದ ದಟ್ಟ ನೆರಳಲ್ಲಿ
ಗೋಲಿಯಾಡಿ, ಬೆರಳಿಗೆ ನೆತ್ತರು ಬರುವಂತೆ ಡೀಕಿ, ಡೀಕಿಸಿ
ಒಬ್ಬರಿಗೊಬ್ಬರು ತೆಕ್ಕಿ ಬಿದ್ದು, ಅಂಗಿ ಹರಿದು
ಅತ್ತಿದ್ದು, ಮತ್ತೆ ನಕ್ಕಿದ್ದು, ಸಂತೋಷ ಉಕ್ಕಿದ್ದು
ನೆನಪಾಗುತ್ತದೆ-
ಈ ನಗರದ ಸುಡುವ, ಸುತ್ತು ಬಳಸುವ, ಕತ್ತು ಹೊರಳಿಸುವ
ಕುತ್ತು ಒಡ್ಡುವ ದಾರಿಯಲ್ಲಿ
ಹೀಗೆ
ಮಂದಿಯ ನಡುವೆ
ನೆರಳು ಹುಡುಕುತ್ತ ನಡೆಯುವಾಗ.

## ವಿನಾಯಕರಿಗೆ ವಂದನೆ

ತುಂಬಿದ ತಲೆಯ ಬೆಳ್ಳಿಗೂದಲಿಗೆ ಬೆರಳಾಡಿ
ಚಿಂತನೆಯ ಅಪ್ಪುಪ್ಪೈಲಿನ ಹರಳ ಹೊರಳಿಸುತ
ಅಂತಃಕರಣದಂಗೈಯಲ್ಲಿ ತೂಗಿ, ಬದುಕ
ಬೆಲೆಗೈವ: 'ಅದೇನದಲ್ಲ' ಅದೆಲ್ಲವ ಕೂಡಿ.
ಕನ್ನಡಕ ದಾಟಿ, ನುಣ್ಣಗೆ ಎದೆಯ ಮೀಟಿ, ಹದ
ಬರುವವರೆಗೂ ಮಿದಿಯುವ ದೃಷ್ಟಿ. ಸೂಟು ಬೂಟನು
ಕಳಚಿ, ಲಂಡಂಗಿ ಧೋತರದಿ ಮುಗುಳ್ನಗೆ ಹದನು.

'ಹಲೋ ಬರ್ರಿ' ; ತೆರೆಯುವದು ನಡುಮನೆಯ ಕಿಡಕಿ, ಕದ.
ಎಂಟು ದಿಕ್ಕಿನ ಗಾಳಿಯಲ್ಲಿ ಕಡಲಿನ ಹಾಡು,
ಮೂಡ-ಪಡುವಣ ನೆಳಲು-ಬೆಳಕಿನಲಿ ತೇಲುವರ-
ಸಂಚೆ, ಬಾಳ ದೇಗುಲದಿ ಸಮನ್ವಯ-ತೇರ
ಸಿಂಗಾರ. ಅರುವತ್ತರಲು ಭಾರಿ ಕಸರತ್ತು.
ಎತ್ತರದಲ್ಲು ಬಾಗಿ ಹತ್ತಿರ ಬರುವ ಮಹತಿ;
ಸಂಕ್ರಾಂತಿ: ಕೈಕುಲುಕಿದಂತೆ ದ್ಯಾವಾ-ಪೃಥಿವಿ.

## ಕರಿಕಿ-ಕಣಗಿಲ

ತೀರ ಎತ್ತರವಿರದ ದೇವಗಣಗಿಲ ಗಿಡದ
ಸುತ್ತು ನೀರುಂಡು ನಳನಳಿಸಿರುವ ಹಸಲೆ; ಎಳೆ
ವಿಸಿಲ ಮಿಂದು, ಸಂತೃಪ್ತಿ-ಸುಳಿಗಾಳಿಯಲಿ ತಲೆ-
ಯೊಲೆದು, ಮಾಸದ ಹಸುಗೂಸಿನಂತೆ ನಸುನಗುತ
ಕೊಂಬೆ ತುತ್ತುದಿಗೆ ಹಳದಿ-ಬಿಳಿ ಮಧುರ ಪಾಕದಿ
ಹೂವಿನರಾತಿಯ ಬಾನಿಗೆ ಹಿಡಿದು, ನಿರುಮ್ಮಳ
ನಿಂತ ರಸಿಕ: ಎಲ್ಲರಿಗು ನಿಲುಕುವ ಹಾಗೆ. ಒಳ-
ಹೊರಗೆ ತುಂತುಂಬಿ ಬರುವ ನಾದದ ತುಳುಕು. ಹದಿ-
ನೆಂಟು ಒಣ ಉಸಾಬರಿ ಇರದ ಮಾತು-ಮೈತ್ರಿಯ
ನಂಟು: ಗೆಂಟು ಗೆಂಟಿಗೆ ಒಡೆದ ನಾಲ್ಕಾರು ಎಲೆ-
ಚಿಗುರು; ನಿರಾಡಂಬರ ಟೊಂಗೆ. ಹೊಂಗೆಯ ಹಾಗೆ
ಹೂಂ ಎಂದು ಹೂಸುರಿದು ನೆಲವ ಮುಚ್ಚುವದಿಲ್ಲ.
ಕೆಳಗೆ ಕರಿಕಿ-ಪತ್ರಿಯ ಮೇಲೆ ಉದುರಿದ ಹೂವ
ಬೆರಳಿಂದೆತ್ತಿ ಮೂಸು: ಬೇಕಿಲ್ಲ ಹಾವ-ಭಾವ.*

## ಪಕ್ಷಿತಟಾಕ

ಮುಂಜಾವು-ಇಲ್ಲ-ಸಂಜೆ ಈ ಕೆರೆಯ ದೂರದಿ
ಕುಳಿತು ಕಣ್ಣೋಡಿಸುವೆ; ದಂಡೆ ಗಿಡಗಂಟಿಗಳ
ದುಂಡುಕಟ್ಟಿನಲ್ಲಿ ಕನ್ನಡಿಯಾಗಿ, ಮೋಡಗಳ

* ಡಾ. ಡಿ.ಎಸ್. ಕರ್ಕಿಯವರಿಗೆ ಅರುವತ್ತು ತುಂಬಿದಾಗ.

ನಭದ ಚಿತ್ತಾರವನು ಬಿಡಿಸಿತರೆ ಹತ್ತಿರದಿ-
ರಾಮ ಚಂದ್ರಬಿಂಬವ ಹಿಡಿದು ಅಳುವ ನಿಲ್ಲಿಸಿ-
ದಂತೆ ನನಗೂ ವಿರಾಮ. ರೈಲು ಕಂಬಿಯ ಜೋಡು-
ಗೆರೆ; ಆಚೆ ಕೆಂಪು ಮೊಗವೆತ್ತಿರುವ ಕಾಲೇಜು.
ನೆನಪಿನ ಮೋಜು; ಹೊಗೆಯಾಡುವಿಟ್ಟಂಗಿ ಭಟ್ಟಿ.
ಕೊಕ್ಕರೆ, ಕಪ್ಪೆ, ಮೀನು; ಇರಬಹುದಲ್ಲೆ ಹಾವು.
ಜೋತಿರುವ ಗೀಜಗ ಗೂಡು; ಒಂದೆರಡು ಗೋವು,
ತೆರೆಗೆ ಬಂದೆರಗಿ ಹಾರುವ ಹಕ್ಕಿ ನಾಲ್ಕಾರು-
ಇದಕು ಸಾಕಷ್ಟು ಪರಿವಾರ; ಸನಿಹದಲಿ ಬೇವು
ಮಾವು, ಕೆರೆಯ ತುಂಬು ಬಾಳಿಗೆ ನೀರೆ ಜೀವಾಳ;
ಕೆಸರು-ಕ್ಲೇಶವ ಸಹಿಸಿ ತಿಳಿದಾಗ ಭಾವಮೇಳ.

## ಅಂತರ

ಇಂದು ಸ್ವಚ್ಛಂದದಲಿ ಸಿಳ್ಳು ಹೊಡೆಯುತ, ಹಳ್ಳು
ಒಗೆಯುತ್ತ, ಅವರಿವರ ಟೀಕಿಸಿ, ಮೇಜು ಗುದ್ದಿ,
ಮಾಲೆ ಹಾಕಿಸಿಕೊಂಡು, ಮರುದಿವಸವೇ ಸುದ್ದಿ
ಬಾರದಿರೆ ಪತ್ರಿಕೆಯ ಬೈಯುತ್ತ, ಬಿಳಿಸುಳ್ಳು-
ಗಳ ಕಳ್ಳು ಹೀರಿ ನಡುಬೀದಿಯಲಿ ಜೋಲಿ ಹೊಡೆ-
ಯುತ್ತ, ಝೆಂಡಾ ಒಗೆಯುವ ನಮಗೆ ಹೇಗೆ ತಲೆಗೆ
ತಾಗೀತು; ನಾನು ಹುಟ್ಟುವ ಮೊದಲೇ ಬಿಡುಗಡೆಗೆ
ಹುಟ್ಟು ಹಾಕುತ, ರಟ್ಟೆ ಮುರಿಯುವವರೆಗೆ ದಂಡೆ
ತಲುಪಿಸಿದವರ ನೋವು-ಕಾವು? ಮೂರು ಬಣ್ಣದ
ಬಾವುಟದಡಿಗೆ ನೂರು ಬಣ್ಣಗಳೆಲ್ಲ ಬೆಳ್ಳಗೆ
ಹೊಳೆದು, ಲಾಠಿ-ಗುಂಡಿಗೆ, ಬೂಟು ಮೊಳೆ ತುಳಿತಕ್ಕೆ
ಪುಟಿದ ನೆತ್ತರು ಬರೆದ, ಬರೆಯಲಾರದ ಸಂಪದ.
ಪುಟ ತಿರುವಿದಂತೆ ಸ್ವರ್ಣ ಮಂದಿರದ ಬಾಗಿಲ
ಅಮೃತಸರದಲ್ಲಿ ಸಾವಿರದ ಕೆಂಪು ಕಮಲ.*

* ಜಾಲಿಯನ್‌ವಾಲಾಬಾಗ್ ದುರಂತ ಸ್ಮರಣೆ

## ಮತ್ತೆ ಮಳೆ

ಸಳಸಳ ಜುಳು ಜುಳು ರಪರಪ
ತಪ ತಪ ತೊಯ್ದವು ಕೋಟು ಪ್ಯಾಂಟು;
ಒಳ ಅಂಗಿಯ ಒಳಗೂ, ಬೆನ್ನಿನ ಹುರಿಗುಂಟ
ಹರಿಯಿತು ತಣ್ಣಗೆ ಕರೆಂಟು.
(ಮಗುವಿನ ಕನಸಿಗೆ ಹಾಸಿಗೆ ಹಸಿ ಒದ್ದೆ.)

ಮೊದಲಿಗೆ ಹತ್ತೇ ಮುತ್ತಿನ ಹನಿ
ತುಟಿ ಸವರಿತು ಹೀಗೆ-
ತಟ ತಟಕು, ಗುಟು ಗುಟುಕು
ಕಿಟಕಿಯೊಳಗಿಂದಲೆ ನೋಡಿದೆ:
ನೆನೆನೆನೆದೂದುವ ಸಿಳ್ಳಿನ, ಹೊಗೆಯುಗುಳುವ ಬಂಡಿ.
ಈಚೆಗೆ ಉಗಿಹಾಯುವ ಬಿಸಿ ಬಿಸಿ ತಿಂಡಿ.
ಅಬ್ಬಾ ಈ ಥಂಡಿ!
ಪಂಚಮಿ ಹಬ್ಬದ ಉಂಡಿ, ಜೊತೆಯಲಿ ತುಪ್ಪದ ಗಿಂಡಿ.
ಶ್ರಾವಣ ಮುಗಿಯಲು ಚಿಗಿವುದು ಉದ್ದಾಗಿಹ
ಮುದ್ದಾಗಿಹ ಗಣಪತಿ ಸೊಂಡಿ.

ಆ ಗಿಡದಡಿ ಬಾಗಿದ ಬೀಗಿದ ಗಂಡುಹೆಣ್ಣು
ಮುದುಕರು, ಹುಡುಗರು, ತುಡುಗರು
ಆರಿಸಿಕೊಂಡರು ತುಂಟರು ರಸದುಂಬಿದ ನೀರಲ ಹಣ್ಣು.
ಅಲ್ಲೇ ಕಡಿದುಗುಳಿದ ಬೀಜ: ನಾಲಗೆ ಜಾಂಬಳಿ ತಾಜಾ.
ನೆನಪಿನ ಸುರುಳಿಯ ಬಿಚ್ಚುತ ಉರುಳಿದೆ
ಕಾಲುವೆಯಲಿ ಕೆಂಪಾಗಿಹ ಮಳೆ ನೀರು-
ಇಡ್ಲಿಯ ಮುಳುಗಿಸಿ ಬಿಟ್ಟಿದೆ ಕಮ್ಮಗೆ ಸಾಂಬಾರು.
ಎಣ್ಣೆ ಹಚ್ಚಿ ಎರೆದಂತಿದೆ ಉದ್ದಕು ಡಾಂಬರು ರಸ್ತೆ
ಸರ‍್ರನೆ ಜಾರಿವೆ ಕಾರು-ಕೆರೆಯೊಳಗಿನ ಮರಿಮೀನು.
ಮುಸುಗುಡುತಿದೆ ಸಿಟಿಬಸ್ಸು
ಒಳಗಿದ್ದವರಿಗೆ ಹೊರಗಿನ ಮಳೆಹನಿ ಛಂದಸ್ಸು.
ಕುಡಿದೇ ಹೊರಟಿದೆ ಟ್ರಕ್ಕು-ನಡುನಡುವೇ ಬಿಕ್ಕು.
(ನಡುಬೀದಿಗೆ ಮಲಗಿದ ನಾಯಿಗೆ ಏನೋ ಸ್ವರ್ಗದ ಕನಸು.)
ಈ ದಾರಿಗೆ ಹೊತ್ತವರಿಲ್ಲದೆ ಕಲ್ಲು ಮಣ್ಣು?
ಪೆಟ್ರೋಲಿನ ಹನಿಹನಿ ಬರೆದಿವೆ
ಅಲ್ಲಲ್ಲಿಗೆ ನವಿಲಿನ ಗರಿ-ಕಣ್ಣು.

ಕೊಡೆ ಏರಿಸಿ ಹಿಡಿದವರು
ಕಚಲ್-ಪಚಲ್ ಯಾವುದೋ ಛಂದಕೆ ನಡೆದವರು
ಮುಖವೇ ಕಾಣದು, ತೊಯ್ದಿವೆ ನುಣ್ಣಗೆ ಮೊಣಕಾಲು.
ಹೊಯ್ದಾಡಿವೆ ನಿರಿಗೆಯ ಸಾಲು.
ಎಳೆಎಳೆಯಾಗುತ ಇಳೆಗಿಳಿದಿದೆ ಮುಗಿಲಿನ ಹೆಜ್ಜೇನು.
ವಿದ್ಯುದ್ದೀಪದ ಬೆಳಕೂ ತೊಯ್ದಿದೆ, ಎಲ್ಲಾ ಮಸಮಸಕು.
ಏನೋ ಬಾಯಿಗೆ ಬಂದಿತು, ಮರೆತೇಹೋಯಿತು ಜೋಕು.
ಹಚ್ಚನೆ ಹಸುರೆಲ್ಲವು ಬಂಗಾರದ
ಬಿಸಿಲನು ಹೊದ್ದು ಸಿಂಗಾರವಾಯಿತು.
ತುಂಬಿದ ಕೆರೆ-ತೆರೆಯಲಿ ಕಚಕುಳಿ
ಹಕ್ಕಿಯು ಹಾರಿದ ರೆಕ್ಕೆಯ ಪಟಪಟ ಸದ್ದು.
ಹನಿಹನಿಗಳ ವರ್ತುಲ, ಅಂಚಿಗೆ ಅಲೆ ಅಲೆ ಮುದ್ದು.

ತಲೆ ಬಾಗಿಲದಲಿ ಕೊಡೆ ಇಳಿಸಿ, ಕಾತಿಗೆ ಕಾಲೊರಸಿ
ಮೂಡಿವೆ ಹೆಜ್ಜೆ ಅಡುಗೆಯ ಮನೆವರೆಗು.
ಕುರ್ಚಿ, ಮೇಜು, ಟಾವೆಲ್ಲು, ಟಿಂಟಣಿಸುವ ಕಾಲ್‌ಬೆಲ್ಲು
ಅಣುರೇಣು ತೃಣ ಕಾಷ್ಠವು ಜುಣು ಜುಣು
ಕೆಂಡಕೆ ಕೈ ಕಾಯಿಸಿ ಕಾಫಿಯ ಗುಟುಕರಿಸು.
ಸುಟ್ಟಿಹ ಗೋವಿನ ಜೋಳದ ತೆನೆಗಾಳನು
ಮಕ್ಕಳ ಜೊತೆ ಮೆಲುಕಾಡಿಸು, ಅವರನು
ಕಾಡಿಸು, ಪೀಡಿಸು, ನಗಿಸು,
ಇದಕೆಲ್ಲಾ ಬೇಕಿಲ್ಲ ಯಾರ್‍ಯಾರದೊ ಶಿಫಾರಸು.

ಹಗಲೂ ಮಳೆ, ಇರುಳೂ ಮಳೆ
ಮಂದಗೆ ಸಂಧ್ಯಾಕಾಲ-
ಕನಸೂ ಮಳೆ, ನೆನೆದಿಹ ನೆನಸೂ ಮಳೆ
ಭೋರ್ಗರೆದಿವೆ ಒಳಗಿವಿಯಲಿ ದೂರದ ಹೊಳೆ-ದಿಡುಗು.
ಈಗಿಲ್ಲ: ಒಮ್ಮೆಲೆ ಹೊಮ್ಮುವ ಮುಂಗಾರಿನ ಗುಡುಗು.
ಈ ಬಾಳಿನ ಹಡಗು ಹೀಗೇ ಸಾಗಿದೆ, ಅದಕದರದೆ ಬೆಡಗು.
ಪ್ರಾಸಕ್ಕೇನೊ ಕೂಡಿತು ಡಗು-ಡುಗು
ಒಳಗಿಲ್ಲವೆ ನಡುಗು?
ಹಾಗಿದ್ದರೆ
ಈ ಕವಿತೆಯನಲ್ಲೇ ಮಡಗು.

## ಆಚೆ

ಅಣು-ಕಣಗಳ ವಿಭಜಿಸಿ ವಿಶ್ಲೇಷಿಸಿ ನೋಡುವ
ಕನ್ನಡಿ ಈ ಕ್ಷಣ. ಅನುದಿನವೂ ಅನುಮಾನದ
ಅವಶೇಷ. ದ್ವೇಷ-ವೇಷ-ಕ್ಲೇಶ ಸಂಕೀರ್ಣದ
ಮದ್ದಿನ ಕುಡಿಕೆಗೆ ಒಳಗೇ ಕೊಳ್ಳಿಯನಿಡುವ-
ಹಾರಿವೆ ಕಿಡಿವೂಗಳು ಬಿದ್ದಿದೆ ಬರಿ ಬೂದಿ.
ಎತ್ತುವ, ಬಿತ್ತುವ, ತುತ್ತುವ ಕೈಗಳಿಗೆ ಸಿಗದು
ಕೀಲಿಯ ಕೈ, ಗಾಳಿಗೆ ಗೋಣಾಡಿಸಿ ನಿಲ್ಲದು
ಒಂದೆಡೆ; ಒಂದೇ ಸಮ ಹುಡುಕುತ್ತಿದೆ ಹಾದಿ.
ಚಕ್ರದಿ ಅದೆ ಆಗಿದೆ, ನೂಕಿದೆ ಮತ್ತೊಂದು.
ಹಗಲಿರುಳು, ಋತುಮಾನವು-ಶತಮಾನದ ಬಿಂದು.
ಈ ಕ್ಷಣದಲಿ ತೂಗಿದೆ ತತ್ತರಿಸಿದೆ 'ಇಂದು'.
ಒಳಗೇ ಕತ್ತರಿಯಾಡಿಸಿ ಎಳೆಯುತ್ತಿದೆ 'ಮುಂದು'.
ಏರಿಳಿಯಲು ಕಾದಿವೆ ಗಿರಿ-ಕಂದರ; ಅದರಾಚೆ
ಕ್ಷಿತಿಜದ ಗೆರೆಯೆ? ಬೆಳಕಿನ ತೊರೆಯೆ? ಬರಿಮಿಂಚೆ?

## ಗಾಂಧಿ-ಶರದ್ಗೀತ

೧

ಬೆಳುಗಾಲದ ಬಿಸಿಲಿನಲ್ಲಿ ನಳನಳಿಸಿವೆ ಹೊಂದೆನೆ,
ಹೊಲ ತೋಟದ ಬೇಲಿಯಲ್ಲು ಎಲೆ-ಹೂಗಳ ವಂದನೆ.
ತಿಳಿಬಾನಿನ ತೆಳುನೀಲಿಗೆ ತಿಳಿಗೊಳವೇ ಚಂದನೆ
ಬೆಳುನಗೆಯನು ತುಳುಕಿಸುತ್ತ ಗಾಂದಿ ನಡೆದು ಬಂದನೆ?

೨

ಎರಡು ದಶಕವೆಲ್ಲ ಮಾಡಿ ಮುಗಿಸಿ-ಬಂತು ನೆನಪಿಗೆ
ಮನಮನಗಳ ದುರ್ಗಂಧವು ಮೂಸಿದಂತೆ ಸಂಪಿಗೆ.
ನೂರು ಸೋಲಿಗೂರುಗೋಲು: ಬನ್ನಿ ವಿಜಯ ದಶಮಿಗೆ-
ನೂರು ವರುಷಕೊಂದೆ ಹರುಷ ಸಾಕೆ ನಮ್ಮ ಪಾಲಿಗೆ?

೩

ಮುಂಗಾರ್ ಬೆಳೆ ಮಾಗುತಿರಲು ಹಿಂಗಾರಿನ ಸಸಿಗಳು
ನವರಾತ್ರಿಯ ಸಿಂಗಾರಕೆ ತೆರೆದ ಎಳೆಯ ಕಂಗಳು
ಸ್ವಾತಿಹನಿಯ ಜಾತಿ ಮುತ್ತು ಬಿತ್ತಿಬೆಳಗಿ ಕಾರ್ತಿಕ
ಹಲಸು ಬಾಳೆ ಪೇರಲಗಳ ಫಲಭಾರದ ಕೌತುಕ.

೪

ಮಣ್ಣ ಹಣತೆಯಲಿ ಬೆಳಕಿನ ಕುಡಿಗಳು
ಮಿಡಿದಿವೆ ಬಾನಿಗೆ ಕೈಮುಗಿದು-
ಲಕ್ಷ ಕೋಟಿ ನಕ್ಷತ್ರದ ಗುಡಿಯಲಿ
ಗಾಂಧಿ ಚಿತ್ತವಿದೆ ಕಣ್ದೆರೆದು.

೫

ತಿಳಿ ಬೆಳುದಿಂಗಳ ಶಾಲನು ಹೊದಿಸಿದೆ
ಗಾಂಧೀ ಹುಣ್ಣಿಮೆ ಜನಪದಕೆ;
ಸೀಗೆ-ಗೌರಿ, -ಸೇವಂತಿಗೆ ದಂಡೆಯು-
ಆರತಿ ಬೆಳಗಿವೆ ಪ್ರತಿಪದಕೆ.

*   *   *

ಬೆಳುಗಾಲದ ಬಿಸಿಲಿನಲ್ಲಿ ನಳನಳಿಸುವ ಹೊಂದೆನೆ
ಹೊಲತೋಟದ ಬೇಲಿಯಲ್ಲಿ ಎಲೆ-ಹೂಗಳ ವಂದನೆ.

## ಪದ್ಮಶ್ರೀ

ಆಶೆಯ ಕಿರಣಗಳಾಡದ
ಕತ್ತಲೆ-ಮಡು.
(ಜಿಂಯ್‌ಗುಟ್ಟುತ ಜೀವೊಡೆದಿವೆ ರೋಗಾಣು)
ಮೆಲ್ಲಗೆ ಮೇಲೆತ್ತಿದೆ
ಕಾಣದ
ಕರುಣೆಯ ಕೈ-
(ನರಳುತ್ತಿದೆ ಜೀವಾಣು)
ಹತ್ತೂ ಬೆರಳಿಗೆ ಹೊತ್ತಿವೆ ಜೀವದ ಮೋಂಬತ್ತಿ.

ದೇಹದ ಯಂತ್ರಾಗಾರವ ಮಾಂತ್ರಿಕನೊಲು ಹೊಕ್ಕು
ಕೌಶಲ್ಯದ ಶಲ್ಯವನ್ನಾಡಿಸಿ ಕಶ್ಮಲವನು ಕಿತ್ತು
ಸಲಿಗೆಯ-ಹೊಲಿಗೆಯ ಬೆರಳಾಡಿವೆ ಅಲುಗಾಡದೆ ಚಿತ್ತ
ದಾಟಿಸಿ ಸಂದೇಹದ ಕುತ್ತು; ತೊಳಗಿಸಿ ಚೈತನ್ಯದ ಮುತ್ತು.
ಆ ಲೋಕದ ಸೂರ್ಯನ ಹೊಂಗಿರಣದ
ಹಿಂಗದ ಮೆಲು ನಗೆ ಸೂಸಿ
ಈ ಲೋಕದ ತಿರುಗಣಿ ಮಡುವಿನ
ನಡುವಿನ ಅಸ್ವಾಸ್ಥ್ಯವ ಸೋಸಿ,
ಬಿಡುವಿಲ್ಲದೆ
ಜೀವದ ದಲ ದಲ ದಲವರಳಿಸಿ
ಭರವಸೆ ತೋರಿದೆ ಬದುಕಿಗೆ
ಮುಂಜಾವದ ಪದ್ಮಶ್ರೀ.*

## ದೀಪಾವಳಿ

೧

ಅಲ್ಲಲ್ಲಿ ಹುಲ್ಲು ಹಳದಿಗೆ ತಿರುಗಿ, ಗದ್ದೆಯಲಿ ನೆಲ್ಲು ತೆನೆಹಾಯ್ದು
ಗಾಳಿಯುದ್ದಕು ಬಾಗಿ ಬಾಚುತ್ತ ಬಿಸಿಲಿನಲಿ ಮಿರಿ ಮಿರಿ ಮಿಂಚಿ;
ಆಕಾಶದಲಿ ಸ್ವಾತಿಯ ಮೋಡ ಸುರಿದು ಹಿಂಜರಿದು
ಕ್ಷಿತಿಜದಂಚಿನಲಿ ಸಂಜೆಯ ಸೂರ್ಯ ಝಗಝಗಿಸಿ
ಅಲ್ಲೊಂದು ಇಲ್ಲೊಂದು ಚಿಕ್ಕೆ ಕುತೂಹಲದಿ ಕಣ್ಣುತೆರೆದಾಗ
ಬೆಳಗೆ ಮಂಜು ಮುಸುಕಿನಲಿ ಬಂತು ದೀಪಾವಳಿ.

೨

ಗೋದಿ ಸಸಿ ನಾಟಿ, ಜೋಳದ ತುಂಬುತೆನೆ ತಲೆದೂಗಿ
ಹುಚ್ಚೆಳ್ಳು ಹಚ್ಚಹಸುರಿಗೆ ಅಚ್ಚಬಂಗಾರದಂಚಾಗಿ;
ದನಕರುಗಳೆಲ್ಲ ಮೇದು ಮೆಲುಕಾಡಿಸುತ ಬರುವಾಗ
ಕೆರೆಯಂಚಿನಲ್ಲಿ ಸಾಲಾಗಿ ಕುಳಿತ ಬೆಳ್ಳಕ್ಕಿ ಬಾನಿಗೆ ಹಾರಿ,
ನಸುಗಪ್ಪಿನಲ್ಲಿ ತೊಗಲಬಾವಲಿ ಹಿಂಡ ಹಿಂಬಾಲಿಸುತ
ಮನೆಮನೆಯ ಶಿವನಬುಟ್ಟಿಗೆ ಇಳಿದು ಬಂತು ದೀಪಾವಳಿ.

---

* ಡಾ. ಆರ್.ಬಿ. ಪಾಟೀಲರಿಗೆ 'ಪದ್ಮಶ್ರೀ' ದೊರೆತಾಗ

೩

ನೆಲದ ಹುಲ್ಲಿನ ಮೇಲೆ ಮುಗಿಲ ಮಲ್ಲಿಗೆ ಜಗುಳಿ,
ಹೊನ್ನವರೆ, ಅಡಿಕೆ, ಗೊರಟಗೆ, ಚೆಂಡು ದುಂಡಗೆ ಅರಳಿ,
ಬೇಲಿಗುಂಟ ಬಿಳಿ, ಹಳದಿ, ಕೆಂಪು ಜಾಂಬಳಿ, ನೀಲಿ ಹೂಗಳ ಮೇಲೆ
ಕುಳಿತ ಪಾತರಗಿತ್ತಿ ಬೆಂಬತ್ತಿ ಮಕ್ಕಳಾಡಿರಲು,
ನೂರು ಸಲ ಗುಬ್ಬಿ ಗೂಡಿಗೆ ಮರಳಿ ಗುಟುಕಿಡಲು
ಅಕ್ಕರತೆಯಲಿ ಮರಿಗೆ ರೆಕ್ಕೆ ಮೂಡಿಸಿ ಬಂತು ದೀಪಾವಳಿ.

೪

ಸಂದಿಗೊಂದಿಯ ಕಸ-ಧೂಳಿ-ಜೊಂಡಿಗ-ಜೇಡಬಲೆ ಗುಡಿಸಿ
ಸುಣ್ಣಬಣ್ಣವ ಹಚ್ಚಿ, ಹಳೆಯ ತಲೆದಿಂಬಿಗೆ ಹೊಸ ಚೀಲ ತೊಡಿಸಿ,
ಹರಕು-ಮುರುಕು ಸಾಮಾನುಗಳ ಗಂಟುಕಟ್ಟಿ ಮೂಲೆಗೆ ಇರಿಸಿ,
ಸ್ನೇಹಿತರ ಬಳಗಕ್ಕೆ ರೇಡಿಮೇಡ್ ಶುಭಾಶಯವ ಕಳಿಸಿ,
ವಿಶೇಷ ಸಂಚಿಕೆಯ ಮುಖಪುಟದಲ್ಲಿ ಹೆಣ್ಣಿನ ವಿಚಿತ್ರ ಭಂಗಿ ಕಂಡಾಗ
ಮುಸಿಮುಸಿ ನಕ್ಕು, ಇದ್ದುದರಲ್ಲೆ ಖುಶಿಯಾಗಿ ಬಂತು ದೀಪಾವಳಿ.

೫

ಹೊಲ, ಗದ್ದೆ, ಗಿರಣಿ, ಕಚೇರಿ ಕಾರ್ಖಾನೆಯಲಿ ಬೆವರು ಸುರಿಸಿ,
ಸಂಪು, ಹರತಾಳ, ಕೊಲೆ, ಸುಲಿಗೆ, ಅಪಘಾತ ರಕ್ತಕುಂಕುಮವಿರಿಸಿ,
ವಿಧಾನಸಭೆಯ ವಿಧಿಯಿರದ ಗೊಂದಲದೊಳಗೆ ಸಿಕ್ಕು ಪಾರಾಗಿ
ಪಕ್ಷಾಂತರಕ್ಕೆ ಮನಸೋಲದೆ ತನ್ನ ಹಾದಿಯ ತಾನು ಹಿಡಿದು-
ಕಲ್ಲಿನೇಟಿಗೆ ಎಲ್ಲ ವಿದ್ಯುದ್ದೀಪ ಒಡೆದು ಚೂರಾಗಿರಲು
ಹಣತೆಗಳ ಹುಡುಹುಡುಕಿಕೊಂಡು ಬಂತು ದೀಪಾವಳಿ.

೬

ಹಲವಾರು ಸಲ ಮಾವನ ಮನೆಗೆ ಬಂದ ಅಳಿಯನಂತೆ
ಭೆಟ್ಟಿಯಾದಾಗೊಮ್ಮೆ 'ಚಹ ಕುಡಿಸಪಾ' ಎನುವ ಗೆಳೆಯನಂತೆ
ದಿನ ದಿನವು ಪತ್ರಿಕೆಯಲ್ಲಿ ಬರುವ ವಾಚಕರ ಪತ್ರಗಳ ದೂರಿನಂತೆ
ಹೊಸ್ತಿಲ ತೊಳೆವ ಮೊದಲೆ ಬಾಗಿಲಲಿ ಸಪ್ಪಳಾಗುವ ಹಾಲಿನ ಬಾಟ್ಲಿಯಂತೆ
ಬಹುದಿನದ ಮೇಲೆಬಂದ ಕವನಸಂಕಲನದ ತಿದ್ದಿದೆರಡನೆಯ ಆವೃತ್ತಿಯಂತೆ
ಬರುವ ಕಾಲಕ್ಕೆ ಬಂತು ದೀಪಾವಳಿ.

## ಚೈತನ್ಯ ತ್ರಿಕೂಟ

ಪೂರ್ವದ ಅಪೂರ್ವ ಸಂಸ್ಕೃತಿಯ ಗೋಪುರವನೆ-
ರಡು ತೋಳಿನಲಿ ಎತ್ತಿ, ಇತಿಹಾಸದಿತಿಮಿತಿಯ
ಹಾಯ್ದು, ಕಾಲದೊಡಲಿನ ಬಾಳ ಸಂಘರ್ಷಣೆಯ
ಬೆನಕವಾಗುತ ಕನಕ, ವಜ್ರ, ವೈಢೂರ್ಯ, ತೆರೆ-
ಮರೆಯ ಮಳಲ ಹೊರಚೆಲ್ಲಿ, ಇಲ್ಲಿ ಪಶ್ಚಿಮಕ್ಕೆ
ಒಲಿದಳು ತುಂಗಭದ್ರೆ; ಉತ್ತುಂಗ ಶಿಲ್ಪದಲಿ
ಮುಕ್ತೀಶ್ವರನ ಪೂಜೆ, ವೀರಭದ್ರನ ಓಜೆ.
ಚೌಡಯ್ಯ ಹುಟ್ಟು ಹಾಕುವನು ಎರಡೂ ದಡಕೆ.
ನೂತನ ಪುರಾತನಕೆ ತೇರನೆಳೆಯುವ ದಾರಿ
ತೆರೆದು, ಸಂಕ್ರಾಂತಿ ಸಂಭ್ರಮದಿ ಹಳ್ಳಿ ಒಡಮುರಿದೆದ್ದು
ದುಡಿದು, ಶಿವದೇವರಿಗೆ ಹಡದಿ ಹಾಸಿ,
ಸಂಜೆಗೆ ದೀಪ ಹಚ್ಚುವುದವರ ಹೆಸರು ಹೇಳಿ.
ಇವರೆ ಸುಳಿವ ಶಾಸನ, ತಿಳಿವ ಹರಡುತ ಬಾಳಿ-
ಗುತ್ಸಾಹ ತುಂಬುವರು: ಎಲ್ಲರ ಕುಶಲಕೇಳಿ.*

## ಕೃತಾರ್ಥ

ಹೇಗೊ ಹೇಗೋ ಸುತ್ತಿ, ಬಳಸಿ
ಅಟ್ಟದ ಮೇಲೆ ಹತ್ತಿ, ಪಟ್ಟಾಗಿ ಕುಳಿತವರು.
ಅಂತರಿಕ್ಷವೆ ಸುರಕ್ಷಿತವೆಂದು ಮಣ್ಣ ಸಂಪರ್ಕವಿಲ್ಲದೇ ಮೊಳೆತವರು.
ಆಡಿದ್ದೆ ಆಡಿ, ಮಾಡಿದ್ದೆ ಮಾಡಿ
ಹಾಡಿದ್ದೆ ಹಾಡುವುದರಲ್ಲಿ ಮೈ ಮರೆತವರು.
ಎಲ್ಲಾ ಬಗೆಯ ನಗೆಯ ಕಂಪೊಗೆವಲ್ಲಿ ನುರಿತವರು.
ಅವರಿಗೇನಿದೆ ಚಿಂತೆ?
ನೋಡುತ್ತಾರೆ ಒಮ್ಮೊಮ್ಮೆ ಕೆಳಗೆ:
ಭೂಮಿತಾಯಿಯ ಮೇಲೆ ಕೃಪೆ ಮಾಡಿದಂತೆ.
ಕುಟ್ಟುತ್ತಾರೆ. ತಿರುತಿರುಗಿ ಬೀಸುತ್ತಾರೆ
ಮಸಾಲೆ ಅರೆಯುತ್ತಾರೆ
ತಲೆಯ ಮೇಲೆ.

---

* ತುಂಗಭದ್ರೆ-ಚೌಡಯ್ಯದಾನಪುರ-ಶಿವದೇವರು

ಎಲ್ಲೆಲ್ಲಿಯದೊ ಸಿಟ್ಟು ತಂದು ಕತಕತ ಕುದಿಸುತ್ತಾರೆ
ಒಳಗೆ ಒಲೆಯ ಮೇಲೆ.
ಕೆಮ್ಮಿ ಕ್ಯಾಕರಿಸಿದರೆ ಮೈ ಜುಮ್ಮುದಟ್ಟುತ್ತದೆ
ಯಾರಿಗೋ ಅಭಿಷೇಕವೆಂದು.
ಹಗಲು ಹೊತ್ತಿನಲಿ ಹತ್ತುದನಿಗಳ ಕೂಡ ಹನ್ನೊಂದು
ರಾತ್ರಿ ನಿದ್ದೆ ಹತ್ತುವವರೆಗೂ ಇವರೇ ದೀನಬಂಧು.
ಬೆಳಗಾಯಿತೋ-
ಕಿಟಕಿ-ಬಾಗಿಲಿನಿಂದ ಹೊರಗೆ ಚೆಲ್ಲುತ್ತಾರೆ:
ಕಸ-ಕಡ್ಡಿ, ಹಾಳೆ, ಹಣ್ಣಿನ ಸಿಪ್ಪೆ, ಸುಡುಗಾಡು ಶುಂಠಿಯ ಕೊಂಬು.
ಎಮ್ಮ ಮನೆಯಂಗಳದಿ ಬೆಳೆಯುವದು ತಿಪ್ಪೆ.
(ಇದು ಅವರ ತಪ್ಪೆ?)
ಅತ್ತಿತ್ತ ನೋಡಿ, ಯಾರೂ ಕಾಣುವದಿಲ್ಲವೆಂದಾಗ
ಅವರನುಗ್ರಹಿಸಿದಮೂಲ್ಯ ಬದುಕನ್ನೆಲ್ಲ ಒಂದೂ ಬಿಡದಂತೆ ಬಳಿದು
ಬೇಲಿಯಾಚೆಗೆ ಒಗೆದು
ಕೈ ತೊಳೆದು
ಕೃತಾರ್ಥನಾಗುತ್ತೇನೆ-
ಇಲ್ಲ?: ಅಪಾರ್ಥಕೆಡೆಯಾಗುತ್ತೇನೆ.

## ಕುಟುಂಬ ಸೌಖ್ಯದ ಆಖ್ಯಾನ

೧

ಜನ ಜನ ಜನ
ಸಂತೆ-ಸಿನಿಮಾ, ಜಾತ್ರೆ-ಯಾತ್ರೆ, ಸಭೆ-ಸಮ್ಮೇಳನ
ಬಿಟ್ಟರೂ-
ರೈಲು ಬಸ್ಸು ಬುಸ್ಸೆನ್ನುತ ಹೊತ್ತಿಗೆ ಕೈ
ಕೊಟ್ಟರೂ
ನಾವು ನೀವು, ಅವರು, ಇವರು, ಉಳಿದವರೇ ಎಲ್ಲರು;
ಅಲ್ಲು ಇಲ್ಲು ಸಲ್ಲರು.
ಎಲ್ಲಿ ಹೋದರಿಲ್ಲ ಜಾಗ, ಹೂಂ ನಡೆಯಿರಿ ಬೇಗ ಬೇಗ
ಹಾದಿಯಿರಲಿ, ಇಲ್ಲದಿರಲಿ ಸಾಗಿದ್ದೇ ಪಯಣ
ಎಲ್ಲಿಗೆಂದು ಕೇಳಬೇಡಿ, ಮುಟ್ಟಿದ್ದೇ ತಾಣ.

ಜಾಣರಂತೆ ನುಡಿದು ಹೀಗೆ ಗುಡಿ ಗೋಪುರ ಕಟ್ಟಬಹುದು
ಆಶ್ವಾಸನೆ ಧೂಪ ದೀಪ ದಿನದಿನವೂ ಬೆಳಗಬಹುದು
ಬರಿ ಮಾತಿನ ಗಂಟೆ ಬಡಿದು ಅಡ್ಡ ಬಿದ್ದು ಏಳಬಹುದು;
ಯಾವ ಮೂರ್ತಿ-ಮುಖದ ಮೇಲೆ ಸುಖದ ಬೆಳಕು ಕಂಡಿದೆ?
ತಪ್ಪದಂತೆ ಮೂರು ಹೊತ್ತು ಎಣ್ಣೆ ಮಾತ್ರ ಉಂಡಿದೆ.

ಕಾಣುತಿಹೆನು ದಿನ ದಿನವು:
ಹುಸಿನಗುವಿನ ದೆಸೆಯಿಲ್ಲದ ಹಸಗೆಟ್ಟಿಹ ಮುಖಗಳು
ನಿಟ್ಟುಸಿರಿನ ತಿದಿಗಳಲ್ಲಿ ಜ್ವಲಿಸದಂಥ ಎದೆಗಳು.
ಅರಿವಿಲ್ಲದೆ ಹೊರೆಯಾಗಿವೆ ಮಕ್ಕಳು-ಮರಿ ಒಕ್ಕಲು;
ಹುಣಿಸೆಯ ಹೂವೆಷ್ಟೂ ಉದುರಿ ಜೋತಾಡಿವೆ ಕಾಯ್ಗಳು.
ಹೊಟ್ಟೆಯಂಥ ವೈರಿಯಿಲ್ಲ, ರೊಟ್ಟಿಯಂಥ ಮಿತ್ರರು:
ರಟ್ಟೆಯಲ್ಲಿ ಕಸುವಿಲ್ಲದೆ ಬೀದಿಯಲ್ಲೆ ದೂಡುತಿಹರು ದಿನದ ಜೀವ ರಥವನು.
ದುಡಿಮೆ ಸಿಗದ ಕೈಗಳೆನಿತೊ ತುಡುಕುತಿಹವು ಏತಕೊ
ಗಾಳಿಗುದ್ದಿ ಮೈ ನೋಯಿಸಿ, ತಲೆ ಕಾಯಿಸಿಕೊಂಡಿವೆ.
ತಪ್ತವಾದ ಸಿಡಿಮದ್ದಿನ ಕುಡಿಕೆಯಂತೆ ಕಂಡಿವೆ.

೨

ಹೊಲ ತುಂಬ ಸಿಕ್ಕಂತೆ ಬೀಜ ಚೆಲ್ಲಿದರೆ ಬರುವುದೆಲ್ಲ ಬೆಳೆಯಲ್ಲ, ಕಳೆ.
ಎಡೆಬಿಡದೆ ಸುರಿದರೆ ಮಳೆ: ಹರಿಯುವುದು ಹುಚ್ಚು ಹೊಳೆ.
ಕೊಚ್ಚಿ ಹೋಗುವವು ಎರಡೂ ದಡದ ಮನೆ ಮಾರು.
ಬರಿ ಬಿರುಗಾಳಿ ಬೀಸಿದರೆ ತರಗೆಲೆಯಾಗಿ ಹಾರುವದು ನೆಲದ ಬದುಕು.
ನಿಸರ್ಗ ಸ್ವಚ್ಛಂದದಲಿ ಮೇರೆ ಮೀರಿದರೂ
ಅದರಂತರಂಗದಲಿ ಸೃಷ್ಟಿ ನಿರ್ಮಾಣ ನಿಯಂತ್ರಣ ಮಂತ್ರವಿದೆ.
ಋತುಋತುವಿಗೊಂದು ಸಮಧಾತುವಿನ ಸಮಾಂತರ ಛಂದವಿದೆ
ಹುಟ್ಟು-ಸಾವಿನ ನಡುವೆ ಬಾಳು ಹಿಡಿದಿಟ್ಟ ಸೇವೆ ತ್ಯಾಗದ ಸೇತುಬಂಧವಿದೆ
ನೆಲದ ಸಂಯಮದಲ್ಲಿ ಮುಗಿಲಿನ ಕಾಂತಿ ನೂರ್ಮಡಿಸಿದೆ.

ಕಾಡಿಗೆ ಕಾಡೇ ಬೆಳೆದು ಜಿಂಯ್‌ಗುಟ್ಟುತ್ತಿದ್ದರೂ
ಬೇಕಾದಷ್ಟು ಕಡಿದು ನಡುವೆ ನಾಡು ಹೊಡೆಬಿಚ್ಚಿವೆ.
ಎಷ್ಟು ಬೇಕೋ ಅಷ್ಟು ಹೂ ಗಿಡಗಳ ನೆಟ್ಟು ನೀರುಣಿಸಿದರೆ
ತೃಪ್ತಿ; ಮನೆಯಂಗಳದ ವ್ಯಾಪ್ತಿ ಕಂಗೊಳಿಸದೆ?

ಆರ್ಥಿಕ ತಳಹದಿ: ಅದರಷ್ಟಕೆ ಎದೆಗುದಿ.
ಅಭ್ಯುದಯದ ಕಟ್ಟಡ ಬಿತ್ತರಿಸಿ, ಮಹಡಿಗೆ ಮೇಲೇರಲು
ಸಾಮಾಜಿಕ ಸಂಬಂಧವನೆತ್ತರಿಸಿ
ಗಾಳಿಗೆ ಬೆಳಕಿಗೆ ಎಷ್ಟೊ ಅಷ್ಟೆ ಬಾಗಿಲು ಕಿಡಕಿಯ ಹಚ್ಚಿ,
ಸೂರ್ಯನ ಚಂದ್ರನ ಉದಯಾಸ್ತಕೆ ಹೃದಯವ ಬಿಚ್ಚಿ
ನಡುಮನೆಯಲಿ ಗದ್ದಲವಿಲ್ಲದೆ ಇಬ್ಬರೊ ಮೂವರೊ ಮಕ್ಕಳ
ಅಳು-ನಗುವಿನ ಜೊತೆ ಮನವನು ಮೆತ್ತಗೆ ಮಿದ್ದಿ,
ಬದುಕನು ಹದಗೊಳಿಸುವ ಪುಣ್ಯ ಯಾರಿಗೆ ಬೇಡಾ ಬುದ್ಧಿ?
ಎಷ್ಟೋ ಜನರಿಗೆ ಅದು ಬರಿ ದಿನಪತ್ರಿಕೆ ಸುದ್ದಿ.

೩

'ಹತ್ತು ಹಡೆವುದಕಿಂತ ಒಂದು ಮುತ್ತು ಹಡೆವುದು ಲೇಸು'.
ಒಪ್ಪುತ್ತೇನೆ; ಮಂದಿಗೆ ಹೇಳಲು ಚೆನ್ನಾಗಿದೆ ಗಾದೆ-
ನಮಗೇನೂ ಕಡಮೆಯಿಲ್ಲ ತಗಾದೆ,
ಪಡೆದದ್ದೆಲ್ಲಾ ಮುತ್ತೇ ಆಗಿದ್ದರೆ ಆ ಮಾತೇ ಬೇರೆ.
ಜೊತೆಗೆ ಕೆಂಪು ಹವಳವು ಇದ್ದರೆ ಹೇಗೆ? ಎನ್ನುತ್ತದೆ ತಾಳಿ.
ತಾಳುವ ತಾಕತ್ತಿದ್ದರೆ ಬಾಳಿ.

ಹಾಗೆ ನೋಡಿದರೆ-
ನಮ್ಮ ಯೋಜನೆಗಳೆಲ್ಲ ಸ್ವಲ್ಪ ನಿದಾನ; ಯೋಚನೆಮಾಡುವದಂತೂ
ಅದಕ್ಕೂ ನಿದಾನ. ಗಡ್ಡಕ್ಕೆ ಬೆಂಕಿ ಹತ್ತಿದ ಮೇಲೆ
ಬಾವಿಯ ತೋಡುವ ಜನ.
ಅದಕ್ಕೇ ಇಂದು ಎಲ್ಲಿ ನೋಡಿದರೂ ಕಣ್ಣು ತಿವಿಯುತ್ತಿದೆ
ಕೆಂಪು ತ್ರಿಕೋನ.
ನೋಡಿಯೂ ನೋಡದಂತಿದ್ದರೆ ನಮಗೇ ಅವಮಾನ.
'ಬ್ರಹ್ಮದೇವನಿಗು ಬಿಡುವಿಲ್ಲ
ಯಮದೇವನಿಗೂ ತಡವಿಲ್ಲ'
ಮಹಾದೇವನು ಮಾತ್ರ ಗೌರಿಯೊಡನೆ ನಸುನಗುತ್ತ
ಗುಹ-ಗಣಪತಿ ಇಬ್ಬರ ಜೊತೆಗೂಡಿ
ಲಕ್ಷಣವಾಗಿ ಹೇಗೆ ಕುಳಿತಿದ್ದಾನೆ ನೋಡಿ:
ಮಾತು ಗದ್ಯಕ್ಕಿಳಿಯಿತೆಂದು ಬೇಸರಪಡಬೇಡಿ
ಪದ್ಯದಲ್ಲೂ ಹತ್ತು ಕಟ್ಟುವ ಕಡೆಗೆ ಒಂದು ಮುತ್ತು ಕಟ್ಟುವುದುಂಟು;
ಹಾಗಿದ್ದರೇನೆ ಅದಕ್ಕೆ ಬೆಲೆಯುಂಟು.

## ಮೂಲವಸ್ತು

ಬೇವಿಗೂ ಹೂವುಂಟಲ್ಲ-
ಅದರೊಡನೆ ಬೆಲ್ಲ, ಪುಟಾಣಿ, ಕೊಬ್ಬರಿ
ಕೂಡಿಸಿ ಕಹಿ ಕಡಿಮೆ ಮಾಡಿಕೊಂಡು
ತಿನ್ನುತ್ತೇವೆ: ಸಂವತ್ಸರದ ಪ್ರಾರಂಭಕ್ಕೆ.
ಕೊನೆಗೆ ಅನ್ನುತ್ತೇವೆ:
ಮೂಲವಸ್ತು ಬೇವು, ಜೊತೆಗೆ ಕೊಂಡು
        ತಂದದ್ದು ಬೆಲ್ಲ-
ದುಃಖ ಸುಖದ ಕ್ರಮವೂ ಹೀಗೆಯೇ ಏನೊ
        ಯಾವ ಬಲ್ಲ.

## ಅವಲೋಕನ

ಎಷ್ಟು ಬೇಗ ಬೇಗ ಓಡುತ್ತವೆ ದಿವಸಗಳು,
ಕಣ್ಮುಚ್ಚಿ ತೆರೆಯುವಷ್ಟರಲ್ಲೇ ಮುಳುಗುತ್ತದೆ ತಿಂಗಳು.
ನೋಡ ನೋಡುತ್ತಲೇ ಕ್ಯಾಲೆಂಡರು ಮುಗಿದು
ಉರುಳುತ್ತದೆ ಇಡೀ ವರುಷ: ಜಾರುವ ಮರಳು.
ಇರುಳು ಚಾಪೆ ಹಾಸುತ್ತಲೇ ಬರುತ್ತದೆ,
ಹಗಲು ಸುತ್ತಿ ಸುರುಳಿ ಮಾಡುತ್ತಲೇ ಇರುತ್ತದೆ.
ನಿದ್ದೆಯಲ್ಲೂ ಅರ್ಧಕ್ಕರ್ಧ ಕನಸು: ಎಲ್ಲ ಮರೆತು ಹೋಗುತ್ತದೆ.

## ಗುಬ್ಬಿ

ಗೋಡೆಗೆ ತೂಗು ಹಾಕಿದ ಫೋಟೋದ ಹಿಂದೆ
ಗುಬ್ಬಿ ಗೂಡು ಕಟ್ಟಿದೆ.
ಹುಲ್ಲು, ಹತ್ತಿಯ ಚೂರು, ದಾರ ಮೆತ್ತಗೆ ಒಟ್ಟಿದೆ.
ಈ ಪುಕ್ಕಲು ಪ್ರಾಣಿಯ ಧೈರ್ಯಕ್ಕೆ
ಬರೀ ಎರಡು ರೆಕ್ಕೆ.
ಅಡಿಗೆಯ ಮನೆಗೂ ಬಂದು ಕುಟುಕುತ್ತದೆ
ಅನ್ನದ ಅಗಳು-
ಬರ್ರನೆ ಹೊರಗೆ ಹಾರಿ, ಆರಿಸಿ ಹುಲ್ಲಿನ ಹುಳು

(ಈ ಶಾಕಾಹಾರಿ)
ಸರ್‍ರನೆ ಬರುತ್ತದೆ ಮರಳಿ, ಮರ-ಮರಳಿ.
ಕಿಟಕಿಯ ಸರಳಿಗೆ ಕುಳಿತು, ಚಕಮಕ ಹೊರಳಿ
ತೂರಿಬಂದು, ಚಿಂವ್ ಚಿಂವ್ ಮರಿಗೆ ಗುಟುಕಿಟ್ಟು
ಹಾರಿ ಹೋಗುತ್ತದೆ. ಹೀಗೆ ಎಷ್ಟೋ ಬಾರಿ.

ಗುಬ್ಬಿಯ ಪುಟ್ಟ ಆಕೃತಿ
ಮರೆಯಾಗಿ,
ತಾಯಿಯ ವಿಶಾಲ ಹೃದಯದಲ್ಲಿ
ಕರಗಿ
ಹೋಗುತ್ತೇನೆ ನಾನು ಜೀವಂತವಾಗಿ.

## ಬಂಗ್ಲಾದೇಶ

ಸುಟ್ಟು ಸೂರೆಗೊಳಿಸಿ ಬೂದಿಯಾಗಿಸಬಲ್ಲ ದೇಶವಲ್ಲ ನಾನು,
ಕೆಡವಿ ಉರುಳಿಸಬಲ್ಲ ಗೋಡೆಯಲ್ಲ-
ಇಲ್ಲ, ಒರೆಸಿ ಬರೆಯಬಲ್ಲ ಗಡಿ-ಗೆರೆಯಲ್ಲ.
ನಿನ್ನೆದುರು ಮೇಜಿನ ಮೇಲೆ ಹರವಿಕೊಂಡು ಕುಳಿತಿರುವ
ಜಗತ್ತಿನ ಆ ಹಳೆಯ ರದ್ದೀ ನಕಾಶ
ಅಂಕುಡೊಂಕು ಗೆರೆಗಳ ಬರಿಯ ಚಕ್ರವ್ಯೂಹ.
ಈ ಸೊಟ್ಟಾಪಟ್ಟ ರೇಖೆಗಳ ನಡುವೆ
ಎಲ್ಲಿ ಹುಡುಕಬಲ್ಲೆಯೋ ನನ್ನ ನೀನು?
ಆಕ್ರಮಣಕ್ಕೆ ತುತ್ತಾಗಿ ಬಿದ್ದವರ ಉದ್ವೇಗ ನಾನು.
ಬಲಾತ್ಕಾರದ ತುಳಿತಕ್ಕೆ ಸಿಕ್ಕು ಸತ್ತುಹೋಗದ,
ಸಾವಿಲ್ಲದ ಕನಸು.
ನರನೊಬ್ಬ ಮತ್ತೊಬ್ಬ ನರನ ನೆತ್ತರು ಹೀರುವಾಗ-
ಸ್ವಾರ್ಥ, ಶೋಷಣೆ ಮಿತಿಮೀರಿದಾಗ
ಕ್ರೂರ ದಬ್ಬಾಳಿಕೆಯು ಮತ್ತೇರಿ ಕುಣಿಯುವಾಗ
ಆಕಸ್ಮಾತ್ತಾಗಿ ಮುಖವೆತ್ತಿ ನಿಲ್ಲುತ್ತೇನೆ-
ಯಾವುದೊ ಮೂಲೆಯಿಂದ,
ಪುಟಿದು ಮೇಲೇಳುತ್ತೇನೆ ಯಾರದೊ ಹೃದಯದಿಂದ.
ನೀನು ಈ ಮೊದಲು ನನ್ನ ಕಂಡಿರಬೇಕು:

ಕೆಲವೊಮ್ಮೆ ಪೂರ್ವದಲ್ಲಿ, ಕೆಲವು ಸಲ ಪಶ್ಚಿಮದಿ
ಕೆಲವೊಮ್ಮೆ ನಗರಗಳಲ್ಲಿ, ಹಾಗೆಯೇ ಹಳ್ಳಿಗಳಲ್ಲಿ,
ಮನೆ-ಮಠಗಳಲ್ಲಿ ಮತ್ತೆ ಕಾಡಿನಲ್ಲಿ -
ನನಗಿರುವುದು ಇತಿಹಾಸ ಮಾತ್ರ, ಇಲ್ಲ ಭೂಗೋಲ.
ಇಂಥ ಇತಿಹಾಸ ಕಲಿಸುವದಕ್ಕೂ ಇಹುದು ನಿರ್ಬಂಧ-
ಓದುತ್ತಾರೆ ಜನರು ಕದ್ದು-ಮುಚ್ಚಿ;
ಕೆಲವು ಸಲ ಗೆದ್ದವನು, ಸೋತಿದ್ದೇನೆ ಹಲವು ಸಲ,
ನನ್ನ ಕೊಲೆ ಮಾಡಿದವರನ್ನೇ ಕೊಂದಿದ್ದೇನೆ ಕೆಲವೊಮ್ಮೆ
ಮತ್ತೆಷ್ಟೊ ಬಾರಿ ನಾನೆ ಶಿಲುಬೆಗೇರಿದ್ದೇನೆ.
ಅಂತರವಿಷ್ಟೆ: ನನ್ನ ಕೊಲೆ ಮಾಡಿದವರು ಸಾಯುತ್ತಾರೆ
ಸಾಯುವುದಿಲ್ಲ ನಾನು, ನನಗೆ ಸಾವೇ ಇಲ್ಲ.
ಎಲ, ಬುದ್ಧಿಗೇಡಿ!
ದಾನಪಡೆದ ಟ್ಯಾಂಕುಗಳ ತಂದು
ಉರುಳಿಸುತ್ತಿರುವೆ ನನ್ನೆದೆಯ ಮೇಲೆ.
ಹಗಲಿರುಳು ನಪಲಮ್ ಬಾಂಬುಗಳ ಮಳೆಗರೆವೆ,
ಕೇಳು: ಒಂದಿಲ್ಲ ಒಂದು ದಿನ ಆಯಾಸಗೊಂಡು ನೀನೂ ದಣಿವೆ,
ನನ್ನ ಕೈಗಳಿಗೆಂತು ಸಂಕೋಲೆ ತೊಡಿಸುವೆ ನೀನು,
ನನ್ನ ಕೈಗಳು ಇಗೋ ಏಳು ಕೋಟಿ;
ಯಾವ ತಲೆಗಳ ಕಡಿದು ಹಾಕುವೆ ಹೇಳು,
ಏಳ್ಕೋಟಿ ತಲೆಗಳಿವೆ ನನ್ನ ಭುಜದ ಮೇಲೆ

ಮೂಲ ಉರ್ದು: ಕೈಫಿ ಆಜ್ಮಿ

## ಎರಡು ರಂಗದ ಯುದ್ಧ

ಬೆಳಗಾಗುವುದರೊಳಗೆ ಯುದ್ಧದ ಸುದ್ದಿ ಹಬ್ಬಿ
ಕೆಟ್ಟ ಕಹಿಯಾಗಿತ್ತು ಬೆಳಗಿನ ಚಹ:
ಸುಡುತಿತ್ತು ಯುದ್ಧವಿರಾಮದ ರೇಖೆ; ಆಚೆಯವರಿಗೆ
ವಿನಾಕಾರಣ ತುರಿಕೆ,-ಕೆರೆದಂತೆ ಭೂಮಿದಾಹ.
ಪಾಕಿಗಳ ತುಫಾಕಿಗಳ ಭೂಬಿಟ್ಟು, ಪರಿಸ್ಥಿತಿ
ವಿಕೋಪಕ್ಕೆ ಹೋದಾಗ ಮರೆಗೆ ನಿಂತು ಹುರಿದುಂಬಿಸುವ
ಮಸಲತ್ತು; ಅದುಮಿಟ್ಟ ಬದ್ಧದ್ವೇಷದ ಬಾಂಬು ಸಿಡಿದು
ನೆರೆ-ಹೊರೆಯಾಗಿ ಬೆಂಕಿ ಕಾರತೊಡಗಿತ್ತು.

ರೇಡಿಯೊ ಸೆಟ್ಟಿನಲ್ಲಿ ಕಿವಿಯಿಟ್ಟು-
ನ್ಯಾಟ್ ಬೆನ್ನಟ್ಟಿ, ಸೇಬರ್‌ಜೆಟ್ಟು ಜಿಟ್ಟೆಯಂತೆ ಪಟ ಪಟ ನೆಲಕುರುಳಿ,
ಚಾಪೀ ಟ್ಯಾಂಕು ಚೂರಾಗಿ, ಶಸ್ತ್ರಗಳ ಚೆಲ್ಲಿ ಸೈನ್ಯ ಗುಡಚಾಪಿ ಸುತ್ತಿ,
'ಖೈಬರ್' ಖಬರುಗೆಟ್ಟು, 'ಶಹಜಹಾನ್' ಕುಂಟುತ್ತ ಕೂರುತ್ತ
ಸಾಗರದ ತಳ ಕಂಡಿರಲು,
ನಾಣ್ಯ ತೂರಿದ ಹಾಗೆ ಒಂದೊಂದೆ ಠಾಣ್ಯ ಕೈವಶವಾಗಿ
ಮೈಯಲ್ಲಿ ಕಾವೇರಿತ್ತು.
ಯಮನ ಕೋಣಕ್ಕೆ ಬಣವಿ ಹಿರಿದು ಒಟ್ಟಿತ್ತು ಮೇವು.
(ನಮ್ಮ ಕಡೆಗೂ ಅಲ್ಪ ಸಾವು-ನೋವು)
ಯುದ್ಧರತಿಯ ನಂಜೇರಿ ಉರಿದಿತ್ತು ಪಶ್ಚಿಮ ರಂಗ.
ಹಿಂಜರಿದಿತ್ತು ಗಾಯ ನೆಕ್ಕುತ್ತ
ತೊಲೆಯ ಇರುಕಿನಲಿ ಬಾಲ ಕತ್ತರಿಸಿ ತತ್ತರಿಸಿದ ಮಂಗ.
ನಾಡ ಮಕ್ಕಳ ಗಂಟಲೊತ್ತಿಕ್ಕಿ, ಮಾನವೀಯತೆಗೆ
ಗುಂಡಿಕ್ಕಿ ಗಹಗಹಿಸಿ ನಕ್ಕ
ರಕ್ಕಸನ ಹೆಡಮುರಿಗೆ ಬಿಗಿದು, ಕುಕ್ಕರಿಸಿ
ಮೆಲ್ಲನುಸಿರಾಡಿತು
ರಕ್ತ ಚಿಮ್ಮಿದ ನವೋದಯದ ಪೂರ್ವರಂಗ.
ಹೂವು ಮೊಗ್ಗೆಯ ಗೋಣು ಹಿಸುಕಿ, ಕಳ್ಳು-ಬಳ್ಳಿಗಳ ಹಿಂಡಿ
ಕೊಂಬೆಗಳ ಚೆಲ್ಲಾಪಿಲ್ಲಿ ಕಡಿದೊಗೆದ ಹೆಮ್ಮರದ ಹೆಮ್ಮೆ
ಮತ್ತೆ ಚಿಗುರೊಡೆದಿತ್ತು; ಹಸಿರು-ಬಂಗಾರ,
ಹಳದಿ ಹೂಗಳ ಕುಸುರು ತೂಗಿತ್ತು ಮೈಲು-ಮೈಲು.
ತನ್ನ ಮಕ್ಕಳ ಹೆಣವ ಹೊತ್ತು ಸಾಗಿಸಿದ ಪದ್ಮಾ ನದಿ
ಹರಿದಿಹುದು ನಿರಂತರ ಮುಕ್ತಿವಾಹಿನಿಯಾಗಿ
ಸ್ವಾತಂತ್ರ್ಯದ ಮೂಲ ಸೆಲೆಯ ಕುಡಿದು.
ಒಂಬತ್ತು ತಿಂಗಳ ತುಳಿತ, ಹಿಂಸೆ, ಸಂಕಟ ಹೊತ್ತು
ಹಸಿರು ನೆಲ-ಬಿಸಿ ನೆತ್ತರ ಬಿಂದು-ಬೇನೆ ತಿಂದು
ಬಂಗ್ಲಾದೇಶ ಉದಯಿಸಿತ್ತು.
ಅಹಂಕಾರ ಹೇರಿ ಅದ್ದೂರಿಯಿಂದ ಬಂದ
ಅಮೇರಿಕೆಯ ಮಾರಿ
ಛೀಮಾರಿಯಾಗಿ ದೂರ ಸಾಗರದಲ್ಲಿ ನೌಕೆ ಠಳಾಯಿಸಿತ್ತು.
ಮೂಡಿತ್ತು ಏಸಿಯದ ಆಕಾಶದಲ್ಲಿ ಹೊಸ ತಾರೆ
ಭಾರತಿಯ ಮೂಗು-ನತ್ತು.

೨

ದೂರದಲಿ ಕುಳಿತು ಬಿಸಿ ಬಿಸಿ ಸುದ್ದಿಗಳ ಮಸಾಲೆ
ದೋಸೆಯ ತಿಂದು, ಬಿಟ್ಟಿ ಕಾಫಿಯ ಕುಡಿದು
ಹಸಿ-ಬಿಸಿ ಯುದ್ಧಗೀತೆಯ ಬರೆವ ಚಪಲ.
'ಆಗ ಅಬ್ದುಲ್ ಹಮೀದ್ ಈಗ ಮೋಹಿಂದರ ಸಿಂಗ್
ಸಾವಿರದ ಸೈನಿಕರು ನುಗ್ಗಿ ಜೀವ ಸಫಲ...'
ಸುಳ್ಳಲ್ಲ, ಇವನಿಗೂ ಕುಳಿತಲ್ಲೆ ವೀರಾವೇಶ;
ಎತ್ತಿ ಹಿಡಿಯಲಾರನು ಗನ್ನು, ಕೆಳಗಿಡಲಾರ ಪೆನ್ನು,
ಕಾಲ ಕೆಳಗಿನ ಮಣ್ಣು ಜರೆದಂತೆ ಭಾಸ.
ಜೀವಕ್ಕೆ ಶ್ರುತಿ ಹಿಡಿದು ಮಾತು ಕೃತಿಯಾಗದೆಯೆ
ಆಕಾಶಕ್ಕೆ ಚಿಕ್ಕೆಗಳ ತೂತು ಬಿದ್ದಂತೆ ಆಭಾಸ.
ಇವನ ಠಾಣ್ಯದ ಸುತ್ತು ಹತ್ತಿರದಲ್ಲೆ ಮೋಸದ ಸುರಂಗ,
ಬಾಯಿಬಡಕರ ತೋಫು, ಲಂಚಬಡಕರ ಸಂಚು
ಸ್ವಾರ್ಥಿಗಳ ಕಂದಕದಲ್ಲಿ ಆತ್ಮಸಂರಕ್ಷಣೆಯ ಹೊಂಚು....
ಇವರ ವಿಷವರ್ತುಲವ ಕಡಿದು, ವೈಯಕ್ತಿಕತೆಯ ಧ್ವಜವನ್ನೆತ್ತಿ
ಬಾವದ ಮಧ್ಯಬಿಂದುವಿನಿಂದ ಬುದ್ಧಿಯ ಸಮಸ್ತ ಪರಿಘದವರೆಗೆ
ನಡೆದಾಡಿ ಹಾಡಬಲ್ಲನೆ? ಸಮಷ್ಟಿಯ ಕೂಡಬಲ್ಲನೆ?
ಆ ರಂಗದಲ್ಲಿ ಹೋರಾಡಿ ಗೆಲ್ಲಲು ಸೈನ್ಯ ಸಿದ್ಧವಿತ್ತು; ಇಲ್ಲಿ
ಬೇಕಿದೆ ಅದೇ ಶಿಸ್ತು, ನಿಯತ್ತು; ಗುಲ್ಲು ಎಬ್ಬಿಸದೆ ಈ ರಂಗದಲ್ಲೂ
ಗೆಲ್ಲು; ನಿನ್ನ ಸೇನಾಧಿಪತಿ ಅಂತರಂಗದ ಸೊಲ್ಲು.

## ಕೊಡೆ

ಕೊಡೆ ಹಿಡಿಯುತ್ತೇವೆ:
ಬಿಸಿಲಿಗೆ, ಮಳೆಗೆ, ದೊಡ್ಡವರ ಕಾರು
ಸಿಡಿಸುವ ಕೊಳೆಗೆ, ಆಗದವರು
ಎದುರಿಗೆ ಬಂದಾಗ ಮರೆಗೆ-
ಹೊತ್ತು ಬಂದಂತೆ.

ಮತ್ತೊಬ್ಬರ ತಲೆಗೆ
ನೆರಳು ಮಾಡುವ ಉಸಾಬರಿಗೆ
ಹೋಗಿ ಚುಚ್ಚುತ್ತೇವೆ;

ಮೆಚ್ಚುತ್ತೇವೆ: ಹೆಣ್ಣು ಏರಿಸಿದ
ಹೂವಿನ ಕೊಡೆಗೆ-ತಂತಿ ಮೇಲಿನ ನಡಿಗೆ.

ಏಕಚಕ್ರಾಧಿಪತಿಯ ಬೆಳ್ಗೊಡೆಗೆ
ಬೆಂಕಿ ಹಚ್ಚುತ್ತೇವೆ. ಮೆರೆಸುತ್ತೇವೆ
ಉಧೋ ಉಧೋ ಎಂದು
ಛತ್ರ ಚಾಮರ ಹಿಡಿದು
ಪಲ್ಲಕ್ಕಿಯಲ್ಲಿ ಬೇಕಾದ ದೇವರನಿಟ್ಟು.

ಹೊತ್ತು ಹೋದಂತೆ ಮಡಿಚಿ
ಹಿಡಿಯುತ್ತೇವೆ ನಮ್ಮ ಅಭಿರುಚಿ-
ಗೆ ತಕ್ಕಂತೆ; ಬೆದರಿಸಲಿಕ್ಕೆ
ನಾಯಿಗೆ, ನಡೆಯಲಿಕ್ಕೆ
ಊರುಗೋಲಾಗಿ.

## ಸರ್ವಜ್ಞಕವಿ

ಮುಚ್ಚಿಟ್ಟು ಮುಗ್ಗುನಾರುವ ಒಳಬಾಳ ಬಿಚ್ಚಿ
ಬಿಸಿಲಿಗೆ, ಹಂಗು-ಹಾತೆಗಳ ಕೊಡವಿ, ಬರಿನೆತ್ತಿ
ಹೊರಟ ಜಗದಿ ಸ್ವತಂತ್ರ. ಸಂದಿ-ಗೊಂದಿಯ ಸುತ್ತಿ
ಹೊಲಸು-ಕೊಲೆ-ಕಸಕೆ ಬೆಂಕಿ ಹಚ್ಚಿ, ಒಳಿತನು ಮೆಚ್ಚಿ
ತಲೆಯ ಮೇಲಿಟ್ಟ. ಡಾಂಭಿಕರನೆತ್ತೆತ್ತಿ ಒಗೆದ.
ನಕ್ಕು ನಗಿಸಿದ ಸ್ವರ್ಗಕ್ಕೆ ಕಿಚ್ಚು ಹಚ್ಚುವುದ
ಕಲಿಸಿ. ಕೆಟ್ಟ ರಕ್ತದ ಕುರುವೊಡೆದು ಲೇಪಿಸಿದ
ಗಂಧ. ತನಗು ಜಗಕೂ ನಡುವೆ ತಕ್ಕ ತ್ರಿಪದಿಯ
ಬಂಧ: ಬದುಕು-ಬಂಗಾರಕ್ಕೆ ಒರೆ ಹಚ್ಚಿದ.
ಮನೆಯಿಲ್ಲ, ಮಠವಿಲ್ಲ: ಊರೆಲ್ಲ ನೆಂಟರು.
ಎಲ್ಲಿ, ಯಾರಿವನ ಕಣ್ಣು ತಪ್ಪಿಸಿದ ಬಂಟರು?
ಬಳ್ಳಿಗುರುಡರಿಗೊಳ್ಳೆ ಗುರುವಾಗಿ ಕೈಹಿಡಿದ.
ಋಷಿಯಲ್ಲ? ಋಜುಬಾಳ ಋಷಿ. ನಿಜವ ಪರಿಭಾವಿಸಿ
ಇವನ ಕನ್ನಡಿಯಿರದೆ ನಮ್ಮ ಮುಖವೆಲ್ಲ ಮಸಿ.

## ಬೆಳ್ಳಿಹಬ್ಬದ ಮುಡಿಪು

ಅಂದು ಮಧ್ಯರಾತ್ರಿ-
ಕತ್ತಲೆಗು ಅದೆಂಥ ಬೆಳಕಿನ ಮೈತ್ರಿ!
ಚಿಕ್ಕೆಗಳು ನೆಲದೊಳಗೆ ಭವ್ಯಕನಸಿನ ಬೀಜ ಊರಿದಂತೆ,
ಗಾಳಿ-ನೀರು ನಿರ್ಭಯವಾಗಿ ಹರಿದಂತೆ,
ತೇರು ಸಡಗರಗೊಂಡು ಸಾಗಿದಂತೆ;
ಬಾನಿನಲಿ ಗರುಡ ಗಂಭೀರವಾಗಿ ತೇಲಿದಂತೆ;
ಎಲ್ಲರಿಗು ಎತ್ತರದಲ್ಲಿ ಬಲಭುಜದಮೇಲೆ
ಧ್ವಜವು ಹಾರಿದಂತೆ,
ನಾಡಿನುದ್ದಗಲಕ್ಕು ಬಿಡುಗಡೆಯ ತೊರೆಯುಕ್ಕಿ
ಧುಮ್ಮಿಕ್ಕಿ ಮೊರೆದಂತೆ,
ಬಿದ್ದಿರುವ ಆನೆ ತಾನೆ ಮೈ ಕೊಡವಿ ಮೇಲೆದ್ದು ನಿಂತಂತೆ,
ಮರದ ತುದಿಯಿಂದ ಹಾರಿದ ಹದ್ದು ಮೋಡಗಳ ದಾಟಿ
ವಿಮಾನವಾಗಿ ಪಯಣಿಸಿದಂತೆ,
ನೆಲದ ಕರಿಕೆಯ ಬೇರು ಮಾರುದ್ದ ಕುಡಿಚಾಚಿದಂತೆ
ಹೊಸಯುಗದ ಹಸುಗೂಸಿಗುಸಿರು ಬಂದಂತೆ
ಅಂದು ಮಧ್ಯರಾತ್ರಿ-
ಎಷ್ಟು ಹೇಳಿದರೂ ತೀರದಂತೆ.

ಹಾಲುಗಲ್ಲಿನ ಗೋಪುರದ ತಳಹದಿಯ
ಕಲ್ಲಾಗಿ, ಗಚ್ಚು-ಗಾರೆಗಳಾಗಿ
ಮಣ್ಣ ಮರೆಗಿರುವ ಚಿನ್ಮಯ ಹುತಾತ್ಮರಿಗೆ
ಶ್ರದ್ಧಾಂಜಲಿ-
ಇಂದಿನುತ್ಸವದಲ್ಲಿ ಅವರದೇ ಬಿಜಲಿ.

ಕಾಲು ಶತಮಾನ ಕಾಲನಿಗೊಂದು ಹನಿ-
ನಮಗೋ ನಮ್ಮ ಹೋರಾಟದಲಿ ಅಗೆಯುತ್ತ ಹೊರಟ ಚಿನ್ನದ ಗಣಿ.
ಕಲ್ಲುಮಣ್ಣನು ಹೊತ್ತು ಬೆವರೊರೆಸಿ ಮತ್ತೆ
ತೋಳೇರಿಸಲು ಈಗ ದೊರಕಿದ್ದು ಬೆಳ್ಳಿ.

ಲಕಲಕಿಸಿ ದೂರ ಗುರಿಯೆಡೆಗೆ ತೋರುಬೆರಳೆತ್ತಿ.
ದಾರಿಯಲಿ ಕಾಗೆ ಬಂಗಾರಕ್ಕೆ ಮರುಳಾಗಿ ಆಗೀಗ

ಬಾಯಿ ಬಿಟ್ಟಿದ್ದುಂಟು.
ಕೊನೆಗೆ ಸಾಕೆನಿಸಿದ್ದು ಹದಿನಾಲ್ಕು ಕ್ಯಾರೆಟ್ಟು.

ಏರಬೇಕಾದಲ್ಲಿ ಇಳಿದು, ಇಳಿಯಬೇಕಾದಲ್ಲಿ ಹುಚ್ಚುಚ್ಚಾರ
ಏರಿದೆ ಬೆಲೆ: ಭಲೆ ನಾವು ಹಾರಿಸಿದ ರಾಕೆಟ್ಟು-
ಒಟ್ಟು ಎಡವಿದರೂ ದಾರಿ ಸಾಗಿದೆ;
ತಡವಾದರರೂ ಕಾಲ ಮಿಂಚಿಲ್ಲ, ಕಾರ್ಮೋಡದಂಚಿನಲಿ
ಬೆಳ್ಳಿ ರೇಖೆ. ಗಾಳಿಗಲ್ಲಾಡಿದರೂ ಗಟ್ಟಿನಿಂತಿದೆ
ನಿರ್ಧಾರದ ಪತಾಕೆ.

ಘೋಷಣೆಯ ಮಂಜು ಗೌಸಣಿಗೆ ಸರಿದು
ನಿಜರೂಪಕ್ಕೆ ಜನವು ಹಾತೊರೆದಿದೆ.
ಅಲ್ಲಲ್ಲಿ ತಗ್ಗಿ ಬಗ್ಗಿ ಮುದುಡಿಕೊಂಡಿರುವ
ಸಮಾಜದ ಬಟ್ಟೆ ನಿಗುಚಿ, ಏರುಪೇರುಗಳನುಳಿದು
ಒಂದೆ ಪಾತಳಿಯಲ್ಲಿ ನಿಲಬಯಸಿದೆ.
ಗಳಿಕೆ-ಬಳಕೆಯ ಲೆಕ್ಕ ಬಾಯ್ದೂಗದೆಯೆ ಭಾರದೊತ್ತಡಕ್ಕೆ
ತ್ರಾಸು
ತೂಗುತ್ತಿದೆ ಹಾಗು-ಹೀಗೂ;
ಬಂದು ಹೋಗುತ್ತವೆ ನಡುವೆ ಅಡ್ಡ ಸೋಗು.
ಮುಗಿದೀತು ಬೆಳಿಗ್ಗೆ ಶ್ರೀರಾಮಪಟ್ಟಾಭಿಷೇಕ,
ತೂಕಡಿಸದಿದ್ದರೆ ಬೆಳತನಕ ಕಾದದ್ದಕ್ಕು ಸಾರ್ಥಕ.
ಜನ ಸಾಮಾನ್ಯ ಇಂದಿನ ಅನನ್ಯ ಧಾನ್ಯ-
ಬೀಸುಕಲ್ಲಿನ ಮುಕ್ಕು? ಅಲ್ಲ
ಭದ್ರಾವತಿಯ ಉಕ್ಕು.
ಹಕ್ಕು ಚಲಾಯಿಸುವವರೆ ಎಲ್ಲರೂ
ಹೊಣೆಗಾರಿಕೆಗೆ ಮಾತ್ರ ತುಕ್ಕು.
ಮಿಕ್ಕವರ ಕಲ್ಯಾಣಕ್ಕೆ ಯೋಜನೆಯ ಯೋಜನ ಕಡತ,
ಭೂಮಿ-ಸೀಮಿ ನಮ್ಮದೇ:ನಾವೇ ಸ್ವಾಮಿ-
ನಿಂತದ್ದು ಹೆರವರ ಕಾಲಮೇಲೆ, ಕೈಯೂರಿದ್ದು
ಮತ್ತೊಬ್ಬರ ಹೆಗಲ ಮೇಲೆ.
ಎರಡೂ ಜಾರಿ ಬಿದ್ದು, ಎದ್ದು ನಮ್ಮ ಅಸ್ತಿತ್ವಕ್ಕೆ ಧಕ್ಕೆ
ತಾಗದ ಹಾಗೆ ಎದೆ ಸೆಟೆಸಿದೆ ಹೀಗೆ.
ನಾವು ನಾವಾಗಿ ಸುಳಿದೆಗೆದು ಬೆಳೆದು
ಸ್ವಯಂ ಪರಿಪೂರ್ಣತೆಯ ಕಾವಿನಲಿ ಮಾಗಿ

ನಿಲ್ಲುತ್ತೇವೆ ನಮ್ಮ ಕಾಲ ಮೇಲೆ,
ಅಡಿಯ ಮುಂದಿಟ್ಟು ಗೆಲ್ಲುತ್ತೇವೆ ಅನಿಷ್ಟಗಳನೆಲ್ಲ
ಬಡಿದು ಅಡಿಗಲ್ಲ ಮೇಲೆ.

ಬಿಡುಗಡೆಯ ಬೆಳ್ಳಿ ಹಬ್ಬದ ಮುಡಿಪು ಸಲ್ಲಿಸಲು
ಹರಯದ ನಡುಹಗಲಲ್ಲಿ ನಿಂತು
ಹೆಗಲುಕೊಟ್ಟಿದ್ದೇವೆ: ಕಳೆದ ಮುಂಜಾವಿಗು
ಬರುವ ಮುಂಜಾವಿಗು.
ಕಂಬಿ ಹೊತ್ತು ಪರಿಷೆಯ ಕೂಡ ಪರ್ವತವನೇರಿ
ಹೊರಟಿದ್ದೇವೆ:
ಹೊಸ ಯುಗಾದಿಯ ರಥೋತ್ಸವಕ್ಕೆ
ಹಾಲಗಿರಿ, ಮೇಲಗಿರಿ, ಸಿದ್ಧಗಿರಿ ಸಿಂಹಾಸನ ಗಿರಿ
ಶ್ರೀಪಾದಕೆ
ಉಘೇ ಉಘೇ ಉಘೇ.

## ಶ್ರೀ ಜ.ಚ.ನಿ.

ನೂರೊಂದು ಹೊತ್ತಗೆಯ ಕ್ಷೇತ್ರ ವಿಸ್ತಾರದಲಿ
        ಹಲವು ಬಗೆ-ಬೀಜಗಳ ಬಿತ್ತಿಗೆ ಸಾಲು. ತತಿಗೆ
        ತಕ್ಕಂತೆ ಹಿತ ಮಿತವಾಗಿ, ಹೊಳೆದಂತೆ ಮತಿಗೆ.
ಜೊತೆಗೆ ಎಡೆಹೊಡೆದು ಕಲ್ಲು ಕಸಕಡ್ಡಿ ತೆಗೆದು
ಹಸನಾಗಿಡುವ ಕಲೆ. ಪುರಾತನ ಜ್ಞಾನ ಸಂ-
        ಚಯಕೆ ಕಾಲುವೆ ತೋಡಿ ನೀರುಣಿಸಿದಂಥ ಬೆಳೆ.
        ಬದುವಿನಲ್ಲಿ ವಚನ ರಚನೆಯ ಚೆಂಡುಹೂವುಗಳೆ
ದಂಡೆ, ಷಟ್ಸ್ಥಲದ ಕಣದಲ್ಲಿ ಜೀವನದಹಂ_
ಕೃತಿಯ ಹಂತಿಯ ಕಟ್ಟಿ ತುಳಿಸೆ ಗಾಳಿಗೆ ತೂರಿ
        ಸ್ವಾನುಭವಸಾರ ಸಿದ್ಧಾಂತ ಸಂಪುಟ ರಾಶಿ:
        ಹಗೆಹದಲಿ ಹಾಕಿ ಬರಗಾಲಕ್ಕೆ ತೆಗೆದಿರಿಸಿ
ಮುಗ್ಗು ತಿನ್ನುವುದಲ್ಲ; ನಿತ್ಯ ಬದುಕಿನ ದಾರಿ.
        ದಣಿವಿರದೆ ತೋಡಿ ತೆಗೆಯುವರು ಚಿನ್ನದ ಗಣಿಯ
        ಇರವು-ಬರೆಹದ ನಡುವೆ ತೆರವು ತುಂಬುವ ಮಣಿಹ.

# ಮನುಷ್ಯಪ್ರಾಣಿ

ಎರಡೂ ಕಾಲು ಸಮವಿದ್ದರೂ ವಿಷಮ ನಡೆ. ಬರಿ ಗಾಳಿ-
ಯಲ್ಲಿ ಕೈಬೀಸಿ, ಹೊಟ್ಟೆಯ ಕಡೆಗೆ ಮುಖ. ಸೊಂಟದ
ಸುತ್ತು ಗಾಣ: ತಿರುಗುವ ಕೋಣ. ಉಳಿದ ಕಡೆಗೆಲ್ಲ
ತುಂಬ ಜಾಣ. ಬಾಗುವದು. ಬರೆದು, ತಲೆಕೆರೆದು ಬರಿದೆ ಹರಿ
ಹಾಯುವದು. ಚಾಪೆಯ ಕೆಳಗೆ ನುಸಿದು, ನಿಷ್ಕಾರಣ
ಹಲ್ಲು ಕಿರಿಯುವದು; ಒಳಗೊಳಗೆ ಮಸೆದು, ನುಣ್ಣಗೆ
ಹೊಸೆದು ಬಲೆಗೆ ಹಗ್ಗ, ಎಳೆಯಿರದೆ ಮಾತಿನ ಮಗ್ಗ
ನೇಯುವದು: ಕನಸು-ಪೀತಾಂಬರವ ಉಡಿಸಿ ನೋಡಿ
ಮುದ್ದಾಡಿ, ಗುದ್ದಾಡಿ, ಒದ್ದಾಡುವದು; ಎದ್ದಾಗ ಬೆಳಗು,
ಸುಮ್ಮನಿದ್ದಾಗ ಒಳ-ಹೊರಗು ಕೊರಗು. ಬುರುಗಿನಲ್ಲಿ
ಕಾಮನಬಿಲ್ಲು ಬೆರಗು. ಭೂಮಿಯಿಂದ ಜಿಗಿದು ಸ್ವರ್ಗಕ್ಕೆ
ವರ್ಗ ಬೇಕು: ಎಷ್ಟು ದಿನ ದುರುಗಮುರುಗಿಯ
ಬಾರುಕೋಲಿಗೆ ಹೀಗೆ ಮೈಯನೊಡ್ಡುವದು?

ಋಷಿಯಲ್ಲದವನು ಕಾವ್ಯ ಕಟ್ಟಲಾರ?
ಪಾನಪಟ್ಟಿ ಕಟ್ಟಿಸಿ ತಿಂದು ಖುಷಿ ಪಡುವ ಬಾರ.
ಹೊಗಳಿಕೆಗೂ ನಾಯ ಬೊಗಳಿಕೆಗೂ ಅಂತರ ಕಡಮೆ.
ನಿಂತರೂ ನಟಿಸುವಂತಿರಬೇಕು, ಎಡವಿದರೂ ಜೋಕು.
ಒಂಟಿ ಬೇಸರು: ಜಂಟಿ, ಕುಂಟಿ ತಪ್ಪಿದರೆ ಕುರುಡಿ
ಕತ್ತಲೆಯಲ್ಲಿ ಕೀಲು ಕಳಚಿ ಗಡಗಡ ಒಗ್ಗಾಲಿ ಚಕ್ಕಡಿ.
ಕಂಡವರ ಕಟ್ಟೆಗೆ ಕೂತು, ಪಂಟು ಹೊಡೆದು, ಯಾರದೊ
ನಂಟು ಹಚ್ಚಿ, ಮಾಳಿಗೆ ಹತ್ತಿ ಒದೆಯುತ್ತಾನೆ
ಏಣಿ. ಹೊತ್ತು ಬಂದಾಗ ಹೋಟಲು ಮಾಣಿ, ಇಲ್ಲ ರಾಜ-
ಕಾರಣಿ; ಅದೂ ಬಿಟ್ಟರೆ ಧರಣಿ ಕೂತು ನಾಮಸ್ಮರಣಿ.
ಕೊಂಡಿಗೆ ಕೊಂಡಿ ಕೂಡಿಸಿ ಸರಪಳಿಯ ಕೊರಳಿಗೆ ಸುತ್ತಿ-
ಕೊಂಡು ನಡೆದಿದ್ದಾನೆ: ಪ್ರಾಣಿ ಸಂಗ್ರಹಾಲಯದೊಳಗೆ
ತಿರುಗಿ ಸ್ಥಾನವಿಲ್ಲದ್ದಕ್ಕೆ ಮರುಗಿ, ಉಳಿದಿದ್ದಾನೆ ಹೊರಗೆ.

## ಮೃತ್ಯುಘೋಷಣೆ

೧

ನವೋದಯ ಕಾವ್ಯ ಎಂದೋ ಸತ್ತು ಹೋಗಿದೆ;
ಈಗಾಗಲೇ ಇದು ನಿಮಗೆ ಗೊತ್ತಿದೆ.
ನವ್ಯಕಾವ್ಯ:
ಅದಂತೂ ಈಗ ಸಂಪೂರ್ಣ ಸತ್ತು ನಾರುತ್ತಿದೆ.
ಬಹುಶಃ ನಿಮಗಿದರ ನಾತ ಬಡಿದಿರಲಿಕ್ಕಿಲ್ಲ;
ನಿಮಗೇ ಏಕೆ, ನಮಗೂ ಗೊತ್ತಿರಲಿಲ್ಲ ಇಷ್ಟು ದಿನ
ಒಂದೇ ಮನೆಯಲ್ಲಿ ಕೂಡಿ ಆಡಿದರೂ.
ಮೊನ್ನೆ ಅಪರಾತ್ರಿ ಯಾವುದೊ ಕೆಟ್ಟಕನಸು
ಬಿದ್ದು ಎಚ್ಚರಾದಾಗ
ಬದಿಯಲ್ಲಿಯೇ ಇದು ಅನಾಮತ್ತು ಸತ್ತು ಬಿದ್ದಿರಬೇಕೇ?
ಆಗಲೆ ಇದ್ದು ಬಿದ್ದುದನ್ನೆಲ್ಲ ಅಲ್ಲಿಯೇ ಒಗೆದು
ಸುದ್ದೀ ಹೇಳಲು ಎದ್ದು ಬಂದೆವು.
ಆದರೆ ಅಳಬೇಡಿ, ದಯಮಾಡಿ; ನಾವಿದ್ದೇವಲ್ಲ
ಧೈರ್ಯ ತಂದುಕೊಳ್ಳಿ.
ಯಾರಾದರೂ ನಾಲ್ಕುಜನ ಬಂದು ಹೆಗಲುಗೊಟ್ಟು
ಪುಣ್ಯ ಕಟ್ಟಿಕೊಳ್ಳಿ.

೨

ಸತ್ತ ಕಾವ್ಯವನ್ನು ಹೊತ್ತು ಕುಣಿಯುವ ತೊತ್ತುಗಳೇ
ಬೋಳೆ ವಿಮರ್ಶಕರೇ,
ಲೋಳೆ ಕವಿಗಳೇ,
ಒಟ್ಟಿನಲ್ಲಿ ಸಟ್ಟಾ ನಪುಂಸಕರೇ,
ಎಚ್ಚರಿಕೆ.
ಅವರ ಹೋಳಿ ಹಬ್ಬದಲ್ಲಿ ನಾವೂ ಹಲಗೆ ಬಾರಿಸಿ
ಕಂಡಕಂಡವರ ಮೇಲೆ ಓಕುಳಿ ಚೆಲ್ಲಿ
ಬೆಳತನಕ ಪದ ಹೇಳಿದ್ದು,
ನೀವು ಕದಾ ಮುಚ್ಚಿ, ಕಿಡಕಿಯಲ್ಲಿ ಹಣಿಕಿ ಹಾಕಿದ್ದು
ನಾವು ಸತ್ತರೂ ಮರೆಯುವದಿಲ್ಲ.
ಇದೇ ಬರುವ ಯುಗಾದಿ ಅಮವಾಸಿಯ ದಿನ
ನಮ್ಮದ್ಯಾಮವ್ವನ ಗುಡಿಗೆ ಬಂದು ಡೊಳ್ಳು ಬಾರಿಸಿ

ದಿಂಡರಕಿ ಉರುಳಿ
ಅಮ್ಮನ ಅಂಗಾರ ಹಚ್ಚಿಕೊಂಡು ಉದ್ಧಾರಾಗಿರಿ.
ನೆನಪಿನಲ್ಲಿಟ್ಟುಕೊಳ್ಳಿ:

೩

ನೆಲೆ ನಿಂತವರನ್ನು ನಿಂತ ಕಾಲ ಮೇಲೆ
ಗುಳೇ ಹೊರಡಿಸುವದು,
ಸನ್ನಿವೇಶದ ತೀವ್ರತೆಗೆ ತಕ್ಕಂತೆ ಹೊಸ ಹೊಸ ದನಿತೆಗೆದು
ಕಿರುಚಿಕೊಳ್ಳುವದು
(ಪ್ರಸಂಗ ಬಂದರೆ ನುಣುಚಿಕೊಳ್ಳುವದು)
ಎಲ್ಲ ಮಠಗಳ ಮುಂದೆ ನಮ್ಮದೇ ತೇರು ಎಳೆಯುವದು,
ಪಟ್ಟಭದ್ರರ ನೆಳಲನ್ನು ಅಳಿಸಿ, ದಿಕ್ಕಿಲ್ಲದ
ಕಂದಮ್ಮಗಳಿಗೆ
ದಾರಿ ತೋರಿಸುವದು,
ಇವೇ ಮೊದಲಾದವು ನಮ್ಮ ಗುರಿ.
(ಇನ್ನೂ ಕೆಲವಿವೆ: ಅಡವಿಯಲ್ಲಿ ತಪ್ಪಿಸಿಕೊಂಡ ಕುರಿಮರಿ,
ಅವಕ್ಕೂ ನಾವೇ ಜವಾಬ್ದಾರಿ).
ಇರುವುದಕ್ಕೆ ಹೊಸ ತಿರುವು ಕೊಡಲು ಬದ್ಧರಾಗಿದ್ದೇವೆ.
ಇರಲಾರದ್ದಕ್ಕೆ? ಶಂಖ ಹಿಡಿದು ಸಿದ್ಧರಾಗಿದ್ದೇವೆ-
ಬನ್ನಿ:
ಆ ಭೂತ ಇನ್ನೂ ಸತ್ತಿರದಿದ್ದರೆ
ಎಲ್ಲರೂ ಕೂಡಿ
ಇನ್ನೊಂದು ಬಾರಿಗೆ
ಗುಂಡು ಹಾಕೋಣ.

## ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ

ನಸುಕಿನ ಕ್ಷಿತಿಜ ಕಂಠಕ್ಕೆ ಹೊಮ್ಮಿ ಆಕಾಶ-
ಕ್ಕುಲಿವ ರಾಗ, ಬಯಲನಾಲೋಡಿಸುತ ಪ್ರತಿಪ-
ದಾರ್ಥವ ಹಿಂಜಿ ಆಲಾಪಕ್ಕೆ ಸ್ವರ ಸ್ವರೂಪ-
ದ ಹಂಜಿ: ಸೃಷ್ಟಿ ಮೂಲದ ನಾದ: ಸ್ವ-ಪ್ರಕಾಶ.

ಹಿಗ್ಗಿ ತಳತಳ ಹೊಳೆದು, ಎಳೆದು ತನ್ನೊಳ ಸೆಳೆದು
ಹಡೆದ ಮೂರ್ತಿಗೆ ಜೀವದುಂಬಿ ಮೊರೆವ ನಿನಾದ.
ಜಗದ ಒಡಲೊಳು ಕುದಿವ ವಿರೋಧ ತಗ್ಗಿಸಿ ಸಮೆದ
ಸ್ವಸ್ಥ ಪಿಂಡಸ್ಥಭಾವ: ಐಕ್ಯಸ್ಥಲಕೆ ನಡೆದು
ಅನುಭಾವಿ-ಪದ ಮಧ್ಯ ನಿರವಧಿ ಕಾವುಕೊತು
ಕಣ್ಮುಚ್ಚಿತೆರೆವ ಹೊಸಜೀವ-ಭಾವದೆರಂಕೆ.
ವಚನಕ್ಕೆ ವಚನ ಕೊಟ್ಟಂತೆ ಕಟ್ಟಿದ ಸೇತು-
ನೋಂತು ಶರಣರ ಕರುಳ ಮಿಡಿದು ಇಹ-ಪರ ಸೋಂಕೆ-
ಕಿವಿಗೊಟ್ಟ ಸಲಕೆ ಹೊಸಮಿಂಚು-ಕಂಚಿನ ತಾನ.
ರಸವರ್ಷ, ದಿಗ್ದಿಗಂತ ಸ್ಪರ್ಶ: ಪುನರುತ್ಥಾನ*

**ಪು.ತಿ.ನ.**

ತುಂಬಿದುದು ತುಳುಕಿ ಹೋಗದ ಹಾಗೆ ತುಟಿಯಂಚಿ-
ನಲ್ಲೆ ನಗು. ಒಗುಮಿಗುವ ನಮ್ರ ಪ್ರತಿಭೆಯ ಮಿನುಗು
ಕಣ್ಣಿನಲಿ: ಬಾನ ಬೆಳ್ಳಕ್ಕಿ ಹಾರಿದ ಬೆರಗು.
ಬೆಳ್ಳಿ ಬಟ್ಟಲಿಗೆ ದಾಳಿಂಬೆ ಬಿಡಿಸಿಡುವ ಶುಚಿ-
ರುಚಿ ಮಾತು: ಮೈದಡವಿ ಚಿಗುರಿ ಹೂಬಿಡುವ ಕೆಳೆ.
ಇರವಿನೊಳ ಹೊರಗು ಸ್ವರಲಹರಿ, ಶರದದ ಹಗಲು-
ತೆರವು ತುಂಬುತ್ತ ತೇಲುವಾಗಂತುಕ ಮುಗಿಲು.
ಜಗದಚ್ಚರಿ ತೆರಂಬೊಳೆವ ಮನದಪೂರ್ವಕಳೆ
ಹೊಚ್ಚ ಹೊಸ ಪ್ರಕೃತಿ ವಿನಯದ ಪ್ರಜ್ಞೆ: ದೈವಾಜ್ಞೆ.
ಸಂಪ್ರದಾಯಕ್ಕೊಸೆದು ಮಸೆದು ಭಾವದ ಮೂಸೆ
ಹೊರ-ಒಳ ಜಗದ ಸೊಗದ ನಿರ್ಲಿಪ್ತ ಜಿಜ್ಞಾಸೆ.
ಆತ್ಮಪ್ರಕಟನೆ ಚಲುವ ಸೃಷ್ಟಿಯರಳುವ ಸಂಜ್ಞೆ.
ಮಲೆ ದೇಗುಲದ ಗಂಟೆಯುಲಿಗೆ ಚಲಿಸುವ ಲೋಕ
ಬದುಕನವಲೋಕಿಸಿದಲೌಕಿಕ ಜೀವಪಾಕ.

---

* ಶ್ರೀ ಮಲ್ಲಿಕಾರ್ಜುನ ಮನಸೂರರ ಸಂಗೀತ ಕೇಳಿ

## ಪಂಜೆಯವರನ್ನು ನೆನೆದು

ತಿಟಿ ತಿಟಿ ಟೈಟ್ ಪ್ಯಾಂಟು, ಒತ್ತು-ಬೂಟಿಗೆ ಗುಡ್
ನೈಟ್ ಎಂದು, ತೆಳು ಪಂಜೆಯುಟ್ಟು, ಚಪ್ಪಲಿ ಮೆಟ್ಟಿ
ತೆಂಕಣಗಾಳಿಗೊಡ್ಡಿ ಮೈಯ, ಸಹಜ ಭೆಟ್ಟಿ-
ಯಾದ ಗೆಳೆಯರ ಜೊತೆಗೆ ಮಾತಾಡುತ್ತ ಗುಡ್ಡ-
ವೇರಿ ಕುಳಿತಂತೆ ಹಾಯೆನಿಸುವದು:ಪಂಜೆ, ನಿಮ್ಮ
ನೆನೆದಾಗ. ಮಕ್ಕಳ ಜೊತೆ ಆಡಿ ಹಾಡಿ ಕುಣಿ-
ದು, ಕಥೆ ಹೇಳಿ, ನಲಿದ 'ಕವಿಶಿಷ್ಯ' ಗುರುವೆ ತಲೆ ಮಣಿ-
ದು, ನವೋದಯದ ಹೃದಯದೌದಾರ್ಯಕ್ಕೆ ನಮ್ಮ
ಹಮ್ಮು ಬಿರಿದು, ಅಂತಃಕರಣ ಚಿಮ್ಮುವದು. ಬಿಳಿ
ಬಣ್ಣದಲ್ಲೇಳು ಬಣ್ಣಗಳ ತಿರುಗಿಸಿ ಕಣ್ಣು
ಮನ ತಣಿಸೆ ತಂಗಾಳಿಯಾಗಿ ಮಂಗಳ ಮಣ್ಣು
ಅರಳಿ ತೆನೆ-ಚಿನ್ನ: ಕನ್ನಡ ನುಡಿಯ ಗೋಧೂಳಿ
ಸಮಯಕ್ಕೆ ಹಲವು ನಕ್ಷತ್ರ ಮಿನುಗಿಸಿ ನಕ್ಕೆ.
ತೃಪ್ತಿ ತುಳುಕಿಸಿ ಶರತ್ಕಾಲದಾಗಸಕ್ಕೆ.

## ಯಾರು ಕೇಳುತ್ತಾರೆ, ಹೇಳಿರಣ್ಣ

ಅಲ್ಲಿ ಮುಳುಗುತ್ತಾರೆ, ಇಲ್ಲಿ ಏಳುತ್ತಾರೆ
ಎದ್ದು ಮೆರೆಯುತ್ತಾರೆ, ಹದ್ದು ಮೀರುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಕದ್ದು ಕೇಳುತ್ತಾರೆ, ಸುದ್ದಿ ಮಾಡುತ್ತಾರೆ.
ಗುದ್ದಿ ನೋಡುತ್ತಾರೆ, ಒದ್ದು ಓಡುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಹೊರಗೆ ಮೆಚ್ಚುತ್ತಾರೆ, ಒಳಗೆ ಚುಚ್ಚುತ್ತಾರೆ
ಮರೆಗೆ ಕಚ್ಚುತ್ತಾರೆ, ತೆರೆಗೆ ಬಿಚ್ಚುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ತಲೆಯ ಕೆರೆಯುತ್ತಾರೆ, ಕಲೆಯ ಕೊರೆಯುತ್ತಾರೆ
ನೆಲವ ಮರೆಯುತ್ತಾರೆ, ಬೆಲೆಗೆ ಮೆರೆಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಬಲೆಯ ಬೀಸುತ್ತಾರೆ, ಬುಟ್ಟಿಗೆಸೆಯುತ್ತಾರೆ
ಇಟ್ಟು ಕೊಳೆಸುತ್ತಾರೆ, ಹೊಟ್ಟೆ ಬೆಳೆಸುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಮೇಜು ಗುದ್ದುತ್ತಾರೆ, ಮೈಕು ಮುರಿಯುತ್ತಾರೆ
ಮಾಲೆ ಬೇಡುತ್ತಾರೆ, ಮೋಜು ಮಾಡುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಫಂಡು ಎತ್ತುತ್ತಾರೆ, ಎತ್ತಿ ಹಾಕುತ್ತಾರೆ
ಬಂಡು ಹೂಡುತ್ತಾರೆ, ಬೆಂಡು ಸುಲಿಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಕೈಯ ಮುಗಿಯುತ್ತಾರೆ, ಕಾಲು ಕೆದರುತ್ತಾರೆ.
ಬಾಲಹಿಡಿಯುತ್ತಾರೆ. ಮೇಲೆ ಏರುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಬಾಯಿ ಬಡಿಯುತ್ತಾರೆ, ಕಾಯಿ ಒಡೆಯುತ್ತಾರೆ
ಮರ್ಜಿ ಹಿಡಿಯುತ್ತಾರೆ, ಕುರ್ಚಿ ಪಡೆಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ರೈಲು ತಡೆಯುತ್ತಾರೆ, ದೀಪ ಒಡೆಯುತ್ತಾರೆ
ಕಲ್ಲು ತೂರುತ್ತಾರೆ, ಸುಳ್ಳು ದೂರುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಹೊತ್ತು ಹೊರೆವವರಿಲ್ಲ, ಕಿತ್ತು ತಿಂಬವರೆಲ್ಲ
ಬಿತ್ತಿ ಬೆಳೆದವರಿಗೂ ತುತ್ತು ಭರವಸೆಯಿಲ್ಲ
ಎತ್ತ ಹೊರಳಿದರದೇ ನೋಟವಣ್ಣ.

ಹೇಳುವವರೇ ಎಲ್ಲ, ಕೇಳುವವರೇ ಇಲ್ಲ
ಹೇಳಿ ಕೇಳೀ ಬಾಳ ಏಕತಾರಿಯ ಪದವ
ಯಾರು ಕೇಳುತ್ತಾರೆ ಹೇಳಿರಣ್ಣ.

## ದಾರಿ

ಅದರಲ್ಲಿ ಇದು
ಇದರಲ್ಲಿ ಅದು: ಬಗಿದು, ಕೊಂಡಿ ಬಿಗಿದು
ಹುಗಿದು ಇಹುದು: ಕೈಮುಗಿದು.
ವೀರ್ಯವತ್ತಾಗಿ ತಿರುಗಿ ಹೊಲ-ಗದ್ದೆ -ಬಯಲು
ಹರಗಿ ತಿರುಗಾಮುರುಗ: ಹೊಸ ಹೊಸ ಕೊಯಿಲು.
ಬೆಟ್ಟ-ಕಣಿವೆ-ಕೊಳ್ಳ ಏರಿಳಿದು, ಕೆರೆ ಕಟ್ಟೆ ತುಂಬಿ ತುರುಗಿ
ಹಳ್ಳ-ಹೊಳೆ ಮಿರುಗಿ, ಎಲ್ಲೆಡೆಗು ಮೆತ್ತಗೆ ಹಸಿರು ಹುಲ್ಲು.
ತೆರೆದ ಬಾಗಿಲು ಭೂಮಿ, ಕಿಂಡಿಯಲಿ ನುಸುಳಿತು ಬಾಲ
ನಿಗುರಿಸಿ ಕಾಮಿ; ಸ್ವಾಮಿ ಒಂದಲ್ಲ ಒಂಬತ್ತು ಕಡೆಗೂ ದಾರಿ.
'ಹರಿದಾರಿ ಹರಿದಾರಿ ಹರಿದಾರಿ' ಮುಂದೆ?
ನಿತ್ಯವಾಹನ-ಸಂಪರ್ಕ ಸಾಧನಕ್ಕೆ ರಾಷ್ಟ್ರೀಯ ಹೆದ್ದಾರಿ.
ಅವೂ ಆದಷ್ಟು ಅಗಲವಾಗುತ್ತಿವೆ ಈಚೆ.
ಅಲ್ಲಲ್ಲಿ ವಂಕಿಯಾಗಿದ್ದದ್ದು ಗಿಡಮರದ ನಡುವೆ
ಈಗ ಎಲ್ಲಾ ಕಾಣುವಂತೆ ನೇರ.
ಹಳೆಯ ಸೇತುವೆ ಬಿಚ್ಚಿ-ಕಟ್ಟಿ ಸುಧಾರಿಸುತ್ತಿವೆ.
ಓಡಾಡುತ್ತಿವೆ ಭಾರೀ ಮಾಲು ಹೇರಿದ ಲಾರಿ, ಟ್ರಕ್ಕು.
ಸಲೀಸಾಗಿ ನುಸುಳುತ್ತವೆ ಸ್ಕೂಟರು ಕಾರು;
ಆದರೂ ಕೆಲವರಿಗೆ ಸೊಕ್ಕು:
ನಡು-ಬೀದಿ ಬಳಸಿ, ಕೆಂಪುದೀಪದ ತುಟಿ ಕಚ್ಚಿ
ಹಿಚುಕುತ್ತಾರೆ ಸಾವಿನ ಗಲ್ಲ-ಪಲ್ಲ.
ವ್ಯರ್ಥ ನೆತ್ತರು ಚೆಲ್ಲಿ, ಒಡೆಯುತ್ತವೆ ತಲೆ
ಜೀವಕ್ಕೆ ಏನೂ ಬೆಲೆ ಇಲ್ಲವೆ?
ಚಂದ್ರನವರೆಗೂ ಹಾರಿ ತಂದದ್ದೇನು: ಮಣ್ಣು
ಅದರಿಂದ ಬಂದದ್ದೇನು?-
ಅಂದ್ಹಾಂಗ ಧ್ಯಾನದಲ್ಲಿ ನಾವೇ ಮುಚ್ಚಿರಬೇಕು ಕಣ್ಣು,
ಆಗಲಿಲ್ಲ ಹೋಗಲಿಲ್ಲ, ಅದೇನೋ ಹೇಳುತ್ತಾರಲ್ಲ, ಆ ಶಾಸ್ತ್ರ.
ಎಲ್ಲದರ ಪರಲು ಹರಿದು ಕೊನೆಗೆ ಎಲ್ಲೋ
ಒಂದು ಕಡೆಗೆ ಮನೆಮಾಡಿದೆವೆನ್ನಿ.
ಏನಾಯ್ತು? ಯಾವತ್ತೂ ಒಳಗೇ ಇರುತ್ತೀರಾ?
ಯಾವುದರ ಗುಟ್ಟು, ಒಳಗಿಟ್ಟು, ಬಯಲಿಗೆ ಬರುತ್ತೀರಿ?
ಮರೆಯೊಳಿದ್ದದ್ದಕ್ಕೆ ಹೊರಗೆ ರೇಸಿಮೆಯ ತೆರೆ. ಅದೆಲ್ಲಾ
ಖರೆ: ಹೇಗೆ, ಎಲ್ಲಿ ಗೆರೆಯೆಳೆಯುತ್ತೀರಿ? ಕೇಳಿ-

ಸುತ್ತಲೇ ಇರುತ್ತದೆ ಯಾವುದೋ ಕರೆ, ಕರಕರೆ.
ಏನರೆ ಹೇಳಿ ಪಾರಾಗುವುದಲ್ಲ; ಹಾಗೆಂದರೆ
ಬೇಕಾದಷ್ಟಿವೆ ದಾರಿ ತಪ್ಪಿಸಿಕೊಳ್ಳಲಿಕ್ಕೆ. ಆದರೆ
ನಮ್ಮನ್ನೇ ನಾವು ಒಪ್ಪಿಸಿಕೊಳ್ಳುವುದಕ್ಕೆ?-'ಸುಲಿದ
ಬಾಳೆಯ ಹಣ್ಣಿನಂದದಿ?'
'ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ?'
ಗಳಿಸಿದ್ದೂ ಸಾಲದು, ಸಾಲದ್ದೂ ಸಾಲದು, 'ಉಳಿಸಿ'
'ಬೇಕು-ಸಾಕು'-ಹೀಗೆಯೇ ಎಲ್ಲ ದಾರಿಯ ಬಳಸಿ
ವಿಧ ವಿಧ ಬೋರ್ಡುಗಳ ಪರಾಕು. 'ನೂರು ಮರ, ನೂರು ಸ್ವರ'
ಒಂದೊಂದೂ ಅಪಸ್ವರ.
ರಸ್ತೆ ಸುರಕ್ಷಿತ ದಾಟಿದ ಮೇಲೆ ನೋಡೋಣ
ಎಂದುಕೊಂಡು ನಮ್ಮ ದಾರಿ ಹಿಡಿಯುತ್ತೇವೆ.

ಕೆಲ ಸಮಯವಾದರೂ ನಿರಾಮಯ, ನಿರ್ಜನ, ನಿರಾತಂಕ
ಅದರಪಾಡಿಗೆ ಅದನು ಬಿಟ್ಟು ಬಿಡಿ-
ಈ ದಾರಿ
ನನಗೆ ಅನಿಸಿದ ಹಾಗೆ ನಿಮಗೂ ಅನಿಸಬಹುದು
ಚೇತೋಹಾರಿ.

## ಬರೆಯಲೊಲ್ಲದ ಕವಿತೆ

ಪುನರ್ವಸು, ಪುಷ್ಯ
ಮಳೆಗರೆದಾಗ ಈ ಮನುಷ್ಯ
ಹೊರಬಂದ. ಗುದ್ದಲಿ, ಸಲಿಕೆ, ಪಿಕಾಶಿ
ಬಳಸಿ ಅಗೆದಗೆದು, ಬಳಿದು ಕೈಯಾಡಿಸಿದ.
ಮಣ್ಣು ಘಮಘಮಿಸಿತ್ತು; ಗೊಬ್ಬರ ಹಾಕಿ
ಹದಗೊಳಿಸಿದ. ಕರಿಕೆಯ ತಳಬೇರು ಮಾತ್ರ
ಸಿಗಲಿಲ್ಲ; ಕೈಗೆ ಸಿಕ್ಕಷ್ಟೆ ಜಗ್ಗಿ ಕಿತ್ತೊಗೆದ.
ಬೇರಿನ ವಾಸನೆಗೆ ಬೇರೇನೊ ನೆನೆದು ನಕ್ಕ.

ಮುಗಿಲ ಬೆಳಕಿನ ಬೀಜ ಮರವಾಗಿ ನೆಲವ ತಬ್ಬಿತ್ತು.
ಗಾಳಿ ಜೋಕಾಲಿಯಾಡಿ ತೂಕ ಹಿಡಿದಿತ್ತು.
ಸುಖದ ಸಂವೇದನೆಯಲ್ಲಿ ಮಣ್ಣ ಬೀಜ ಮೊಳೆದೋರಿತ್ತು.

ಹೊಳೆದಿತ್ತು ಅಪೂರ್ವ ಚೆಲುವಿನಲಿ ಬಯಲು.
ಯಾವುದೋ ಲಯದ ಗತ್ತಿನಲಿ ಜೀವ ಮಿಡಿದಿತ್ತು...

ದಿನಕೊಂದು ಚಂದ; ಅಮೂರ್ತಕ್ಕೆ ಮೂರ್ತತೆಯ ಬಂಧ
ಬಗೆಬಗೆಯ ಸಸಿ ಬೆಳೆದು ಪಲ್ಲವಿಸಿ ನಿಲ್ಲುವಾಮೋದ.
ಆಶ್ಲೇಷಾ, ಮಘಾ ಮಳೆಗಳ ಓಘ ಮೊಗೆ ಮೊಗೆದು
ನೋಡನೋಡುತ್ತ ಹಸುರು ಹರಯಕ್ಕೆ ಬಂದಿತು ಪೂರ.
ತೊಳೆದು ಹೋಗಿತ್ತು ಕೀಡಿಯ ರೋಗ.

ಒಂದು ಬೆಳಿಗ್ಗೆ ಕಂಡವು ಮೊಗ್ಗೆ: ಸಮಸ್ತ ಪ್ರಪಂಚದ ಹಿಗ್ಗು
ಅಗ್ಗಲಿಸಿತ್ತು ಕಣ್ಣ. ಈ ಬಣ್ಣ ಇವಕೆ ಹೇಳಿ ಮಾಡಿಸಿದಂತೆ.
ಸೂರ್ಯಕಾಂತಿಯ ಸುವರ್ಣಮುಖ ಹೊರಳಿ ಪೂರ್ವಕ್ಕೆ
ದೃಷ್ಟಿ ನಿಲಿಸಿತ್ತು. ದಾಹ್‌ಲಿಯಾ ಯಾವ ದಿಕ್ಕಿಗು ಸರಿಯೆ
ಇಷ್ಟಗಲ ಸಂತುಷ್ಟಿ. ಗುಲಾಬಿಯ ಕಪೋಲಕ್ಕೆ ಮುತ್ತು.
ಸಂಪಿಗೆಯ ಮೂಗಿನಲಿ ನತ್ತು. ಕಂಪು ಗಾಳಿಗೆ ಹೀಗೆ
ಮೆಲ್ಲಗೆ ಜಂಪು. ಚೆಂಡು ಹೂಗಳ ದಂಡೆ ಗೌರಿ ಹುಣ್ಣಿಮೆ-
ವರೆಗು. ಹಾಳೆಯ ಮೇಲೆ ವಿಧವಿಧ ಬಣ್ಣ ಸಿಂಪಡಿಸಿದಂತೆ
ಫ್ಲಾಸ್ಕ್ ಹೂಗಳ ಭಂಗಿ-ಭಣತೆ. ಭಲಾ ಬೇಲಿಯನೆಲ್ಲ
ತಬ್ಬಿ ಹಬ್ಬಿರುವ ಬೋಗನ್‌ವಿಲಾ!ಸಾಮಾನ್ಯವಲ್ಲ ಮುಳ್ಳಿನ
ಹಿಡಿತ. ಮೌನವಾಗಿಯೇ ನಗುವ ಜೀನಿಯಾ-ಬಾಡದು ಬೇಗ:
ತುಂಬಿ ಕಾಡದು. ನೂರು-ಸಾವಿರ ಕಾಸ್ಮಸ್ ಕುಸುಮಗಳ
ಒಲೆತ ಅತ್ತಿಂದಿತ್ತ, ಇತ್ತಿಂದತ್ತ. ಹಿಂಡು ಚಿಟ್ಟೆಗಳ
ಕಾಲು ಕಟ್ಟಿದ ಹಾಗೆ ಚಂಚಲ ಚಿತ್ತ. ಅಂತಃಕರಣ
ಕುಡಿ ಚಾಚಿ, ಹಿಡಿ ಹಿಡಿ ಹೂವ ಕೊಡುವ ಮಲ್ಲಿಗೆಗೆ
ಒಲ್ಲೆನ್ನದು ಮನಸು. ಬೆಳುಗಾಲದ ಬಿಸಿಲಿನಲ್ಲಿ
ಬೆಳ್ಳಿ-ಬಂಗಾರವನು ಸೂರೆಗೊಳಿಸುವ ಸೇವಂತಿಗೆ
ಸಂತಸ ಸುಗ್ಗಿ. ಈಸು ದಿನ ಎಲ್ಲಿದ್ದವೊ ಪಾತರಗಿತ್ತಿ
ಜಾತ್ರೆಗೆ ಬಂದಂತೆ ಮುತ್ತಿವೆ ಈ ಮಾನವಮಿಯ ಹೊತ್ತಿಗೆ.
ಉತ್ತರಿಯ ಬಿಸಿಲಿಗೆ ತಗ್ಗಿದ ಹೂಮೊಗವನೆತ್ತಿ ಮುತ್ತಿಡಲು
ಶರದೃತು:ವಿಜಯದಶಮಿಗೆ ಸುಗಂಧದ ಸೀಮೋಲ್ಲಂಘನ.
ಉರಿಯಿರದ, ನೆಲದ ಸಾರವ ಹೀರಿ ಬಣ್ಣದೈಸಿರಿ ತಳೆದ
ಪರಿಮಳದ ಹೂವ ಹಣತೆಯಲಿ ಬೆಳಗುವವು
ಲೌಕಿಕ ಜಿನಾಗಮಗಳೆರಡೂ.

ಇಂಥ ತಂಪೊತ್ತಿನಲಿ ಮಾನ್ಯ ಸಂಪಾದಕರೆ,
ಕವಿತೆ ಏತಕೆ ಬೇಕು ಹೇಳಿ. ಗೌರವಧನದ ಚೌರಿ ಬೀಸಿ
ಮುಂಗಡ ಚೆಕ್ಕು ಕಳಿಸಿ ಪೀಡಿಸಬೇಡಿ. ಬಾಡಿರುವ
ಹೂಗಳ ತೆಗೆದು, ಒಣಗಿದೆಲೆಗಳ ಗುಡಿಸಿ, ಅಲ್ಲಲ್ಲಿ
ಅಸ್ತಿತ್ವಕ್ಕೆ ಧಕ್ಕೆಬಾರದ ಹಾಗೆ ಬೆಳೆದ ಕಸ-ಕಳೆಯ
ಕೆತ್ತಿ, ಕುರುಪಿಯಾಡಿಸಿ, ಜರಜರಿಯಿಂದ ನೀರೆರೆಯುವಲ್ಲಿ
ನನಗೆ ಸುಖವುಂಟು. ನಿಮಗೆ ಗೊತ್ತಿಲ್ಲ: ನಮ್ಮ ನಾಯಿ
ಮಣ್ಣು ಕೆದರಿ ತಣ್ಣಗೆ ಮಲಗಿ, ಅಕ್ಕಪಕ್ಕದ ಹೂ-
ಗಿಡವ ಮುರಿದು ಮುದುಡಿಸಿದೆ; ಅದಕೆ ಸಲಿಗೆ
ಕೊಟ್ಟವನು ನಾನೇ ಎಂದು ಈಕೆಯ ಸ್ಪಷ್ಟ ಹೇಳಿಕೆ.
ನೋಡಿ, ಅದನ್ನೆಲ್ಲ ಈಗ ಸರಿಪಡಿಸಬೇಕು; ಬಿಡುವಿಲ್ಲ.
ಮೇಲಾಗಿ ಬರೆಯುವ ಮನಸ್ಸಿಲ್ಲ. ನನ್ನ ಕವಿತೆ ಇರದಿದ್ದರೆ
ವಿಶೇಷ ಸಂಚಿಕೆಯ ಬೆಲೆಯೇನೂ ಇಳಿಯುವದಿಲ್ಲ.
ತಪ್ಪು ತಿಳಿಯಬೇಡಿ, ಅರ್ಥವಿಷ್ಟೆ; ಬರೆದ ಕವಿತೆಯ
ಭಾರ ಬರೆಯದ ಕವಿತೆಗಿಂತ ಹೆಚ್ಚಲ್ಲ.

## ಗಡಿ-ಬಿಡಿ ಗೊಂದಲಾಸುರ

ವಾರೆವಾ, ಗಡಿ-
ಮೀರಿ ವರ್ತಿಸುವ ವಾ-ನರ ಸೇನೆ.
ಹೆಂಡ ಕುಡಿಸಿ, ಕುಂಡಿಗೆ ಚೇಳು ಕಡಿಸಿ
ದೂಡಿದ ಮುಖಂಡ ಬಾಳ ಠಕ್ಕ-ಅರೆ
ಹೊಕ್ಕು ನೆರೆ ಮನೆ-ತೋಟ-ಹೋಟಲು
ಕೊಳ್ಳಿ, ಲೂಟಿ ಲಂಕಾದಹನ.
(ಸೀತೆ-ಮಂಡೋದರಿಗು ವಸ್ತ್ರಾಪಹರಣ)

ಮಹಾರಾಜ್ಯದಲ್ಲಿ ಅಹಾ, ಇವರದೇ ಆಡಳಿತ
ಎನುವ ಶಂಕೆ.
ಮಂಕೆ, ಎಲ್ಲಿ ನಾವೆಲ್ಲ ಕಣ್ಣುಮುಚ್ಚಿ ಆರಿಸಿ ಜೊಳ್ಳು-
ಡೊಳ್ಳು ಬಾರಿಸಿದ ಗಡಿಗಳು?
(ಹೊತ್ತು ಬಂದಂತೆ ಬಣ್ಣ ಬದಲಾಯಿಸಿದ ಗೋಸುಂಬೆ)

ದಿನವೂ ಹಾಲು, ಉತ್ತತ್ತಿ, ದ್ರಾಕ್ಷಿ, ಗೋಂಡಬೆ
ಅದು-ಇದು ತಿಂದು. ಕುಡಿದು, ತಯಾರಿ ನಡೆಸಿದವರು?
(ಸಿಕ್ಕಿತೆ ಕಳಕೊಂಡ ಆಕಳ-ಕರು?)

ಎಮ್ಮೆಲ್ಲೆ?
ಊರೂರ ಹೊಲಸಿನ ರಾಡಿ ಹೊಂಡದಲ್ಲೆ?
ಇಲ್ಲ, ಹಿಡಿಮೇವು ಒಗೆದು
ಕೊರಳು ಕಟ್ಟಿ ಬಿಟ್ಟ ಕೊಟ್ಟಿಗೆಯಲ್ಲೆ?

ಅಲ್ಲಿ ಚಾಂದಣಿ ಚೌಕಿನಲ್ಲಿ
ಚಕ್ಕವಾಡಿ, ಕಾಯಿ ಕಡಿಯುತ್ತ, ಹಿರಿಯಕ್ಕ
ಪಕ್ಕ ಬಲಿಸಿದಳು. ಆ ಚಾಳಿ ಮನೆಮಂದಿಗಲ್ಲ.
ಗೊಂದಲಾಸುರರ ಬಡಾಯಿಗೆ ಸಾತ್ವಿಕರನುಡಾಯಿಸಿ

ಒತ್ತಡದಿಂದ ಬಾಯಿ ಹೊಲಿಸಿದರೆ
ಮಹಾಜನರ ಗತಿಯೇನು?
(ಇಷ್ಟೆ ನಮ್ಮೆಲ್ಲ ಕತೆ ಮಂಕುತಿಮ್ಮ?)

ಇನ್ನು ಬೇರೆ ಲೆಕ್ಕಾಚಾರ-
ಸಗಣಿಯವನ ಸ್ನೇಹಕ್ಕಿಂತ ಗಂಧದವರೊಡನೆ ಗುದ್ದಾಡಿ
ಬಗೆಹರಿಸಿದರೆ ಚಿಂತೆಯಿಲ್ಲ. ಇಲ್ಲವಾದರೆ
ಸಂತೆ ಕೂಡುವ ಮೊದಲೆ ಗಂಟಿ ಚೌಡಿಯರು
ಕರಕರ ಮಂಡರು ನೆರೆದು, ದೊಡ್ಡ ತಮಾಶಾ ನಡೆದು
ವ್ಯವಹಾರವೆಲ್ಲ ಹದಗೆಡಿಸುವರು.

ಭಾವೈಕ್ಯ: 'ಮಂತ್ರಿ'ಸಿದ ಬೂದಿ
ಗಾಳಿಪಾಲು.

## ಯಥಾಸ್ಥಿತಿ?

ಇಲ್ಲಿಂದ ದಿಲ್ಲಿಗೆ ಹೋದರು
(ಸಿದ್ದ ಕವಲೂರಿಗೆ ಹೋದಂತಲ್ಲ)
ಮಾತು-ಕಥೆಯಾಗಿ ಮತ್ತೆ ಇಲ್ಲಿಗೇ ಬಂದರು,

ಎಲ್ಲಿಗೆ ಬಂತೊ ಸಂಗಯ್ಯ?
ಯಥಾಸ್ಥಿತಿಯ ಮೂಲ ಪಲ್ಲವಿಗೆ-
ಬೇಡವೆಂದಲ್ಲ, ಪರಿಸ್ಥಿತಿ
ಹಾಗೆ ಇರಗೊಡುವದಿಲ್ಲ,

ಮುಂಬೈಯಲ್ಲಿ ಇದ್ದಕ್ಕಿದ್ದಂತೆ ಹುಂಬಗಾಳಿಯು ಬೀಸಿ
ಗಿರಣಿ ಬಂಬುಗಳು ವಿಪರೀತ ವಿಷಕಾರಿ
ವಾತಾವರಣ ಒಮ್ಮೆಲೆ ಕಲುಷಿತಗೊಂಡಾಗ-
ಉಸಿರ್ಗಟ್ಟಿ ಮುಂಬಾದೇವಿ ಒಳಗೊಳಗೆ ಚಡಪಡಿಸಿ
ಕತ್ತೆತ್ತಿ ಕುತುಬಮಿನಾರದ ಕಡೆಗೆ ನೋಡುತ್ತಾಳೆ.
ಲಾಲಬಾಗಿನಗಾಜಿನ ಮನೆಯ ಕನಸು ಕಾಣುತ್ತಾಳೆ.
ಬೃಂದಾವನದ ಕಾರಂಜಿಗಳ ನೆನೆದು
ಒಂಟಿ ಸೀನುತ್ತಾಳೆ.

'ಸಹ್ಯಾದ್ರಿ'ಯಲ್ಲಿಮರಮಳೆ ಹೊಡೆದು
ಹುಚ್ಚು ಹೊಳೆ ಬಂದಾಗ
ನಮ್ಮ ದಂಡೆಯ ಫಲವತ್ತಾದ ನೆಲವ ಕೊಚ್ಚುವದು
ಬಿತ್ತಿ ಬೆಳೆದದ್ದಕ್ಕೆ ಹೀಗೆ ಕೈ ಹಚ್ಚುವದು
ಕೊಡು-ಕೊಳೆಯ ರಹದಾರಿ ಸಂಕ-ಸೇತುವೆ
ಮುಳುಗಿ, ಹೆದ್ದಾರಿ ಕಟ್ಟಿ ಜೀವನ ಸ್ಥಗಿತ.
ಒಡೆದು ಕಿಟಕಿ-ಕನ್ನಡಿ ಹಾಳು ಮುಖದಲ್ಲಿ
ನಿಲ್ಲುವವು ದಾರಿ ತೋರದೆ ಲಾರಿ, ರೈಲು, ಬಸ್ಸು,
ನಿಂತ ರೇವೆಯ ಮಣ್ಣ ರಾಡಿಯಲ್ಲಿ ಎಂತೆಂಥವರ ಕಾಲು
ಜಾರುವದು
ಅರಸರವರಸದಲ್ಲಿ ದಿಲ್ಲಿಗೆ ವಿಮಾನ ಹಾರುವದು-
ಪ್ರಜೆಗಳ ತಲೆಯ ಮೇಲೆ
ಸುಂಕ ಹೇರುವದು.
(ಕೊಯನಾ ಸರೋವರವು ಯಥಾ ಪ್ರಕಾರ ನಡುಗುವದು)
ಅದಕಾಗಿ ಗಟ್ಟಿಮುಟ್ಟಾಗಿ ಇಟ್ಟು ಆಣೆ-
ಕಟ್ಟು, ಅಸ್ತವ್ಯಸ್ತ ಸ್ಥಿತಿಯ ಕೊನೆಗೊಳಿಸಿ, ಒಟ್ಟು
ಪ್ರಗತಿಗಡ್ಡಗಾಲು ಹಾಕದ ಹಾಗೆ
ಬೇರೆ ಕಾಲುವೆ ತೋಡಿ, ಎರಡೂ ಬದಿಯ
ಹೊಲ-ಗದ್ದೆಗಳ ಹಸುರು ಬಾಡದ ಹಾಗೆ,

ಕಾಡುಮಿಕ ನುಗ್ಗಿ ಕಬ್ಬಿನ ತೋಟ ಹಾಳು
ಮಾಡುವವರೆಗೆ ಕುಳ್ಳಿರದೆ, ಊರ ಬಣಿವೆಗೆ
ಹಬ್ಬದಂತೆ ಕಾಡಿನ ಬೇಗೆ, ನಮಗೆ
ಬೇಕಲ್ಲವೆ ಸರ್ವ (?) ಸಮ್ಮತವಾದ ಒಂದು
ಶಾಶ್ವತ ವ್ಯವಸ್ಥೆ?



# ಜೀವಧ್ವನಿ

೧೯೭೪-೧೯೮೦

## ಸಾವಿರದ ಸತ್ಯ

ಎಷ್ಟೆಂದರೂ ನಿನಗೆ ನಾಚಿಕೆಯಿಲ್ಲ.
ಹೊತ್ತು-ಗೊತ್ತು, ನೇಮ-ನಿತ್ಯ ಯಾವುದೂ ಇಲ್ಲ.
ಆಡಾಡುತ್ತ ಅಡ್ಡಗಾಲು: ನಡುವೆ ಒಡ್ಡುವ ಸವಾಲು.
ಓಡುವ ಭರಾಟೆಯಲ್ಲಿ ಬಂಡಿ ಕಳಕೊಂಡಂತೆ
ಕೊಂಡಿ; ಕಡೆಗೀಲು. ತೆರೆದ ಕಣ್ಣು ತೆರೆದಂತೆ
ಬಟಾಬಯಲು. ಹಾಡೇ ಹಗಲು ದರೋಡೆ:
ಹಿಂದೆ-ಮುಂದೆ ಸುತ್ತಲೂ ಹದ್ದು-ನೆರಳಿನ ಪಹರೆ.
ಚೂರೂ ಗುರುತು ಹತ್ತದ ಮುಖ ಚಹರೆ.
ಯಾರ ಮುಖಾಂತರವೊ ನಿನ್ನ ಕಂಡಾಗ ಸಂಕಟ, ದುಃಖ
ಮತ್ತೆ ಯಥಾಪ್ರಕಾರ:
ಪಿಸಿನೂಲು ತೆಗೆದು, ಹರಿದಲ್ಲಿ ಎಳೆ ಹಚ್ಚಿ
ಹುರಿ ಮಾಡಿ ಸುತ್ತುವ ಚರಖ-
ಮಗ್ಗದಲ್ಲಿ ಮೆಲ್ಲಗೆ ಬಗ್ಗಿ ನೇಯುವ ಸುಖ.

ಮರವೆಯ ಪರದೆಯಾಚೆ ಕಾಡಿನ ದಾರಿ
ಕಾಲಮಾನಕ್ಕೆ ದೂರ.
ತೆರೆ ಎದ್ದಾಗ ಇದ್ದಕ್ಕಿದಂತೆ ಸನಿಹ, ಒಮ್ಮೆಲೆ ಕ್ರೂರ.

ಹುಟ್ಟಿನ ಬೆನ್ನ ಹುರಿಗುಂಟ ಏರಿ
ತುಟ್ಟತುದಿಗೊಂದು ತರಹ.
ಮುಟ್ಟಿ ನೋಡಿದ ಹಾಗೆ ದಿಟ್ಟತನದನುಭವ.
ಕೊಟ್ಟು ರುಚಿತೋರಿ, ಇಸಗೊಂಡಂತೆ ನಾಲಗೆಯ ರವರವ.
ಇರಬಹುದು ನಿನಗಿದು ಸಹಜ; ಒಂದು ರೀತಿಯ ಮಜ.
ನಮಗೆ ಆಕಸ್ಮಿಕದ ಭಯ.
ಎಲ್ಲಾ ಕಳೆದು ಉಳಿದದ್ದು, ಉಳಿಯದಿದ್ದದ್ದೂ ನಿಜ.
ಒಣಗಿದೆಲೆ, ಬಾಡಿದ ಹೂವು, ಕಳಿತ ಹಣ್ಣು-
ಚಿಗುರು; ಮೊಗ್ಗು, ಹೀಚಿಗೆ ತೆರೆದ ಕಣ್ಣು:
ಹುಳು ಕೊರೆದು, ಬಿರುಗಾಳಿ ಬೀಸಿ ಉದುರಿದರೆ
ಮತ್ತೆ ಮಣ್ಣು.
ಮಂಜಿನೊಳಗಿಂದ ಹೊರಬಿದ್ದ ಮುಂಜಾವು,
ಮಧ್ಯಾಹ್ನ ಏರುವ ಕಾವು-
ಇಳಿದು ಕುಂಟುತ್ತ ಜಾರುವ ಸಂಜೆ-
ಸಾವಿರದ ಸತ್ಯ: ಒರೆಗಳಚಿದಲಗು.
ಹಗಲೆಲ್ಲ ತೊಗಲಬಾವಲಿ ಹಿಂಡು ತಲೆ-ಕೆಳಗು.
ನುಂಗಬೇಕಾದದ್ದು ಕಹಿ ಗುಳಿಗೆ-
ಸಿಕ್ಕು ನೀರಿನ ಸುಳಿಗೆ, ಮುಳುಗಿ
ಎದ್ದಂತೆ ಗುಳ್ಳೆ: ಕೊನೆಯ ಗಳಿಗೆ.

## 'ಅಲ್ಲ, ಮಾತ್ಹೇಳತೀನಿ'

ಯಾಕ ಸುಳ್ಸುಳ್ಳ ಸುದ್ದಿ ಹಬ್ಬಸ್ತೀರಿ?
ಮೊನ್ನೆ ಸಭಾದಾಗ ಯಾರೂ ನನ್ನ ಕಡೆ ಚಪ್ಪಲಿ ತೂರಿಲ್ಲ.
ಖರೇ ಹೇಳ್ತೀನಿ:
ತೂರಿದ್ದರೂ ನಾ ಅದನ್ನ ನೋಡಿಲ್ಲ.
ಕಟ್ಟ ಖರೇ ಹೇಳ್ತೀನಿ:
ಅದು ನನಗೆ ಬಡದೇ ಇಲ್ಲ.
ಪೇಪರಿನ್ಯಾಗ ಸುದ್ದಿ ಬಂದದಂತ್ಹೇಳಿ
ಅದನ್ನೆಲ್ಲಾ ನಂಬಾಕ ಹೋಗಬ್ಯಾಡ್ರಿ.
ಓದು ಒಲ್ಯಾಗ ಸುಡ್ರಿ.
ಅವರರs ಏನ ಸುದ್ದ ಇರತಾರ?

ನಡೀಬಹುದಾದ್ದನ್ನ ನಡದ ಹೋತು ಅಂತಾರ.
ಹೋತೋ, ಬಂತೋ-ಅಂತೂ ಸುದ್ದೀ ಮಾಡ್ತಾರ.
ಅದರ, ಯಾರೊ ಕರೇ ನಿಶಾನಿ ಹಿಡಿದಿದ್ದು ಮಾತ್ರ ಖರೆ.
ಯಾಕಂದರ ಬಿಳೇ ಟೊಪಿಗೆ ನಡುವ ಕರೇದು ಕಂಡs ಕಾಣಸ್ತದ
ಅದರಾಗೇನ ತಪ್ಪದ?
ಅವತ್ತ ಮಂದಿ ಕೂಡಿದ್ದೇನು ತುಸಾನs?
ನನ್ನ ಭಾಷಣಂದರೇನ ಕಸಾನs?
ಅಂಥಾ ಗದ್ದಲದಾಗ
ಯಾರದಾರ ಕಾಲಾಗಿಂಧು ಕೈಯಾಗ,
ಕೈಯ್ಯಂದು ತಲಿಮ್ಯಾಗ ಹೋಗೂದು
ಸ್ವಾಭಾವಿಕ, ಹೌದಲ್ಲ?
ಅಂದ ಮ್ಯಾಲೆ, ಬೇಕಂತs ತೂರಿದರು
ಅಂತ ಯಾಕ ಬೊಬ್ಬಾಟ ಮಾಡ್ತೀರಿ?

ಹೋಗಲಿ, ಒಂದು ವ್ಯಾಳೆ ತೂರೇ ಬಿಟ್ಟಾರಂತ ಇಟಗೊಳ್ರಿ:
ಚೆಂಡು ತೂರಿ ಹಿಡಕೋತಾರಲ್ಲಾ
ಹಾಂಗ್ಯಾಕ ಮಾಡಿರಬಾರದು? ಹೇಳ್ರಿ.
ಇಲ್ಲ, ನನ್ನ ಕಡೇನ ತೂರಿದರು
ಅಂತ ನೀವನಬಹುದು.
ಹಂಗಾರ ನಾ ಒಂದು ಪ್ರಶ್ನೆ ಕೇಳ್ತೀನಿ:
ಅದೇನಿವರು ಸ್ವತಃ ತಯಾರ ಮಾಡ್ಸಿದ್ದ?
ಯಾರದೊ ಅಂಗಡ್ಯಾಗ ಕೊಂಡದ್ದು
ಇಷ್ಟು ದಿವಸ ಹಾಕ್ಕೊಂಡು ಅಡ್ಡಾಡಿದ್ದು
ಈಗ ಹರಿದಿದ್ದೀತು, ಬೀಸಿ ಒಗದಿದ್ದಾರು- ಆತು.
ಅಲ್ರೀ, ಎಲ್ಲೀದರ ಸಿಟ್ಟ ತಂದು ಎಲ್ಲ್ಯಾರ ಹಾಕಿದರ
ಏನ ಬಂದ್ಹಂಗಾತು?
ಗುಜರಾತದಾಗ ಗುಂಡು ಹಾಕಿದ್ರ, ಇವರ್ಯಾಕ ಗುರ್ರನಬೇಕು?
ಧಾರಣಿ ಏರಸೂದು, ಮಾನ-ಮರ್ಯಾದಿ ಇಳಸೂದು
ನಾಲಗಿ ಹೊಳ್ಸೂದು-
ಎಲ್ಲಾ ಕಡೇನೂ ನಡದsನಡದೈತಿ.
ಬರೇ ನಮಗ ಏನ ಗುತಿಗೆ ಕೊಟ್ಟೈತೆ?
ಬಿಹಾರದಾಗ ನೋಡ್ರಿ, ಹ್ಯಾಂಗ ಬಾಯಿಗೆ ಅರವಿ ಕಟ್ಟಿಕೊಂಡು
ಹಿಂದ ಕೈ ಕಟ್ಟಿಕೊಂಡು ಮೆರವಣಿಗೆ ಹೊರಟಿದ್ರು-
ಅವರs ಪೇಪರಿನವರs ಕೊಟ್ಟಾರಲ್ಲ-

ಹಾಂಗ ಬಾಯಿಮುಚ್ಚಿಕೊಂಡು ಸುಮ್ಮನಿರಬೇಕ್ರೆಪ
ಅಂದರ ಶಾಣ್ಯಾತನ.
ಅಲ್ಲ, ಮಾತ್ಹೇಳತೀನಿ:
ಚಪ್ಪಲಿ ತೂರಿದ್ದು ತೂರಿ ಹೋಯ್ತು;
ಅವರಿಗೊಂದ ಹೊಸಾ ಜೋಡು ಕೊಡಸಿದರಾತಿಲ್ಲೊ?
ಏನಂತೀರಿ?

## ಹುಲ್ಲು

ಈ ಜುಲೈ ತಿಂಗಳ ಜಿಟಿ ಜಿಟಿ ಮಳೆ-
ಗಟಗಟ ಕುಡಿದು ಧುತ್ತೆಂದು ಬೆಳೆದು ನಿಂತಿದೆ ಹುಲ್ಲು.
ಎಲ್ಲಾದರೂ ಸ್ವಲ್ಪ ಪಡುವು ಸಿಕ್ಕರೆ ಸಾಕು:
ಸಿಮೆಂಟು ಗೋಡೆಯ ಬಿರುಕು, ಟಾರು ಬೀದಿಯ ಒಡಕು-
ಎಂಥ ಇಕ್ಕಟ್ಟಿನಲ್ಲು ಹೊರಬರುತ್ತದೆ ತುರಾಯಿ ಹಚ್ಚಿಕೊಂಡು.

ಗುಡ್ಡ-ಮರಡಿ-ಬಯಲು ಸ್ವಂತ ಸಾಮ್ರಾಜ್ಯ.
ಹಿತ್ತಿಲದ ಮಾತು ಗೊತ್ತೇ ಇದೆ;
ಅಂಗಳದ ಅಂಗುಲಂಗುಲ ಕೂಡ ಅದರದೇ ಗುತ್ತಿಗೆ.
ಹೂದೋಟದಲ್ಲಿ ಹೇಳಿ ಕಳಿಸಿದ ಹಾಗೆ ಹೊತ್ತಿಗೆ
ಮೊದಲೇ ಬಂದು ಡೇರೆ ಹೊಡೆದು ತಳವೂರುತ್ತದೆ-
ನೀರೆರೆದು ಬೆಳೆಸಿದ ಹೂವಿನಗಿಡಕ್ಕೆಸೆದು ಸವಾಲು;
ಬೀಜದ ಕಸುವೊ, ಮಣ್ಣಿನ ಹಸಿವೋ-
ಮುಸುಗುಡುತ್ತದೆ ದನ ಮೇದು ಹೋದ ಮೇಲೂ.

ಕರುಣೆ ತೋರದೆ ಕುರುಪಿಯಿಂದ ಕೆತ್ತಿಕೆತ್ತಿ ತೆಗೆದು
ಹೊರಗೊಗೆದು ಹಸನಾಯಿತೆಂದು ಉಸಿರು ಬಿಡು-
ವಷ್ಟರಲ್ಲೇ ಕಷ್ಟದ ಮರುದಿನದ ಮುಖದಂತೆ
ಬ್ಲೇಡಿಗೆ ತಯಾರು, ನೀವಾರು, ನಿಮ್ಮ ಹೆಸರೇನು,
ಕಸುಬಾವುದು-ಐದೆಸೆಯೆಲ್ಲ ಅದಕೆ ಗೊತ್ತು.
ಕರಿಕೆ: ಕಜ್ಜಿಯ ತುರಿಕೆ, ಹುಲ್ಲು: ಕಾಮನಬಿಲ್ಲು
ಕಣ್ಮುಚ್ಚಿ ಬಿಟ್ಟೇ-
ಬಿಡುತ್ತದೆ ಬಾಣ; ಹೇಳಿ ಎಲ್ಲಿಲ್ಲ ಅದರ ತಾಣ?

ಇರಬಹುದು ಬಂಡೆಗಲ್ಲಿನ ಬೋಳುತಲೆ ಅಲ್ಲಲ್ಲಿ. ಅದರ
ತಳದಲ್ಲಿ ಮೆತ್ತಗೆ ಮಲಗಿರುತ್ತದೆ, ಪರೀಕ್ಷಿಸಿ ನೋಡಿ.
ಬೇಲಿ ದಾಟಿ ಒಳಗೆ ನುಗ್ಗುತ್ತದೆ; ಕಾಲ ಕೆಳಗೇ ಬಂದು
ಜಗ್ಗುತ್ತದೆ. ಲಾನಿನ ಕ್ರಾಪು ಕತ್ತರಿಸಿದಾಗ ಮಗ್ಗುಲದಲ್ಲಿ
ಹಿಗ್ಗುತ್ತದೆ; ಬರಬರುತ್ತ ಒಗ್ಗಿಹೋಗುತ್ತದೆ.

ಮಳೆಗೆ ಹುಲ್ಲು ಮೊಳೆಯುವದು ಮೂಲ ಪ್ರವೃತ್ತಿ ನಿಸರ್ಗ.
ಕಳೆ ತೆಗೆದು ಬಿತ್ತಿ ಬೆಳಯುವದು ನಾಗರಿಕ ಮಾರ್ಗ.
ಮರುಭೂಮಿಯ ಮಾತು ಬೇರೆ; ಅಲ್ಲಿ ಮಳೆಯೂ ಇಲ್ಲ.
ಆದರೂ ದೂರ ಅಲ್ಲೊಂದು ಓಯಾಸಿಸ್ಸು ಉಂಟಲ್ಲ ಮಾರಾಯರೆ-
ಅದಕ್ಕೇ ಅಲ್ಲಿ ಒಂಟಿ ಮಲಗಿ ಮೆಲುಕಾಡಿಸುವದು.

## ಜೋಳದ ಪಾಳಿ

ಬೆಳುವಲದ ಹೊಲದ ಉದ್ದಗಲ ಎತ್ತುಗೈ ಎತ್ತರಕೆ
ನಿಂತು ಗರಿಗೆದರಿ-
ಹಾರಿ ಹೋಗುವದಿಲ್ಲ ಆಕಾಶಕ್ಕೆ.
ಬಿರುಸು ನೆಲದೆಗೆ ಬೆವರಿಳಿಸಿ, ಹದಗೊಳಿಸಿ
ಬಿತ್ತಿ ಬೆಳೆದವನ ಕೈ
ಬಿಡುವದಿಲ್ಲ.
ಮೈ ಕೊಡವಿ ಏಳುತ್ತೇನೆ ಮುಗಿಲ ಮುತ್ತಿನ ಹನಿಗೆ.
ಎಡೆ ಹೊಡೆದು, ಸುತ್ತುಮುತ್ತಿನ ಕಳೆಯ ಕಿತ್ತಾಗ
ದಿನಕ್ಕೊಂದು ಗೇಣು ಸುಳಿದೆಗೆದು ಬೆಳೆಯುತ್ತೇನೆ.
ಶಿಸ್ತಿನ ಸಿಪಾಯಿಯಂತೆ ನಿಲ್ಲುತ್ತೇನೆ ಸಾಲಾಗಿ
ಮಸಾರಿಗೆ ಹಸಿರು ಧ್ವಜವನೆತ್ತಿ.
ಹೊಡೆ ಬಿಚ್ಚಿ ಹಗುರಾಗುತ್ತೇನೆ ಹೀಗೆ
ಚರಗ ಚೆಲ್ಲುವ ಸೀಗೆ ಹುಣ್ಣಿಮೆಗೆ.
ಹಕ್ಕಿ ಬಂದು ಕುಕ್ಕಿದರೂ ತೂಗುತ್ತೇನೆ.
ತೆನೆಯೊಡನೆ, ಮೆಲ್ಲಗೆ ನೋವಾಗದಂತೆ;
ಬಾಗುತ್ತೇನೆ ಭೂಮಿತಾಯಿಗೆ ಭಾರವಾಗದಂತೆ.
ಮಾಗುತ್ತೇನೆ ಒಂದಕ್ಕೆ ನೂರು ಸಾವಿರವಾಗಿ
ಕಾಳೆಲ್ಲ ಮುತ್ತಿನ ಗೊಂಡೆಯಾಗಿ

ಹಂತಿಯ ಹಾಡು ಸೂಸಿ, ಬೀಸುಗಾಳಿಗೆ ಸೋಸಿ
ಕಣ ಕಣದಲ್ಲಿ ರಾಶಿಯಾಗುತ್ತೇನೆ.
ಅದೇ ಚಣವೆ ದನಕರುಗಳಿಗೆ ಹೊಟ್ಟು ಮೇವಿನ ಬಣಿವೆ.
ಹಿಟ್ಟಾಗಿ, ಬಳೆಯ ತಾಳಕ್ಕೆ ಗುಟ್ಟಾಗಿ
ಬಡವರಂಗೈ ತುಂಬ ರೊಟ್ಟಿಯಾಗಿ,
ಖಾರ, ಉಳ್ಳಾಗಡ್ಡಿ, ಮೊಸರು, ಬದನೇಕಾಯಿ
ಪರಸ್ಪರ ಭೆಟ್ಟಿಯಾಗಿ,
ತುತ್ತು ತುತ್ತಿಗೆ ಶಿವ ಶಿವಾ ಎಂದು
ತುಂಬುತ್ತೇನೆ ಹಸಿದ ಹೊಟ್ಟೆ.
ಇಷ್ಟೂ ಸಿಗದಿದ್ದವರ ಗೋಳು ಕೇಳಿ, ಕಸವಿಸಿಗೊಂಡು
ಸಿಟ್ಟಿನಲ್ಲಿ ಅವುಡುಗಚ್ಚಿ
ನಿಟ್ಟುಸಿರು ಬಿಟ್ಟಿದ್ದೇನೆ.
ಅವರಿಗೆ ಮಾತ್ರ ಗೊತ್ತು ನಿಜವಾದ ನನ್ನ ಬೆಲೆ-
ನೀವೇಕೆ ಏರಿಸುತ್ತೀರಿ, ಹೊಟ್ಟೆ ತುಂಬಿದ ಮೇಲೆ?
ನನ್ನ ಮುಚ್ಚಿಟ್ಟು ಮುಗ್ಗು ನಾರಿಸಬೇಡಿ.
ದಯವಿಟ್ಟು ಎಲ್ಲರಿಗೂ ಹಂಚಿ, ಅಡ್ಡ ಬರಬೇಡಿ
ನಾನವರ ದೇವರ ಗುಡಿ.

## ಇಳಿದ ಬೆಲೆ

ಬೆಲೆ ಭಯಂಕರ
ಇಳಿಯುತ್ತಿವೆ ಒಮ್ಮೆಲೆ:
ಐದ್ಹೈದು ಪೈಸೆ.
ಇನ್ನೂ ಇನ್ನೂ ಇಳಿಯುತ್ತವಂತೆ
ಹತ್ಹತ್ತು ಪೈಸೆ-
ಹೊಟ್ಟೆ ತುಂಬ ಕೊಟ್ಟಿದ್ದಾರೆ
ಭರವಸೆ.

ಅಂತೂ ದೊಡ್ಡ ಭಾರ ಇಳಿದಂತಾಯ್ತು
ಮನೆಮಂದಿಗೆಲ್ಲ; ಇನ್ನು ನಿಶ್ಚಿಂತೆ-
ಎಂದು ಮಾತಾಡಿಕೊಳ್ಳುತ್ತಿದ್ದರು ಅತ್ತೆ-ಸೊಸೆ:
ರೇಶನ್ ಕಾಳಿನ ಕಲ್ಲು-ಕಸ ಆರಿಸಿ ಚೆಲ್ಲುತ್ತ
ಬೊಗಸೆ ಬೊಗಸೆ.

ಸಂಜೆ ಪೇಟೆಗೆ ಹೋಗಿ, ಎಲ್ಲಾ ಕಡೆಗು
ಧಾರಣೆ ಕೇಳಿ
ಸಣ್ಣ ಚೀಲದ ತುಂಬ ಸಾಮಾನು ತಂದಾಗ
ಗಂಡನ ಕಿಸೆಯಲ್ಲಿ ಉಳಕೊಂಡಿತ್ತು ಹೇಗೊ
ಗಾಳಿಗ ಹಾರಿ ಹೋಗದೆ-
ಒಂದು ನಯಾಪೈಸೆ.

## ಒಂದು ವ(೦)ಚನ

ಎತ್ತೆತ್ತ ನೋಡಿದತ್ತ ನೀನೆ ದೇವಾ
ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ
ಸಕಲ ಅಸ್ತ್ರ-ವಸ್ತ್ರಗಳ ರೂಹು ನೀನೆ ದೇವಾ.
ನಿಚ್ಚ ನಿಚ್ಚ ಅವಕಾಶವಾಣಿಯಲ್ಲಿ ಮುಚ್ಚು ಮರೆಯಿಲ್ಲದೆ
ಪ್ರಮಾಣಿಸಿ ಕೇಳಬಹುದಯ್ಯಾ.
ವರ್ತಮಾನದ ಪುಟಪುಟದ ಸಂಕಟದಿಂದ
ನಿನ್ನ ನಾಮದ ಸಂಪುಟವಯ್ಯಾ.
ಭೂತವಾಗಿ ಕಾಡುತ್ತಿದ್ದವರನಾರೂ ಕಾಣದಂತಿರಿಸಿದೆಯಯ್ಯಾ.
ಭವಿಷ್ಯದ ಉಜ್ವಲತೆಯನ್ನು ನೆನೆದು
ಈಗಲೆ ಕಣ್ಣು ಕುಕ್ಕುವದಯ್ಯಾ.
ರಾಕ್ಷಸನಾಮ ಸಂವತ್ಸರದಲಿ
ನಿನ್ನ ದಾರಿಗೆ ಅಡ್ಡ ಬಂದವರನೆಲ್ಲ
ಉದ್ದ ಮಲಿಗಿಸಿದೆಯಯ್ಯಾ.
'ನಳ'ಪಾಕದ ಉಪ್ಪಿನಕಾಯಿ ಇಂದೇ ಹೆಚ್ಚಿ
ಇಂದೇ ಕಳಿಯುವಂತಾದುದನ್ನು ಕಂಡು
ಕಣ್ಣು ಕಣ್ಣು ಬಿಡುವಂತಾಯಿತ್ತಯ್ಯಾ
ಉದ್ದಾನ ವೀರಭದ್ರೇಶ್ವರಾ.

## ಒಣ ನಿಗ್ಗರ

ಓದುತ್ತ ಬರೆಯುತ್ತ
ಕಾಲು ಕೆರೆಯುತ್ತ
ಅತ್ತಿತ್ತ ಸುತ್ತು ಹಾಕಿ ಮಾತಾಡುತ್ತ

ಒಡ್ಡಿದ ಕುತ್ತ
ದಾಟಿ, ಕತ್ತೆತ್ತಿ ಮುಗಿಲು ನೋಡುತ್ತ
ಮಬ್ಬುಗತ್ತಲಿನಲ್ಲಿ ಒಬ್ಬೊಬ್ಬರೇ
ಸೇರಿಕೊಳ್ಳುತ್ತಿದ್ದಾರೆ ಹುತ್ತ.

ಮಳೆ, ಬಿಸಿಲು, ಗಾಳಿ, ಹಸಿರು
ಜಾರುವ ಕೆಸರು; ರೋಸಿಗಿಡುವಷ್ಟು,
ಅದನೆಲ್ಲ ಸ್ವಲ್ಪ ಹೊತ್ತು ಬದಿಗಿಟ್ಟು
ಉಸಿರು ಬಿಗಿಹಿಡಿದು-ಬಿಟ್ಟು
ಹಿಡಿದು ಸಾವಕಾಶ
ರೂಢಿಯಾಗುತ್ತಿದೆ ಯಮ-ನಿಯಮದ ಗುಟ್ಟು.

ಎಲ್ಲ ಒಳಗೇ ಹತ್ತಿಕ್ಕಿಕೊಂಡು
ನುಂಗಿ ನೀರು ಕುಡಿದರೆ, ತುಂಬಿದ ಕೆರೆ
ಕೋಡಿ ಒಡೆದರೆ: ರಾಡಿ-ಅರೆ
ಮತ್ತೆ ವಿಪರೀತ. ವಾಚಕರೆ
ಪಾಚಕ ಶಕ್ತಿಗೂ ಒಂದು ಮಿತಿಯುಂಟು,
ಅಲ್ಲದೇ ಅದರದೇ ಗತಿಯುಂಟು.

ಮಾಡಬೇಕೆಂದರೆ
ಬೇರೆ ಕೆಲಸ ಸಾಕಷ್ಟಿದೆ.
ನಿಜ: ಕ್ರಿಮಿನಾಶಕ ಹೊಡೆಯುವಾಗ ಮೂಗು-
ಬಾಯಿ ಕಟ್ಟಿಕೊಂಡದ್ದು, ಆಮೇಲೆಯೂ ಈ ಸೋಗು
ಎಷ್ಟೊತ್ತಿನವರೆಗೆ ಹಾಗೇ ಇಡುವುದು?

## ಸಾಧನೆ

ಮಾಡುವ ಕೃತಿಯೇ ಆಡುವ ಮಾತಿಗೆ ಸಫಲತೆ-ಸಂಕೇತ.
ಇಲ್ಲ, ನಡುವೆಯೇ ಗುಡುಗುಡು ಎಂದರೆ ಎಲ್ಲಿ ಮಳೆಯ ನಾತ?
ಬರಿ ಮಾತಿನ ಬಿರುಗಾಳಿಗೆ ನೆಲ ಹಸಿಯಾಗುವದೇನಣ್ಣಾ?
ಪ್ರತಿಜ್ಞೆಗಳ ಪ್ರತಿ ಮಾಡಿ ಹಂಚಿದರೆ ಕುಂಚಕೆಲ್ಲಿ ಬಣ್ಣ?

ಭಾವ ಹುಟ್ಟುವದು, ದೇಶ ಕಟ್ಟುವದು, ಕೆಡುಕ ಮೆಟ್ಟುವದು ಅಸರಂತ-
ಗುರಿಯು ಕಂಡರೂ ದಾರಿ ಹಿಡಿದು ನಡೆದೆರಡು ಹೆಚ್ಚೆ ಸ್ವಂತ-
ಪಟ್ಟ ಅನುಭವವೆ ಗಟ್ಟಿಗೊಂಡು ಹೊಸ ದೃಷ್ಟಿ ಸೃಷ್ಟಿಗೂಡಿ
ಸುತ್ತುಮುತ್ತು ಸಂವೇದ, ಶೋಧ, ಶಮೆ-ದಮೆಗೆ ಹೆಗಲು ನೀಡಿ.

ಮುಂದೆ ಬಂದವರು, ಹಿಂದೆ ಉಳಿದವರು-ನಡುವೆ ಹಳ್ಳಕೊಳ್ಳ:
ಮಾನವತೆಯ ಸೇತುವೆಯ ಕಟ್ಟಿ ಮಮತೆಯನು ತೋರಬಲ್ಲ
ದಾರಿಯುಂಟು, ಹರದಾರಿಗುಂಟ ಮೆರವಣಿಗೆಯಲ್ಲಿ ಹೊರಟು
ಮರೆಯದಿರಲಿ ಕತ್ತಲೆಯ ಮೂಲೆ: ಚಿತ್ತಕ್ಕೆ ನೆನಪಿನೇಟು.

ನಾನು-ನೀನು, ಅವರಿವರು ಸೇರಿ ವಹಿಸಿದ್ದೆ ಸಾರ್ವಜನಿಕ.
ನಾವೆ ತಿದ್ದಿ ಮುದ್ದಿಸಿದ ಬಿಂಬ ಸದ್ದಿರದೆ ಸಹಿಸುವನಕ
ಅರ್ಧಮರ್ಧ ಮೂರ್ತಿಯನು ಕಟೆದು ಲಗುಬಗೆಯ ಕೀರ್ತಿತವಕ:
ಹೊಟ್ಟೆದಪ್ಪ, ಬಲು ದೊಡ್ಡ ಬಾಯಿ, ಕಣ್ಣೆರಡು ನೆತ್ತಿತನಕ.

ಕೆಳಗೆ ಕತ್ತಲೆಯ ಕೂಪದಲ್ಲಿ ಒತ್ತೊತ್ತಿ ಸತ್ತ ಬದುಕು
ಅಮಾನುಷದ ಬಿಗಿ ಮುಷ್ಟಿ ಬಿಡಿಸಿ ತಲೆಯೆತ್ತಿ ಕಂಡ ಬೆಳಕು;
ಕಟ್ಟಡಗಳೆದ್ದು ನಿಂತಂತೆ ಜನರ ಬೆನ್ನೆಲುಬು ನೇರವಾಗಿ
ಭರ್ತಿ ಬಾಳಿನಲಿ ಬಂದು ನೆಲಸುವದೆ ಜೀವ ಧ್ಯೇಯವಾಗಿ.

ಉಳ್ಳವರು ಮತ್ತೆ ಒಳ್ಳೊಳ್ಳೆಯವರು ಧುಮುಕಿದ್ದ ಕಳ್ಳಪೇಟೆ
ಉಳಿದವರಿಗೇನು ಬಳ್ಳೊಳ್ಳಿ ಸಿಪ್ಪೆ, ಹುಲಿಗೆ ಚಿಗರಿ ಬೇಟೆ.
'ಶುದ್ಧ' ಎಂಬ ಅತಿ ಸಣ್ಣ ಶಬ್ದ ಕೋಶಕ್ಕೆ ಮೀಸಲೇನೊ
ಇದ್ದು ಬಿದ್ದ ಸರಕೆಲ್ಲ ಬೆರಕೆ, ಬರಿ ಹರಕೆ ಹೊತ್ತರೇನು?

ಸುವಿಚಾರ ನಷ್ಟ, ಆಚಾರಭ್ರಷ್ಟ, ಅತ್ಯಂತ ಸ್ಪಷ್ಟ ಚಿತ್ರ
ಕಣ್ಣೆದುರಿಗಿದ್ದು ಕೈಲಾಗದಂತೆ ಮೈಮನಸು ಮುದುಡಿ ಕುಳಿತ
ಕೋಟಿ ಕೋಟಿ ಜನದೆದೆಯ ಮೀಟಿ ಹೊಸ ಅರಿವ ತೆರೆಯುವಾತ
ಯಾರೆ ಇರಲಿ, ಬಾಗಿಲವ ತೆರೆದು ಎದ್ದೇಳಿ: ಸುಪ್ರಭಾತ.

ಬೆಳೆವುದೆಲ್ಲ ಕೆಳಗಿಂದ, ಬೇರಿನೊಳಗಿಂದ ಸತ್ವ ಹೀರಿ
ಹಳ್ಳಿದಿಳ್ಳಿಗೂ ಇದೇ ಮಾತು, ಮತ್ತಿದೇ ಸಹಜ ದಾರಿ.
ಒಂದನೊಂದು ಭೇದಿಸುತ ನೂರು ವರ್ತುಳದ ಪರಿಘದಲ್ಲಿ
ಕೇಂದ್ರ ಬಿಂದುವನೆ ಮರೆತರೆಂತು ಸೌಂದರ್ಯ ನಕ್ಷೆಯಲ್ಲಿ?

ಅದನು ನೆನೆದು ಹದ ನೋಡಿ ಬಂತು ಮದವೇರಿದವರ ತಿವಿದು,
ಅಧಿಕಾರದಮಲು ಅಷ್ಟಷ್ಟೆ ಇಳಿದು, ಕಲಕಿದ್ದ ನೀರು ತಿಳಿದು.
ದುಡಿಮೆಯಲ್ಲಿ ನಿನಗೇನು ಕಡಿಮೆ, ಕೈಯೊಡ್ಡಲೇಕೆ ಮುಂತೆ?
ಭಿನ್ನವಿದ್ದರೂ ಸರಿಸಮಾನ ಅನುಮಾನ ಬಾರದಂತೆ.

ವರ್ಷವೆಲ್ಲ ಸಂಘರ್ಷ, ಗುಡುಗು ಮಿಂಚೆಲ್ಲ ಮಳೆಗೆ ಹಾದಿ,
ಹೊಲಸು ತೊಳೆದು ಹಸನಾಗಿ ಸೃಷ್ಟಿ ಹೊಸದಾಗಿ ಕಂಡ ದೃಷ್ಟಿ.
ಸ್ವೇಚ್ಛೆಗೊಂದು ಮಿತಿ, ನಿತ್ಯ ಕಾರ್ಯಗತಿ, ಗುಡಿಸಲಲ್ಲಿ ಜ್ಯೋತಿ
ವ್ಯಕ್ತಿ-ಶಕ್ತಿ-ಸುವಿಕಾಸ-ಭಾಸ-ಹವ್ಯಾಸ ಹಲವು ರೀತಿ.

ಅಂತರ್ಯದಲ್ಲಿ ಒಡಮೂಡಿ ಬಾಳಿನೊಡಗೂಡಿ ಬಂದ ಶಿಸ್ತು
ಒಲವು-ಚೆಲುವು ಬಲಗೊಂಡು ಎಲ್ಲ ಗೆಲುವಿನಲಿ ಮೂಲವಸ್ತು.
'ಹೊರಿಸಿಕೊಂಡು ಹೋದಂಥ ನಾಯಿ ಮೊಲನೇನ ಹಿಡಿವುದಯ್ಯ?'
ಸ್ಮರಿಸಿಕೊಂಡು ಸಾಗೋಣ ಮುಂದೆ, ತಾ, ಮೊದಲು ನಿನ್ನ ಕೈಯ.

ಸಫಲತೆಯ ತೃಪ್ತಿ: ತತ್ಕಾಲ ದೀಪ್ತಿ, ಸಾಧನೆಗಗಾಧ ವ್ಯಾಪ್ತಿ-
ಶಿಖರದಲ್ಲಿ ಗುರಿ, ಸಾಹಸಕ್ಕೆ ಸರ್ವಾಂಗಶಕ್ತಿ ಕೋರಿ.
ನಿರಂತರವು ಎಚ್ಚರದ ಗಂಟೆ, ಹಚ್ಚಿರಲಿ ಸಾಲು ದೀಪ
ಸಮರ್ಪಣೆಗೆ ಕೃತುಶಕ್ತಿ ಸೇರಿ ತೋರುವದು ವಿಶ್ವರೂಪ.

## ಆದರೂ ಅವನ ನೆನಪು

ಗಾಂಧೀಜಿಯ ಬಗ್ಗೆ ಈ ಹಿಂದೆ ಕವಿತೆ ಬರೆದು
ಗೆದ್ದೆ
ಎಂದು ಭಾವಿಸಿದ್ದೆ.
ಆದರೆ ಈಗ
ಶಬ್ದಗಳಿಗೆ ಸಿಲುಕದೆ, ಅರ್ಥಕ್ಕೂ ನಿಲುಕದೆ
ಬರಿಯ ಧ್ವನಿಯಾಗಿ ಬಿಟ್ಟಿದ್ದಾನೆ.

ಆದರೂ ಅವನ ನೆನಪು ಪದೇ ಪದೇ
ಕಾಡುತ್ತದೆ;
ನಮ್ಮ ಸೊಕ್ಕು-ಸೋಲು ಕ್ರೂರವಾಗಿ
ಬಿಚ್ಚಿಕೊಳ್ಳುತ್ತದೆ.

ಅವನೇ ತಂದುಕೊಟ್ಟ ಸ್ವಾತಂತ್ರ್ಯವನ್ನು
ಯಾರೋ ಕಸಿದು ತಮ್ಮ ಕಿಸೆಗೆ ತುಂಬಿ
ಕೊಳ್ಳುತ್ತಿರುವಂತೆ ಭಾಸವಾಗುತ್ತದೆ.

ನಾವು ಖಾಲಿ ಮೋಜು ಮಾಡುತ್ತಿರುವಾಗ
ನವಖಾಲಿ ಚಿತ್ರ
ಗಾಜು ಒಡೆದು ಹೊರಬರುತ್ತದೆ:
ದಿಲ್ಲಿಯ ಸಂದಿ-ಗೊಂದಿಗಳನ್ನು ಸುತ್ತಿ
ಮಂತ್ರಿ-ಮಹಲು-ದರಬಾರುಗಳಿಗೆ ಬೆನ್ನು ತಿರುಗಿಸಿ,
ಹೊಟ್ಟೆಯ ಮೇಲೆ
ಹಸಿಮಣ್ಣಿನ ಮುದ್ದೆಯಿಟ್ಟುಕೊಂಡು
ದೂರದ ಹಳ್ಳಿಯ ಹೊಲಗೇರಿಯಲ್ಲಿ
ಮರೆಯಾಗಿ ಬಿಡುತ್ತದೆ.

ಹುಚ್ಚ-ಮಹಾತ್ಮ ಎಂದು ಶಿಫಾರಸು ಕೊಟ್ಟು
ಕೇವಲ ಮನುಷ್ಯರಾದ ನಾವು
ಸೆರೆ-
ಮನೆಗೆ ಮರಳುತ್ತೇವೆ.
ಈಗಲೂ
ಅದರ ಬಾಗಿಲುಗಳು ತೆರೆದೇ ಇವೆ.

## ನೆನಪು

ತಲೆ ಜಜ್ಜಿಕೊಂಡರೂ ನೆನಪಾಗುವುದಿಲ್ಲ, ಹಾಳಾದ್ದು-
ಸದ್ದಿಲ್ಲದೆ ಬುದುಂಗನೆ ಎದ್ದು ನಿಲ್ಲುತ್ತವೆ ಬೇಕು-ಬೇಡಾದ್ದು.
ಯಾರೊ ಹೇಳಿದ್ದು: ಮರವೆಯ ಮದ್ದು, ಅರಿವಿನ ವಿಶಾಲ ಜಾಲ-
ದಲ್ಲಿ ಸಿಲುಕಿದ್ದು: ಕುಲುಕಿದರೆ ಮೇಲೆದ್ದು ಮುಗಿಬೀಳುವದು.

ಕದ್ದು ಕೊರೆಯುತ್ತದೆ ನೆಲದಾಳದ ಖಣಿಗಳನ್ನು:
ಮಿಡುಕಿ ಹುಡುಕಾಡುತ್ತವೆ ಮಣಿಗಳನ್ನು; ಎಂದೋ
ಬಿದ್ದ ಮಿಂಚಿನ ಹನಿಗಳನ್ನು; ಉದ್ದುದ್ದ ತೆನೆಗಳನ್ನು;
ನಿರಾಳದಲ್ಲಿ ಮಮ್ಮಲ ಮರುಗಿ ಹೊರೆದ ಮಾತಿನ ಮೊನೆಗಳನ್ನು;
ಕನಸಿನಲ್ಲುದ್ಭವಿಸಿದ ವಿಚಿತ್ರ ಹೂವಿನ ಗೊನೆಗಳನ್ನು.

ಏನಿದ್ದರೂ ಸೂರ್ಯ ಮೂಡುವದು ತಪ್ಪಿದ್ದಲ್ಲ. ಸದ್ಯಕ್ಕೆ
ಅದೇ ಆಧಾರದಿಂದ ಲೋಕ ತೊಡಗಿಸಿಕೊಳ್ಳುವುದು-ಕೆಲಸಕ್ಕೆ
ಬಾರದ ಸಂಜೆ ಮರಳುವದು, ಆಕಳಿಸಿ ನಿದ್ದೆ ಹೋಗುವದು.

ಎಲ್ಲಾ ವ್ಯವಹಾರ: ಗೊತ್ತು ಮಾಡಿದ ಕಿರಾಣಿ ಅಂಗಡಿಯಲ್ಲಿ
ತಕರಾರಿಲ್ಲದೆ ಸಾಮಾನು ತಂದೊಗೆದು ಮಾಡಿದ ಅಡಿಗೆ
ಯಲ್ಲಿ ತುಂಬಿದ ರುಚಿಗೆ ಒಳಗೊಳಗೆ ವಿಸ್ಮಯ.

ಮಕ್ಕಳ ಹೊಸ ನಮೂನೆಯ ಉಡಿಗೆ ತೊಡಿಗೆಯ ಭಯ-
ವಿಲ್ಲದ ನಡಿಗೆ. ದಾರಿಯಲಿ ಅವರಿವರ ಅರ್ಥವಿಲ್ಲದ ಮುಗುಳ್ನಗೆ.
ಮತ್ತೆ ಮರೆವು: ಬದುಕು ತೆರವಾದಂತೆ, ಜಗದೊಳಗೆ
ಎಲ್ಲಿಯೂ ಜಾಗವಿಲ್ಲದಂತೆ. ಬರಿಯ ಜೋಕಾಲಿ ತೂಗಿದಂತೆ.

ದಿನದಿನದ ಗಂಟೆ ಗಂಟೆಯ ಗಾಲಿಗಂಟಿದ ರೂಢಿ: ಉಜ್ಜಿ
ಉಜ್ವಲಗೊಳಿಸಲೇಕೆ ಆಗುತ್ತಿಲ್ಲ? ಉಸಿರು ಬಿಡದೆ ಓಡುವ
ರೈಲು ನಿಲ್ದಾಣಕ್ಕೆ ಬಂದುಬಿಟ್ಟಾಗ ಗದ್ದಲದ ಗಡಿಬಿಡಿ
ಮೂಲೆ ಮೂಲೆಗು ಚುರುಕು, ಅನುತಾಪ-ಹರ್ಷ-ಸಂಘರ್ಷ.
ಜೀವಂತಿಕೆಯ ಸ್ಪರ್ಶ-ಎಲ್ಲ ಒಮ್ಮೆಲೆ ಹೊತ್ತು ಒಯ್ದಂತೆ
ಸೀಟಿ, ಮುಖದ ಮೇಲೆ ನಿಶಾನಿಯ ಬೀಸಿ ವೇಗ ಏರುವದು;
ಇಳಿಯುವದು ಇದ್ದು ಬಿದ್ದವರ ಉತ್ಸಾಹ ಅದೇ ದಾರಿ ಹಿಡಿದು.

ಅಲ್ಲವೆ ಮತ್ತೆ? ಇಪ್ಪತ್ನಾಲ್ಕು ತಾಸು ಬರಿ ನೂಕು ನುಗ್ಗಲು.
ಗುಪ್ತ ಒಪ್ಪಂದಗಳ ಮುಂದೆ ಸೋತು ನಿಲ್ಲುವ ಸವಾಲು.
ಗೋಡೆಗೆ ರಾಜಾರೋಷ ಮೆರೆದ ಹಲ್ಲಿ: ಕಿಡಕಿ
ಪಡಕಿನ ಇರುಕಿನಲ್ಲಿ. ಜೇಡಬಲೆ ಸುತ್ತ ಮುತ್ತಿನ ಹನಿ.
'ಒಂದು ಜೇಡವು ತನ್ನ ಬೀಡನು ಕಟ್ಟಲೋಸುಗ ಗೆಳೆಯನೆ'
ಮರೆತಿಲ್ಲ ಹಳ್ಳಿಯ ಶಾಲೆ. ಪದಚ್ಛೇದ ಮಾಡಿ ತಿಳಿಸಿದ್ದರೂ
ಹೊಳೆದದ್ದು ಈಗಲೆ; ಕೂಗಿದ್ದು ಪದೇ ಪದೇ ಅದೇ ಕೋಗಿಲೆ.

ಎದ್ದೊಡನೆ ದಿನಪತ್ರಿಕೆಯ ಸುದ್ದಿ: ಎಷ್ಟು ಬೇಕೋ
ಅಷ್ಟು, ಗ್ರಂಥದೊಳಹೊಕ್ಕು ಓದಿದ್ದು ಕಪಾಟಿನಲ್ಲಿ ಗೆದ್ದಲು
ಹತ್ತದಂತೆ ಇರಲಿ ಮೇಜಿನ ಮೇಲೆ : ಹೂವ-ಹೂಜಿಯ ಬದಿಗೆ.
ಆಳಕ್ಕೆ ಅಗೆದು ಸುತ್ತು ಸೆಲೆಯೊಡೆದು ತುಂಬಿಕೊಳ್ಳಲಿ

ಸ್ವಂತ ಬಾವಿ, ಸೇದಿಕೊಳ್ಳಲಿ ನೆನಪು-ನೀರಡಿಸಿದವರು.
ಓದಿ, ವಾದಿಸಿ, ಸಾಧಿಸಿದರೂ ಹೃದಯ ಸಂವಾದಕ್ಕೆ ಬೇರೆ ಹದ.
ಬದುಕಿನಾರಾಧನೆಯ ಮಧ್ಯೆ ಹೊಮ್ಮುವದು ಜೀವನಾದ.

## ನಮ್ಮ 'ಮನು'ವಿನ ಕಥೆ

ನಮ್ಮ ಸಣ್ಣ ಹುಡುಗನಿಗೆ ನಾಯಿ ಸಾಕಬೇಕೆಂಬ ಆಶೆ-
ಸ್ವಂತ ಮನೆಗೆ ಹೋದಾಗ ನೋಡೋಣ ಎಂದಿದ್ದೆ.
ಹೋದ ಮರುದಿನವೇ ತಂದು ಬಿಟ್ಟ ಒಂದು ಕುನ್ನಿ.
(ಅದು ಗಂಡು ಎಂಬುದು ಎಲ್ಲರಿಗೂ ಗೊತ್ತಾಯಿತೆನ್ನಿ)

ಈದು ಹದಿನೈದು ದಿನ ಆಗಿರಬಹುದು.
ಹಿಡಿದರೆ ನುಣುಚಿಕೊಳ್ಳುತ್ತಿತ್ತು. ಅಷ್ಟು ಮೃದು.
ಮೂಲೆಯಲ್ಲಿ ಹಾಸಿದ ಗೋಣಿ ತಟ್ಟು ಬಿಟ್ಟು
ಕೋಣೆಯ ತುಂಬ ಓಡಾಡುತ್ತಿತ್ತು ಲುಟುಪುಟು.

ಹಾಲಿನ ಬಟ್ಟಲು ಬಿಟ್ಟು ಮತ್ತೇನೊ ಹುಡುಕುತ್ತಿತ್ತು.
(ತಾಯಿ ಯಾರ ಮನೆಯಲ್ಲಿತ್ತೊ)
ಹಗಲು ಹೊತ್ತು ಕಾಲು ಕಾಲಲ್ಲೇ ಯಾವತ್ತು.
ಯಾರಾದರು ಎಲ್ಲಿ ತುಳಿದುಬಿಡುತ್ತಾರೊ ಎಂದು ಭಯ.
ಹೇಗೋ ಪಾರಾಗಿಬಿಡುತ್ತಿತ್ತು, ದೇವರ ದಯ.

ಕಂಯ್ ಎಂದರೆ ಸಾಕು ನನ್ನ ಕಿವಿ ನಿಮಿರುತ್ತಿತ್ತು.
ಹುಡುಗರಿಗೆ ಬಾಯಿ ಮಾಡುತ್ತಿದ್ದೆ ಅಲ್ಲೇ ಕುಳಿತಲ್ಲಿಯೇ.
'ಅದಕ್ಕೇನು ಧಾಡಿ, ಬರೇ ಡೋಕಾರತನ'- ಮನೆಯ ಯಜಮಾನಿ.
(ಐದು ಮಕ್ಕಳನ್ನು ಹೆತ್ತು ಬೆಳೆಸಿದವಳಲ್ಲವೇ?)
ಆದರೂ ಕುನ್ನಿಯ ಕಾಳಜಿಯ ಬಗ್ಗೆ ನನಗೆ ಗುಮಾನಿ.

ಹುಡುಗರಿಗಂತೂ ಅದು ಆಟದ ವಸ್ತು.
ಉಚ್ಚೆ ಹೊಯ್ಯುತ್ತಿತ್ತು ಪೊಗದಸ್ತು.
ಅದರಿಂದ ಸ್ವಲ್ಪ ಅಸ್ತವ್ಯಸ್ತ ಮನೆಯ ಶಿಸ್ತು.
ಆದರೂ ಪರವಾಯಿಲ್ಲ ಎನ್ನಿಸಿತು.

ಬೆಳೆದಂತೆ ಮನೆಯ ಕಂಪೌಂಡು ಸಣ್ಣದಾಯಿತು.
ನೆರೆಹೊರೆಯ ವಾರಿಗಿ ಕುನ್ನಿಗಳೊಡನೆ ಗುದುಮುರಿಗೆ, ಚಿನ್ನಾಟ.
ಹುಡುಗರು ಆಡುವ ಚೆಂಡು ಬಾಯಲ್ಲಿ ಹಿಡಿದು ಓಟ.
ದಾರಿಹೋಕರ ಕಂಡು ಒಮ್ಮೊಮ್ಮೆ ಗುರುಗುರು, ದುರುದುರು ನೋಟ.
ಹೆಸರುಗೊಂಡು ಕರೆದಿರೊ, ಬಾಲವಲ್ಲಾಡಿಸಿ ಬಂದೇ ಬಿಡುವದು ಜಿಕ್ಕೊಂತ.
ಮರೆತೇಬಿಟ್ಟಿದ್ದೆ: ನಾವೆಲ್ಲ ಅದಕ್ಕೆ ಹೆಸರಿಟ್ಟದ್ದು 'ಮನು' ಅಂತ.

ಮನೆಗೆ ಯಾರಾದರೂ ಗುರುತಿನವರು ಬಂದರೆ, ಸಾಕು
ಎರಡೂ ಮುಂಗಾಲು ಎತ್ತಿ, ಅವರ ಬಟ್ಟೆಯಮೇಲೆ ಒತ್ತಿ
ಸ್ವಾಗತಿಸಿದಾಗಲೇ ಅದಕ್ಕೆ ಸಮಾಧಾನ.
'ಅದೇನೂ ಮಾಡುವುದಿಲ್ಲ' ಎಂದರೂ ಅವರ ಹೆದರಿಕೆ ಹೋಗಿರುವದಿಲ್ಲ.
ಇಷ್ಟು ಮಾತ್ರ ಖರೆ : ಇದುವರೆಗೆ ಯಾರನ್ನೂ ಕಡಿದಿಲ್ಲ.

ಪೋಸ್ಟ್‌ಮನ್ ಅಥವಾ ಪೇಪರಿನ ಹುಡುಗು ಬಂದಾಗ, ವಿಚಿತ್ರ-
'ಗುರ್' ದನಿ ಕೇಳಿ ಗೇಟಿನಿಂದಲೇ ಒಗೆಯುತ್ತಾರೆ ಪತ್ರ.
ಭಿಕ್ಷುಕರು ಬಂದಾಗ ಮಾತ್ರ ಮಲಗಿರುತ್ತದೆ ಸುಮ್ಮನೆ.
ಬಾರಿಸುವವರು ಬಂದರೊ-ತಕ್ಷಣ ಕಳೆದುಕೊಳ್ಳುತ್ತದೆ ಸಹನೆ.

ಹಿಡಿಯಹೋದಂತೆ ಮಾಡಿ ಹೆದರಿಸುತ್ತದೆ ಹಿಂಡು ಕೋಳಿ.
ಬೆಕ್ಕನ್ನು ಬೆನ್ನಟ್ಟಿ ಹಿಡಿದೇಬಿಡುತ್ತದೆ, ಚಂಡಾಳಿ.
ಅಕಸ್ಮಾತ್ ಬೇರೆ ನಾಯಿ ಬಂತೊ: ಮುಗಿದೇಹೋಯಿತು ಕಥೆ
ಇನ್ನೊಮ್ಮೆ ಇತ್ತ ಹಾಯುವುದಿಲ್ಲ-ಎನಿಸಿಬಿಡುತ್ತೆ.

ಮೈಗೆ ತೊನಸಿ ಅಂಟಿಕೊಂಡರೆ ಇದಕ್ಕೆ ವಿಪರೀತ ಸಿಟ್ಟು-
ಏನೇನೊ ಮಾಡಿ ಕೆರೆದು ಓಡಿಸುತ್ತದೆ ಕಷ್ಟಪಟ್ಟು-
ಆದರೂ ಮತ್ತೆ ಇದ್ದಲ್ಲೇ ಇರುತ್ತವೆ ಸುತ್ತು ಸುತ್ತಾಡಿ.
ನಾವೇ ಹಿಡಿದು ತೆಗೆದಾಗ ನೋಡುತ್ತದೆ ಇಷ್ಟುದ್ದ ಚಾಚಿ ಮುಸುಡಿ.
ಗಾಯಕ್ಕೆ ಔಷಧಿ ಹಚ್ಚಿದರೆ ನೆಕ್ಕಿ ನೆಕ್ಕಿ ಮಾಯಿಸುವ ರೂಢಿ.
ಹೊಟ್ಟೆ ಕೆಟ್ಟಾಗ ಹುಲ್ಲು-ಪಲ್ಲು ತಿಂದು ಸುಧಾರಿಸಿಕೊಳ್ಳುತ್ತದೆ, ನೋಡಿ.

ಕಟ್ಟಿಹಾಕುವ ರೂಢಿ ಇಟ್ಟಿಲ್ಲ; ಆದರೂ ಇಲ್ಲ ಎಷ್ಟೂ ಅಪಾಯ.
ಕೊರಳಪಟ್ಟಿಯು ಮಾತ್ರ ಒಂದೆರಡು ದಿನದಲ್ಲಿ ಮಟಾಮಾಯ.
ಹೊರಗೆ ಹೊರಟಾಗ ಎದ್ದು ಬರುವದಿದ್ದಲ್ಲಿಂದ ಓಡಿ ಜೊತೆಗೆ
ಕುಕ್ಕುಲೋಟವೆ ಅದರ ಸಡಗರದ ನಡಿಗೆ.

ಮುಂಜಾನೆ ವಾಕಿಂಗಿನಲ್ಲಿ ಮುಂದಡಿಯಿಟ್ಟು, ತೋರಿಸುತ ಹಾದಿ
ದಾರಿಬದಿಯಲ್ಲಿಯೇ ಲಗುಬಗೆಯಿಂದ ಮುಗಿಸುವದು ಪ್ರಾತರ್ವಿಧಿ.
ಸಲಿಗೆ ಕೊಟ್ಟ ನಾಯಿ ತಲೆಗೇರಿತು ಎನ್ನುವದು ಅತಿಶಯೋಕ್ತಿ.
ಸೋಫಾ, ಕುರ್ಚಿ ಇತ್ಯಾದಿ ಹತ್ತಿ ಕೂಡುವದರಲ್ಲಿ ಸ್ವಲ್ಪ ಆಸಕ್ತಿ.
ಬೆದರಿಸಿದರೆ ಮತ್ತೆ ನಾಚಿ ಕೆಳಗಿಳಿಯುವದು, ಚಿಂತೆಯಿಲ್ಲ.
(ಮುಂದಿನ ಚುನಾವಣೆಯವರೆಗೆ ಸಹಿಸುತ್ತ ಕಾಯಬೇಕಿಲ್ಲ.)

ಈಗ ನನ್ನೆದುರು ಕುಳಿತು ಮಿಕಿಮಿಕಿ ನೋಡುತ್ತ ಬಾಲವಲ್ಲಾಡಿಸಿದೆ.
ಹೇಳಿದರೆ ನೀವು ನಂಬುತ್ತೀರೋ ಇಲ್ಲವೋ-
ತನ್ನ ಮಂಗಾಲನೆತ್ತಿ ನನಗೆ ತಿವಿಯುತ್ತಿದೆ.
ಅದಕ್ಕೀಗ ಹಸಿವೆಯೆಂಬುದು ನನಗೆ ಗೊತ್ತು.
ನಿಮಗೂ ಹೊತ್ತಾಯ್ತು. ಮತ್ತೊಮ್ಮೆ ಕೂಡಿದಾಗ
ಅದರ ಕಥೆ ಮುಂದುವರಿಸುತ್ತೇನೆ.
ಬಾಯಿಯಿಲ್ಲ ಎನ್ನುವದಷ್ಟೆ; ಇಲ್ಲದಿದ್ದರೆ
ಅದೂ ನಮ್ಮಂತೆಯೆ, ಅಲ್ಲವೆ?

## ಎದ್ದೀರಾ ? ನೀವು ಎದ್ದೀರಾ!

ಎದ್ದೆವೆದ್ದೆವು, ಶರಣು
ಎದ್ದೀರಾ ? ನೀವು ಎದ್ದೀರಾ!

ದಿನವೂ ದಿಲ್ಲಿಗೆ ಹೋಗಿ
ಗುಲ್ಲು ಗದ್ದಲ ಹಾಕಿ
ಇಲ್ಲಿದ್ದವರ ಬಾಳೆ-ಬದುಕು ಕಲ್ಲಾಬಿಲ್ಲಿ
ಮಾಡೀರಾ! ಕದ್ದು ಓಡೀರಾ?

ಮೂವತ್ತು ವರುಷಾತು
ಮಾಡಿದ್ದೇ ಮಸಲತ್ತು
ಕೈ ಹಿಡಿದು ಕೇಳಾಕ ಯಾರಿಗೆ ಕುವ್ವತ್ತು?
ಆಯೋಗ: ಸುಯೋಗ
ಒಂದೊಂದಃ ಹೊರಬಿತ್ತು
ಮುಚ್ಚೀರಾ? ಕಣ್ಣು ತೆರೆದೀರಾ!

ತಿಂದದ್ದೆ ತಿಂದದ್ದು
ತಲೆಗೆ ಆಮಲೇರಿದ್ದು
ಕಾಡು ಪ್ರಾಣಿಗಳೆಲ್ಲ ಕಸರತ್ತು ಮಾಡಿದ್ದು
ಬುದ್ದಿವಂತರ ಸದ್ದು
ಅಡಗೀಸಿ ಹಾಕಿದ್ದು
ಬಿಟ್ಟೀರಾ? ಬಾಯಿ ಕಟ್ಟೀರಾ!

ಕತ್ತಲು ಹಾಡೇ ಹಗಲು
ಇಡಿ ದೇಶದುದ್ದ
'ಎಲ್ಲರೂ ಮಲಗಿರಲು ಅವನೊಬ್ಬನೆದ್ದ'
ಬಿಡುಗಡೆ ತರಲೆಂದೆ
ಜೀವ ಹಿಡಿದಿದ್ದ
ತಿಳಿದೀರಾ? ಮತ್ತೆ ಕಳೆದೀರಾ!

ಬಡವರ ಹೆಸರೀಲೆ
ತುಡುಗು ಮೇದವರೆಲ್ಲ
ಹಿಡಿಯಾಕ ಹೊಂಟಾರು ಗೆದ್ದ ಎತ್ತಿನ ಬಾಲ
ಸುತ್ತು ಕಾವಲು ಇರಲಿ
ಆಗ್ಯಾರ ಕಂಗಾಲ
ಬಿಟ್ಟೀರಾ! ನೆನಪು ಇಟ್ಟೀರಾ?

ನೆಟ್ಟಗ ನಡದರ
ಅಡಗಾಲು ಹಾಕಿ
ಕೆಡವಾಕ ನಿಂತಾರ ಅಲ್ಲಲ್ಲೆ, ಜ್ವಾಕಿ
ಅವರೂನು ಅಂದಾರು:
'ಭಾರತಮಾತಾಕಿ'
ಹೋದೀರಾ! ಮೋಸ ಹೋದೀರಾ!

ಆದದ್ದು ಆಗ್ಹೋಯ್ತು
ಅಂದರ ಹ್ಯಾಂಗ?
ಹುಗಿದಿದ್ದ ಇತಿಹಾಸ ಹೊರಬಂತು ಮ್ಯಾಗ
ಭಂಡರು ನಿಂತಾರ
ಸೆರಗು ಮರೆಯಾಗ
ಕಟ್ಟೀರಾ? ಹಿಡಿದು-ಬಿಟ್ಟೀರಾ!

'ಬಿದ್ದೀಯಬೆ ಮುದುಕಿ'-
ಪದವ ಹಾಡುದು ಬಾಕಿ
ಎಷ್ಟು ಇಟ್ಟರು ಕೂಡ ಬರವಲ್ಲು ನಾಚಿಕಿ
ಬಾಲಬಡಕರಿಗಿನ್ನೂ
ದೆವ್ವsದ ಹೆದರಿಕಿ
ಬರತೀರಾ? ಅಲ್ಲೆ ಇರತೀರಾ?

ಎದ್ದವೆದ್ದೆವು ಶರಣು, ಎದ್ದೀರಾ! ನೀವು ಎದ್ದೀರಾ?
ಎದ್ದಮೇಲೂ ಬುದ್ಧಿ ಸ್ವಾಧೀನದಲ್ಲಿರಲಿ
ಹದ್ದು ಮೀರದ ಹಾಗೆ ನಮ್ಮೆಲ್ಲ ನಡವಳಿ
ತಿದ್ದೀರಾ? ಜೋಕೆ, ಬಿದ್ದೀರಾ!

## ಅಡ್ಡಮಳೆ

ಅಡ್ಡಮಳೆ ಹೊಡೆದು ಹೋಯಿತು-
ಗುಡ್ಡದಾಚೆಗೆ, ಹೊಲ-ಗದ್ದೆಗಳ ದಾಟಿ, ಬೇರೂರಿಗೆ.
ಅಲ್ಲಿಯೂ ನಮ್ಮಂತೆ ಚಡಪಡಿಸಿ, ಉಸಿರು
ಕಟ್ಟಿ ಕುಳಿತಿರಬಹುದು ಜನರು: ಹೊಚ್ಚ ಹೊಸ ಮಳೆಗೆ.

ಉತ್ತರದ ಕಡೆಯಿಂದ ಬೀಸಿ ಬಂದಿತು ಗಾಳಿ
ದಕ್ಷಿಣಕೆ, ಮೋಡದೊಳಗೊಂದು ಮೋಡ
ಉದ್ಭವಿಸಿ ಆಕಾಶವನ್ನೆಲ್ಲ ವ್ಯಾಪಿಸಿತು.
ನೋಡ ನೋಡುತ್ತ ನೆಲವ ಗದಗಮಿಸಿತು.

ಕೋಲ್ಮಿಂಚು ಕೊರೆದು ಕೋರೈಸಿ, ಗುಡುಗು ಹುಟ್ಟಿಸಿ ನಡುಗು
ಎಲ್ಲೊ ಬಡಿಯಿತು ಸಿಡಿಲು: ಬಟಾ ಬಯಲು.
ನಡುವೆ ತಣ್ಣಗೆ ತಂಪು, ನೀರೆಲ್ಲ ಕೆಂಪು ಹೊನಲು.
ಬಿರುವಿಸಿಲಿನಾಳಿಕೆ ಬಗ್ಗು ಬಡಿದು ಹೊರಬಿದ್ದ ಬಿರುಗಾಳಿ-
ಆಂದೋಲನದ ಅಮಾಯಕ ತಿರುವು; ಹೊಲಸೆಲ್ಲ
ತೊಳೆದು ಹೊಳೆದಿಹುದು ಹೊಸ ಜೀವನದ ಕಾಂತಿ.
ವಾತಾವರಣದಲ್ಲಿ ನಿರ್ಭೀತಿ, ನಿರಂಕುಶಮತಿ.

## ಧ್ವನಿ-ದನಿ

ಮುಂಜಾವಿನಿಂದ ಮುಂಜಾವು: ಬಗೆ ಬಗೆಯ ಧ್ವನಿ-
ಗಳೇರಿಳಿವು. ಋತು ಋತುವಿಗೊಂದು ಬನಿ.
ಎಷ್ಟೋ ದನಿಗೆ ಕಿವುಡರು ನಾವು ಕಂಡು ಕಂಡೂ.
ಮಹದನುಭವವ ಕಳೆದುಕೊಂಡು. ಹಿಂದು-ಮುಂದಿರದ
ಸರಪಳಿ ತುಂಡು.

ತನಿಗೊಂಡ ಮಕ್ಕಳುಲಿ: ತಾಯಿ-ಮಗು ಸೆಳೆತ
ಯುಗ ಯುಗದ ಮಮತೆ ಓತಪ್ರೋತ. ಆಗಾಗ
ಬದುಕಿನ ಬಿರುಕಿನಿಂದೊಗೆವ ಅಸಹಾಯ, ಕ್ಷೀಣ ಧ್ವನಿ.
ಮಳೆ-ಗಾಳಿ ಹೊಯ್ಲು, ಉರುಳುರುಳಿ ನರಳುವ ರೈಲು; ಅಬ್ಬರಿಸಿ
ನುಗ್ಗು-ತಡಸಲು, ಮೌನದಲಿ ಕಿವಿಗೊಟ್ಟ ಬಟ್ಟ ಬಯಲು.

ಸ್ನೇಹ ಕೂಟದ ಬೆಚ್ಚಗಿನ ದನಿ, ಸಂತಸದ ತುಂಬು-ತುಳುಕು.
ಪಯಣದಲ್ಲಿ ಕೊಲ್ಲಾರಿ ಬಂಡಿಯ ಲಯದ ಗಿಲಕ್ ಗಿಲಕು.
ಟಾರು ಬೀದಿಯಲಿ ಟಾಂಗಾ ಕುದುರೆ ಟಕಕ್ ಟಕಕು.
ಮಟಮಟ ಮಧ್ಯಾಹ್ನ ಗೂಡಿನಲಿ ಗುಬ್ಬಿ-ಗುಟುಕು.

ಬಿರುಗಾಳಿ ಮುನ್ನ ಮರಮರವ ಹೊಕ್ಕು ತೀಡುವ ಗಾಳಿ.
ಭೆಟ್ಟಿಗೆ ಬರುವ, ಮರೆತ ಗೆಳೆಯನ ತ್ವರಿತ ಪೋನಿನುಲಿ.
ಹೊರಗಿನಿಂದ ಬಂದ ಮನೆಯವರ ನಗುಮೊಗದ ಕಲಕಲ ಮುದ್ದು-
ಬೇಲಿಯಾಚೆಗೆ ಬಣ್ಣ ಬಣ್ಣದ ಹಕ್ಕಿ ಹಾರಿದ ರೆಕ್ಕೆಸದ್ದು.

ನಿದ್ದೆಗೂಸಿನ ಉಸಿರಾಟ ನಿರಾಳ ಸೂಕ್ಷ್ಮ ಸೂತ್ರ ಧ್ವನಿ.
ಇರುಳಿನಲಿ ಹೊರಗೆ ಸಣ್ಣಗೆ ಬರುವ ಮಳೆಯ ಹನಿ.
ಅಟ್ಟದ ಮೇಲೆ ಮೇಷ್ಟ್ರು ಮಕ್ಕಳಿಗೆ ಹೇಳುವ ಗಣಿತ,
ಹೊತ್ತುಗಳೆಯದೆ ಉಣ್ಣೆಯಂಗಿಯ ಹೆಣೆವ ಸೂಜಿಗಳ ಕ್ವಣಿತ.
ಶಬ್ದಗಳ ಹುಡುಹುಡುಕಿ ಮೌನ ಭೇದಿಸುವ ಪ್ರೇಮಿಗಳ
ಎದೆಯ ಮಿಡಿತ.

ದಂಡೆಗಪ್ಪಳಿಸಿ, ನಿದಾನ ಹಿಂದೆ ಸರಿಯುವ ಕಡಲ ತೆರೆ.
ಬಳೆಬಳೆಯಾಗಿ ಬಂದು ಸುಳಿದು ಸಿಂಗರಿಸುವ ಕೆರೆಯ ಸಣ್ಣ ಅಲೆ.
ನೆರೆಮನೆಯ ಜಗಳ ಕದ್ದು ಕೇಳುವ ಕಿವಿಗೆ ಮುತ್ತಿನೋಲೆ.

ಆಕಾಶದುದ್ದ ಕೊರೆವ ಹದ್ದು-ಕಾಗೆಗಳ ಕರ್ಕಶ ಧ್ವನಿ.
ಸುಗ್ಗಿ ಮಾಡುವ ರೈತರುತ್ಸಾಹ, ಕೇಕೆ. ಹೊಲದ ಬದುವಿನಲಿ
ಮೇಯುವ ದನದ ಕೊರಳ ಕಿಂಕಿಣಿ ಸರಣಿ, ಕರುವಿನಂಬಾ ದನಿ.
ಅಡುಗೆ ಮನೆಯಲಿ ತಾಟು-ಲೋಟಗಳ ಭರವಸೆಯ ಸಿಂಪನಿ.
ಮಧ್ಯಾಹ್ನ ಎದ್ದು ಆಕಳಿಸಿದಾಗ ಚಹದ ಕಪ್ಪು-ಬಸಿ ಒಪ್ಪಾಗಿ
ಟಿಂಟಿಣಿ ದನಿ.

ಮಲಗಿ ಓದುತ್ತ ಕಾದಂಬರಿಯ ಕುತೂಹಲದ ಪುಟ ಪುಟ ದನಿ.
ತಲ್ಲೀನ ಕುಳಿತ ಗಾಯಕನ ಹಿಂದೆ ಮಾಯಕದ ತಂಬೂರಿ
ನರನರವ ಮೀಟಿ ಹೊರಡಿಸುವ ಜೀವಧ್ವನಿ.

ನಿರಂತರ ಉರುಳುರುಳಿ ಮೊರೆವ ಸಮುದ್ರ:
ಬಾನಿನಲಿ ಮತ್ತೆ ಗುಡುಗಿನ ದನಿ. ಎಲ್ಲಿ
ಏಕಾಂತದಲಿ ಮಿಡಿದು ಮಾರ್ದನಿಗೊಳುವ ನನ್ನೊಳದನಿ?
ಲೋಕಾಂತದಲಿ ಧ್ವನಿಗಳೇರಾಟ ಚೀರಾಟಗಳ ನಡುವೆ
ನಾನು ಮೌನಿ.

## ಈಗ ಕವಿತೆ ಬರೆಯಲು...

ಈಗ ಕವಿತೆ ಬರೆಯಲು ನಾನು ಹೊರಟಿಲ್ಲ;
ಹೊರಟದ್ದು ಆಫೀಸಿಗೆ; ಉಂಡು ಅವಸರದಿಂದ-
ಸಿಕ್ಕರೆ ಬಸ್ಸು ಹಿಡಿದು, ಇಲ್ಲ, ಮೆಲ್ಲಗೆ ನಡೆದು;
ಸಡಿಲಾಗಿರುವ ಕೋಟು ಪ್ಯಾಂಟುಗಳನ್ನು ಇದ್ದು-
ದರಲ್ಲಿ ಸರಿಪಡಿಸಿಕೊಂಡು. ಎಷ್ಟೋ ವರ್ಷಗಳ
ಹಿಂದೆ ಎಡಗಾಲ ಹಿಂಬಡ ಗಾಯ ಮಾದದ್ದು
ಈಗ ಮತ್ತೆ ನೋವು. ಮದುವೆಯಲ್ಲಿ ಕಟ್ಟಿದ ವಾಚು
ಆಗೀಗ ಬಂದುಬಿದ್ದರೂ ಅದರಂತರಂಗದದ್ಭುತ-
ಸೂಕ್ಷ್ಮ ಯಂತ್ರಕ್ಕೆ ಸಾಗಿದ ನಾನು ಮಂತ್ರ ಮುಗ್ಧ.

ನನ್ನ ದಾರಿಗೆ ಅಡ್ಡ ಎಮ್ಮೆಗಳು (ನಮ್ಮೂರ ದೊಡ್ಡ
ಹೆಮ್ಮೆಗಳು) ಉದ್ದಕ್ಕೂ ಉಚ್ಚೆಹೊಯ್ಯುತ್ತ, ಸಗಣಿ
ಹಾಕುತ್ತ, ಅತ್ತಿತ್ತ ಸುಖವಾಗಿ ಬಾಲ ಜಾಡಿಸುತ್ತಾ;
ಸೈಕಲ್ಲು, ಕಾರು, ಸ್ಕೂಟರು ಜಾರಿ, ತಮ ತಮಗೆ ದಾರಿ

ಮಾಡಿಕೊಂಡು. ಚೀಲದ ತುಂಬ ಪುಸ್ತಕ ಭಾರ ಹೊತ್ತು
ಶಾಲೆಗೆ ನಡೆದ ಮಕ್ಕಳುತ್ಸಾಹಕ್ಕೆ, ಎಡಬಲದ
ಗಿಡಮರಗಳಲ್ಲಿ ಚೈತ್ರ ನಗುವ ಚಿಗುರು.

ಆಫೀಸಿನ ಕುರ್ಚಿ ಮೇಜುಗಳ ರೀತಿ ರಿವಾಜು-
ಗಳಲ್ಲಿ ಫೈಲುಗಳು;ಪತ್ರಕುತ್ತರ ಮತ್ತೆ ಸುತ್ತೋಲೆ:
ಟೀಕೆ-ಟಿಪ್ಪಣಿ ಸರಣಿ; ದೂರವಾಣಿಯಲ್ಲಿ ದೂರುಗಳು.
ಸುಸೂತ್ರ ಸಾಗುತ್ತಿದ್ದಂತೆ ಕೆಂಪು ಪಟ್ಟಿಯಲ್ಲಿ ಕಗ್ಗಂಟು-
ಹೀಗೆ ಇಪ್ಪತ್ತೆಂಟು ಗಲಿಬಿಲಿಯ ನಡುವೆ, ಬಿಟ್ಟೂ
ಬಿಡದೆ ಟೈಪ್‌ರೈಟರಿನ ಲಯಬದ್ಧ ನಡಿಗೆ;ಕೊನೆಗೆ
ಕೆಳಗಿಂದ ಮೇಲಿನ ತನಕ ರುಜುವಾಗಿ, ಹೊರ ಜಗತ್ತಿಗೆ
ರವಾನೆ. (ಹೇಗಿದ್ದರೂ ಮುಗಿಸಬೇಕಾದ ಕೆಲಸ ತಾನೆ?)
ಹೊತ್ತು ಇಳಿಯುವ ಸಮಯ: ಬಾಗಿ ಬೆನ್ನು ಎತ್ತಿ
ಹೊರಗಿನ ಗಾಳಿ ಬೆಳಕಿಗೆ ತೇಲಿ ಬರುವಾಗ
ಮೇದು ಮೆಲುಕಾಡಿಸುತ ಬರುವ ದನ-ಕರುಗಳು.
ಹುಡುಗನ ಹೆಗಲಿಲ್ಲಿ ಜೋತ ಟ್ರಾನ್ಸಿಸ್ಟರಿನ ಹಾಡು.
ಕಟ್ಟಿಗೆಯ ಹೊರೆ ಹೊತ್ತು ದಣಿದ ಹೆಜ್ಜೆಯ ಹೆಣ್ಣು
ಮಕ್ಕಳ ಹಣೆಯ ಬೆವರು. ಗುಡ್ಡವನ್ನಿಳಿದು
ಸಾಗಿದ ನೆರಳು. ಬಾನ ಮನಸಿಗೆ ಅವಿಸ್ಮರಣೀಯ
ನೆನಪುಗಳ ಮೆಲ್ಲ ತೇಲಿಸಿ ತರುವ ಬೆಳ್ಳಕ್ಕಿ ಸಾಲು.
ಆಟದ ಬಯಲಿನಲ್ಲಿ ಬರೀ ಕ್ರಿಕೆಟ್ಟು.

ಮನೆಯ ಮೆಟ್ಟಿಲು ಹತ್ತಿ ಹಾಗೆ ಹೊರಳಿದರೆ-
ದಿನದ ದುಡಿಮೆಯ ಕೆಂಪು, ಬಾನಿನಲಿ ಮೆಲ್ಲಗೆ
ನಂದಿ, ಒಂದೆರಡು ಅಸ್ಪಷ್ಟ ಚಿಕ್ಕೆಗಳು ಮೂಡಿ
ಗೂಡಿನಲಿ ಸ್ತಬ್ಧ ಹಕ್ಕಿಗಳು.

ಈ ದಿವಸ ಮಾಡಿ ಮಟ್ಟಿದ್ದೇನು? ಎದೆಯ ತಟ್ಟಿದ್ದೇನು?
ನಿನ್ನೆಗಳ ಇಂದು ಎಳತಂದು, ನಾಳೆಗುತ್ತರವ
ಹುಡುಕುವ ಉತ್ತರೋತ್ತರ ಕೆಲಸ. ಪುರಸತ್ತಿರದೆ
ಸುತ್ತುವದು ಹೀಗೆ ನಮ್ಮ ಸುತ್ತು: ಈ ಜಗತ್ತು-
ವಿವಿಧ ಛಂದಸ್ಸಿನಲಿ ಕಸರತ್ತು ಲಯವಾಗಿ, ಈಗೀಗ
ವಿರಳ ಸರಳ ರಗಳೆಯ ಹೊಕ್ಕು ಹೊರಬಂದು
ಮುಕ್ತ ಛಂದದ ಹೆಸರಿನಲ್ಲಿ ನಿದಾನ ಹೆಜ್ಜೆ ನಿಂದು.

## ಇರುವೆ

ಈಟಿರುವೆ
ಕೀಟಿರುವೆ; ಬಾಲ್ಯದಿಂದಲು ನನ್ನ
ಕಣ್ಣೊಳಗೆ ನಾಟಿರುವೆ.
ಎಲ್ಲಿದ್ದರೂ ಸ್ವಲ್ಪವೂ ಸದ್ದಿಲ್ಲದಿರುವೆ.
ಈದೀಗ
ಗುದ್ದಿನೊಳಗಿಂದ ಪುದು ಪುದು ಎದ್ದು
ಸ್ಪರ್ಶಾಂಗಗಳ ಗಾಳಿಗಾಡಿಸಿ
ಮೂಸಿ, ಗುರುತಿಸಿ, ಅಡ್ಡಿ-
ಆತಂಕಗಳ ದಾಟಿರುವೆ.
ಎಲ್ಲ ತುಳಿದಾಟದಲಿ, ನಿನ್ನದೇ
ಹಾದಿಯನು ಹಿಡಿದು ಹೊರಟಿರುವೆ.

ಕೆಂಪಿರುವೆ
ಕಪ್ಪಿರುವೆ; ಗುಂಪುಗಳ
ಕಟ್ಟಿರುವೆ; ಒಮ್ಮೊಮ್ಮೆ
ಬಿಟ್ಟಿರುವೆ. ಆದರೂ ಸೌಹಾರ್ದದಲಿ
ಮತ್ತೆ ಸಾಲುಗೊಂಡಿರುವೆ.
ಮನೆ-ಹೊಸತಿಲು-ಬೀದಿ ಮೇಲೆ ಸರಸರ ಹರಿದು
ಎಲ್ಲೆಡೆ ದೌಡಾಯಿಸಿರುವೆ.
ಎಲ್ಲಿಗೆಲ್ಲಿಗೆ ದಾಳಿ?
ಗೆದ್ದಲಿನ ಹುತ್ತ, ಕೀಟಗಳ ತೋಟ
ಹೂವ ಮಕರಂದ, ಧಾನ್ಯಗಳ ಕಣಜ-
ಮೇಯಲಿಕ್ಕೆ?
ಹೊಸ ಬಿಡಾರವ ಹುಡುಕಿ ತಂಗಲಿಕ್ಕೆ?
ನೆಲ ಕೊರೆದು
ಮಣ್ಣ ಕಣ ಕಣವ ಪೇರಿಸಿ
ರಾಣಿಗರಮನೆಯ ಕಟ್ಟಿ ಕಾಪಾಡುವುದಕೆ?
ಇಲ್ಲ-
ವೈರಿಯ ಜೊತೆಗೆ ಹೋರಾಟಕೆ?
ಸತ್ತ ಜೀವಿಗಳನೆತ್ತಿ ಎಳೆದು ಹಾಕಿರುವೆ.
ಬಿಳಿ ತತ್ತಿಗಳ ಒಂದೊಂದೆ ಹೊತ್ತು
ದೂರ ಸಾಗಿರುವೆ.

ಎಂಬತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ
ನಾನು ಮೇಲಿರುವೆ-ಎನುವಾಗ
ಗುಪ್ತ ಸ್ಥಳವನು ಹೊಕ್ಕು
ಕಚ್ಚಿಬಿಟ್ಟಿರುವೆ.

## 'ಮನು'ವಿಗೆ ಕೊನೆಯ ಗಳಿಗೆ

ಕಳೆದ ಐದಾರು ದಿನಗಳಿಂದ ಮನಸ್ಸಿಗೆ
ಸಮಾಧಾನವೇ ಇರಲಿಲ್ಲ-
ಒಳಗೂ ಹೊರಗೂ ಬಿಟ್ಟೂ ಬಿಡದೆ ಓಡಾಡಿಕೊಂಡು
ಬೇಡವೆಂದರೂ ಬಾಲವನ್ನಾಡಿಸಿ ಬೆಂಬತ್ತಿ ಬಂದು
ಮೊದಲೇ ಮುಂದಿನ ದಾರಿಯನ್ನು ಮೂಸಿ
ಹೊರಡುತ್ತಿದ್ದ 'ಮನು'
ಏಕಾಏಕಿ ಮಲಗಿಬಿಟ್ಟಿತು.

ಚಳಿಗಾಲದಲ್ಲಿ ಒಂದೊಂದು ದಿನ ಇದು ಹೀಗೇ-
ಮಣ್ಣುಕೆದರಿ, ಬೆಚ್ಚಗೆ ಮೈ ಮುದುಡಿ ಮಲಗಿಕೊಳ್ಳುವದೆಂದು
ಸುಮ್ಮನಿದ್ದೆ. ಆದರೆ
ಯಾರು ಬಂದರೂ ಹೋದರೂ ಕಣ್ಣೆತ್ತಿಯೂ ನೋಡದೆ
ಒದರದೆ, ಓಡಾಡದೆ, ಒಮ್ಮೆಲೆ
ಮೌನವಾಗಿ ಬಿಡುವುದೆ?

ಉದ್ದಕೆ ಗೋಣು ಚಾಚಿ, ಕೂಳು ನೀರಿಲ್ಲದೆ ನಿಸ್ತೇಜ
ಬಿದ್ದುಕೊಂಡುದ ಕಂಡು ತಣ್ಣಗಾದೆ.
ಎಲ್ಲರಿಗೂ ಅದೇ: 'ಮನು ಏಕೆ ಹೀಗಾದೆ?'
ಹಾಕಿದ ಔಷಧ, ಕುಡಿಸಿದ ಹಾಲು, ಕಟವಾಯಿಗುಂಟ.

ಒಂದು ಕ್ಷಣ-ಒಂದೇ ಒಂದು ಕ್ಷಣ -ಇದಕ್ಕೆ ಬಾಯಿ ಬಂದು
ತನ್ನ ನೋವನ್ನೆಲ್ಲ ಹೇಳಿಕೊಳ್ಳಬಾರದೇ-ಎನಿಸಿತು.
ಇಂಥ ಸ್ಥಿತಿಯಲ್ಲೂ ಹತ್ತಿರ ಹೋದರೆ
ಮೆತ್ತಗೆ ಬಾಲವಲ್ಲಾಡಿಸಿತು.

ಕೊನೆಯ ಗಳಿಗೆಯಲ್ಲಿಯೂ ಮೆಲ್ಲಗೆ ಕಣ್ಣು ತೆರೆದು
ಕಣ್ಣಲ್ಲಿಯೇ ಜೀವ ಹಿಡಿದಂತೆ
ಗುಡ್ಡೆ ಹೊರಳಿಸಿ, ಒಮ್ಮೆ ಎಲ್ಲರನ್ನೂ ನೋಡಿದ
ಕೃತಜ್ಞತೆಯ ಆ ಪ್ರಶಾಂತ ನೋಟ-
ಮೊನ್ನೆ ಸಂಜೆಯ ಅಪರೂಪದ ಆ ಚಂದ್ರ-ಶುಕ್ರ ಕೂಟ
ಮೂಡಿ ಮರೆಯಾಯಿತು.
ಹಣತೆಯ ಕುಡಿ-ಬೆಳಕು ಸಣ್ಣದಾಗುತ್ತ ನಂದಿತು.
ಹೌದು. ಆದರೆ ಆ ನೀಲಮಣಿ ಬೆಳಕು ಎಲ್ಲಿ ಹೋಯಿತು?
ಕತ್ತಲೆಯನ್ನು ಭೇದಿಸಿ ಹೇಗೆ ಪಾರಾಯಿತು?
ಮಣ್ಣ ಹಣತೆಯನ್ನು ಮಣ್ಣಿಗೆ ಬಿಟ್ಟು,
ಆಕಾಶದ ಯಾವ ಮೂಲೆಯಲ್ಲಿ ಚಿಕ್ಕೆಯಾಯಿತು?
ಅದರ ಶೌರ್ಯವನ್ನೆಲ್ಲ ಈಗ ಯಾರ ಮುಂದೆ ಹೇಳುವದು?
ಹೇಳಿ ಏನು ಮಾಡುವದು?
ಏಳೆಂಟು ವರುಷಗಳ ಎಡೆಬಿಡದ ಜೀವದ ನಂಟು
ಮಲ್ಲಿಗೆಯ ಅಂಟಿನಂತೆ ನೆನೆಸಿದಾಗೆಲ್ಲ ಚಿಗಿತು ಹೂ ಬಿಡುವದು
ನೆಲ-ಬಾನುಗಳನ್ನು ಸುತ್ತಿ ಬೀಸುವ
ಎಲ್ಲರ ಉಸಿರಾಗಿರುವ, ಇದ್ದೂ ಇಲ್ಲದ ಹಾಗಿರುವ
ಈ ಗಾಳಿಯಲ್ಲಿ
ಇಂಥ ಎಷ್ಟು ಜೀವಗಳ ಪರಿಮಳ ಬೆರೆತು ಹೋಗಿದೆಯೋ-
ನೆಲದ ಮೇಲಿನ ಹೂವು, ಮುಗಿಲಲ್ಲಿಯ ಚಿಕ್ಕೆ
ಅವೇ ಬಾಯಿಬಿಟ್ಟು ಹೇಳಬೇಕು.

## ಪ್ರತಿ ಯುಗಾದಿಯ ನಸುಕು

ಪ್ರತಿ ಯುಗಾದಿಯ ನಸುಕು ಹೊಸ ಕನಸುಗಳ ಕಡೆದು
ಹೊನ್ನ ಗರಿ ಬಿಚ್ಚಿ ತಂಗಾಳಿಯಲಿ ತೂರುವದು;
ಹಾರುವವು ದಿಕ್ಕು ದಿಕ್ಕಿಗೆ, ಕಾಡನಂಡಲೆದು
ಗೂಡು ಕಟ್ಟಿದೆ ನಿಗೂಢ ಜೀವ ತಂತಿಯ ಮಿಡಿದು
ಮೋಡಗಳ ಕುಡಿದು, ನಾಡ ಮನಸಿನಲಿ ಮೆಲ್ಲಗೆ
ಕಾವು ಕೂರುವವು. ಯಾವ ಭಾವಕೆ ಯಾವ ಪದ-
ಬಂಧ? ಮೃದ್ಗಂಧ ಹತ್ತೂ ಕಡೆಗೆ ಕಿಡಕಿ ಕದ
ಬಡಿದು, ಉಸಿರಿನ ಛಂದ ಚಿಮ್ಮುವ ನೆತ್ತರೊಳಗೆ.

ಅರಳಿದ ಗುಲಾಬಿ: ನೆಲ-ಮುಗಿಲ ಪ್ರೀತಿಯ ಪಕಳೆ
ಕಿತ್ತು ಮೂಸದಿರು; ಹತ್ತಿರ ಹೋಗಿ, ಬಾಗಿ, ಉಸಿ-
ರೆಳೆದು ಮುತ್ತನಿಡು; ಚಿತ್ತಕಷ್ಟೇ ಸಾಕು. ಬಿಸಿ
ಆರದಂತೆ ಬದುಕು. ಹುಸಿ ಮುಸುಕ ಬಿಸುಡಿ ಬೆಳೆ.
ಬನದ ಹುಣ್ಣಿಮೆ ನಡುಗಿ, ಭಾರತ ಉಧೋ ಎಂದು
ಹೋಳಿ ಓಕುಳಿಯಾಡಿ ಪಾಡ್ಯ ಗುಡಿಗಟ್ಟುವದು.

## ಬೆಳುವಲದ ಬಾಗಿನ

ಬಯಲುಸೀಮೆಯ ಬಿರುಬಿಸಿಲಿಗೆ ಎರೆ ಹೊಲದೆದೆಯ
ಎರಕಲು ಬೀಡು ಕಾದು ಕಂಗೆಡಿಸಿರಲು, ಮುಗಿಲು-
ಮುಂಗಾರು ಹದಗೊಳಿಸಿ ಮುಂದಿನ ತಲೆಗೆ ಮಿಗಿಲು
ಹಾರೈಸಿ; ಹಿಂಗಾರು; ಜೋಳ ಗೋದಿಯ ತೆನೆಯ
ಸಿಂಗಾರ. ಕಡಲೆ ಮಿಡಿಗೆ ಕೊಡರ್‌ಕೊಂಚೆ ಹಿಂಡು.
ಕುಸುಬೆ ಸಾಲಿನ ಹೂವಿನಂಚೆಲ್ಲ ಜರತಾರಿ.
ಬಿಸಿಲು ಕಾಸಿದ ಬೆಳ್ಳಿ: ಹತ್ತಿ ತೊಳೆ ರೂವಾರಿ.
ಮಾವು, ಹುಣಿಸೆಯು, ಬೇವು ಗುಡಿಹುಣ್ಣಿಮೆಗೆ ಈಡು.
'ಬೆಳುವಲದ ಮುನ್ನೂರು'; ನೆಲ-ನೀರು-ಗಾಳಿಯಲಿ
ಹಲವು ಹಂಬಲ ತುಂಬಿ ಬಿಂಬ ಪ್ರತಿಬಿಂಬದಲಿ
ಒಲವಿನೊಂದೇ ರೂಪ; ಅರೋಗಣೆಯಂಬಲಿ.
ಬಯಲ ದೀಪ ಸ್ತೂಪ ಹೇಗೊ ಹಿಡಿದಿದೆ ಜೋಲಿ.
ದುಡಿಮೆಯೊಳಗೊಂದು ಸುಖ, ನೋವು-ನಲವಿನ ಜೀಕ.
ಪಡೆದ ಭಾಗ್ಯವು ಬೇರೆ; ಸಂಸ್ಕೃತಿ ಭೂಮಿ ತೂಕ.

## ಗೋಪುರದ ಗಡಿಯಾರ

ಬೆಳಗಾಗುವುದರೊಳಗೆ ಗೋಪುರದ ಗಡಿಯಾರ
ನಿಂತು, ದಿನದ ಕಾರ್ಯದ ತಂತು ಕಡಿದಂತೆ ನಡೆ-
ದಂತೆ ಮತ್ತೆ ಕುಂಟುತ್ತ, ಕನಸಿಗಸ್ಪಷ್ಟ ತಡೆ.
ನಾಲ್ಕೂ ದಿಕ್ಕನವಲೋಕಿಸುತ ನಿರಂತರ
ತುಡಿವಂತರಂಗ, ಕಾಲದಾಚೆಗೆ ಹಾರಿ ಬರು-

ತಿರುವ ಪಾರಿವಾಳದ ಹಿಂಡು. ತಲೆಮೇಲೆ
ಬೆಳ್ಳಿದೀಪದ ಮುತ್ತು. ಇರುಳು ಕವಿಯುವ ಮೊದಲೆ
ಗಂಟೆ: ನಾದವರ್ತುಲ ತುಮುಲ ಭಾವದುಸಿರು.
ಗೋಪುರದ ಅಡಿಗಡಿಗೆ ನಮ್ಮೆಲ್ಲ ಓಡಾಟ
ಸಭೆ, ಸಂತೋಷ ಕೂಟ. ನೆಳಲು-ಬೆಳಕಿನ ಬಲೆಗೆ
ಅಂಜಿ ಅಳುಕುವ ಜೀವ. ತೆಂಗು-ಈಚಲ ಕಲೆಗೆ
ಒಂದೆ ಚಿತ್ರದ ಭಾಸ, ತಾಳೆಗರಿ ಹುಡುಕಾಟ.
ಚೆಂದಕ್ಕೆ ಎಲ್ಲೆಡೆಗು ಹಸಿರು, ಹೂವಿನ ತೋಟ;
ಎದ್ದು ಬಂದಾವು ಜೇನ್ನೊಣ: ಎಚ್ಚರದ ನೋಟ.

## ಕರ್ನಾಟಕ ಕಾಲೇಜಿನ ವಜ್ರ ಮಹೋತ್ಸವಕ್ಕೆ

ಅಂಜುತಂಜುತ ಬಂದು ಹೆಜ್ಜೆಯಿಟ್ಟೆನು ನಿನ್ನ
ಹೊಂಬೆಳಕಿನಂಗಳಕೆ-ಮೂರು ದಶಕದ ನೆನಕೆ:
ಗಂಭೀರ ಮುಖಮುದ್ರೆ, ಕಣ್ಣು ಮೆಲ್ಲಗೆ ತೆರೆದೆ;
ಸನ್ನೆಯಲಿ ಹತ್ತಿರ ಕರೆದು, ಮೈದಡವಿ, ಅಣ್ಣ-
ತಮ್ಮಂದಿರೊಡನೆ ಅಂತರಂಗಕ್ಕೆ ಬರಸೆಳೆದೆ.
ಮುಗ್ಧ ಹಣತೆಯ ನೂರು ಸ್ನಿಗ್ಧಸ್ನೇಹದ ಕುಡಿಗೆ
ಬೆಳಕ ಮುದ್ದಾಡಿಸುತ, ದಿನವು ನನ್ನೆದೆಯೊಳಗೆ
ನಿನ್ನದೇನೊ ಬರೆದೆ. ಹೊಸಸೃಷ್ಟಿ: ಬೆರಗಾದೆ.
ಉತ್ತರದ ಕನ್ನಡಿಗರುತ್ತರೋತ್ತರ ಬದುಕೆ
ನಿನ್ನ ಜೀವದ ಬಯಕೆ. ಹೊಂಗನಸುಗಳ ಬಿತ್ತಿ
ಬೆಳೆದು, ಒಂದೊಂದರೊಳು ಮುತ್ತು ರತ್ನವ ಕೆತ್ತಿ
ನಭಕೆತ್ತಿ ಹಿಡಿದೆ: ಉತ್ಸವದಿಂದ ಉತ್ಸವಕೆ.
ಎಲ್ಲಿ ನಿಂತರು ನಿನ್ನ ದೃಷ್ಟಿ ಬೀಳುವ ಹಾಗೆ
ವಿಶ್ವವಿದ್ಯಾಲಯದ ವಿನ್ಯಾಸ, ವಜ್ರದೊಸಗೆ.

## ಜಿಜ್ಞಾಸೆ

ಕಳೆದ ದಿನಗಳು ಎಲ್ಲಿ ಹೋಗಿ ಕೂಡುತ್ತಿಹವೊ
ಬರುವ ದಿನಗಳು ಮತ್ತೆ ಎಲ್ಲಿಂದ ಬರುತಿಹವೊ
ಇರುವ ದಿನಗಳು ಕರಗಿ ಬೆರಗುಗೊಳಿಸುತ್ತಿಹವು;

ತಿಗುರಿಯಲಿ ಮಣ್ಣಿನ ಮುದ್ದೆ ಪಡೆದಾಕಾರವೊ-
ಅವಿಗೆಯಲ್ಲಿ ಸುಟ್ಟು ಸಂತೆಗೈತಂದಿಹವು.
ಬಾರಿಸಿ ನೋಡಿ ತಂದು, ಒಲೆಯ ಮೇಲೆಸರಿಟ್ಟು
ಅಟ್ಟುಂಡ ಬದುಕು ವಾಸ್ತವ. ಚಿತ್ರ-ಚೌಕಟ್ಟು
ಅನುಭವಕೊಂದು ರೂಪ; ಕಲ್ಪನೆಯ ಸುಳವು-ಹೊಳವು.
ಒಂದರೊಳಗೊಂದು ಹೆಣಕೊಂಡ ದಾರ ಗೋಜಲು
ಬಿಚ್ಚಿ, ಹಾಕಿದ ಬಲೆಯ ತೆಗೆದು ಹಾಕಲು
ಕಗ್ಗಂಟು ಕತ್ತರಿಸಿ, ಮತ್ತೆ ಹುರಿಗೊಳಿಸಿ, ಗೆಲು-
ವಿನಲಿ ಹೆಣಿಕೆಗೈಯಲು ಎಷ್ಟೊಂದು ಹಗಲು
ಕಳೆಯ ಬೇಕಿಹುದೊ; ಇರುಳಿಗು ಅದರದೇ ಕನಸು
ಕನಸು-ನನಸಿಗು ಸೇತುಕಟ್ಟುವುದೆ ಬಾಳ ಸೊಗಸು?

## ಸಿದ್ಧಗಂಗಾ ಶ್ರೀ

ಬೆಟ್ಟ-ಬಂಡೆಯ ನಡುವೆ ಗಂಗೆ ಪುಟಿದದ್ದೆಂದೊ!
ಜನಜೀವನದ ಕಷ್ಟ ಕೋಟಲೆಯ ಸ್ತರದಲ್ಲಿ
ಇಳಿದು ತಂಪಿಸಿ, ಮತ್ತೆ ಮೇಲೆದ್ದು ಬರುವಲ್ಲಿ
ಸಿದ್ಧ ಸೇವಾಕ್ಷೇತ್ರ: ನಿತ್ಯ ದಾಸೋಹಕ್ಕೆ
ವಿದ್ಯಾ ವಿಶಾಲತೆಗೆ, ನೂತನ-ಪುರಾತನದ
ಚೇತನವ ಹಿಡಿದು ಹೂಡಿ ಜನಮನೋರಥಕೆ.
(ಜಾತ್ರೆಯೂ ಬೇಕು ಸರ್ವರುತ್ಸಾಹ ಸೌಂದರಕೆ.)
ಏಕಾಂತ ಪಾತ್ರೆಯು ತುಂಬಿ ತೀರದ ನಿನಾದ.
ಕಂಡಿಹೆನು ನಾನವರನ್ನೊಮ್ಮೆ ಹತ್ತಿರದಿಂದ-
ತ್ಯಾಗದೆತ್ತರಕೆ ತೂಗಿ, ಮುಗಿಲು ಸುತ್ತಲು ಬಾಗಿ
ನೆಲದ ಬದುಕಿಗೆ ಕರುಣೆ-ಕಾಯಕದಲ್ಲಿ ಕರಗಿ
ಮಿರುಗುವ ವಿಭೂತಿ: ನಿರ್ಭಾವದಲಿ ನಡೆಯುವಂದ!
ಮನದೊಳಗೆ ಆಗೀಗ ಸದ್ದಿಲ್ಲದೆಯೇ ಮೂಡಿ
ಗೆದ್ದವರು: ಪಡೆದದ್ದಲ್ಲ ಹೇಗೊ ಕಾಡಿ-ಬೇಡಿ.

## ಸ್ನೇಹ ಕಾರ್ತೀಕ

ಮುಖವಾಡಗಳ ಅಟಮಟದ ನಟನೆಯ ನಡುವೆ
ದಿಟವ ದಿಟ್ಟೈಸಿ ಧೈರ್ಯದಲಿ ಮುಂದಿಟ್ಟ ಹೆಜ್ಜೆ-
ಬುಟ್ಟಿಗಟ್ಟಲೆ ಮಾತು: ಹೊರಿಸಿದವರಿಗೆ ಒಜ್ಜೆ.
ಶ್ರುತಿಗೆ ಸರಿಯಾದ ಕೃತಿ; ಏಕೆ ಉಪಕೃತಿ ಗೊಡವೆ?
ಕತ್ತಲೆಯ ಜೀರುಂಡೆ ಮೇಳಕುತ್ತರವಾಗಿ
ನಕ್ಷತ್ರಗಳ ಮುಗುಳು ನಗೆ, ಬಾನ ಗಂಭೀರ
ಬಗೆ: ಧ್ಯಾನ. ನಸುಕಿನಲಿ ನಿದ್ದೆತಿಳಿದೆದ್ದವರ
ಕಂಡರಳುವದು ಕೈ ಮುಗಿದ ಮೊಗ್ಗೆ ತಾನಾಗಿ.
ನೋವು ತುಂಬಿದ ನಾವೆ ನಡೆಸಿ ಕವಿತೆಯ ಹುಟ್ಟು
ಅಟ್ಟಹಾಸದ ದೂರ ತೆರೆಯಾಚೆ ಸೌಂದರ್ಯ
ಶೋಧ. ಚಿಂತನ ಕ್ಷಿತಿಜ:ಗುರಿ ನಿರಿಗೊಳಿಪ ಕಾರ್ಯ
ತತ್ಪರತೆ. ಸತ್ತ್ವವೆಲ್ಲಿದೆ ರಜ-ತಮವ ಬಿಟ್ಟು?
ನೂರು ಶರದೈಸಿರಿಗೆ ಏರಬೇಕಿದೆ ಜೀಕ-
ತೂಕ. ಅದಕೆ ಹಾರೈಕೆ; ಸ್ನೇಹಕಾರ್ತೀಕ.*

## 'ಸಿಂಪಿ'ನೊಳಗಿನ ಮುತ್ತು

ಜಾನಪದ ಶುದ್ಧ ಸಿಂಪಿನೊಳಿಂದ ಹೊರಬಿದ್ದ
ಜಾತಿ ಮುತ್ತಿನೊಲು ತಂಪಾಗಿ, ಮುಖದಲುಕ್ಕುವ
ಮುಗ್ಧ ಬಗೆ. ಮಾತೆತ್ತಿದರೆ ಹಳ್ಳಿ ಹೊಳೆಯಿಸುವ
ಒಳ್ಳೆ ಮಾಸ್ತರ ಶಿಸ್ತು. ಬದುಕಿನಲು ಮುಳುಗೆದ್ದ
ತಿಳಿವು; ತಳದಲ್ಲಿ ತಳತಳ ಹೊಳೆವ ಹರಳು ನುಡಿ.
ತೃಪ್ತಿ ತುಂಬಿಕೊಂಡೇ ಇರುವ, ನಂಬಿಕೊಂಡೇ
ನಡೆವ, ಆಧ್ಯಾತ್ಮ-ವ್ಯವಹಾರ ಬೆರೆತುಕೊಂಡೇ
ಬರುವ ಲಿಂಗಣ್ಣ: ಗುರು ಮಧುರಚೆನ್ನರ ಗರಡಿ-
ಯಾಳು. ಕೊರಳಲ್ಲಿಸದಾ ಅರವಿಂದ ಗ್ರಂಥ-
ಮಾಲೆ. ಹೊಸಗನ್ನಡದ ಹೊಸತಿಲ ದಾಟಿ ಗರತಿ-
ಹಾಡಿಗೆ ಮಲ್ಲಿಗೆ ದಂಡೆ ಮುಡಿಸಿ, ಈ ಸರಸತಿ
ಜೀವನದ ಸಂಗೀತವೆನಿಸಿ, ಎಲ್ಲರ ಪಂಥ
ತಣಿಸಿ, ನವಿಲನು ಕುಣಿಸಿ, ದಣಿವ ತೋರಗೊಡದವರು.
ಬಾಯಾರಿದವರಿಗೆ ಹಲಸಂಗಿ ಬೆಲ್ಲ-ನೀರು.

---

* ಶ್ರೀ ಜಿ.ಎಸ್. ಶಿವರುದ್ರಪ್ಪನವರಿಗೆ ಐವತ್ತರ ಅಭಿನಂದನ.

## ಗೌರೀಶರ ಗೌರವ

ಕಣ್ಣೆದುರು ರಸ-ಕಡಲು, ಶಾಸ್ತ್ರಕಾನನ ಬದಿಗೆ
ಅನುಭವ ಘಟ್ಟವೇರಿಳಿದು ಭಾವ ಸಂತುಷ್ಟ.
ವಾಸ್ತವದ ಕ್ಲೇಶ ಶ್ಲೇಷೆಯಲದ್ದಿ ಸಂಪುಷ್ಟ.
ಪುಟ್ಟ ಗೂಡಿನ ನೆಟ್ಟನೋಟ ಕ್ಷಿತಿಜದವರೆಗೆ.
ದೂರದೂರದಿ ಸಾಗಿ ಬರುವ ಹಡಗಿನ ಬೆಡಗು
ಸೆರೆ ಹಿಡಿದು, ರಂಪಣಿ ದೋಣಿ ಕೈ ಬಿಡದೆ-ಮೀನು
ಕೊಂಡು ಕೊನೆದಾಡಿ ಜನತೆಯ ನಾಡಿ ಹಿಡಿದವನು.
ಹತ್ತು ಕಡೆ ಕೈ ಚಾಚಿ, ಮಳಲದಂಡೆಯ ಬುರುಗು
ತೊರೆದು, ತೆರೆಮರೆಗಿಳಿದು ಮುತ್ತು-ಹವಳವ ಬಾಚಿ
ಬಯಲುಸೀಮೆಯ ಕೊರಳಿಗಿತ್ತೆ: ತುಂಬಿಸಿ ಕೊರತೆ.
ಕ್ಷೇತ್ರದೊಳಗಿದ್ದು ವಿಚಿಕಿತ್ಸೆ, ವೈಚಾರಿಕತೆ-
ನಿಷ್ಕಪಟ ಪಟ ಸೂತ್ರಧಾರಿ, ಸಮ ದಿಕ್ಸೂಚಿ.
ಬೆಟ್ಟದ ನೆಲ್ಲಿಗುಪ್ಪು ಕೊಟ್ಟೆ ನೀ ರುಚಿಕಟ್ಟು
ಸೌಹಾರ್ದ ಸಾಗರಕೆ ಎಲ್ಲಿದೆ ಎಲ್ಲೆಕಟ್ಟು?*

## ಖಗ್ರಾಸ ಗ್ರಹಣ

ಸೂರ್ಯನಿಗೆ ವಜ್ರಕಿರೀಟವ ತೊಡಿಸಿ, ತಕಪಕ
ಕುಣಿವ ಚಂದ್ರ. ಹಗಲು ಬೆಳದಿಂಗಳಿನ ಗುಂಗಿಗೆ
ಭೂಮಿಗನಿರೀಕ್ಷಿತ ಸರಳ ರೇಖೆಯ ಸುಖ-

ಎರಡೇ ನಿಮಿಷ. ನಿಂತ ಕಾಲಿನ ಮೇಲೆ ನೆರಳು-
ಬೆಳಕಿನ ತೆರೆಗಳೋಟ. ನಾಯಿಯ ನರಳು. ದಿಕ್ಕು
ತಪ್ಪಿದ ಹಕ್ಕಿ. ಏರಿಸಿದ ಜೀರುಂಡೆ ಕೊರಳು.

ಮತ್ತೆ ತೇಜಃಪುಂಜ ಚಿಮ್ಮಿ, ತಕ್ಷಣವೆ ಹೊರ
ಬಿದ್ದ ಸೂರ್ಯ: ಮುಗಿಸಿ ಶತಮಾನದ ಮಹಾಕಾರ್ಯ,
ಇಳಿದಿತ್ತು ಒಳಗೇ ಕುಸಿದವರ ಎದೆಯ ಭಾರ.

---

* ಶ್ರೀ ಗೌರೀಶ ಕಾಯ್ಕಿಣಿಯವರಿಗೆ ಅರುವತ್ತರ ಗೌರವ.

ರಾಹು-ಕೇತುಗಳಿಂದ ಮೋಕ್ಷ ದೊರೆಯುವವರೆಗೆ
ಮುಚ್ಚಿಬಿಟ್ಟರು ಕಣ್ಣು: ನಿಸರ್ಗದದ್ಭುತಕೆ.
ಶುಭಾಶುಭ ಗುಣಿಸಿ ಸಾಗಿದರು ಬಚ್ಚಲು ಮನೆಗೆ.

ಸ್ವಯಂಪ್ರಕಾಶಕ್ಕೆ ನೆರಳು ಬಿದ್ದಂತೆ ಭಾಸ.
ನಮ್ಮ ಉಪಗ್ರಹಗಳೆ ನಮ್ಮ ಕಣ್ಣಿಗೆ ಮೋಸ.

## ವಂದನ

ಮುಗಿಲಿನ ಜಗುಲಿಗೆ ಭೂಮಿಯನೆತ್ತುವ
ಸೂರ್ಯ-ಚಂದ್ರ ಸಮದೃಷ್ಟಿ ನಮೋ;
ಹಗಲಿರುಳಿಗೆ ನೊಗ ಹೂಡಿ ರೂಢಿ ಹದ-
ಗೊಳಿಸುವ ಬದುಕಿನ ಕೆಳೆಗೆ ನಮೋ.

ಕತ್ತಲೆ-ಮೂಡಿ ನಕ್ಷತ್ರ ಹೊಳೆವ ಬಾ-
ನೆತ್ತರ ಕರುಣೆಯ ಕಾಂತಿ ನಮೋ;
ತಂಗಾಳಿಗೆ ಸುಮ ಸೌರಭವರಳಿಸಿ
ಹೊರಳುವ ಬೆಳಗಿನ ಶಾಂತಿ ನಮೋ.

ಗುಡುಗು-ಮಿಂಚು-ಮಳೆ-ಗಾಳಿ ಓಲಗವ-
ಗೈವ ನಿರ್ಮಲಾಗಸವೆ ನಮೋ;
ಎಲ್ಲ ಅಲ್ಲ-ಕಲ್ಲೋಲದಲ್ಲು ಕೈ-
ಗೂಡಿ ಬಂದ ಸಂಬಂಧ ನಮೋ.

ಬಿಸಿಲು ಸೋಸಿ ಬೆಳುದಿಂಗಳೆಸೆವ
ಸರ್ವಾಂಗ ಸುಖದ ಸಂತೃಪ್ತಿ ನಮೋ;
ನವೋದಯದ ನವರಸದ ಜೀವ ನಸು-
ನಗುವ ಬಗೆಯ ಚಿತ್ಕಳೆಗೆ ನಮೋ.

## ಹಾಡು

ಮುಗಿಲ ಬಸಿರ ಬಯಲಿನಿಂದ
ಹಗಲಿರುಳಿನ ಕೊಯಿಲಿನಿಂದ
ಹೊಸ ಗಾಳಿಯ ಸುಯ್ಲಿನಿಂದ
ದಶ ದಿಸೆಗಳು ಮೊರೆದಿವೆ.

ಎಲೆಎಲೆಗಳ ನಲುಗಿನಲ್ಲಿ
ಬದುಕಿನ ಕೂರಲಗಿನಲ್ಲಿ
ಹೊಂಗಿರಣದ ಗಲಗಿನಲ್ಲಿ
ಸುಖ-ದುಃಖವ ಬರೆದಿವೆ.

ಒಳಬಾಳಿನ ತೆರೆಗಳಲ್ಲಿ
ಎದೆಯಾಳದ ಕರೆಗಳಲ್ಲಿ
ದುಡಿಮೆಯ ಹಿರಿ ಹೊರೆಗಳಲ್ಲಿ
ಸಂಕಲ್ಪದ ಹದವಿದೆ.

ಮನಮನಗಳ ಅರುಹಿನಲ್ಲಿ
ಮಾಂಗಲ್ಯದ ಕುರುಹಿನಲ್ಲಿ
ಕರುಣೆಯ ಕಂದೆರವಿನಲ್ಲಿ
ಜೀವದ ಸಂಮುದವಿದೆ.

## ಹೆಸರಾಯಿತು 'ಕರ್ನಾಟಕ'

ಹೆಸರಾಯಿತು ಕರ್ನಾಟಕ
ಉಸಿರಾಗಲಿ ಕನ್ನಡ;
ಹಸಿಗೋಡೆಯ ಹರಳಿನಂತೆ
ಹುಸಿಹೋಗದ ಕನ್ನಡ.
ಹೊಸೆದಹಾಗೆ ಹುರಿಗೊಳ್ಳುವ
ಗುರಿ ತಾಗುವ ಕನ್ನಡ;
ಕುರಿತೋದದ ಪರಿಣತಮತಿ-
ಅರಿತವರಿಗೆ ಹೊಂಗೊಡ.

ಪಡುಗಡಲಿನ ತೆರೆಗಳಂತೆ
ಹೆಡೆ ಬಿಚ್ಚುತ ಮೊರೆಯುವ
ಸಹ್ಯಾದ್ರಿಯ ಶಿಖರದಂತೆ
ಬಾನೆತ್ತರ ಕರೆಯುವ.

ಗುಡಿ-ಗೋಪುರ ಹೊಂಗಳಸಕೆ
ಚೆಂಬೆಳಕಿನ ಕನ್ನಡ;
ನಮ್ಮೆಲ್ಲರ ಮೈಮನಸಿನ
ಹೊಂಗನಸಿನ ಕನ್ನಡ.

ತ್ರಿಪದಿಯಿಂದ ಸಾಸಿರಪದಿ
ಸ್ವಚ್ಛಂದದ ಉಲ್ಲಸ,
ಭಾವಗೀತ, ಮಹಾಕಾವ್ಯ-
ವೀರ-ವಿನಯ ಸಮರಸ.

ಹಳ್ಳಿ-ಊರು, ನಗರ-ಜಿಲ್ಲೆ
ಮೊಗದ ಹೊಗರು ಕನ್ನಡಿ;
ಎಲ್ಲ ದಿಸೆಗು ಚೆಲ್ಲುವರಿದ
ಚೈತನ್ಯದ ದಾಂಗುಡಿ.

ಹೆಸರಾಯಿತು ಕರ್ನಾಟಕ
ಉಸಿರಾಗಲಿ ಕನ್ನಡ;
ಹಸಿ ಗೋಡೆಯ ಹರಳಿನಂತೆ
ಹುಸಿಹೋಗದ ಕನ್ನಡ.

## ಏಳಿ, ಬೆಳ್ಳಿ ಮೂಡಿದೆ

ನೂರು ಮನಸು, ನೂರು ಕನಸು
ಏಳಿ: ಬೆಳ್ಳಿ ಮೂಡಿದೆ-
ರಜತೋತ್ಸವ ರಥಕೆ ಮುಂದೆ
ಧ್ರುವ ಮಂಡಲ ಹರಡಿದೆ.

ಇದು ವಾಸ್ತವ, ಇದು ಕಲ್ಪನೆ
ಸದ್ದಿಲ್ಲದ ಸಾಧನೆ;
ಹೊಸ ಯುಗಾದಿ, ಹೊಸ ದಿಗಂತ
ಹೊಸ ಗುರಿಗಳ ಶೋಧನೆ.

ವಿಶ್ವದೆದೆಯ ತೆರೆದನುಭವ-
ಕನ್ನಡಕುಲ ಚಿಂತನೆ;
ಎದ್ದೇಳುವ ಜನಪದವೇ
ಸದ್ಭಾವಕೆ ವಂದನೆ.

ಅಸಂತೋಷ ಅಸಹನೆಗಳ
ತಿರುಗಣಿ ಮಡು ಆಚೆಗೆ;
ಸೌಹಾರ್ದದ, ಸೌಂದರ್ಯದ
ಒಲುಮೆಯ ದಡ ಈಚೆಗೆ.

ನಯ-ವಿನಯವೆ, ಸೌಜನ್ಯವೆ
ವಿದ್ಯೆಯ ತವರ್ಮನೆಯೆ-
ಬುದ್ಧಿಗೆ ಹೃದ್ಗತವು ಹೊಳೆಯೆ
ಉದ್ಧಾರವು ಸನಿಹವೆ.

ನೂರು ಮನಸ್ಸು, ನೂರು ಕನಸು
ಏಳಿ; ಬೆಳ್ಳಿಮೂಡಿದೆ;
ದಣಿವಿಲ್ಲದ ದುಡಿಮೆಗಾಗಿ
ಇಡಿ ಹಗಲೇ ಕಾದಿದೆ.*

## ಯುವಶಕ್ತಿ

ಯಾವ ಕಾಲಕೂ, ಯಾವ ದೇಶಕೂ
ಯುವಕ ಶಕ್ತಿ ಚಿಲುಮೆ;
ಇಳೆಗೆ ಇಳಿದು, ಆ ನಭಕೆ ಬೆಳೆದು, ಜಗ
ಕಾಸಿ ಬಡಿವ ಕುಲುಮೆ.

* ಕರ್ನಾಟಕ ವಿಶ್ವವಿದ್ಯಾಲಯದ ಬೆಳ್ಳಿಹಬ್ಬದ ಸಂದರ್ಭ.

ಮಾತಿನಂತೆ ಮನ, ಮಾಟದಲ್ಲಿ ಘನ
ಧ್ಯೇಯವೊಂದೆ ಪ್ರಾಯ;
ನ್ಯಾಯ-ನೀತಿ-ನೆಲೆ, ಪ್ರೀತಿ-ಸ್ನೇಹ-ಕಲೆ
ಮಾನವತೆಯ ಶ್ರೇಯ.

ಜಗದ ಹರವು, ಜೀವನದ ತೆರವು ತುಂ-
ತುಂಬಿ ಯುವಜನಾಂಗ
ತಲೆಮಾರಿಗೊಂದು ಹೊಸ ಅಲೆಯು ಬಂದು
ನಿರ್ಮಲವು ನಾಟ್ಯರಂಗ,

ಮಲೆತು ನಿಂತ ಕೊಳೆ ತೊಳೆದು ಹೊಚ್ಚಹೊಸ
ಬೆಳಕಿನತ್ತ ನಡಿಗೆ-
ಜನದ ಬದುಕಿನಲಿ ಬೆರೆತು ಬೇರು ಎಲೆ-
ಮಣ್ಣು-ಹೊನ್ನ ಕೊಡುಗೆ.

ಯಾವ ಕಾಲಕೂ ಯಾವ ದೇಶಕೂ
ಯುವಕ ಶಕ್ತಿ ಚಿಲುಮೆ
ಇಳೆಗೆ ಇಳಿದು ಆ ನಭಕೆ ಬೆಳೆದು, ಜಗ
ಕಾಸಿ ಬಡಿವ ಕುಲುಮೆ.

## ನಾಗರ ಪಂಚಮಿ

ಮಳೀ ಸುರಿದು ಹೋತೋ ಅಣ್ಣಾ
ಬೆಳೀ ತುಂಬಿ ಬಂತೊ ||

ದಾಸವಾಳ ನಂದಿಬಟ್ಲ
ಗುಲಾಬಾಕ್ಷಿ ಮಲ್ಲಿಗಿ ಜಾಜಿ
ಪಾರಿಜಾತ ಸಂಪಿಗೆ ಗೌರಿ
ದಾರಿ ತುಂಬ ಸುರದಾವಲ್ಲ ||೧||

ಭೂಮಿತಾಯಿ ಎತ್ತಿಕೊಂಡು
ಬೋಲ ಬಗರಿ ಆಡಿಸುತ್ತ

ಬಾಯಿ ತೆರೆದ ಹುತ್ತದೊಳಗೆ
ಜೀವದ್ಹಾಲು ಹೊಯ್ದಾಳಲ್ಲ ||೨||

ಹಸಿರು ಸೀರಿ, ಹೂವಿನ ಸೆರಗು
ತವರು ಮನೆಯ ನೆನೆಸಿ ಬಂದು
ಒಕ್ಕಲಾಗಿ ಅಕ್ಕರತೀಲೆ
ಚೋಕಾಲಿ ಆಡ್ಯಾರಲ್ಲ ||೩||

ನೋವು–ನಲಿವು ಹಿಂದುಃ-ಮುಂದು
ಪ್ರೀತಿಯೊಂದ ಜಪ್ಪಿಸಿಕೊಂಡು
ಹುರುಪಿನಿಂದ ಎಲ್ಲರ ಕೂಡ
ಜೀಕುವದೆ ಜೀವನವೆಂದು ||೪||

## ನಿನ್ನ ಕರುಣೆಗೆ

ನಿನ್ನ ಕರುಣೆಗೆ ನಾನು ಕೇಂದ್ರವಾಗಿ
ನಿಂದಿರುವೆ ಮೌನದಲಿ ತಲೆಯ ಬಾಗಿ.

ಮುಗಿಲಿಂದ ಹಗಲಿಂದ ಇರುಳಿಂದ ಬಂದು
ಮುಗಿಯದಾವುದೊ ಮಹಾದ್ಭುತವ ತಂದು
ಬದುಕು ಪೊರೆಪೊರೆ ಬಿಚ್ಚಿ ಹದಗೊಳಿಸಲೆಂದು
ಒಳಗು ಹೊರಗೂ ತುಂಬಿ ತುಳುಕಿರುವೆ ಇಂದು.

ಅಂಜುವೆನು, ಅಳುಕುವೆನು ಅಪ್ಪಿಷ್ಟಕೆಲ್ಲ
ಮಂಜು ಮುಗಿಬೀಳುವದು ಭೂಮಿ ಬಾನೆಲ್ಲ;
ಹಿಂಜುವವು ನೂರಾರು ನೇಸರನ ಕಿರಣ
ಜೇಡಬಲೆ ತುಂಬೆಲ್ಲ ಮುತ್ತಿನಾಭರಣ.

ಒಂದೊಂದೆ ಹೂವುಗಳ ಆಯುವದು ಹೇಗೆ ?
ಆ ಬಣ್ಣ, ಆ ನವುರು ಅದಕದರ ಸೋಗೆ.
ಸೃಷ್ಟಿಯಲಿ, ದೃಷ್ಟಿಯಲಿ ನಡೆದಿಹುದು ಪೂಜೆ
ಕಷ್ಟ-ಸುಖ-ಸಂಭ್ರಮದ ಸಂತೋಷದಾಚೆ.

## ಶರಣು ಅಮ್ಮ

ಮನೆಯೆ ಮಠವಾಗಿಹುದು-
ಹೊಸತಿಲೊಳಗೆ;
ಕರುಣೆ ಹಣ್ಣಾಗಿಹುದು
ನೋಟದೊಳಗೆ.

ಎಲ್ಲೊ ಕಂಡಂತಿಹುದು
ಈ ಹುಣ್ಣಿಮೆ;
ಯಾರು ಬರೆದಿರಬಹುದು
ಈ ಕಣ್ಣಿಮೆ?

ಮೇಲೆ ಕುಳಿತವರಲ್ಲ-
ನೆಲದ ಮಮತೆ;
ಜೀವ ಸಾಮೀಪ್ಯದಲಿ
ಭಾವ ಸಮತೆ.

ನೋಡಿದ್ದು, ನುಡಿದದ್ದು
ಒಂದೆ ಗಳಿಗೆ;
ಇಳಿದಿರುವೆ ಇಂಗಿರುವೆ
ನನ್ನ ಒಳಗೆ.

ನಾವು ಬಾಗುವ ಮೊದಲೆ
ಕೈ ಮುಗಿವಿರಿ.
ನಿಮ್ಮ ಹೆಸರೇ ಶರಣು-
ಅಮ್ಮ, ಗೌರಿ.

ಹರಸಿದಿರಿ ಮೌನದಲಿ
ಹಣ್ಣು-ಕಾಯಿ;
ಮರೆಯುವೆವೆ ಆ ನಿಮ್ಮ
ಕಣ್ಣು, ತಾಯಿ!*

---

* ಸಜ್ಜಲಗುಡ್ಡದ ಶರಣಮ್ಮನವರ ದರ್ಶನ.

## ಮಹಾಂತ ಭಿಕ್ಷೆ

ಚಿತ್ತ ಚಿತ್ತರಗಿಯಲಿ ಮೂಡಿತು
ಹತ್ತು ದಿಕ್ಕಿಗು ಚಾಚಿತು.
ಶ್ರೀ ವಿಜಯ ಮಹಂತೇಶ ಧ್ಯಾನದಿ
ಹೊಚ್ಚಹೊಸ ಬಗೆ ತೆರೆಯಿತು.

ಪದವಿ-ಪಲ್ಲಕ್ಕಿಗಳ ಮೆಲ್ಲಗೆ
ಬದಿಗೆ ಸರಿಸುತ ಮಾಗಿತು.
ಹೃದಯದಂತಃಕರಣ ಜೋಳಿಗೆ
ಜನದ ಹತ್ತಿರ ಸಾಗಿತು.

ಊರು ಊರಿಗು ನಡೆದೆ ನಡೆದರು-
ನೀತಿ-ನಿಚ್ಚಳ ನಡತೆಗೆ;
ಕೇರಿ ಕೇರಿಯ ಮನೆಯ ಬಾಗಿಲು
ತೆರೆದು ಕರೆದರು ಬೆಳಕಿಗೆ-

ದುಡ್ಡು ದುಗ್ಗಾಣಿಯನು ಬೇಡೆನು
ನಿಮ್ಮ ನೆಮ್ಮದಿ ಬಾಳಿಗೆ-
ನೀಡಿರಯ್ಯಾ ದುಷ್ಟ ಚಟಗಳ
ತುಂಬಿಕೊಳುವೆನು ಜೋಳಿಗೆ.

ಇದ್ದು ಬಿದ್ದುದ ಕಳೆದುಕೊಂಡಿರಿ
ಬಡತನದಿ ಬೆಂಡಾದಿರಿ;
ಯಾವ ಮೊಗದಲು ಗೆಲವು ಕಾಣದು-
ಸಾವ ಮೊದಲೇ ಸತ್ತಿರಿ.

ಬಾಯ ಮಾತೇ ಕಾಯಕವು? ನಿಜ
ದುಡಿಮೆಗೆಂದೇ ದೇಹವು;
ಮನಸಿನಲ್ಲಿಯೆ ಮಹಾದೇವನು
ಗುಡಿಯೊಳೇನಿದೆ? ಗಂಟೆಯು.

ಗುಡಿಸಿರೆಲ್ಲಾ ಮನದ ಮೂಲೆಯ-
ಹಿಡಿಸಬಹುದೀ ಜೋಳಿಗೆ;
ಕಳಿಸಬೇಡಿರಿ ಬರಿಯ ಕೈ, ಹಳ-
ಹಳಿಸಬೇಡಿರಿ ನಾಳೆಗೆ.

ಎಲ್ಲ ವ್ಯಸನಗಳಿಲ್ಲೆ ಹಾಕಿರಿ
ಸಲ್ಲಲಿಂದೇ ಸ್ವಾಮಿಗೆ;
ಬಿಟ್ಟೆನೆಂದರು ಬಿಡದ ಮಾಯೆಯ
ಕಟ್ಟಿಹಾಕುವ ನೇಮಿಗೆ.

ದಾರಿಯಿನ್ನೂ ದೂರವಿದೆ, ಆ
ಸೂರ್ಯ ಚಂದ್ರರು ಸುತ್ತಲಿ;
ಅಚ್ಚಬದುಕಿನ ಹಣತೆ ಹೊತ್ತಿಸಿ
ನಿಚ್ಚ ಬಾಳನು ಬೆಳಗಲಿ.*

## ನಾನು ಮತ್ತು ಇತರರು

ತಣ್ಣಗಿನ ಈ ಶೀತಲ ಜಗತ್ತಿನಲಿ
ಇರುತ್ತಾರೆ ಕೆಲವರು; ನನ್ನಂಥ ಉನ್ಮತ್ತರು:
ಬೆಂಕಿಯನು ಕರಗಿಸುತ, ತಮ್ಮೆಲುವುಗಳ ನೆಣವ ಹೆಪ್ಪುಗಟ್ಟಿಸುತ
ಉರಿಗಿಚ್ಚಿನಿಂದ ನೀರ ಹದಗೊಳಿಸುತ್ತ
ಬಯಕೆಗಳ ಬೆನ್ನ ಕಪ್ಪು ಕತ್ತಲೆಯ ಬೆಳಗಿಸುತ್ತ,
ಬಳಿಯಲ್ಲೆ ಸುಳಿಯುತ್ತಾಳೆ ಹಾಲುಗಲ್ಲ-ಹರಯದ ಚೆಲುವೆ
ಬಯಕೆಗಳನುದ್ದೀಪಿಸುತ್ತ.

ಶಬ್ದಗಳ ಹಾಳು ಸುರಿಯುವ ಮರಳುಗಾಡಿನಲಿ
ನುಡಿಗೆ ಅರ್ಥ ತುಂಬುತ ಅದಕೆ ನೀಡುವಳು ನಾಲಗೆಯ
ಕಲ್ಲುಸಕ್ಕರೆ ಸವಿಯ ಮಿಲನ-ರುಚಿ ತೋರಿಸುತ
ಸೂಕ್ಷ್ಮಾನುಭವಗಳನು ಹೃದಯದಲಿ ಸೃಷ್ಟಿಸುತ
ಜೀವನದ ಕಟುತೆಯನು ಮಧುರಗೊಳಿಸಿ
-ಹೌದು ಕವಿಯಾಗಿಸಿ.

ನಿತ್ರಾಣಗೊಂಡ ಭೋಗಲಂಪಟ ಗಾಳಿ
ಪರ್ವತಶಿಖರಗಳ ಮೇಲ್ಮುಸುಕ ತೇಲಿಸಿಕೊಂಡು ಸಾಗಿ
ಕಾರ್ಮೋಡಗಳ ಮುಟಿಗೆಯಲಿ ಉಂಡೆ ಮಾಡಿ
ಆನೆಗಳ ವಿಹ್ವಲಗೊಳಿಸಿ, ಮದವೇರಿಸಿ:

---

* ಇಳಕಲ್ಲಿನ ಶ್ರೀ ಮಹಾಂತಸ್ವಾಮಿಗಳು ಕೈಕೊಂಡಿರುವ ಜನತೆಯ ದುಷ್ಟ ಚಟಗಳ ನಿವಾರಣೆಯ ಜೋಳಿಗೆಯ ಕಾಯಕ.

ಸ್ವರ್ಗದಲಿ ಮಧು ತುಂಬಿದ ಕೊಪ್ಪರಿಗೆ ಬಾಯಿ
ತಟ್ಟನೆ ತೆರೆದು ಅಮೃತ ಧಾರೆ;
ದೇಹದಲಿ ಹೊರಸೂಸುವದು ಸುಗಂಧ
ಆತ್ಮವನಲಂಕರಿಸಿ ತೆಗೆದು ನಿರ್ಬಂಧ.

ಪಾತಾಳ ಪುಷ್ಪಗಳ ಅಂದಚಂದಗಳು
ಮಣ್ಣಿಂದ ಹೊಮ್ಮಿ ತಲೆಯನೆತ್ತುವವು.
ಜಡಗೊಂಡ ಶೂನ್ಯ ಗೂಡುಗಳಲ್ಲಿ
ಸ್ಪಂದನ, ಮೆಲ್ಲ ಮಿಡಿಯುವದು ಮಧುರಸ್ವನ.
ಯಾವುದೋ ಮಾಯೆಯಲಿ ಬೀಸಿದ ಗಾಳಿ.
ಸೆಡೆತ ಎದೆಗಳಲಿ ಸತ್ತು ಬಿದ್ದಿರುವ ಬಯಕೆಗಳ
ಉದ್ದೀಪಿಸುವದು; ಆರಿಹೋದ ಬೆಂಕಿಯಲಿ
ಜ್ವಾಲೆಗಳನೆಬ್ಬಿಸುವದು.

ಎಲ್ಲ ದಾರಿಗಳ ಮೇಲೆ
ಗೂಢಗಳ ಸೂರೆಗೊಳಿಸುತ್ತ
ಸವಾರಿಗೈಯುವರು ರೂಪಿಲ್ಲದನಂತ

ಈ ಹೃದಯಗಳು
        ಆತ್ಮಗಳು
ಈ ಗುಲಾಬಿ ಹೂಗಳು
        ಕೋಗಿಲೆಗಳು

ತಣ್ಣಗಿನ ಈ ಶೀತಲ ಜಗತ್ತಿನಲಿ
ದಾರಿನೋಡುವವು ಏಕಚಿತ್ತದಲಿ ಯಾರದೊ
ಮಣ್ಣದೇಹವನು ಬತ್ತಲೆಗೊಳಿಸಿ
ಆತ್ಮದಲಿ ಬೆಳಕು ಸೂಸಿ?

ಗದ್ಯವನು ನೀರಸಗೊಳಿಸಿ
ಕಾವ್ಯದ ರಂಗು ಹಿಡಿವ
ಈ ಜಗದ ಆಕಸ್ಮಿಕದ ವೈಭವವಿದೇನು?
ಹೇಗೆ ಹೊರಹೊಮ್ಮುವದು ಮೃದ್ಗಂಧ?
ಗಾಳಿಗಳು ಅದನೆಂತು ಹೊತ್ತು ಸಾಗುವವು?

ನೀನಿರುವೆ; ಆದರೆ ನೀನು ಯಾರು?
ನೀನಿದ್ದೆ ಎಲ್ಲಿ? ಎಲ್ಲಿಂದ ಬಂದೆ?
ದಯವಿಟ್ಟು ತುಟಿ ಬಿಚ್ಚಿ ಮಾತನಾಡು.
ನೀರಿನ ಮೇಲೆ ನಡೆದ ಯೇಸುವನು
ಶಿಲುಬೆಗೇರಿಸಿದುದೇಕೆ?
ಜನ್ಮವೆತ್ತಿದಾಗಲೆ ನಗೆಯ ಸೂಸಿದ
ಝುರತುಷ್ಟ್ರನ ಕತ್ತುಹಿಸುಕಿ ನಿಸ್ಸತ್ವಗೊಳಿಸಿದುದೇಕೆ?

ನಿನ್ನ ಬೆಂಕಿಯಮೇಲೆ ನಾನು ನೀರೆರೆದರೂ
ನನ್ನ ನೀರೇಕೆ ಬೂದಿಯಾಯಿತು, ಹೇಳು.
ಮನೆಯಿಂದ ಮನೆಗೆ ಬಾಗಿಲವ ಬಡಿಯುವೆನು
ಕೈಲಿ ಭಿಕ್ಷಾ ಪಾತ್ರೆ ಹಿಡಿದು; ಇದರರ್ಥವನು ನೀಡಿರೆಂದು.
ಉತ್ತರ ಕೊಡುವ ಬಾನದೇವತೆ ಮಾತ್ರ
ತನ್ನ ಬಳ್ಳಿಮಾಡದಲಿ ಇನ್ನೂ ಮುಸುಕಿನೊಳಗಿಹಳು,
ನನ್ನಂಥ ಉನ್ಮತ್ತ ಜನ ಉದ್ರೇಕದಲಿ
ಯಾತನೆ ಪಡುತ್ತಲೇ ಸಾಗುತಿಹೆವು.

ಮೂಲ ಕಾಶ್ಮೀರಿ:ಅಮೀನ್ ಕಾಮಿಲ್

## ಆಕಾಶ

ಆಕಾಶ ಅಂದರೆ ಏನು?
ಏನೂ ಒಳಗೊಳ್ಳದ ಶೂನ್ಯವಲ್ಲ; ಅದು
ಮಾನವನ ಆಶೆ ಆಕಾಂಕ್ಷೆಗಳ ವಾಸಸ್ಥಳ.

ಮಾನವ? ಅವನಲ್ಲ ಇನ್ನು
ಪ್ರತ್ಯೇಕಗೊಂಡ ಏಕಾಕಿ.
ಆಗಸವನೆಲ್ಲ ಅಳೆದು, ಎಲ್ಲೆಗಳ
ಗುರುತು ಹಾಕಿದ್ದಾನೆ.
ಸಾರಿದ್ದಾನೆ ಮಾನವ ಕುಲಕೆ:
"ಸಂಗಾತಿಗಳೆ,
ಅಂತರಿಕ್ಷ ಬಣಬಣಗುಡುವ ಬಯಲಲ್ಲ-
ಸೂಕ್ಷ್ಮಗ್ರಹಣ ತ್ರಾಣ ಲೋಕ.
ಓಜಸ್ವಿ ಪಯಣಿಗನ ಗಾಳಿಸಂಚಾರ.

ಅನಾದಿ, ಅನಂತ ವಿಸ್ತಾರದಾವರಣ.
ಆದಮ್ ಮತ್ತು ಈವ್: ಸೃಷ್ಟಿಯ ಮೊದಲ ಗಂಡು-ಹೆಣ್ಣು
ವಿಪುಲ ಜೀವನವ ಸೃಷ್ಟಿಸುತ ನಿರಂತರ ಬದುಕಿ
ತುಷ್ಟಿ ಪಡೆಯುತ್ತಿರುವ ತಾಣ.
ಮಾನವನ ದಿವ್ಯೋನ್ಮಾದ
ಹುಚ್ಚಲ್ಲ ಪೂರ್ತಿ-
ಅವ್ಯವಸ್ಥಾ ಸ್ಥಿತಿಯ ಅವಕಾಶಕೆ
ಅರ್ಥವತ್ತತೆಯ ತಂದಿಹನು.
ಎಡೆಬಿಡದ ಅವನ ಪರಿಶೋಧನೆಗೆ
ನಭೋಮಂಡಲವು ತನ್ನೆದೆಯ ತೆರೆದದ್ದು
ನಿರ್ನಿಮಿತ್ತವಲ್ಲ.

ಅಲ್ಲಿ, ಇಲ್ಲಿ, ಎಲ್ಲೆಡೆಗೂ ಚೆಲ್ಲಾಪಿಲ್ಲಿ.
ಒಂದು ಗೊಂದಲ ಮತ್ತೊಂದರಿಂದ ಸ್ಥಾನಪಲ್ಲಟಗೊಳಲು
ಈ ಕೋಲಾಹಲವ ಲೀಲೆಯಲಿ ಬಿಗಿದಪ್ಪಿ
ಪೂರ್ವದರ್ಥಕ್ರಮವನದಕೆ ಮತ್ತೆ ನೀಡಿದರು
ನೆಲದಣುಗರು.

ಭೂಮಿಯಾಳದ ಗಾಢ ಗೂಢಗಳ ಹೊಕ್ಕವರು
ವೀರ್ಯವತ್ತಾದ, ಪುನಶ್ಚೇತನಗೊಂಡ, ಪ್ರಚಂಡ ರಭಸದ
ಮೇಲೋಟಕ್ಕೆ ಅಟ್ಟಿದರು
ಕ್ಷೀಣಗೊಂಡಾಶೆಗಳ, ಅಸ್ಥಿಪಂಜರಗಳ.

ಅಸ್ಥಿಪಂಜರಗಳಿನ್ನು ನಿರ್ವೀರ್ಯವಲ್ಲ;
ಪುನರುಜ್ಜೀವಿತ ಮಾನವರ
ನವಮಾನವರ ಹೆತ್ತ ಕೊಡುಗೆ-
ಇವರು
ಪ್ರಾಚೀನ ಆರ್ಯಭಟನಂಥ ಜ್ಯೋತಿಷ್ಕರು.
ಭೂತಾಯ ಮೊಲೆಯುಂಡ ಮಹಿಮಾ ಪುರುಷರು.
ಯುಗಯುಗದ ಹಿಂದೆ ನುಡಿದ ಯಾವುದೊ ಘೋಷ
ಅಸ್ಪಷ್ಟವಾದರೂ ನಿಸ್ಸಂದಿಗ್ಧ:
ಬಹುಶಃ ಇದೇ ಅವರ ಮೊರೆ:
'ಬಾಂಧವರೆ ಏಳಿ
ಮಲಗದಿರಿ.

ಆಕಾಶವನ್ನಳೆಯಿರಿ,
ಅಲ್ಲಿಂಟು ಮಾನವತುಳಿದ ದಾರಿ'
ಮನುಷ್ಯನ ಮಕ್ಕಳೀಗ ಸಾರಿ ಹೇಳುತ್ತಾರೆ ದೃಢವಾಗಿ:
"ದೇವಾ, ಅನಂತ ಆಕಾಶವನ್ನೆ ನಾವು ಸೂರೆಗೊಂಡಿದ್ದೇವೆ"
ಆದಮ್‌ನಿಗೆ ಮತ್ತೊಮ್ಮೆ ಕಿರೀಟವಿಟ್ಟದ್ದಾಯ್ತು.
ಈಶ್ವರನು ಮೆಲುದನಿಯಲ್ಲಿ ನುಡಿದ:
"ಸುಬಹಾನ್ ಆಲ್ ಅಜೀ ಆಸರಾ ಬಿ ಅಬುರಿಹೀ."
ಆಕಾಶದಾಚೆಯ ವಿಶಾಲ ಸುದೀರ್ಘ ಪಯಣದಿಂದ
ಮಾನವನನ್ನು ಮರಳಿ ಮುಟ್ಟಿಸಿದ್ದಾನೆ
ಅವನ ನೆಲೆಗೆ.

ಮೂಲ ಕಾಶ್ಮೀರಿ: ಅಬ್ದುರ್ ರೆಹಮಾನ್ ಆಜಾದ್

## ಆತ್ಮ-ಉಪದೇಶ

ಯಾವುದೋ ಅಂಕಿಯ ಮೇಲೆ ನಿಂತುಬಿಟ್ಟ
ತುಕ್ಕುಹಿಡಿದ ಗಡಿಯಾರದಂತಾಗಿದೆ
ನಮ್ಮ ಚೇತನ.
ಎಂದೋ ಒಂದು ಘಟನೆ ನಮ್ಮನಲುಗಾಡಿಸಿದಾಗ
ಕೂಡಲೆ ತುಸು ಸರಿದಾಡತೊಡಗುತ್ತೇವೆ.
ಕೆಲಹೊತ್ತು 'ಟಿಕ್' 'ಟಿಕ್' ಎಂದು-
ಮತ್ತೆ, ಮತ್ತಾವುದೋ ಅಂಕಿಯ ಮೆಲೆ
ಹಾಗೆಯೇ ನಿಂತು ಬಿಡುತ್ತೇವೆ.

ಈ ಅವಧಿಯಲ್ಲಿ
ಜೇಡಬಲೆ ಕಟ್ಟಿದಂತೆ, ಜಂಗು ಹಿಡಿದಂತೆ
ಅವುಗಳ ಇರುವಿಕೆಯ ಅರಿವೇ ಇಲ್ಲದೆ
ವಿಚಿತ್ರ ಬಯಕೆಗಳನ್ನು, ಭಾವನೆ ಕಲ್ಪನೆಗಳನ್ನು
ನಮ್ಮ ಮನದೊಳಗೆ ಬೆಳೆಸುತ್ತೇವೆ.

ತನ್ನ ಮನಸ್ಸಿನ ಆಳದಲ್ಲಿ, ಮನುಷ್ಯ
ಇಣುಕಿ ನೋಡಲೇ ಬೇಕು.
ತನ್ನ ಆತ್ಮದ ಹೊಸ್ತಿಲ ಬಳಿ
ಪಹರೆ ಮಾಡಲೇ ಬೇಕು.

ಇಲ್ಲವಾದರೆ ಆತ್ಮಕ್ಕೆ ಒಂದೊಂದಾಗಿ ಕಲೆ
ಬೀಳತೊಡಗುತ್ತವೆ-
ಮೊದಮೊದಲು ಚಿಕ್ಕವಾಗಿ, ಸೌಮ್ಯವಾಗಿ,
ಬರಬರುತ್ತ ದೊಡ್ಡವಾಗಿ, ಕಪ್ಪಾಗಿ,
ಆತ್ಮದ ತಂತಿಗಳು ಆ ಕ್ಷಣ ಕಂಪಿಸಿ
ಆಮೇಲೆ ಅವುಗಳನ್ನು ಸಹಿಸಿಕೊಂಡು ಬಿಡುತ್ತವೆ.

ಹೀಗೆ, ಮೆಲ್ಲಮೆಲ್ಲನೆ
ನಿಮ್ಮ ಆತ್ಮವನ್ನು ಬೇರಾವುದೋ ಒಂದು ಪ್ರವೇಶಿಸಿ
ವಶಪಡಿಸಿಕೊಳ್ಳುತ್ತದೆ.
ನಿಮ್ಮ ದೃಷ್ಟಿ ಮಾಲಿನ್ಯವೋ, ಅಥವಾ
ಕಣ್ಣಿನಲ್ಲಿಯೇ ದೋಷವೋ
ನಿಮ್ಮ ದೃಷ್ಟಿ ಮಾಲಿನ್ಯವೋ, ಅಥವಾ
ಕಣ್ಣಿನಲ್ಲಿಯೇ ದೋಷವೋ
ನಿಮಗೆ ಹೊಳೆಯದೆ ಹೋಗುತ್ತದೆ.

ಈಗಲ್ಲದಿದ್ದರೂ
ಕೆಲದಿನಗಳ ಮೇಲೆ, ಮನದ ಅನೇಕ
ಕಾಳರಾತ್ರಿಗಳಲ್ಲಿ ತೊಳಲಾಡಿ,
ತಪ್ಪು-ಒಪ್ಪುಗಳ ಇಕ್ಕಟ್ಟಿನ ಶಿಲುಬೆಯಲ್ಲಿ
ನಿರಂತರನುರಿಗೊಂಡ ಮೇಲಾದರೂ
ದೃಷ್ಟಿಯಲಿ ದೋಷವಿದ್ದುದರೆಡೆಗೆ
ಯಾರಾದರೂ ಬೆರಳೆತ್ತಿ ತೋರಿಸಲೇಬೇಕು;
ಸಣ್ಣಕಲೆಯೇ ಇದ್ದರೂ ದೃಷ್ಟಿಯಲಿ
ತೀವ್ರ ಪ್ರತಿಕ್ರಿಯೆಯನವರು ತೋರಿಸಲೇಬೇಕು.

ಇಲ್ಲವಾದರೆ
ಆತ್ಮದಲಿ ಏನೇನೋ ಗದ್ದಲ, ಗಲಿಬಿಲಿ, ಗೌಜು.
ಯಾವುದನ್ನೂ ಸರಿಯಾಗಿ ಹೇಳಲೂ ಕೇಳಲೂ
ಆಗುವುದೇ ಇಲ್ಲ.
'ಎಲ್ಲ ಸರಿಯಾಗಿದೆ', 'ಎಲ್ಲ ನಡೆಯುತ್ತಿದೆ' ಎಂಬ ಸಿದ್ಧಾಂತ
ಮನಸ್ಸಿನ ಆಳದಲ್ಲಿ ಬೇರೂರಿ ಬಿಡುತ್ತದೆ.

ನಿಮ್ಮ ಮಗುವಿಗೆ ಆಟಿಕೆ, ಸಿಹಿತಿಂಡಿ, ಶಾಲೆಯ ಸಮವಸ್ತ್ರ
ಕೊಡಬೇಡಿರೆಂದು ನಾನು ಹೇಳುವದಿಲ್ಲ;
ಶುಭ್ರವಾದ ಅಂಗಿ, ನೀಲಿ ಕಂಠವಸ್ತ್ರ.

ಬ್ಯಾಂಕಿನಲ್ಲಿ ಹಣ-ಅವನಿಗೆ ಬೇಡವೆಂದಲ್ಲ.
ಆದರೆ, ಅವನ ಆತ್ಮ ಸಹಜವಾಗಿ ಉಸಿರಾಡುವಂತೆ
ಶುದ್ಧ ವಾತಾವರಣವನ್ನು ಅವನಿಗೆ ಆಸ್ತಿಯಾಗಿ ಬಿಡಿ.

ಬಾಳಿನ ಒಳಿತಿನಲ್ಲಿ ತೀವ್ರಶ್ರದ್ಧೆ ಅವನಿಗೆ ಬೇಕಲ್ಲದೆ
ದೊಡ್ಡ ದೊಡ್ಡ ಮಹಲು-ಮಂದಿರಗಳಲ್ಲ,
ನಿಮ್ಮ ಮಗುವಿಗೆ ಬೇಕಾದದ್ದು
ನಿಸ್ತೇಜವಾದ ನಿಮ್ಮ ದೀರ್ಘಾಯುಷ್ಯವಲ್ಲ-
ನಿಮ್ಮ ಉಜ್ವಲವಾದ ಚರಿತ್ರೆ.

ಸದ್ಯದ ನಮ್ಮ ಚರಿತ್ರೆಯೋ-
ಯಾವುದೋ ಅಂಕಿಯ ಮೇಲೆ ನಿಂತುಬಿಟ್ಟ
ತುಕ್ಕು ಹಿಡಿದ ಗಡಿಯಾರದಂತಾಗಿದೆ
ನಮ್ಮ ಚೇತನ.
ಎಂದೋ ಒಂದು ಘಟನೆ ನಮ್ಮನ್ನು ಅಲುಗಾಡಿಸಿದಾಗ
ಕೂಡಲೆ ಸರಿದಾಡಲು ತೊಡಗುತ್ತೇವೆ.
ಕೆಲಹೊತ್ತು 'ಟಿಕ್' 'ಟಿಕ್' ಎಂದು
ಮತ್ತಾವುದೋ ಅಂಕಿಯ ಮೇಲೆ ಹಾಗೆಯೇ
ನಿಂತುಬಿಡುತ್ತೇವೆ.

ಮೂಲ ಪಂಜಾಬಿ : ಸುರಜಿತ್ ಪತಾರ್

## ನೀಲ ಪಕ್ಷಿ

ನಾನು ದೇವನ ಪಕ್ಷಿ, ಅವನ ಬಾನೀಜುವೆನು
ದಿವ್ಯ ಉನ್ನತ ಶುಭ್ರ ನೀಲದೊಳಗೆ
ನಿಜದ ಇನಿದಾದುದರ ದನಿ ಹಿಡಿದು ಹಾಡುವೆನು
ದೇವನಿಗೆ ದೇವನಂತಹರ ಕಿವಿಗೆ.

ಜ್ವಾಲೆಯಂತೇರುವೆನು ಮರ್ತ್ಯದಾಲಯದಿಂದ
ಕೊರಗು–ಮರುಗುಗಳಾಚೆ ಆಕಾಶಕೆ;
ನರಳುತಿಹ ಅವನ ಹುಟ್ಟಿದ ನೆಲಕೆ ಚೆಲ್ಲುವೆನು
ತುಡಿವ ಭಾವದ ಬೆಂಕಿ-ಬೀಜಗಳನು.

ಕಾಲದೇಶವ ಮೀರಿ ರೆಕ್ಕೆಗೆದರುವೆ ಮೇಲೆ
ಬಾಡಿ ಕಳೆಗುಂದದಿಹ ಬೆಳಕಿನೆಡೆಗೆ,
ಶಾಶ್ವತದ ಮುಖದ ಸುಖದಾನಂದವನು ತರುವೆ
ಆತ್ಮದವಲೋಕನದನುಗ್ರಹ ಬಗೆ.

ನನ್ನ ಮಾಣಿಕದಕ್ಷಿಯಿಂದ ಲೋಕವನಳೆವೆ
ಇಳಿದಿರುವೆ ಜ್ಞಾನವೃಕ್ಷದ ಕೊಂಬೆಗೆ:
ಸಗ್ಗದೆಲ್ಲಾ ಹೂಗಳಿಲ್ಲಿ ಕಿಕ್ಕಿರಿದಿಹವು.
ಅನಂತತೆಯ ಝರಿ ತೊರೆಯ ಬದಿಗೆ.

ಜ್ವಲಿಸುವೆನ್ನೆದೆಯಿಂದಲೇನು ಮರೆಮಾಚಿಲ್ಲ
ತೀರವಿಲ್ಲದ ಚಿತ್ತವಿಹುದು ಶಾಂತ;
ಹರ್ಷಾತಿರೇಕದನುಭಾವ ಕಲೆಯೀ ಹಾಡು
ಹಾರುವಿಕೆ-ಗುರಿ ಅಮೃತ ಸಂಕಲ್ಪವು.

ಮೂಲ : ಶ್ರೀ-ಅರವಿಂದ 'The Bule Bird'



# ಕಾರ್ತಿಕದ ಮೋಡ

೧೯೮೦-೧೯೮೬

## ಮಳಲು ಹಾಡುತ್ತದೆ

ರಶಿಯದ ಕಾರಕುಮ್ ಮರುಭೂಮಿಯಲ್ಲಿ
ಮಳಲು ಹಾಡುತ್ತದೆ-
ಹಾಗೆಂದು ಮೊನ್ನೆ ಪತ್ರಿಕೆಯಲ್ಲಿ ಸುದ್ದಿ.
ಬಿರುಗಾಳಿ ತರಂಗಗಳ ತಂತಿ ಮೀಟುತ್ತ
ಹಾಡಿದಂತೆ, ಗರ್ಜಿಸಿದಂತೆ
ಕೆಲವೊಮ್ಮೆ ರೋದಿಸಿದಂತೆ-ಕೇಳುತ್ತದಂತೆ.

ಶತಮಾನಗಳಿಂದ ಸುಡುವ, ತಣ್ಣಗೆ ಕೊರೆವ
ಮರುಭೂಮಿಯ ರಹಸ್ಯಗಳ ದಿಕ್ಕು ಹಿಡಿದು
ಹೊರಡುವದು ಕಷ್ಟ.
ಒಂಟೆಯ ಮೇಲೆ ಒಂಟಿಯಾಗಿ, ಹಿಂದಕ್ಕೂ
ಮುಂದಕ್ಕೂ ತೂಗುತ್ತಾ ಸಾಗಿದಾಗ
ಎಲ್ಲೋ ದೂರದಲ್ಲಿ
ಓಯಾಸಿಸ್ ಕಂಡರೂ ಕಾಣಬಹುದು.
(ಇಲ್ಲವಾದರೆ ಒಂಟೆಯ ಬೆನ್ನನ್ನೇ ಬಗಿದು
ನೀರು ಕುಡಿಯಬಹುದು.)

ಸಾಧುವಲ್ಲದ ಈ ಪ್ರಾಣಿಯನ್ನು ಸಾಕಬಹುದು.
ತಾಳ್ಮೆಯಿದ್ದರೂ ಹಟಮಾರಿ, ಕಾಡಾದರೂ ವಿಧೇಯ.
ಮೊಳಕಾಲೂರಿಸಿ ಹಿಂಬದಿಯಿಂದ ಹತ್ತುವಾಗ ಸವಾರ-
ರೇಗಿಸದೆಯೂ ಮೈಮೇಲೆ ಏರಿ ಬರಬಹುದು.
ಹಿಂದೂ ಮುಂದೂ ಕೂಡಿಯೆ ಒದೆಯಬಹುದು.
ಸಮೀಪ ಸಿಕ್ಕುದನು ಹಿಡಿದು ಕಚ್ಚಬಹುದು.
ಒಮ್ಮೆ ಹತ್ತಿಸಿಕೊಂಡು ಹೊರಟಿತೊ-
ಕಣ್ಣುಗಳನರೆಮುಚ್ಚಿ, ತನ್ಮಯತೆಯಲಿ
ಸೂರ್ಯ, ಚಂದ್ರ, ನಕ್ಷತ್ರಗಳ ಕೆಳಗೆ
ಮರುಭೂಮಿಯ ಹಡಗು ಈಸುವದು ಒಂದೇ ಗತಿಗೆ.

ಮಳಲು ಹಾಡುತ್ತದೆಂದ ಮೇಲೆ-
ಮಾನವ ಸಹಜ ಭಾವನೆಯ ಬಿಮ್ಮನೆ ಬಿಗಿದುಕೊಂಡಿರುವ
ಮರುಳುಗಾಡಿನ ಆ ಸುತ್ತು ನಾಡಿನಲ್ಲಿ
ಹೇಳಲಾಗದೆ ಹುಗಿದ ಭಾವಗಳು
ಈಗ ಹೊರಹೊಮ್ಮಬಹುದು.
ಯಂತ್ರಗಳ ಕೈಗೆ ಸಿಗದ, ಒಂದಿಷ್ಟು ನಗೆಮೊಗದ
ಕನಸುಗಳ ಕಾರಂಜಿ ಚಿಮ್ಮಬಹುದು.

ಆದರೆ, ಮಳಲಿನ ಈ ವರ್ತನೆ
ಭೂಕಂಪಕ್ಕೆ ಮುನ್ಸೂಚನೆ ಎಂದು ವಿಜ್ಞಾನಿಗಳ ಶಂಕೆ,
ಆದರೂ ಏರುತ್ತಲೆ ಇದೆ
ಅಣ್ವಸ್ತ್ರಗಳ ಸಂಖ್ಯೆ

## ಹಲ್ಲಿಗಳ ಸಹವಾಸ

ಗೋಡೆಯ ಮೇಲೆ ರಾಜಾರೋಷ ಓಡಾಡುವ
ಈ ಹಲ್ಲಿಗಳಿಗೆ
ಎಲ್ಲೂ, ಯಾರ ಭಯವೂ ಇಲ್ಲವೆ?
ಆಯ ತಪ್ಪಿ, ಎಂದೋ ಒಮ್ಮೆ ಲೊಟ್ ಎಂದು
ಕೆಳಗೆ ಬಿದ್ದಾಗಲೂ
ಕದ, ಕಿಡಕಿ, ಕಪಾಟುಗಳ ಹಿಂದೆ
ನಾಗಾಲೋಟದಿಂದ ಮರೆಯಾಗಿ ಬಿಡುತ್ತವೆ.

ಆಮೇಲೆ
ಗೊತ್ತಾಗದಂತೆ ಮತ್ತೆ ಸ್ವಸ್ಥಾನಕ್ಕೆ ಏರುತ್ತವೆ.

ಗೋಡೆಯ ಮೇಲೆ ಬರೆದಂತೆ, ಹಾಡೇ ಹಗಲು
ಬೇಟೆಯಾಡುತ್ತವೆ;
ದೂರದಿಂದಲೇ ನೆದರಿಟ್ಟು, ಮೆಲ್ಲಗೆ ಸರಿಯುತ್ತ
ಬಾಲವನ್ನು ಅತ್ತಿತ್ತ ಒಡಮುರಿದು, ಅಂತರದಲ್ಲಿ
ಆಡಿಸುತ್ತ, ಧೇನಿಸುತ್ತ
ಗಬಕ್ಕನೆ ಹಿಡಿದು, ಮುಳ್ಳುನಾಲಗೆಯಲ್ಲಿ ಮಡಿಚಿ ಬಿಡುತ್ತವೆ.

ಹೊತ್ತು ಮುಳುಗಿದ ಮೇಲೆ ಯಾವುದೋ
ಮೂಲೆಯನ್ನಾಶ್ರಯಿಸಿ
ಆರಾಮದಿಂದ ಲೊಚಗುಟ್ಟಿದರೆ-
ದಿಕ್ಕು ಕಂಡು ಹಿಡಿದು, ದಿಕ್ಕಿಲ್ಲದವರು ಶಕುನ ಹೇಳುತ್ತಾರೆ.
ಮೈಮೇಲೆ ಬಿದ್ದರೆ ಪಂಚಾಂಗವನ್ನೇ ತೆರೆಯುತ್ತಾರೆ.

ಹರಿದಾಡುತ್ತವೆ ಕೈಗೆ ಸಿಕ್ಕಿ ಬೀಳದ ಹಾಗೆ.
ಅಕಸ್ಮಾತ್ತಾಗಿ ಬಾಗಿಲ ಇರುಕಿನಲ್ಲಿ ಬಾಲ
ಕತ್ತರಿಸಿ ಹೋದಾಗಲೂ, ಮತ್ತೆ ಚಿಗುರಿ
ಬದುಕಿರುವುದನ್ನು ಕಂಡಿದ್ದೇವೆ.

ಹೇಸಿಗೆಪಟ್ಟರೂ ಹೊಂದಿಕೊಂಡಿದ್ದೇವೆ ಹೀಗೆ
ಅವುಗಳ ಜೊತೆಗೆ.
ಅಂದಮೇಲೆ, ಅವುಗಳನ್ನು ಹಿಡಿದುಕೊಟ್ಟವರಿಗೆ
ಬಹುಮಾನವಿಡುವ ಪ್ರಸಂಗವೇ ಬಂದಿಲ್ಲ.
ಕೊಂದರೆ ಪಾಪವೆಂದು ಬೇರೆ ಹೇಳಬೇಕಿಲ್ಲ.

## ಕನಸಿನ ಗೊಮ್ಮಟ

ಬಾಹುಬಲ ತೋರಿಸುವ, ಗೆದ್ದು ಮೆರೆಯುವ ಅಹಂಕಾರವನೊದ್ದು
ಮೇಲೆದ್ದು ಮುಗಿಲುದ್ದ ನಿಂತಿರುವ-
ಕಾಲು ಸೋಲದೆ, ಕಾಲನನ್ನೇ ಸೋಲಿಸಿ
ಹೊಸ ದಿಗಂತಕ್ಕೆ ದಿಟ್ಟಿ ನಿಲಿಸಿ-

ಸಾವಿರದ ಸತ್ಯ ಸೌಂದರ್ಯದ ಮಹಾಮಸ್ತಕಕ್ಕೆ
ಸಾವಿರದೆಂಟು ಕಲಶಗಳ ತುಂಬಿ ತುಂಬಿ
ಹಾಲು ಸುರಿದಾಗ
ಒಂದು ಹನಿಯೂ ಚೆಲ್ಲದಂತೆ ಬಯಲ ಬೊಗಸೆಯಲಿ ಹಿಡಿದು
ದೂರ ದೂರದ ಕಪ್ಪು ಮಕ್ಕಳನೆಲ್ಲ ಕರೆದು
ಬೆಳ್ಳಗೆ ಕುಡಿಸಿದಂತೆ,
ಬಾನಿನಲಿ ತೇಲುವ ಮೋಡ ಹಠಾತ್ತನೆ ಮಿಂಚಿ
ಧೋಧೋ ಸುರಿದು, ನಿನಗಂಟಿಸಿದ ಜಿಡ್ಡು ತೊಳೆದಂತೆ
ಬೆಟ್ಟಕ್ಕೆ ಬೆಟ್ಟವೇ ಅಟ್ಟಹಾಸದಲಿ ನಕ್ಕಂತೆ
ನಾನೊಂದು ಕನಸು ಕಂಡೆ.

## ಈಗಿನ ಮಕ್ಕಳು

ಈಗಿನ ಮಕ್ಕಳಿಗೆ ಎತ್ತಿಕೊಳ್ಳುವದು ಅಷ್ಟೊಂದು ಇಷ್ಟವಿಲ್ಲವೇನೋ-
(ಅದರಿಂದ ಯಾರಿಗೂ ನಷ್ಟವಿಲ್ಲ: ಆ ಮಾತು ಬೇರೆ.)
ಆದರೆ ಪ್ರೀತಿಗೆ ಪಟ್ಟಗಟ್ಟುವದು ಹೇಗೆ?
ಮಕರಂದವೆಲ್ಲ ಜೇನುಹುಟ್ಟಿನಲಿ ತುಪ್ಪವಾದ ಹಾಗೆ?

ದೂರದಿಂದಲೆ ಕಣ್ಣರಳಿಸಿ, ಕೈಮಾಡಿ, ಗೋಣು ಹಾಕುತ್ತವೆ.
ಸಮೀಪಕ್ಕೆ ಹೋದರೆ ಮುಖ ಹೊರಳಿಸುತ್ತವೆ.
ಅಷ್ಟು ದೂರ ಏಕೆ, ಇಲ್ಲೇ ಇದ್ದಾಳಲ್ಲ ಮೊಮ್ಮಗಳು
ಪ್ರೀತಿ, ವಾತ್ಸಲ್ಯಗಳ ಹೆಮ್ಮುಗುಳು
'ಏಯ್' ಎಂದು ಕರೆಯುತ್ತಾಳೆ.
'ಓ' ಎಂದರೆ ಮುಖವೆಲ್ಲ ಮುದ್ದುನಗೆಯಲ್ಲಿ ಅದ್ದಿ ತೆಗೆಯುತ್ತಾಳೆ.
ತುಂಬುಗಲ್ಲದ ನಡುವೆ ಮೂಗು ಕಿರು ಮುಗುಳಾಗಿ
ಬಾಯಿ ಹಿಗ್ಗಿಸಿ, ಕೆಳಗಿನೆರಡು ಹಲ್ಲಿನ ಚುಕ್ಕಿ-
ಕಣ್ಣಿನಲಿ ಉಳಿದೆಲ್ಲ ಮಿನುಗಿಸುತ್ತಾಳೆ.
ಅವ್ವ ಬಳಿಗಿರಬೇಕು, ಅಪ್ಪ ತಿಳಿದಿರಬೇಕು,
ನಾವು-ಪ್ರೇಕ್ಷಕರು, ಆದಷ್ಟು ರಂಗಭೂಮಿಯ ಬಿಟ್ಟು
ದೂರವಿರಬೇಕು.

ಈಗಿನ ಮಕ್ಕಳೇ ಹಾಗೆ-
(ಹೊಸ ಪೀಳಿಗೆ)

ಕರೆದೊಡನೆ ಅಡಬರಿಸಿ ಬರುವುದಿಲ್ಲ;
ಬಂದರೂ ಹೆಗಲೇರಿ ಬಹಳ ಹೊತ್ತಿರುವುದಿಲ್ಲ.
ಅವಸರದಲ್ಲಿ ಕೆಳಗಿಳಿದು, ಎದ್ದು ಬಿದ್ದು
ತಮ್ಮ ಕಾಲ ಮೇಲೆ ತಾವೇ ನಿಲ್ಲಬಯಸುತ್ತವೆ.
ಹೆಜ್ಜೆ ಹೆಜ್ಜೆಗೂ ಕುತೂಹಲ ಹುಟ್ಟಿಸುತ್ತ
ಆತಂಕ ದಾಟುತ್ತ
ದೊಡ್ಡವರೆನಿಸಿಕೊಂಡ ನಮ್ಮನ್ನು ದಂಗುಬಡಿಸುತ್ತವೆ.

## ಸತ್ಯಾಗ್ರಹ

ತಾಯ್ನಾಡ, ತಾಯ್ನುಡಿಯ ಕೊರಳ ಕೊಯ್ಯುವ ದುರುಳ
ದುಷ್ಟಕೂಟದ ಭ್ರಷ್ಟ ಭಂಡರೆದುರು-
ಸತ್ಯಾಗ್ರಹ-ನಮ್ಮ ಸತ್ಯಾಗ್ರಹ
ಸತ್ಯಾಗ್ರಹ-ನಿತ್ಯ ಸತ್ಯಾಗ್ರಹ.

ಶಾಸಕರು, ಮೋಸಕರು, ಶೋಷಕ ವಿದೂಷಕರು
ಬುದ್ಧಿಗಲಿಯುವವರೆಗೂ ಸತ್ಯಾಗ್ರಹ;
ಅಧಿಕಾರದಮಲಿನಲಿ ತೂರಾಡಿ, ಹಾರಾಡಿ-
ನೆಲಕಿಳಿದು ಬರುವರೆಗು ಸತ್ಯಾಗ್ರಹ.
ಗಾಂಧೀಜಿ ನೆನೆಯುತ್ತ ಸತ್ಯಾಗ್ರಹ.

ದೊಡ್ಡವರು, ಸಣ್ಣವರು, ಗಂಡುಗಳು, ಹೆಣ್ಣುಗಳು
ಕನ್ನಡದ ಕಣ್ಣುಗಳು ಕೋರೈಸಿವೆ;
ಕಥೆಗಾರ, ಕಲೆಗಾರ, ಶೋಧಕರ, ಬೋಧಕರ
ಸಾಧಕರ ಹೃದಯಗಳು ಹಾರೈಸಿವೆ.
ಮೀರ ಸಾದಿಕರನ್ನು ಧಿಕ್ಕರಿಸಿವೆ.

ಮಂತ್ರಿಗಳು, ತಂತ್ರಿಗಳು, ಹಾರಗಳು, ಕಾರುಗಳು
ಹೆಲಿಕಾಪ್ಟರೂ ಉರುಳಿ ಬೀಳಲಿಹವೊ-
ಜನಮನದ ಆಶೆಯನು, ಭಾಷೆಯನು ತುಳಿದಂಥ
ಕಾಲುಗಳು ತಗ್ಗಿನಲಿ ಹೊಳಲಿಹವೊ
ತಮ್ಮ ಗೋರಿಯ ತಾವೆ ತೋಡಲಿಹವು.

ಸಾಧುವಿಗೆ ಸಾಧುಗಳು, ಮಾಧುರ್ಯ ಪ್ರೇಮಿಗಳು-
ಬಾಧಿಪ ಬಕಾಸುರಗೆ ಭೀಮನ ಒದೆ;
ಸಹನೆ ತುಂಬಿದ ಕೆರೆಯ ಕೋಡಿಯೊಡೆಯಲು ಬೇಡಿ-
ಕೊಚ್ಚಿ ಹೋದೀರಿ, ಮುನ್ನೆಚ್ಚರು-ತಡೆ.
'ಸೌಧ'ಕೂ ಬಂದೀತು ಆ ಮುಳುಗಡೆ.

ಕನ್ನಡದ ಕನಸುಗಳ ಮೋಡಗಳು ಮೇಲೇರಿ
ಎಂಟು ದಿಕ್ಕಿಗು ಹಾಡು ಭೋರಿಡುತಿವೆ.
ಮುಂಗಾರು ಸಿಡಿಲಾಗಿ, ಮಿಂಚಾಗಿ, ಹೊಳೆಯಾಗಿ
'ದುಂದುಭಿ'ಗೆ ವರ್ಷವೇ ಸುರಿಯಲಿಹುದು.
ಹೊಸ ಬದುಕಿನಾಧ್ಯಾಯ ತೆರೆಯಲಿಹುದು.

ತಾಯ್ನಾಡ ತಾಯ್ನುಡಿಯ ಕರುಳು ಕೊಯ್ಯುವ ದುರುಳ
ದುಷ್ಟಕೂಟದ ಭ್ರಷ್ಟ ಭಂಡರೆದುರು-
ಸತ್ಯಾಗ್ರಹ-ನಮ್ಮ ಸತ್ಯಾಗ್ರಹ
ಸತ್ಯಾಗ್ರಹ-ನಿತ್ಯ ಸತ್ಯಾಗ್ರಹ*

## ರಾಜ್ಯೋದಯದ ಬೆಳ್ಳಿ ಹಬ್ಬಕ್ಕೆ

'ಉದಯವಾಯಿತು' ಎಂದು ತಿದ್ದಿ, ಅನಂತಕಾಲ ತಪಿಸಿದ ಸಿದ್ದಿ
ಪಡೆದಂತೆ ಹೃದಯ ತುಂಬಿ ಹಾಡಿದೆವಲ್ಲ-
ಆ ಉಕ್ಕಿದುತ್ಸಾಹ, ನಾಡಿನಕ್ಕರತೆ -ಒರತೆ
ಯಾವ ಮರು ಭೂಮಿಯಲಿ ಇಂಗಿ ಹೋಯ್ತು?
ಹೊಂಗಿರಣಕಡ್ಡ ನಿಂತಿವೆ ತುಂಡು ಮೋಡಗಳು,
ನಮ್ಮ ನಡುವೇ ನೆರಳಿನಡ್ಡ ಗೋಡೆಗಳು.
ಗುಡ್ಡ ಗುಡ್ಡದಂಥಾ ಮಾತು ಉರುಳಿ ನಿಷ್ಕ್ರಿಯ ಕೊಳ್ಳದಾಳಕ್ಕೆ.
ಸಪಾಟು ಟಾರು ರೋಡಿನ ಮೇಲೆ ಯಾವುದೋ ಮೆರವಣಿಗೆ.
ಹಿರಿಯರ ಪುಣ್ಯವೆಲ್ಲ ಖರ್ಚಾಗಿ, ಭವಿಷ್ಯದ ಭವ್ಯ
ಕಟ್ಟಡಕ್ಕೆ ಇಟ್ಟಿಗೆ ಹಿಡಿದು ನಿಂತಾಗ
ಜನಮನವ ಗಟ್ಟಿ ಬೆಸೆಯುವ ಸಿಮೆಂಟಿಗೂ ಉಂಟೆ ಕೊರತೆ?

ಸಹೃದಯ ಬಂಧುಗಳೇ, ಅನುಕೂಲ ಸಿಂಧುಗಳೇ-
(ಹಾಗೆಂದು ನಾ ಕರೆಯಲಾರೆ.)

---
* ಗೋಕಾಕ ಚಳುವಳಿಯ ಸಂದರ್ಭದಲ್ಲಿ

ಈ ನಾಡ ಮಣ್ಣು, ಎಣ್ಣೆ, ಬತ್ತಿಯಲಿ,
ಗುಡಿ ಗೋಪುರದ ನೆತ್ತಿಯಲಿ ಹೊತ್ತಿರುವ
ದೀಪಾವಳಿಯ ನಾ ಮರೆಯಲಾರೆ.
ದೀಪದ ಹುಳಕ್ಕೆ ಅಂಜಿ, ಬುಡದ ಕತ್ತಲೆಗೆ ಕುಳಿತವರೆ
ಕನ್ನಡಕ್ಕಾಗಿ ಬರಿಯ ಕೈ ಎತ್ತಿದರೆ ಸಾಕೆ?
ತೆಗೆದು ಕೊಡಬೇಕು ಚೆನ್ನಾಗಿ, ಬುದ್ಧಿ ಭೆಟ್ಟಿಯಾಗುವ ಹಾಗೆ
ದ್ರೋಹಿಗಳಿಗೆ, ಸದಾ ಸಂದೇಹಿಗಳಿಗೆ.
ಆ ಮೇಲೆ ಬರಲಿ ಘೋಷಣೆ: ಸಿರಿಗನ್ನಡಂಗೆಲ್ಗೆ ಬಾಳ್ಗೆ.
ತಾಯಿಗೆ ದೊರೆತ ಸ್ವಾತಂತ್ರ್ಯದೊಡನೆ
ಮಗುವಿಗೂ ಬೆಳೆಯಬೇಕೆಂಬ ಮನಸು-
ಅವಳೆದೆಯ ಚಿನ್ನದ ಪದಕವಾಗಬೇಕೆಂಬ ಕನಸು.

ಆದರೆ-

ಇದಕ್ಕೆ ಗಟ್ಟಿ ಹೆಸರಿಟ್ಟಿದ್ದೆ ಹುಟ್ಟಿ ಹದನೇಳು ವರ್ಷಕ್ಕೆ-
ಇನ್ನು ಇಪ್ಪತ್ತೈದಕ್ಕೆ ಹೇಗೆ ಉಕ್ಕೀತು ಪ್ರಾಯ?

ಆದರೂ-

'ಪ್ರಾಯಂ ಕೂಸಾದೊಡಂ ಅಭಿಪ್ರಾಯಂ ಕೂಸಕ್ಕುಮೆ?'
ಶಬ್ದಮಣಿ ದರ್ಪಣದಲ್ಲಿ!
ಪ್ರಥಮ ಭಾಷೆಯ ತೊಡೆಯ ಮೇಲೆತಂದು
ಇಕ್ಕರಿಸಿದ್ದೆ ಉಕ್ಕಿನ ಗುಂಡು-
ಮೊಳಕಾಲ ಚಿಪ್ಪಿಗೆ ಅದನು ಬಡಿಸಿಕೊಳ್ಳದ ಹಾಗೆ
ಈ ಕನ್ನಡ ಸಾರ್ವಭೌಮ
ಕೊಡವಿಕೊಂಡು ಮೇಲಕ್ಕೇಳುವದು ಹೇಗೆ?
ಹೊಸೆಯಬೇಕಲ್ಲ ಹುರಿಗೊಳಿಸಿ, ಅಭಿಮಾನ ಸಡಿಲಾದ
ಅಧಿಕಾರ ಮತ್ತ ಆಡಳಿತ ಸೂತ್ರಗಳ-ಚಾಟಿ ಬೀಸಿ;
ಕೃಪಾಪೋಷಿತ ನಾಟಕ ಮಂಡಳಿಯ ಪಾತ್ರಗಳ
ಬಣ್ಣಬಯಲಿಗೆಳೆದು, ಕನ್ನಡಿ ಹಿಡಿಯ ಬೇಕಲ್ಲ
ತಮ್ಮದೇ ತಮಗೆ ಗುರುತು ಹತ್ತುವವರೆಗೆ.

ಸ್ವಾಮಿ, ಸ್ವಾಮೀ-
ಈಗ ಇದೊಂದೇ ಪದ ಉಳಿದದ್ದು
ಬಾಯಲ್ಲಿ, ಭಾವೈಕ್ಯದಲ್ಲಿ,
ಈ ಬೆಳ್ಳಿಯ ಹಬ್ಬಕ್ಕೆ ಎಳೆದು ತಂದಿರುವ ಉತ್ಸಾಹ-
ಖೋರಾಬೆಳ್ಳಿ, ಚೊಕ್ಕ ಬಂಗಾರ-ಇವೆಲ್ಲ ಆ ಗಾಂಧಿ ಇದ್ದಾಗಿನ ಮಾತು.

ಈಗ ಸಾರಾಸಗಟು ಗಿಲೀಟು, ಖೊಟ್ಟಿ ನೋಟು
ಮತ್ತೆ ಮೇಲೆ ಆಕಾಶಕ್ಕೆ ರಾಕೆಟ್ಟು.

ಹೋಗಲಿ, ಬಂದ ಹಬ್ಬದಲಿ ಯಾತಕ್ಕೆ ಸುಮ್ಮನೆ ಕೆಟ್ಟ ಮಾತು?
ಹಿಗ್ಗಿನ ತಳಿರು ತೋರಣ, ಮೆರವಣಿಗೆಯ ಸುಗ್ಗಿ ಮುಗಿದು
ಮೈನುಗ್ಗಾದಾಗ ಕುಳಿತು ಯೋಚಿಸಲಿ;
ಪ್ರಾಚೀನ ವೈಭವದ ಉಡುಗೆ ತೊಡುಗೆಯ ನಡುವೆ
ವರ್ತಮಾನದ ಹರಕು ತೇಪೆ ಕಾಣಿಸಲಿ.
ಅವರಿವರ ಅಭಯ ಹಸ್ತ ಸಾಮುದ್ರಿಕಕೆ ಮನಸೋಲದೆಯೆ.

ಗುಂಜಿ ತೂಕದಷ್ಟಾದರೂ ಮಾತು ಕೃತಿಗಳ ಬೆಸೆದು
ಬರಲಿರುವ ಬಂಗಾರದ ಹಬ್ಬಕ್ಕೆ ಭದ್ರಸೇತುವೆಯ ಕಟ್ಟೋಣ
ಅದುವರೆಗೂ ಪರಿಪೂರ್ಣ ಚೆಲುವ ಕನ್ನಡನಾಡು
ಉದಯವಾಗಲಿ ಎಂದೆ ಹಾಡೋಣ.

## ಕನ್ನಡ ಕುಲದೀಪಕ

(ಡೆಪ್ಯುಟಿ ಚೆನ್ನಬಸಪ್ಪನವರು ೧೮೩೩-೧೮೮೧)

ಮುತ್ತಿ ಮುಸುಗಿದ ಅನ್ಯಭಾಷೆಯ ಮಂಜನೊತ್ತಿ
ಕತ್ತೆತ್ತಿ, ಕನ್ನಡದ ಹೊಂಗಿರಣಗಳ ಚಾಚಿ
ಎಚ್ಚರಿಸಿ, ತನ್ನತನದರಿವ ಮೂಡಿಸಿ ಮೊಳಗಿ
ಮೂಲೆ ಮೂಲೆಗು ಶಾಲೆ: ಚಿಲಿಪಿಲಿಯ ದನಿಯೆತ್ತಿ-
ಉದಯ ಕಾಲದ ಸ್ಫೂರ್ತಿಕೇಂದ್ರವಾಗುತ, ನೂರು
ಹೃದಯದೊಳ ಹೊಕ್ಕು ಹೊರ ಹೊಮ್ಮಿಸಿದ ಕೃತಿಯಾಗಿ.
ಕೆರಳಿ ಆತ್ಮಸ್ತುತಿಗೆ ಗುಡುಗಿದರು ಹುಲಿಯಾಗಿ.
ಕರ್ತವ್ಯಕ್ಕೆ ಕಲಿ, ವಾದಿ, ವಾಗ್ಮಿ, ನಿಸ್ಪೃಹರು.
ಸಾಹಿತ್ಯ-ಶಿಕ್ಷಣಕೆ ಒಡವೆರೆದು, ತಾಯ್ನುಡಿಗೆ
ಗುಡಿಯಾಗಿ, ಕೋಟೆ ಕೊತ್ತಳ ಭದ್ರವಾಗಿಡಲು-
ಧಾರವಾಡೆತ್ತರಕ್ಕೆ ಬಿತ್ತರದ ಅಡಿಗಲ್ಲು.
ಆ ಗಣಿತದ ಗುಣಾಕಾರ ವರ್ಧಿಸಿತು ಹೀಗೆ.
ನೂರು ವರುಷದ ಮೇಲೆ ಮೂಲ ಪುರುಷನ ಕಂಡು
ಕೈಮುಗಿದೆ. ಇದ್ದರಿರಬೇಕಪ್ಪ ಇಂಥ ಗಂಡು.

## ಕನ್ನಡದ ಹೊನ್ನಪುರ

(ಗದಿಗೆಯ್ಯನವರು ಹೊನ್ನಾಪುರ ಮಠ ೧೮೭೦ -೧೯೩೩)

ಶತಮಾನ ಉರುಳಿದ ಮೇಲೆ, ಹೊರಳಿ ನೋಡಿದರೆ-
ದೂರ ಕತ್ತಲೆಯಂಚಿನಲಿ ಮಿಂಚು ದೀಪಗಳು
ಕನ್ನಡದ ಹುಚ್ಚು-ಕೆಚ್ಚಿಗೆ ಕಡೆದ ರೂಹುಗಳು.
ಅಜ್ಞಾತ ಕಾಲಖಂಡದ ಪ್ರಜ್ಞೆಗೆದ್ದವರೆ
ನಿಂತಾರು ಉತ್ತರೀಯವ ಹೊದ್ದು, ಗದಿಗೆಯ್ಯ-
ನವರಂಥ ಗಟ್ಟಿಕುಳ. ವಾಗ್ದೇವಿಗಿದೆ ನ್ಯಾಯ-
ವಾದಿಯ ಶ್ರೇಯ. ಚರಿತ್ರೆ, ನಾಟಕದ, ಕಥೆಯ
ನೀತಿ ಮಂಜರಿ; ವಾರವಾರಕೂ ;ಚಂದ್ರೋದಯ.'
ಸಂಘ-ಸಂಸ್ಥೆ-ಸಮಾಜ ಸಹಕಾರ ಸೂತ್ರದಲಿ
ಪ್ರಾಮಾಣಿಕತೆ ಪಾತ್ರ, ಧೈರ್ಯ, ಕಾರ್ಯಕ್ಷಮತೆ.
'ಕರ್ನಾಟಕ ಸಭೆ'ಗೆ ನಾಡ ಕಟ್ಟುವ ಮಮತೆ-
ಹುಟ್ಟಿ ಬೆಳೆಸಿದ ಕೀರ್ತಿ ನಾವು ನೆನಪಿಟ್ಟಿರಲಿ
ಕೊನೆಯ ಗಳಿಗೆಯವರೆಗು ಕೈಬಿಡದ ಲೆಕ್ಕಣಿಕೆ
ಕಲ್ಲಚ್ಚಿನಿಂದ ಹಿಡಿದು ಬೆಲ್ಲದಚ್ಚಿನವರೆಗೆ.

## ಜಯಕರ್ನಾಟಕ ತಿಲಕ

(ಆಲೂರು ವೆಂಕಟರಾಯರು ೧೮೮೦ - ೧೯೬೪)

ವಿಸ್ಮೃತಿಯ ಧೂಳಿಡಿದು ಮೂಲೆಗುಂಪಾಗಿದ್ದ
ರನ್ನಗನ್ನಡಿಯನೊರೆಸಿ, ಕನ್ನಡಿಗರ ಮುಖಕೆ
ಹಿಡಿದು ಉಜ್ಜುಗಿಸಿ ಭಾವೀ ವಿಭವ ದರ್ಶನಕೆ
ಗತವೈಭವದ ಚೈತನ್ಯ ಜ್ಯೋತಿ ಹಿಡಿದಿದ್ದ.
ಎದ್ದ ನಸುಕಿನಲ್ಲೆ ಜಯಕರ್ನಾಟಕ ಮಂತ್ರ
ಜಪಿಸಿ, ಕರ್ನಾಟಕತ್ವದ ವಿಕಾಸ ನಕಾಶ
ಬರೆದು, ಎದೆ ಎದೆಯಲ್ಲಿ ತುಂಬಿದಾವೇಶ.
ಕಟ್ಟಿ ಸಂಸ್ಥೆಗಳ, ಬೆನ್ನು ತಟ್ಟಿ ತಾ ಸ್ವತಂತ್ರ.
ಭಾರತದಲ್ಲಿ ಅಖಂಡ ಕರ್ನಾಟಕವ ಕಡೆದು.

ಆಧ್ಯಾತ್ಮ ಚಿಂತನೆಯ ಖಾದಿಯ ಶಾಲು ಹೊದೆದು
ಮುಡಿಪಿಟ್ಟ ಜೀವನ ಸ್ಮೃತಿಯ ಸಂಪುಟವ ತೆರೆದು
ರೇಶಿಮೆ ಗಡ್ಡ ನೀವಿ, ತೆರಳಿದಿರಿ ಹರಿಯ ನೆನೆದು
'ನನ್ನ ಪೂರಾ ಮರೆತು ಕರ್ನಾಟಕವ ಸ್ಮರಿಸಿ'
ಎಂದಿರಾ? ಇಂದಿನೀ ಕುಬ್ಜರನೆತ್ತಿ ಹರಸಿ.

## ವ್ಯಾಸಂಗ ಸಂಗಮ

(ಪ್ರೊ. ಸ. ಸ. ಮಾಳವಾಡ)

ಮನಮನಗಳುಜ್ಜಿ ಸಂಕುಚಿತ ಸಂದೇಹಗಳ
ತುಕ್ಕು ತೊಳೆದು, ತಳತಳ ಹೊಳೆದು, ಹರಿತ ಪ್ರಶ್ನೆಗೆ
ದೊರೆತ ತ್ವರಿತ ಉತ್ತರದಲ್ಲಿ ಹೊಸ ಹೆಜ್ಜೆಗಳ-
ನಿಟ್ಟು, ನಡೆಸಿ, ತನ್ನೊಳಗೆ ತೃಪ್ತಿಗೊಳ್ಳುವ ಬಗೆ.

ಹೊತ್ತು-ಗೊತ್ತಿಗೆ ಶಿಸ್ತಿನಂತಸ್ತು ಏರಿಳಿದು
ಸಂಯಮದ ಚೌಕಟ್ಟಿನೊಳಗೆ ರೇಖಾ ಚಿತ್ರ:
ಬದಿಯಿಂದ ಬೆಳಕು: ಅಂತರ ಬಿಟ್ಟು ನೋಡುವುದು
ಕೈ ಕಟ್ಟಿ ಮಾತಿಗೆ; ಮೌನ ಚಿಂತನೆಗೆ ಮಾತ್ರ.

ಹತ್ತು ದಿಕ್ಕಿನ ಹಳ್ಳ ಹೊಳೆಗಳಿಗೆ ಧುಮುಕಿ, ನದಿ-
ಯಾಗಿ ವ್ಯಾಸಂಗ ಸಂಗಮದಲ್ಲಿ ಹರಿದಷ್ಟು
ಜಲ, ಅರಿದಷ್ಟು ವಿಸ್ತಾರ ಮುಂದಿನಂಬೋಧಿ.
ತಿಳಿಯಷ್ಟೆ ಬಸಿದುಕೊ: ಬರದಂತೆ ಗಷ್ಟು.

ಗಟ್ಟಿ ಕವಚದ ಒಳಗೆ ಬೆಳವಲ ಹಣ್ಣ ತಿಳಲು:
ರುಚಿಗೆ ಬೆಲ್ಲವ ಬೆರಸು. ಬಿದಿರಲ್ಲವೇ ಕೊಳಲು?

## ಆಷಾಢ

ಏನು ಹೊಳೆಯದ ಮನಸಿನಾಗಸಕೆ ಆಷಾಢ
ಆಕ್ರಮಿಸಿ, ಬೆಳಕನು ಬದಿಗೆ ಸರಿಸಿ, ಈಸತೊಡ-
ಗಿದವು ಗಾಸಿಕೊಳ್ಳುತ ಯಕ್ಷ ಯಾಚಿಸಿದ ಮೋಡ.

ಕಣ್ಣು—ಮುಚ್ಚಾಲೆ ಬಿಚ್ಚುವ ಹಗಲಿರುಳ ಕೂಡ.
ಹೊಲ-ಗದ್ದೆ ಬಿತ್ತಿಗೆ-ಬೆಳೆಸಾಲು ಸಾಲದಲ್ಲಿಯೆ.
ಸುರಿವ ಮಳೆ ಪುನರ್ವಸು, ಪುಷ್ಯ: ಸುಯ್ಯುವ ಗಾಳಿ.
ನೀರಿಗೆ ನಿರಂತರ ಬಾಯ್ಬಿಟ್ಟು: ನೆರೆಹಾವಳಿ.
ಒಟ್ಟಿದ ಬಣಿವೆ, ಹಾಕಿದ ಹಗೆಹ ಮುಗಿದಂತೆಯೆ.
ನೆಲದ ಮಣ್ಣೆದ್ದು 'ಗುಳ್ಳವ್ವ'ನಾಗಿ ಗೋಪುರ
ಕಟ್ಟಿ: ಗುಲಗಂಜಿ; ಹಳ್ಳಿ ಹೆಂಗಳ ಭಾವದಲೆ
ಬಾಲ್ಯವನು ತುಂಬಿ ಪಲ್ಲವಿ: ಸುವ್ವಿಸುವ್ವಾಲೆ.
ಒಳಗಿವಿಗೆ ತಾಗಿ, ಏರಿ ಕನಸಿನಂತಃಪುರ.
'ಆಷಾಢ, ಓ ನೀ ಆಡಿಸ್ಯಾಡಬ್ಯಾಡ'
ಬೀಸಿ ಬೀಸಿ ಬಡಿ, ಬರೇ ತಿದ್ದಿ ತೀಡಬೇಡ.

## ಶ್ರಾವಣ

ನೆತ್ತಿಯ ಮೇಲೆ ಸಮುದ್ರ ತೇಲಿದ ಹಾಗೆ ಮುಗಿಲು
ಸುರಿವ ಜಡಿಮಳೆ, ತುಂಬಿ ಹೊರಚೆಲ್ಲಿದುದ್ವೇಗ.
ಮನೆಮನೆಯು ನಡುಗಡ್ಡೆ, ಮನ-ದಿಗಂತಕೆ ದಿಗಿಲು.

ನೆಲದ ಕೊರತೆಯನೆಲ್ಲ ತುಂಬಿ ಕೊಟ್ಟಿದೆ ಹಸುರು.
ನಂಬಿಕೆಯ ಹಿಡಿದು ಅಲುಗಿಸಿ ಗಟ್ಟಿಗೊಳಿಸಿರುವ
ಬೆಟ್ಟದ ಮುಡಿಯ ಚಿಕ್ಕೆ ರೆಕ್ಕೆ ಬೀಸುವ ಚದುರು.

ಶ್ರಾವಣವು ಸೂರೆಗೊಳಿಸಿದ ಹೂವು ನಸುಕಿನಲಿ
ಕಣ್ಣು ತೆರೆದು, ಸಂಜೆಯವರೆಗೂ ಮಾಸದ ಬಣ್ಣ.
ದಿನ ದಿನವು ಪರ್ವ; ಆಡಿ ಬಿಟ್ಟಿರುವ ಜೋಕಾಲಿ.

ಮುರುಕು ಜೋಪಡಿ, ಹರಕು ಚಿಂದಿ ಮಂದಿಯ ಬದುಕು.
ಕಂಡ ಕಂಡಲ್ಲಿ ಕೈಯೊಡ್ಡಿ ಕೇಳುವ ಪ್ರಶ್ನೆ-
ಪುಸ್ತಕವ ಬಿಟ್ಟು ವಾಸ್ತವದಿ ಉತ್ತರ ಹುಡುಕು.

ವ್ರತ, ನಿಯಮ, ಇಷ್ಟ-ಕುಲ-ಗ್ರಾಮ ದೈವತ ಪೂಜೆ-
ಮುಗಿಯಿತೆ? ಈ ಸಮಷ್ಟಿಗೆ ಸೃಷ್ಟಿ ನೀಡಿರುವ ಕೊಡುಗೆ?

## ಭಾದ್ರಪದ

ಸುತ್ತಲೂ ಜಾರಿಕೆ; ಗಟ್ಟಿ ಹೆಜ್ಜೆಯನಿಟ್ಟು ತೂಕ ಹಿಡಿದು
ನಡೆದವರೆಷ್ಟು? ಆಗೀಗ ಮುಖ ತೋರಿ ಸೂರ್ಯ-
ಭಾದ್ರಪದ ಬಾನೆಲ್ಲ ಸ್ವಚ್ಛಗೊಳಿಸುವ ಕಾರ್ಯ.
ಹರಿವ ನೀರಿಗೆ ಈಗ ಗಂಭೀರ ಗತಿ; ತಿಳಿದು
ಕದಡು, ಹೊಡೆ ಹೊತ್ತು ನಿಂತು ತೂಗುವ ಬೆಳೆಗೆ ಹೊಸ
ಬಗೆ ಬೆಡಗು, ಸೇವಂತಿ ಭಟ್ಟಿಯಿಳಿಸಿದೆ ತುಟ್ಟಿ
ಬಂಗಾರ. ಗೊರಟಗೆಯ ಹಲವು ಬಣ್ಣದ ಗೋಷ್ಠಿ.
ಗರಿ ಬಿಚ್ಚಿರುವ ಕೇದಗೆ; ಹುಲ್ಲಿಗೂ ಉಲ್ಲಾಸ.
ನೂರು ದುರಂತಗಳ ನೋವಿನ ನಡುವೆ ಮಂಗಲ
ಮೂರ್ತಿ ಕಂಗೊಳಿಸಿ-ಜನಮನದ ಆವಿಷ್ಕಾರ.
ಚೆಂದುಟಿ ಬೆಣ್ಣೆ, ಬಲಗೈ ಕತ್ತಿ, ಜೋಕುಮಾರ
ಅಳ್ಳಂಬಲಿ ಪ್ರಸಾದ, ಹುಲುಸಿಗೆ ಬರಿ ಬತ್ತಲ.
ಕಾಲ ಹುಸಿ ಹೋಗದಂತೆ ಸದಾ ಕರ್ಮನಿರತ.
ಧರ್ಮವೆ? ಬದುಕಿನೊಳಮರ್ಮ ಉದ್ದೀಪಿತ.

## ಆಶ್ವಿನ

ಅಶ್ವಿನಕೆ ಆಸನವೆ? ತೊಳೆದ ನೀಲಿಯ ಬಾನು.
ಲಕಲಕ ಹೊಳೆವ ಬಿಸಿಲು, ಸಂಜೆ ಹೊತ್ತಿಗೆ ಸುರಿದು
ಸರಿವ ಮಳೆ; ಗದ್ದೆಯಲಿ ಮುದ್ದುಗರೆಯುವ ನೆಲ್ಲು–
ಹೊಲದುದ್ದ ಜೋಳದ ನಿಲುವು, ಹಕ್ಕಿ-ತೆನೆ-ತೂಗು.
ಕಾಡು-ನಾಡು-ಹೂವು ದಂಡು ದಿಗ್ವಿಜಯ ಪಯಣ.
ಒಂಬತ್ತು ಇರುಳು ಉತ್ಸವ, ಉಪಾಸನೆ, ಶಕ್ತಿ-
ದೇವತೆಗೆ ನಂದಾದೀಪ. ಭಕ್ತಿ ಪುನರುಕ್ತಿ
ದೋಷಕೆಡೆಯಿಲ್ಲ, ಪಡಿಪದಾರ್ಥಗಳ ಹೂರಣ.
ಘಟಕೆ ತೆಂಗಿನ ಕಲಶ, ಶಸ್ತ್ರಾಸ್ತ್ರ ಹಳೆಯದೆ
ಅಣ್ವಸ್ತ್ರ ಪೈಪೋಟಿ ಸದ್ಯದ ವರ್ತಮಾನ.
ನೆರೆ ಹೊರೆ, ಇದ್ದದ್ದೆ ನಿತ್ಯ ಸೀಮೋಲ್ಲಂಘನ.
ವಿಜಯದಶಮಿಯ ಶುಭ ಮುಹೂರ್ತಕ್ಕೆ ಕಾಯುವದೆ?
ಎಲ್ಲೆಡೆಗು ಸೋಲನೊಪ್ಪದಿಹ ನರಕಾಸುರರು.
ಲಕ್ಷ್ಮೀಪೂಜೆ: ಯಾರಿಗಾರತಿ ಬೆಳಗುವವರು?

## ಕಾರ್ತಿಕ

ಅರ್ಧದಾರಿಯ ಸಮೆದ ಶರದೃತು ಹೇಮಂತ-
ನೊಡ ಸಲ್ಲಾಪ, ಸ್ವಾತೀ ಹನಿಯ ಜಾತಿ ಮುತ್ತು.
ತೆನೆ-ಧಾನ್ಯ, ಎಲೆದೋಟ ಫಲಭಾರ ಸಂಪತ್ತು.
ಜೇನ್ನೊಣದ 'ಗುಂ,' ಜೀರುಂಡೆ ನಾಡಿನಾದ್ಯಂತ.
ಬಲಿ ಚಕ್ರವರ್ತಿ ಕೀರ್ತಿ: ದೊರೆಯದೆ ಪ್ರತಿಯೊಬ್ಬ-
ನಿಗು ಮೂರು ಪಾದದ ಭೂಮಿ, ಮೇಲೊಂದು ಸೂರು?
ಎಂದು ಬಂದರು ಪಾತಾಳದಿಂದೆತ್ತುವವರು?
ಸುತ್ತು ಕತ್ತಲೆ ಮೂಲೆ ಬೆಳಗಿದಾಗಲೆ ಹಬ್ಬ.
ಪುಟ್ಟ ಆಕಾಶದೀಪದ ಬುಟ್ಟಿ ತೂಗಿ ಮನೆ-
ಮುಂದೆ, ನೆಲದ ಮಕ್ಕಳು ಬಾನಿಗೆತ್ತಿ ಬಣ್ಣದ
ನವಿರು ವಿಮಾನ. ಗಾಳಿಯಲಿ ಕನಸು ತೇಲುವುದ
ಕಾಣರೆ? 'ಅಣಿ ಪೀಣಿ ಜಾಣಿಗೊ' ಹಾಡುತ್ತಲೆ
ಕಾರ್ತಿಕವು ಸಾರ್ಥಕವಾಗುವದು ಹೀಗೆ: ಗೌರಿ
ಹುಣ್ಣಿಮೆಗೆ ಬದುಕಿನ ಬಣ್ಣ ಬಂಗಾರವಾಗಿ.

## ಮಾರ್ಗಶಿರ

ಕಾಲ ಕಾಲಕ್ಕೆ ಮಳೆ-ಬೆಳೆ ಬಂದರೆ ಚೆಂದವೆ-
ಮನುಷ್ಯನ ಜೊತೆಗೆ ಋತುಗಳೂ ಗತಿ ಬದಲಿಸಿವೆ.
ಆದರೂ ಬಂದಷ್ಟೆ ಸುಗ್ಗಿ: ಮೂಡು ಗಾಳಿಗೆ
ಹೊಟ್ಟು ತೂರಿ, ಉಳಿದಷ್ಟು ಕಾಳು ಕಣದಲ್ಲಿವೆ.
ಮುಂಗಾರಿ ಬೆಳೆ ಕೊಯ್ದು ಹೊಲದೊಳಕ್ಕಡಿ ಸಾಲು:
ಹುರುಳಿ, ತೊಗರಿಯು, ಮಡಕಿ, ಅವರೆ, ಪುಂಡಿಯ, ಹೆಸರು-
ಬರಿ ಹೆಸರೆ? ಆಸೆ ಕೊನರಿಸಿ ಗೋದಿ, ಬಿಳಿಜೋಳ
ಹಿಂಗಾರಿ ಕಡಲೆ, ಕುಸುಬೆ: ಕಪ್ಪು ನೆಲಕೆಂಥ ಕುಸುರು!
ಹೊಸತಿಲ್ಹುಣ್ಣಿವೆ ದಾಟಿ, ಎಳ್ಳಮಾಸೆಗೆ ಹಳ್ಳಿ
ಹೊಲದೂಟ, ಬಯಲಾಟ: ನಾಗರಿಕನಿಗೆ ಶುಂಠಿ.
ಮೈಲಾರ ಗೊಗ್ಗಯ್ಯ ಉಗ್ಗಡಿಸು 'ವೇಳ್ಕೋಟಿ'
ದೇವರ ಗುಡ್ಡ ಸುತ್ತಿ ಬೆಳೆದರುವತ್ತು ಕೋಟಿ.
'ಮಾರ್ಗಶಿರ ಮಾಸವೆ ತಾನು' ಶ್ರೀ ಕೃಷ್ಣನೆಂದ.
ಪಥಿಕನಿಗೆ ಮಾರ್ಗಾಯಾಸ, ನೀರಡಿಸಿ ನಿಂದ.

## ಪುಷ್ಯ

ನಡುಗಿಸುವ ಚಳಿಗೆ ನಡುನೀರಿನ ಪ್ರಾತಃಸ್ನಾನ-
ಪ್ರಾಚೀನಕೊಲಿದವರ ಪೂಜೆ, ಪಾರಾಯಣ.
ಪುಷ್ಯಮಾಸಕೆ ಶೂನ್ಯ-ಶುಭವೆನ್ನುವ ಹಗರಣ.
ಕಬ್ಬಿನಾಲೆಗೆ ತಿರುಗಿ ಕಾರ್ಖಾನೆ ಕಡೆ ಪಯಣ.
ಬರಲಿರುವ ಬನದ ಹುಣ್ಣಿವೆಗೆ ಹಣ್ಣೆಲೆಯುದುರಿ
ಚಿಗುರಿನ ಚುನಾವಣೆ: ಹೂ-ಮಿಡಿ-ಸವಿ ಸಂಕಲ್ಪ.
ಬಿಳಿ ಜೋಳ, ಗೋದಿ, ಕುಸುಬೆ, ಹತ್ತಿಗೆ ಭೂತಲ್ಪ
ಬಯಕೆ-ಬದಲಾವಣೆ. ಸಂಕ್ರಾಂತಿ ಎಳ್ಳು ಬೀರಿ
ಉತ್ತರಾಯಣ ಮಹಾಪರ್ವ. ಉತ್ತರವೆಲ್ಲ
ಹಿಮ ಕೊಡವಿ ಏಳುವುದೇ? ರಣ ಹಲಗೆ -ಮೆರವಣಿಗೆ-
ಭೃಷ್ಟರ ಬೇಟೆ, ನೈವೇದ್ಯ ಬನಶಂಕರಿಗೆ.
ಮುಡಿಪು-ಹರಕೆ ಸಲ್ಲಿಸಿದಷ್ಟೆ ಮುಗಿದಂತಲ್ಲ
ಅವರಾತ್ರಿ ಅಮಾವಾಸ್ಯೆಯಲೀಸಬೇಕಿದ್ದು
ಜಯಿಸಬೇಕು: ತಂಬೂರಿ ಶ್ರುತಿಯ ಹಿಡಿದು.

## ಮಾಘ

ಹದವಾದ ಬಿಸಿಲು, ನಿರಭ್ರ ನೀಲಾಕಾಶ:
ಹೊರಡಿರಿ ಪಯಣ, ಮದುವೆಯ ಮಾತು ಮುಗಿಸಿ, ಮರಳಿ.
ಮಡಿಯ ಮಾಘಸ್ನಾನ; ಹಬ್ಬಿದವರೆಯ ಬಳ್ಳಿ.
ಕೊಬ್ಬಿದ ಎತ್ತು, ಹೋರಿ ಎದುರಿಗೆ-ಸಾವಕಾಶ.
ಮಾಮರದ ಹೂಗೊನೆಗಳಲ್ಲಿ ಬಿಡಿ ಒಗರು ಮಿಡಿ.
ರಥಸಪ್ತಮಿಯ ಸೂರ್ಯ; ಏನು ಮುಂದಿನ ಕಾರ್ಯ?
ಶರಪಂಜರದ ಮೇಲೆ ನೂರು ಬಾಣದ ಗಾಯ-
ಸ್ವೇಚ್ಛಾಮರಣ; ಭಜನೆ, ಕೀರ್ತನೆ, ತಾಳ-ದಮಡಿ.
ಗುಡಿ ಹುಣ್ಣಿವೆಗೆ ತೋರಣ, ಹೊಯ್ದು ರಂಗೋಲಿ-
ದೇವ ಬಂದಿಳಿದ ಅಂಗಳದ ಬೆಳುದಿಂಗಳಲಿ.
ಎಲ್ಲಮ್ಮ ನಿನ್ನೋಲಗಕುಧೋ ಅದೊ ಪ್ರತಿಧ್ವನಿ.
ಉಪವಾಸ, ಜಾಗರಣೆ, ಸ್ಮರಣೆ ಶಿವರಾತ್ರಿಯಲಿ
ಮಾತ್ರವೆ? ಸೂತ್ರವಾಗಿದೆ ಕೋಟಿ ಸಂಖ್ಯೆಯಲಿ
ದಾಟಿ ಬಂದಾಗ ದಡಕೆ ಜನಕೆ ನಿಜ ಪಾರಣೆ.

## ಫಾಲ್ಗುಣ

ದಿನಕ್ಕೊಂದು ಚಂದ ಬೆಳೆದ ಫಾಲ್ಗುಣ ಚಂದ್ರ,
ಪಡುವಣದ ಸುಳಿಗಾಳಿ, ಮುಗಿದ ಸುಗ್ಗಿಯ ಹಿಗ್ಗು,
ಕೋಗಿಲೆ ಕಹಳೆ; ಬೇವಿನ ಹೂವ ಕುಸುರು ಸೊವಡು.
ದುಂಡು ಮಲ್ಲಿಗೆ ಮದವೆ?ಎದೆ ಚಿಗುರಿದ ಹಂದರ.
ಕಾಮನ ಹಬ್ಬಕ್ಕೆ ಆಧಾರ ಬೇಕೆ, ಹೇಳಿ:
ಶಾಸನಗಳಿಂದ? ಬದುಕಿನುಲ್ಲಾಸ ದುಂದುಮೆ
ಭೂಮಿಯಾಳದಲಿ ಸೆಲೆಯೊಡೆದು ಪುಟಿಯುವ ಚಿಲುಮೆ.
ಕೆಲಸಕ್ಕೆ ಬಾರದ ಹಳೆಯ ವಸ್ತುಗಳ ಹೋಳಿ.
ಬಣ್ಣದೋಕುಳಿ, ಹಲಗೆ ಬಡಿತ, ಹೆಜ್ಜೆಯ ಮೇಳ.
ಹೊಯ್ಕೊಂಡ ಬಾಯ್ಗೆ ಹೋಳಿಗೆ ತುಪ್ಪ-ಹಳೆಯ ಕತೆ.
ಹಿಂದಿನದನ್ನು ನೆನೆದು ಹಿತ್ತಲದಲ್ಲಿ ಅತ್ತಂತೆ.
ಮುಂಬಾಗಿಲಲಿ ಚೈತ್ರ ಶುಕ್ಲ ಪ್ರತಿಪದೆ, ತರಳ.
ಮಾವು-ಬೇವಿನ ಹೂವು ಚಿಗುರು ರುಚಿಯುಂಡವನು
ಎಲ್ಲ ಮಳೆಗಾಲಕ್ಕು ಮೈ ಜುಮ್ಮುಗೊಂಡವನು.

## ಹಳದಿ ಹೂ-ಚೆಂಡು

ಮಳೆಗಾಲದಬ್ಬರವಿಳಿದು, ಶರತ್ಕಾಲದ
ನವೋನವ ರಾತ್ರಿಗೆ ಹಸಿರುಟ್ಟ ಹಗಲು.
ಹೂ-ದೀಪ ಹಿಡಿದು ಒಂದಕ್ಕಿಂತ ಒಂದು ಮಿಗಿಲು.
ಹೆಸರಿಲ್ಲದೆಯೆ ನಸುನಗುವ ಕುಸುಮ ಸಂಕುಲದ
ಕುಂಕುಮ ಭರಣಿ, ನೀರುಣಿಸಿದ್ದಕ್ಕೆ ಚಿರಋಣಿ.
ಸಂಜೆ, ಮುಂಜಾವದಲಿ ಬೊಗಸೆ ತುಂಬಾನಂದ.
ನೆಲದೊಳಿದು, ಮೇಲೆ ಹೊಂಬೆಳಕು, ಕ್ಷಿತಿಜದ ಬಂಧ-
ಟೊಂಗೆ ಟೊಂಗೆಗು ಈಗ ಇಷ್ಟೊಂದು ಅರಗಿಣಿ!
ಎಷ್ಟು ಅಗ್ಗವಾಗಿದೆ ಇಲ್ಲಿ ಬನ್ನಿ-ಬಂಗಾರ-
ಇಷ್ಟು ದಿನ ಮಣ್ಣೊಳಡಗಿದ್ದೀಗ ಪುಟಗೊಂಡು
ಹಳದಿ ಹೂ-ಚೆಂಡು, ಲೋಕಕ್ಕೆ ತಾನೇ ಗಂಡು
ಎನುವಂತೆ ಬಡವರಂಗಳದಲ್ಲು ಸಿಂಗಾರ.
ಹೊಟ್ಟೆಗೆ ಹಿಟ್ಟಿಲ್ಲವಾದರು ಜುಟ್ಟಿಗೆ ಹೂವು.
ಕೊಟ್ಟು ಮರೆತಿದೆ ಸೃಷ್ಟಿ: ಪ್ರೀತಿಗೆ ನೋವು-ಕಾವು.

## ಕಾರ್ತಿಕದ ಮೋಡ

ಒಂದರ ಹಿಂದೊಂದು ಪರದೆ ಹಿಡಿದು, ಬಾನೆಲ್ಲ
ಮುಸುಕಿ, ಹಿಟ್ಟು ಸೋಸಿದ ಹಾಗೆ ಹನಿ ಜಿನುಗುತ್ತ
ಗಾಳಿಗೊಂದೇ ಸವನೆ ಉಸಿರು ಬಿಡದಂತೋಡಿ-
ಶ್ರಾವಣದ ಮೋಡದ ರೀತಿ: ಅವಸರದ ಪ್ರೀತಿ.

ಕಾರ್ತಿಕದಲ್ಲಿ ಪೂರ್ತಿ ಬೇರೆ ತರಹ. ಬೆಟ್ಟದ
ಹಾಗೆ ಗಟ್ಟಿಯಾಗಿ ಒಂದೆಡೆ ನಿಂತು, ಮೆಲ್ಲಗೆ
ಅರಳಿ, ಹಲವು ಬಗೆ ಶಿಲ್ಪದಲಿ ಕಡೆದ ಪ್ರತಿಮೆ-
ಗೆಲ್ಲುಪಮೆ? ಸಂಜೆ ಸೂರ್ಯನ ಬಣ್ಣದೋಕುಳಿಗೆ

ಅಪೂರ್ವ ಜೀವಕಳೆ, ನಿಮಿಷ ನಿಮಿಷಕ್ಕೊಂದು
ಭಂಗಿ. ಕೆಳಗೆ ಕಪ್ಪಗೆ ನೆಲಕೆ ಕಾಲೂರುವದು
ಮಳೆ. ಕತ್ತಲಾದಾದಂತೆ ಮಿಂಚು ಕೋರೈಸಿ
ಗುಡುಗುವದು: ದೂರದ ಗುಡಿಯ ನಗಾರಿಯಂತೆ.

ಕಣ್ಣು ತಣಿಸುತ ಮಣ್ಣಿಗುಣಬಡಿಸುವದು ಮೋಡ.
ಕಲೆಗಾಗಿ ಕಲೆಯುಂಟೆ? ಜನ ಬದುಕುವದು ಬೇಡ?

## ಹಕ್ಕಿಗಳು

ಬರಿ ಬೆಳಗಿನಲ್ಲಿಯೇ ಹಕ್ಕಿಗಳು ಹಾಡುತ್ತಾ-
        ವೆಂದೇನಲ್ಲ: ಆ ಉತ್ಸಾಹ ದಾಹ ಬೇರೆ.
        ಕತ್ತಲೆಯ ಕರಗಿಸುತ ಬೆಳಕ ಚಿಮ್ಮಿಸುವ ಕರೆ.
ಮಧ್ಯಾಹ್ನ ಮೂರು ಗಂಟೆಯ ಹೊತ್ತು, ಮನೆಸುತ್ತ
ಗಿಡಗಂಟಿ ಬೇಲಿಯಲಿ ಕತ್ತು ಕೊಂಕಿಸಿ ಸಿಳ್ಳು
        ಹಾಕುತ್ತ, 'ಬಿಸಿಲಳಿಯಿತೇಳಿ, ಆಗೊ ತಂಗಾಳಿ'
        ಎಂಬುಲಿವು, ತಮ್ಮತಮ್ಮೊಳಗೆ ಸಣ್ಣ ಚಿಲಿಪಿಲಿ
ಜಗಳ, ಮತ್ತೆ ಹಾರುವವೆತ್ತೊ ಕೂಡಿ ಕರುಳು.
ಸಂಜೆಗಂತೂ ಸರಿಯೆ, ಹಿಂದುಹಿಂದಾಗಿ ಬಾ–
        ನೆಲ್ಲ ಗುತ್ತಿಗೆ ಹಿಡಿದಹಾಗೆ ಸಾಲು ಮೇಲಾಗಿ
        ಹರಗಿ, ನುಣ್ಣಗೆ ಚಿಕ್ಕೆಗಳ ಬಿತ್ತಿ ಮರೆಯಾಗಿ

ಎಲ್ಲಿಯೋ ಗೂಡಿನಲಿ ನಿದ್ದೆ: ಕಣ್ಣು ತುಂಬಾ.
ಎಲ್ಲರೆದೆ ಗೂಡಿನಲಿ ಹಕ್ಕಿ ಮರಿ ಮಾಡುವದು
ಜೋಪಾನ, ಹಾರಬಿಡು: ಹಾಡು ಬೆಳಕಾಗುವದು.

## ಹಿರಿಯರ ಸಾವು

ಸಾವೆ? ತಳಮಳವೆಲ್ಲ ತಳಕಿಳಿದು, ನಿರಂಬಳ
ನಿಲವು ಗೆದ್ದ ನಿಶ್ಶಬ್ದ ನೋವೆ? ಆಕಾಶವೆ
ಹೀಗೆ ಭೂಮಿಗೆಟಕುವ ಠಾವೆ? ಉಳಿದೆಲ್ಲ ಇದ್ದು
ಯಾವುದೋ ಒಂದಿರದ ಶೂನ್ಯತಮದನುಭವವೆ?
ಜೀರ್ಣಗೊಂಡರು ದೇಹ, ಜೀವ ತುಂಬಿರುವ ಹಿರಿ-
ಯರ ಕಾಪು, ಸಣ್ಣ ಕೋಣೆಯ ಕಣ್ಣು ಎಲ್ಲೆಡೆಗು.
ವಿಶ್ವವನು ಗುಬ್ಬಿಗೂಡಿನೊಳಗಿಟ್ಟ ಧೈರ್ಯ.
ತಪ್ಪಿದನಾಥ ಭಾವ; ತಪ್ಪಿ-ಒಪ್ಪಿನ ಕೊರಗು.
ಸಾವಿನಪ್ಪಿಗೆಗು ತಮಗು ಈ ತಂದೆ ತಾಯದಿರು
ತಮ್ಮ ಸರದಿಯ ಪಡೆದು, ನಮ್ಮನದರಿಂದ ದೂರ-
ವಿಟ್ಟವರು. ಈಗದರ ಬಿಸಿ ಗಾಳಿ ತಟ್ಟುವದು-
ಹೊಸ ಅನುಭವಕೆ ಸಿದ್ಧಗೊಳಿಸಿದ ಭಾರ ಹಗುರ.
ಬದುಕು ಮಾಡುತ್ತಲೇ ಬಾಳುವೆಗೆ ಬೆಲೆಗಟ್ಟಿ
ಬಲುಗಟ್ಟಿ ಎನಿಸಿ, ಕೊಟ್ಟರು ನಮಗೆ ಬುತ್ತಿಕಟ್ಟಿ.

## ಬೇಂದ್ರೆ-ಪ್ರತಿಮೆ

೧

ಅಂತೂ ಇಂತೂ ನಿಲ್ಲಿಸಿಬಿಟ್ಟರು ಬಟ್ಟಬಯಲಿನಾಗ
ನೆನಪು ಹಾರದ್ಹಾಂಗ ಬೇಂದ್ರೆ-ಹಕ್ಕಿ ಮೂರು ವರುಷದಾಗ.
ಇದರ ಧ್ವನಿಗೆ ಬೇರೆಲ್ಲಿದೆ ಹೋಲಿಕೆ? ಇಂದಿಗೂ ಹೊಳೆದಿಲ್ಲ
ಅಂತೆಏನೊ ಈ ಮೂರ್ತಿಯು ಕೂಡ ಆ ಮುಖ ಹೋತಿಲ್ಲ.

ಗದ್ದಿಗೆಗಲ್ಲಿನ ಉದ್ದಕು ಹೆಸರಿವೆ: ಐವತ್ತೇಳು ಮಂದಿ-
ನಗರಸಭೆಯು ನಗದವರನು ನಗಿಸುವ ಸೊಗಸಿಗೆ ಏನಂದಿ?

ತೊಂಬತ್ತನೆ ಈ ಜನ್ಮದಿನಕೆ ಅದು ಮೂವತ್ತೂರು ಕಡಿಮೆ-
ಎಲ್ಲ ಸಂಖ್ಯೆಗಳ ಶಂಕೆ ನಿವಾರಿಸಿ ನಿಂತ ಕವಿಯ ಹಿರಿಮೆ.

೨

ಐದು ದಾರಿಗಳು ಕೂಡಿದ ವರ್ತುಳದಂಚಿನಲ್ಲಿ ನಿಂತು
ಒಂದು ಕಣ್ಣು ತುಸು ಸಣ್ಣದು ಮಾಡಿ ನೋಟ ತೂರಿ ಬಂತು;
ಓಡುವ ವಾಹನ, ಅಡ್ಡಾಡುವ ಜನ, ಪೋಲೀಸನ ಕೈ, ಸೀಟಿ.
ಅಂತರಿಕ್ಷವನು ಭೇದಿಸಿ ಹೋಯಿತು ಸೌರವ್ಯೂಹ ದಾಟಿ.

ಇದೇ ಬಯಲು, ಆ ಅದೇ ಬಾನು, ನಡುವೆ ನೂರು ತಂತಿ
ಗಾಳಿಯಲ್ಲಿ ಜುಮ್ಮೆನ್ನುತ್ತಿರಲು ನೀ ಸುಮ್ಮನೇಕೆ ಕುಂತಿ?
ಏಳು, ಕೈಯ ಕುಣಿಸುತ್ತ ಹಾಡು ಉನ್ಮತ್ತಧಾಟಿ ಹಿಡಿದು
ಜಗದ ಮೂಲ ಚೈತನ್ಯ ಸೆಲೆಗೆ ತುಟಿಹಚ್ಚಿ ಹೀರಿ ಕುಡಿದು.

ಈ ನೆಲದ ಮಣ್ಣು, ಅದಕೊಂದು ಕಣ್ಣು, ಆ ತೊಟ್ಟು ಬಿಟ್ಟ ಹಣ್ಣು-
ಅದರ ರಸದಿ ಸಮರಸವು; ಜೀವದಾಟಕ್ಕೆ ಗಂಡು-ಹೆಣ್ಣು.
ಕಬ್ಬು ಗಾಣದಲಿ ಹಿಂಡಿ ಹಾಲು-ಕೊಪ್ಪರಿಗೆ ಕಾಸಿ ಬೆಲ್ಲ-
ಹೂವಿನೆದೆಯ ರಸ ಜೇನುತುಪ್ಪ ಹೇಗಾಯ್ತು? ಅವನು ಬಲ್ಲ.

ಪಂಚಲೋಹದೀ ಮೂರ್ತಿ ಪಂಚಭೂತಗಳ ಹುಡುಕುವಂತೆ
ಈ ಪ್ರಪಂಚದಾಳದಲಿ ಹೊಳೆದು ಹಾಡಿದವು ಎಲ್ಲ ಚಿಂತೆ.
ಸಿದ್ಧನಂತೆ ಎಲ್ಲದಕು ಮದ್ದು ಕೊಡಬಲ್ಲ ಮರುಳಸಿದ್ಧ
ಮರಣವನ್ನು ಮುದ್ದಿಸುತ ಮರಳಿ ಅರಳಿದನು ಭಾವಶುದ್ಧ.

## ನಿತ್ಯ ಪಯಣ

೧

ಅವರೊಬ್ಬೊಬ್ಬರು ಹೋದರು ಹಾಗೇ, ಬದುಕಿನ
ಬದಿ ಬದಿಗೆ, ಯಾವುದೊ ಗಿಡಬಳ್ಳಿಯ ನೆಟ್ಟರು
ಹೂತಿಟ್ಟರು ಸುಖ-ದುಃಖವನೊಳಗೊಳಗೇ. ಮನ-
ದಾಳದ ಮುತ್ತು: ಹೊಳೆಯದೆ ಒಳಗೇ ಇಟ್ಟವರು.

ಸುತ್ತಲು ಗುಡ್ಡಗಳೇರಿಳಿದು, ಒಜ್ಜೆಯ ಹೊತ್ತು
ಕಲ್ಲಿಗೆ ಮುಳ್ಳಿಗೆ ತಾಗಿ, ಹಳ್ಳಿಗೆ ಸಾಗಿದರು.
ಸೋರುವ ಮಣ್ಣಿನ ಮನೆ ಮೆತ್ತಿ, ಹೊತ್ತಿಸಿ ಚಿಮಣಿ
ರೊಟ್ಟಿಗೆ ಹಂಚಿಟ್ಟರು, ಕೂಗಿತು ಹಿಟ್ಟಿನ ಗಿರಣಿ.

ಹಗಲು: ಎತ್ತಿಗೆ ಹೆಗಲು, ಹೊಲದುದ್ದಕು ನೇಗಿಲು
ಪಾಟಿ-ಪುಸ್ತಕ-ಶಾಲೆ, ಮಗ್ಗಿ ವಾಚನಮಾಲೆ.
ಹಬ್ಬ–ಹುಣ್ಣಿವೆ ವೆಚ್ಚ, ಸುಗ್ಗಿ ಹಿಗ್ಗಿನ ಗುಚ್ಛ
ದೊಡ್ಡಾಟ: ಕತ್ತಿ, ಕಿರೀಟ: 'ಹೇ ದೇವಾ' ಮದ್ದಳೆ.

ಈ ನೆನಪಿನ ಗಡಿದಾಟಿ, ಕವಲೊಡೆದವು ದಾರಿ
ಚಕ್ಕಡಿ ಇಳಿಯುತ್ತ ರಭಸದ ರೈಲನ್ನೇರಿ.

೨

ನಿಲ್ದಾಣಗಳೂ ಬೇರೆ, ಗುರುತಿಸಿ ಇಳಿದವರು
ದಾರಿಗೆ ಹತ್ತಿ, ಅಲ್ಲಲ್ಲಿಗೆ ಬಾಳಿನ ಬೇರು
ಮೆಲ್ಲಗೆ ನೆಲಕಿಳಿದವು ಹೀರುತ ಹೊಸ ನೀರು.
ಸ್ನೇಹದ ಕುಡಿ ಚಾಚುತ ಕಂಗೊಳಿಸಿತು ಹಸಿರು.

ಆನೆಗೆ ಆನೆಯಭಾರ, ಇರುವೆಗು ಇರುವುದು
ಸಂಸಾರ. ಬೇಸಿಗೆಯಲಿ ಕೂಡಿಸಿ ಕಾಳು-ಕಡಿ
ಮಳೆಗಾಲಕೆ ಈಡು, ತುಂಬಿದ ಕೆರೆ ದಂಡೆಗೆ
ಕೊಂಬೆಗೆ ಪಕ್ಷಿಯ ಗೂಡು: ತಕ್ಕಡಿ ಸಮ ಪರಡಿ.

ಸ್ವಭಾವದ ಸಂತುಷ್ಟಿಗೆ ಸಂಕಷ್ಟದ ಕಾವು
ಇಷ್ಟಾನಿಷ್ಟವ ಕರಗಿಸಿ ಸೃಷ್ಟಿಗು ತುಸು ನೋವು.
ತೂಗಾಟ, ತೇಕಾಟವೊ, ನೀಗದ ಜಂಜಾಟ.
ಬಾಗಿದ ಗೊನೆ ಮಾಗಿಸಿದೆ ಬೇಲಿಯ ಒಳತೋಟ.

ಒಂದೆಡೆ ನೆಲಸಿದ್ದರು ನಿತ್ಯವು ಜೀವಕೆ ಪಯಣ
ಇದ್ದುದನಿಲ್ಲೇ ಒಗೆವುದು; ತೀರದು ಎಲ್ಲ ಋಣ.

## 'ನೀಲು'ವಿಗೊಂದು ಶಾಲು

ಏನಮ್ಮ ನೀಲು-
ನೀ ಮೂಲ್ಯಾಗಿಟ್ಟ ಬಣ್ಣದ ಕೋಲು;
ತಿವಿದರ ಮುಟ್ಟಿಕೊ ಬೇಕು
ಸೊಂಟ, ಕೈ, ಕಾಲು,
ತುಂಟಾಟಕ್ಕ ನೀನs ಒಂದು ಸವಾಲು.

ಪ್ರೀತಿ: ನಿನ್ನ ರೀತಿ; ಆದರೂ
ಕೋತಿ ಆಡಿಸಿ ಮಜಾ ನೋಡಬೇಕಂತಿ.
ಏನs ಬಿಡು, ಚ್ಯಾಷ್ಟಿಮಾಡ್ತಾಳ ಅಂದರ
ಕಣ್ಣಾಗ ನೀರು ಬರುಹಾಂಗ ಖರೇನ ಹೇಳಿಬಿಡತಿ.

ಹಕ್ಕಿಹಾಂಗ ಎಲ್ಲಾಕಡೆ ಹಾರ್‍ಯಾಡ್ತಿ
ಸೊಕ್ಕು ಬಂದವರ ತಲಿ ಕುಕ್ಕತಿ
ಕೋಳಿಹಾಂಗ ನಸೀಕ್ಲೆ ಎಬ್ಬಸ್ತಿ
ಬಾಗಿಲದಾಗಿನ ಬಳ್ಳಿಹಾಂಗ ಮೈತುಂಬ ಹೂ ಬಿಡತಿ.

ನಿನ್ನ ಗುಟ್ಟು ಯಾರಿಗೂ ಬಿಟ್ಟುಕೊಟ್ಟಿಲ್ಲ.
ಆದರ ವಾರಕ್ಕೊಮ್ಮೆ ಬರೂದು ಬಿಟ್ಟಿಲ್ಲ:
ಹಾಂಗ ನೋಡಿದರ ನೀಲು-ನೀ ಬಟಾಬಯಲು
ಆದರೂ ಚಳಿಗಾಲದಾಗ ಇರಲಿ, ತಗೊ-
ಹೊತಗೊ ಈ ಶಾಲು.*

## ರಕ್ತಾಕ್ಷಿ

ಶಾಂತಿಪ್ರಿಯರೆ, ಸಂಭಾವಿತರೆ, ಸಹಿಷ್ಣುತಾ-
        ವಾದಿಗಳೆ: ಹಾದಿಬೀದಿಗಳೆ ಹೇಳುತ್ತಿವೆ
ಒಡೆದ ದೀಪಗಳ, ಮೈ ಸುಟ್ಟ ವಾಹನಗಳ, ಆಸ್ಪತ್ರೆಗೆ
        ದಾಖಲಾದ ಮುಗ್ಧರ, ವಿದಗ್ಧರ ವ್ಯಥೆಯ.

ಭುಗಿಲೆದ್ದ ಜ್ವಾಲೆ: ಹಿಂದೆ ಕರಾಳ ನೆರಳುಗಳು; ಕಪ್ಪು
        ಕೈ ಬೆರಳು, ಜಾತಿ-ಮತ-ಕೋಟಿ ಕಂದಕಗಳು,

* ಲಂಕೇಶ ಪತ್ರಿಕೆಯ ನೀಲು ಪದ್ಯಗಳನ್ನೋದಿ.

ಮೆಟ್ಟಿ ದಾಟದೆ ಜಾರುದಂಡೆಯಲಿ ಜೋಲಿ ಹೊಡೆ-
ಯುತ್ತ ಪ್ರಜಾ–ಸತ್ತೆ, ಇತ್ತ ಹೊರಳು.

ಸಾಧು ಸಂತರು, ಮಾನವ ಮಹಂತರು ಅರಳಿ ಮಗ-
ಮಗಿಸಿದ್ದು ಈ ಮಣ್ಣೆ? ಹಸಿದವರಿಗುಣಿಸಿ
ತಣಿಸಿದ್ದು ಈ ಮರದ ಹಣ್ಣೆ? ಜೀವದಲಿ ದೈವತ್ವ
ಕಂಡುದು ಬೇರೊಂದು ಕಣ್ಣೆ? ಯಾವಕಾಲದ ಸುದ್ದಿ?

ಉಪದೇಶಗಳ ಅಣೆಕಟ್ಟುಗಳಿಂದ ಸಿಕ್ಕಾಬಟ್ಟೆ ನೀರು ಹರಿ-
ಬಿಟ್ಟು, ಬೆಳೆವ ಭೂಮಿಗೆ ಸವುಳು ಹಿಡಿಸಿದೆವೆ?
ರೋಗವಿಲ್ಲಗಿಳೆ ಏಕಿಷ್ಟು ವೈದ್ಯ-ತಜ್ಞರ ತಂಡ?
ಶಾಂತಿ ಸಂಪನ್ನತೆಯು ಖಿದ್ದು ಮುಖವಾಡವೆ?

ಸಹಿಸಲಾಗದ್ದನ್ನು ಸಹಿಸಬಲ್ಲೆವು: ಕೊಳಚೆ-ಕೊಂಪೆಗಳ,
ಭ್ರಷ್ಟತೆಯ ದುರ್ನಾತ, ಮಾನನಷ್ಟತೆಯ, ಸಂಪುಷ್ಟ-
ರಬ್ಬರವ, ಜಡ್ಡುಗಟ್ಟಿದ ಕಚೇರಿ ಕುರ್ಚಿಗಳ, ನಗರ ಸಭೆ
ಗಟಾರಗಳ, ವಿಧಾನ ಸಭೆ ಜಂಗೀಕುಸ್ತಿ-ಮಸ್ತಿಗಳ.

ಸುತರಾಂ ಸಹಿಸುವದಿಲ್ಲ: ಅನ್ಯರ ಭಿನ್ನಾಭಿಪ್ರಾಯಗಳ,
ಅಧಿಕಾರ ಪ್ರಶ್ನಿಸಿ-ಪ್ರತಿಷ್ಠೆಗೆ ಧಕ್ಕೆತರುವವರ,
ನೆರೆಹೊರೆಯವರ, ಅಷ್ಟೇಕೆ ಸ್ವಂತ ಮಕ್ಕಳ, ಬಂಧು
ಬಳಗವ, ನಮ್ಮ ಮಾತಿಗೆ ಸುಮ್ಮನೊಪ್ಪದವರ.

ತೆರೆದ ಮನ ಕೆರಳದು, ಹೊರಳದು ವಿರೋಧಕ್ಕೆ, ಘರ್ಷಣೆಯ
ದೃಷ್ಟಿಕೋನ-ಕೋಣಗಳೊ? ನಮಗಿರುವ ಸ್ವಾತಂತ್ರ್ಯ
ಉಳಿದವರಿಗಿದ್ದರೆ ಕಷ್ಟ: ಮತದ ಬೆಲೆ ಗೊತ್ತು: ಮತಗಟ್ಟೆಗಳ
ಹಿಡಿದು ಕುಳಿತರೆ ಸಾಕು-ಎಲ್ಲರಿಗು ಲಕ್ಷಗೊಟ್ಟು.

ನಮ್ಮ ಹೃದಯವು ಸದಾ ಎಚ್ಚರವಿರುವ ಭರವಸೆಯುಂಟೆ?
ಹಿಂಸೆ ಕ್ರೌರ್ಯದ ಬೇರಿನಲ್ಲಿ ನೀರಿನ ಝರಿ:
ಬಗೆಬಗೆಯ ಪ್ರಾಣಿಗಳಿಗಲ್ಲಿ ನೂರೆಂಟು ಗವಿ, ಬೀದಿಯಲಿ
ಹುಲಿಯ ಕಂಡರೆ-ಈಗ ಆಘಾತ ನಮಗೆ.

ಕುರುಡರಾನೆಯ ಕಂಡ ಕಥೆಯಲ್ಲ; ಪುಣ್ಯಕೋಟಿಯ ಕಂಡ
ನಾವೇನು ಪರಿಶುದ್ಧರಲ್ಲ;ಎಂಥದೊ ಮಿಶ್ರಣ, ಕಲಬೆರಕೆ-
ಸಳಮಳ ಕುದಿಸಿ, ಕೆಳಗಿಳಿಸಿ ಕಾದರೆ ತಿಳಿಯು ದೊರಕೀತು-
ರುಧಿರೋದ್ಗಾರಿ, ರಕ್ತಾಕ್ಷಿ ಹೀಗೆ ಅನುಕ್ರಮಣಿಕೆ.

# ನಾನು ಎಚ್ಚರಗೊಂಡ ಹಾಗೆ

೧

ನಾನು ಎಚ್ಚರಗೊಂಡ ಹಾಗೆ
ನೂರಾರು, ಸಾವಿರಾರು ವರುಷಗಳು ಹೋದಂತೆ ಭಾಸವಾಯಿತು.
ಕನಸುಗಳ ಹೆಣೆಯುತ್ತ
ಬಿಳಿ, ಕಪ್ಪು, ಬೂದು, ಕೆಂಪು, ಗುಲಾಬಿ ವರ್ಣದ ಕನಸುಗಳು-
ಮನೋಹರ, ಸುಂದರ ಕನಸುಗಳು
ಪರ್ವತದ ಮೇಲೆನ್ನ ಎತ್ತಿ ಹಿಡಿದು
ಮತ್ತೊಂದರಡಿಗೆ ಬೀಸಿ ಒಗೆದು;
ಒಂದು ಪರ್ವತ ಮತ್ತೊಂದು ಪರ್ವತವನ್ನು ನೂಕುತ್ತ
ಪರಸ್ಪರ ಡಿಕ್ಕಿ ಹೊಡೆಯುತ್ತ
ಜೀವನದ ಗುರಿಗಳನ್ನು, ನಿರುದ್ದೇಶಗಳನ್ನು ಶೇಖರಿಸುತ್ತ
ವಿಸ್ತಾರವಾದ ಕಡಲುಗಳಿಗೆ ಸೇತುವೆ ಕಟ್ಟುತ್ತ,
ಮುತ್ತುಗಳ ಪೋಣಿಸುತ್ತ
ಪ್ರಿಯೆ ಬರಬಹುದೆಂದು.

೨

ಸುಗಂಧ ತೀಡಿದ ತಿಂಗಳ ಬೆಳಕಿನಲ್ಲಿ
ಆವೇಗದಿಂದ ಕೆಂಪೇರಿದ ಮದ್ಯದ ಮಟ್ಟಲುಗಳನ್ನು ಸಿಂಗರಿಸುತ್ತ
ಕೆಂಡದುಂಡೆಯಂತಿರುವ ಸೂರ್ಯನೆದುರು
ಚಂಚಲವಾದ ತರಳ ಮೋಡಗಳ ಬದಿಗೆ ದಿಂಬಿಗಾತು
ಮಂಜು ಬಿಳುಪಿನ ವಕ್ಷಸ್ಥಲಕ್ಕೆ ತಡಕಾಡುತ್ತ
ಯಾರಿಗೊ ಹೊಂಚು ಹಾಕಿ ಒರಗಿಕೊಂಡು
ದಟ್ಟ ಕಾರಿರುಳಿನಲ್ಲಿ
ನನ್ನ ಕೃತ್ಯಗಳಿಗೆ ಅವಕಾಶವೀಯುತ್ತ
ಮೌನದ ಮುಸುಕುಗಳನ್ನು ಹರಿದೊಗೆದು
ಪಾತಾಳದಾಳಕ್ಕಿಳಿದು
ಬೆಳಕಿನ ರೆಕ್ಕೆಗಳೊಂದಿಗೆ ಸ್ವರ್ಗಕ್ಕೇರುತ್ತ-
ನನಗೇನೂ ತಾಗಲಿಲ್ಲ, ಏನೊಂದೂ ಕಾಣಲಿಲ್ಲ:
ವ್ರತ ಹಿಡಿದು ಹೀಗೇ ಒಬ್ಬರ ಬಗ್ಗೆ ಆಲೋಚಿಸಿದೆ.
ಧ್ಯಾನಾಸಕ್ತನಾಗಿ ಜಪತಪದಲ್ಲಿ ನಿರತನಾದೆ.
ಏನೂ ಗೊತ್ತಾಗಲಿಲ್ಲ, ನನ್ನ ದೃಷ್ಟಿಗೆ ಏನೂ ಬೀಳಲಿಲ್ಲ.

ಅದೇನು ಪ್ರಾಣಿಯೆ? ಅಥವಾ ಮನುಷ್ಯ ವ್ಯಕ್ತಿಯೆ?
ಕನಸುಗಳನವಲಂಬಿಸಬೇಕೆ? ನಂಬಬೇಕೆ?

೩

ನನ್ನಷ್ಟಕ್ಕೆ ನಾನು ಬಹುರೂಪಿಯಾದ
ಎಷ್ಟೊ ಮುಖಗಳನ್ನು ಆಳಿಸಿ ಹಾಕಿದೆ.
ಇನ್ನೆಷ್ಟನ್ನೊ ಕಳೆದುಕೊಂಡೆ.
ತಿರುಗಿ ಪಡೆಯಲು ನಾನೇತಕ್ಕೆ ಪ್ರಯತ್ನಿಸಲಿ?
ಹೋದದ್ದು ಎಂದಾದರೂ ಮರಳಬಹುದೊ
ನಾನು ಮಾರಿಕೊಳ್ಳಲಾಗದ್ದು ಏನಾದರೂ ಇತ್ತೆ?
ಕನಸುಗಳ ಮಾತಿರಲಿ,
ನಾನು ಕನಸುಗಳ ಹೊತ್ತು ಮಾರುವವನು.
ಬರಿಗೈಯಿಂದ ನಾನೇನು ಮಾರಬಲ್ಲೆ? ಅಥವಾ ಕೊಳ್ಳಬಲ್ಲೆ?
ನಾಕವನ್ನೆ? ನರಕವನ್ನೆ? ಇಲ್ಲ, ಕರ್ಮನಿರತ ಜಗತ್ತನ್ನೆ?
ಕನಸುಗಳು ವಾಸ್ತವದ ಭವಿಷ್ಯ ನುಡಿಯ ಬಲ್ಲವು.
ಆದರೆ ನನ್ನ ಕನಸುಗಳು ಹಾಗಿರಬಹುದೆ?
ಯಾವುದೇ ಕನಸುಗಳ ನರಕ ಎಂದಾದರೂ ಉಜ್ವಲವಾಗಿ
ಉರಿಯಬಹುದೆ?
ಅವು ಸಾಕಾರಗೊಂಡು ನಿಲ್ಲಬಹುದೆ?

೪

ಆ ವ್ಯಕ್ತಿ ಚೆಲ್ಲಾಪಿಲ್ಲಿ ಹರಡಿ ಹಂಚಿತ್ತು,
ಊರಿಂದೂರಿಗೆ ಸಿಂಪಡಿಸಿತು.
ನನಗದು ಸಾಧ್ಯವಿರಲಿಲ್ಲ, ನಾನು ಸಂಗ್ರಹಿಸಿದೆ.
ನೀರಿನಲ್ಲಿ ಗದಬಡಿಸಿದೆ.
ಮಳಲಿನ ಕಣಗಳನ್ನು ಹಗ್ಗವಾಗಿ ಹುರಿಗೊಳಿಸಿದೆ.
ಮುಟ್ಟಲಾಗದ ಗಾಳಿಯನ್ನು ಮುದ್ದೆ ಮುದ್ದೆ ಮಾಡಿಟ್ಟೆ.
ಗುಡ್ಡಗಳನ್ನೂ ತಿಕ್ಕಿ ಚೊಕ್ಕಟ ಮಾಡಿದೆ.
ಕಿರಣಗಳ ಕ್ಷಿಪಣಿಗಳನ್ನು ನುಂಗಿಬಿಟ್ಟೆ.
ಸೂರ್ಯನನ್ನೂ ನಗರಗಳನ್ನೂ ಸುಟ್ಟು ಹಾಕಿದೆ.

ಹಿಮನಗರಗಳನ್ನು ಕೊಳ್ಳೆ ಹೊಡೆದೆ
ಬೆಂಕಿಯ ಹೊಳೆಗಳನ್ನು ದಾಟಿದೆ ;

ಕಡಲುಗಳನ್ನು ಕಡೆದು ಹೀರಿ ಹಾಕಿದೆ.
ಅಕ್ರೋಡದ ಚಿಪ್ಪಿನಲ್ಲಿ ಇಣಿಕಿದರೆ ತಿಳಿಯುವದು
ನಾನೆಂತು ಜೀವಂತ ಉಳಿದೆನೆಂದು.
ನಗರ ನಗರಗಳನ್ನು ಸುತ್ತಿದೆ.
ಚೀರಾಟ ಗೋಳಾಟಗಳಿಂದ ಬಳಲಿ ಬೆಂಡಾಗಿ
ಇಲ್ಲಿ ಸುತ್ತ ಮುತ್ತ ಯಾರಾದರೂ ಇದ್ದಾರೆಯೆ? ಮಾತಾಡಿ
ನನ್ನ ಬೆನ್ನುತಟ್ಟಿ, ಬೆಂಬಲ ನೀಡಿ.
ಈಗ ನಾನು ಪೂರ್ತಿ ಎಚ್ಚರಗೊಂಡೆ.
ನೂರು, ಸಾವಿರ ವರ್ಷಗಳು ಉರುಳಿದವು.
ಆ ವ್ಯಕ್ತಿಗೆ ಸಾಧ್ಯವಾಯಿತು, ಹಂಚಿತು,
ಅದರಿಂದ ಫಲವನ್ನು ಪಡೆದುಕೊಂಡಿತು.
ನನಗಾಗಲಿಲ್ಲ; ನಾನು ಶೇಖರಿಸಿದೆ.
ನೀರಿನಲ್ಲಿ ಗರಬಡಿಸಿದೆ.
ನನಗೆ ಸಾಧ್ಯವಾದದ್ದು: ಕನಸು ಕಾಣುವದು.*

## ಅರವತ್ತರೊಸಗೆಯಲಿ

ಅತ್ತಿಕೊಳ್ಳವ ದಾಟಿ, ಗುಡ್ಡಗಳ ಏರಿಳಿದು
ಹಸಿರು ಹೊಸತಿಲವರೆಗು ಬಂದ ರೀತಿ:
'ಬನ್ನಿ ಹದುಳವೆ?'- ಮಾತು ಹೂ-ಕಸೂತಿ.

ಹೊರಗಿನಂತೆಯೆ ಒಳಗು ಓರಣ, ಸಮೀಕರಣ
ಮಿಡಿವ ಅಂತಃಕರಣದಾವರಣವು,
ಸೌಮ್ಯ-ನಿಷ್ಠುರ-ನಿಗಮ ದಾಂಪತ್ಯವು

ಮೆಲ್ಲನಡೆ, ಮೆಲ್ಲನುಡಿ ಮುಗ್ಧನಗೆ ಮಲ್ಲಿಗೆಯು
ಎಳ್ಳು-ಬೆಲ್ಲದ ಸ್ನಿಗ್ಧ ಸಹ ಚಿಂತನೆ.
ಅನುಕಂಪ ಕಂಪೊಗೆವ ಸಂಪಿಗೆ ತೆನೆ.

ದಿನವು, ತಿಂಗಳು, ವರುಷ; ನೋವ ನುಂಗಿದ ಹರುಷ
ಕವಿತೆ ಕೆನೆಗಟ್ಟಿರಲು ತನ್ನಷ್ಟಕೆ-
ಚಳಿ ಕಾಯಿಸುವ ಭಾವದಗ್ಗಿಷ್ಟಿಕೆ.

* ಮೂಲ ಕಾಶ್ಮೀರಿ : ರಸೂಲ ಪಾಂಪೂರ.

ಆರುವತ್ತರೊಸಗೆಯಲಿ ನೂರು ಬೆಳ್ಳಕ್ಕಿಗಳು
ಬಾನಿನಾಚೆಯ ಅಮೃತ ಬಿಂದು ಕುಡಿದು
ರೆಕ್ಕೆ ಬೀಸಿವೆ ಮತ್ತೆ ಪಯಣಕೆಂದು.*

## ಅಭಿವಂದನೆ

ನೀವೆಲ್ಲಿಯವರು,. ನಾವಲ್ಲಿಯವರೆ ನಮ್ಮೂರು ದೂರವಿಲ್ಲ,
ಕನ್ನಡದ ತವರು ಕರೆದಾಗ ನಮಗೆ ಮೈನವಿರು, ಮಾತ್ರವಲ್ಲ-
ಗಂಗೋತ್ರಿಯಲ್ಲಿ ಮೂಡಿರುವ ಕನಸು ಮಾನಸದ ಹಂಸದಂತೆ.
ಹಾಲು-ನೀರು ಬೇರ್ಪಡಿಸಿ ಮೇಲೆ ದಿಗ್ವಲಯಕೇರಿದಂತೆ.

ದೂರ-ಸನಿಹ ಆಧಾರ ಹಿಡಿದು ಹೊರಟಿಲ್ಲ ನಮ್ಮ ದಾರಿ
ಸುತ್ತು ಬಳಸಿದರು ಹತ್ತುಗಡಿಯ ಬತ್ತಿಗಳ ಕುಡಿಯ ಚಾಚಿ
ನೆಳಲು-ಬೆಳಕು ನಸುನಕ್ಕು ಮಿಕ್ಕ ಅಕ್ಕರತೆ ಬೆಂಬಲಾಗಿ
ತುಂಬು ನಂಬಿಗೆಯ ಬುತ್ತಿ ಬಿಚ್ಚುವೆವು ಸ್ವಸ್ಥಚಿತ್ತರಾಗಿ.

ಬದುಕು ಎಲ್ಲ ಹೊತ್ತಗೆಯಲಿಲ್ಲ, ಹುಗಿದಿಲ್ಲ ದುಡ್ಡಿನಂತೆ
ಮಾಡಿದಂತೆ ಅದರಾಟ ಮಾಟ, ಒಟ್ಟಿದರೆ ಗುಡ್ಡದಂತೆ;
ಕೈಗೆ ಸಿಕ್ಕು ಸಿಗದಂತೆ, ಬೂರಲದ ಅರಳಿ ಹೊರಳಿದಂತೆ
ಬಟ್ಟಬಯಲಿನಲಿ ಗುಟ್ಟನೊಡೆದು ಗಾಳಿಯಲಿ ಹರಡಿದಂತೆ.

ಸುತ್ತಮುತ್ತ ಒತ್ತಡದ ನಡುವೆ ಕಾರಂಜಿ ಪುಟಿವ ಜೀವ
ಮುತ್ತಿನಂತೆ ಮಾತೆತ್ತಿ ಹಿಡಿದು ಹೊಳೆಯಿಸುವ ಹಾವ-ಭಾವ
ಚಿತ್ತದಲ್ಲಿ ಮತ್ತಿಳಿದು ಮೇಲೆ ಪಲ್ಲವಿಸಿ ಹಿಗ್ಗುವರಳು
ಹುತ್ತದಿಂದ ಹೊರಬಂದಹಾಗೆ ಈ ಧ್ವನಿಗೆ ಇಂಥ ಕೊರಳು.

ಈ ಜನದ ಮಾತು ರೀತಿಯಲಿ ಹುದುಗಿ ಹದಗೊಂಡ ನೋವು-ಕಾಪು:
ನೆಲದ ಜೊತೆಗೆ ಮಲಗೆದ್ದು ಹೊಲದ ಬದುವಿನಲಿ ಬಂದ ಮಾವು
ಪ್ರೀತಿ, ಮುನಿಸು, ಮಾತ್ಸರ್ಯ ಆರ್ಯ-ದ್ರಾವಿಡರ ದ್ವಾರಬಂಧ
ದಾಟಿ ಹೊರಗೆ ನಿಜಗುಣಿಯು ಕಂಡ ಕನ್ನಡದ ನಾಟ್ಯಬಂಧ.

---

* ಶ್ರೀಮತಿ ಶಾಂತದೇವಿ ಮಾಳವಾಡ: ಅರುವತ್ತು.

ಬರೆದುದೇನೊ ನಮಗರಿಯಲೆಂದೆ; ಅರಿತಾಗ ಬೇರೆ ಕೊರತೆ
ಮರೆತ ಮಾತು ನೂರೆಂಟು ಆದರೂ ಬೆರೆತ ಕುದಿಯು ಹೊರತೆ?
ಹಳತು-ಹೊಸತು ಎಳೆದಾಡಿ ಹರಿದು ಹೊಸಬಟ್ಟೆ ಬೇಡುತಿಹವು-
ಅಳತೆ ಕೊಟ್ಟು ಹೊಲಿಸಿದರು ತೊಟ್ಟು ಮೈಕಟ್ಟು ಸಡಿಲು-ಬಿಗಿಯು.

ತಲೆಮಾರಿಗೊಂದು ಹೊಸಸುಗ್ಗಿ ಹಿಗ್ಗಿ ಬೆಳೆದಿಹುದು ತುಂಬಿ ಕಣಜ
ಸೋಮಾರಿಗೊಂದೆ ಬರಗಾಲ, ಸೃಷ್ಟಿ ಪರಮೇಷ್ಠಿ ಕಲೆಯ ತೇಜ.
ನೀರು-ಹಸಿರು, ಬಂಗಾರ-ಬಸಿರು ಒಳಗೊಳಗೆ ತಿರುಗಿ ಮಾಗಿ
ಹಗಲು-ಇರುಳು ಹಿಡಿದಿಹುದು ತೂಕ:ನೆಲ-ಮುಗಿಲು ಪರಡೆಯಾಗಿ.

ಏಳುತಿಹುದು ಯೌವನವು ಕೊಡವಿ ಭಿಡೆ-ಭಾರ ತೂರಿ ಒಗೆದು
ಎಲ್ಲರೆದುರು ಮುಖವಾಡ ಕಿತ್ತು ನಿಜಬಣ್ಣ ಬಯಲಿಗೆಳೆದು.
ತುಳಿತ ಸಹಜ ನಡೆಯಲ್ಲ, ದಲಿತ ಹೆಸರಲ್ಲ ಮಾರಿಕೊಳಲು
ಹಂಡಬಂಡ ಜೀವನವ ಹಿಂಡಿ ಕುಡಿದಂತೆ ಕಳ್ಳಿ ಹಾಲು.

ನೂರು ದಾರಗಳ ಗೋಜು ವ್ಯಕ್ತಿ ಅವ್ಯಕ್ತ ತಳಕು-ಮಳಕು
ಒಳಗಿನೊರತೆ ತಿಳಿದಿಲ್ಲ, ಇಲ್ಲ ಔದಾರ್ಯದೊಂದು ಹಳಕು.
ಮೂಲೆ ಮೂಲ ಚಿಂತನೆಗೆ, ಬಯಲು ಆಗೀಗ ಎಷ್ಟೊ ಅಷ್ಟೆ.
ಬೆಳೆವ ಬದುಕು ಕಂಡಲ್ಲೆ ಹಿಗ್ಗಿ ಉಳಿದೆಲ್ಲ ಮರೆತುಬಿಟ್ಟೆ.

ಎದೆಯ ಕರೆಗೆ ಓಗೊಡುವುದೊಂದೆ ಒಡಗೂಡಿ ನಡೆವುದೊಂದೆ
ಹಿಡಿದ ದಾರಿ; ಅನುಮಾನಿಸಿದರು ಆಯಾಸವಿರದೆ ಬಂದೆ.
ಸ್ನೇಹ ಪ್ರೀತಿ ವಿಶ್ವಾಸ ಹಾಸ ಮಧುಮಾಸ ತುಂಬಿದೊಸಗೆ
ವಧುವಿನಂತೆ ನಸುನಾಚಿ, ನಮಿಸಿ, ಈ ಜೀವ ಬಂತು ಹಸೆಗೆ.



# ಜೇನಿಯಾ

೧೯೮೬-೧೯೮೯

## ಜೇನಿಯಾ

ಎಣಿಸಿ, ಬಿಡಿಬಿಡಿಸಿ ಹೇಳಬಹುದಾದಷ್ಟು-
ರೆಕ್ಕೆಯಂತೆ
ಜೋಡು ಜೋಡೆಲೆ ಬಿಟ್ಟು,
ಕವಲು ನಾಲ್ಕಾರು ಒಡೆದು, ಮೇಲೆದ್ದು
ನೆಟ್ಟಗೆ ದೇಟು
ದೇಟಿನ ತುದಿಗೆ ಹೂ ಬಿಟ್ಟ ದಿಟ್ಟತನ.

ದಟ್ಟ ಪಕಳೆಗಳು ಸುತ್ತು-
ನಟ್ಟನಡುವೆ
ಬೀಜಕಣಿಯಾದ ಗುಂಡು-ಕೇಸರ—ಬಂಡು,
ಹಣತೆ ಹಚ್ಚಿಟ್ಟಂತೆ ಸಂತುಷ್ಟಿ.

ಗಾಳಿ ಬೀಸಿದರೆ
ತುಸುವೂ ಗಾಸಿಯಾಗದೆ,
ಬಾಗಿ, ಬಳುಕಿ
ಬಾಡಿ ಉದುರಿ ಹೋಗದೆ-

ಆಡಾಡುತ್ತ ಪಾತರಗಿತ್ತಿ
ಬಂದು ಕುಳಿತಾಗ
ನೋಡಿ
ತಲೆಯಾಡಿಸುವದು.

ಬೇಕಿಲ್ಲ ದಿನವೂ ನೀರಿನಾರೈಕೆ,
ವಾಸನೆಯ ಸೋಕಿಲ್ಲ.
ಗಟ್ಟಿ ಬಣ್ಣದ ನಿಂತ ನಿಲವಿನಲೆ
ತಟ್ಟನೆ ಕಣ್ಣು ಸೆಳೆಯುವದು.
ಕವಿಸಮಯದ
ಕುಸುಮ ಕೋಮಲತನಕೆ
ಧಕ್ಕೆ :
ಏನು ಹೇಳುತ್ತೀರಿ ನೀವಿದಕ್ಕೆ?

## ಜರ್ಬರಾ

ಗಡ್ಡೆ ಹೌದೊ, ಅಲ್ಲವೊ
ಒತ್ತಾಗಿ ಸುತ್ತ ಹರಡಿರುವ ಬೇರುಗಳ
ಗೇಣುದ್ದ ಜಾಲ.

ಬೇಸಗೆಯಲ್ಲಿ
ಮಣ್ಣಿನೊಳಗಿದ್ದು ಇಲ್ಲದಂತೆ.

ಮೊದಲ ಮಳೆ ಬಿದ್ದೊಡನೆ
ನೆನಹು
ಒಡಮುರಿದೆದ್ದು
ನೆಲದಿಂದಲೇ
ಹಿಡಿಯಷ್ಟು ಹಸಿರು ಗರಿ ಬಿಚ್ಚಿ
ನಡುವೆ ಒಂದೆರಡು ಮೊಗ್ಗೆ
ಉದ್ದ ಗಣೆ ತುದಿಗಿದ್ದು
ಬಿಚ್ಚುವವು
ಬಣ್ಣ ಬಣ್ಣದ ಛತ್ರಿ-

ಗಾಳಿಗೋಲಾಡುತ್ತ
ಹಗಲು-ರಾತ್ರಿ.

ಸದ್ದಿಲ್ಲದೆಯೆ
ಚೆಲುವು ಬಾವುಟವೆತ್ತಿ
ನಿತ್ಯ ಗೆಲ್ಲುವದು
ಜೀವನ ಶ್ರದ್ಧೆ-
ತುಂಬಿ ಬುದ್ಧಿ -ಭಾವದ ಕೊರತೆ.

ಜರ್ಬರಾ:
ಅಬ್ಬರವಿಲ್ಲದಪ್ಪಟ ಕವಿತೆ.

## ಮನುಷ್ಯ-ಪ್ರಕೃತಿ

ತಿರಸ್ಕೃತ ಕಸಕಡ್ಡಿ, ಎಲೆ ಕಳಿತು ಗೊಬ್ಬರವಾಗಿ
ಮೆಲ್ಲಗೆ ಬೀಜ ಮೊಳೆತು, ಪುರಸ್ಕರಿಸಿ ಹಳತು-ಹೊಸತು
ಸಸಿ ಮೇಲೆದ್ದು, ಕಣ್ ಸೆಳೆದು ಬೆಳೆದು, ಗಾಳಿಗಲ್ಲಾಡುತ್ತಲೇ
ನೆಟ್ಟಗೆ ಗಟ್ಟಿತನ ಪಡೆದು, ದಿಕ್ಕು ದಿಕ್ಕಿಗೆ ಸ್ವತಂತ್ರ
ಟೊಂಗೆಗಳ ಚಾಚಿ ವಿವಿಧ ಭಂಗಿಯಲಿ-
ಗಾಳಿ ವೇಗಕ್ಕೆ ತಕ್ಕ ನಾಟ್ಯ, ಬಿಟ್ಟುಕೊಡದಂತೆ ತನ್ನ
ದಾರ್ಢ್ಯ, ಸೂರ್ಯ ಮೇಲೇರಿ ಕೆಳಗಿಳಿದಂತೆ ನೆರಳು
ಚಿತ್ರ ವಿಚಿತ್ರ ಬಿಡಿಸಿ, ಮೋಡ ಅಡ್ಡೈಸಿದರು
ಮೂಡು ಕೆಡದಂತೆ ಮೂಡಿಸುವ ಕಲೆ.

ನೂರು ಬಗೆ ಹಕ್ಕಿ ಅತಿಥಿಗಳಂತೆ, ಇಲ್ಲ ಬಂಧು ಬಳಗವೇ
ಎಂಬಂತೆ ನಿಶ್ಚಿಂತ ಕುಳಿತು, ದೂರದೂರದ ಅರಣ್ಯದ ಸುದ್ದಿ
ಚಿಲಿಪಿಲಿಸಿ, ಒಂದಿಷ್ಟು ಕೊರಳು ಸರಿಪಡಿಸಿ, ಹಾಡಿ
ಚುಂಚು ತಿಕ್ಕಿ, ಗರಿ ಹಿಗ್ಗಲಿಸಿ ಕೊಡವಿ, ಹಿಕ್ಕೆ ಹಾಕಿ
ಮತ್ತಾವ ನೆನಪೊ, ಸಿಕ್ಕತ್ತ ಹಾರಿ ಮರೆಯಾಗುವವು.
ಆಳದ ಬೇರಿನಿಂದ ನಿರಾಳ ಟೊಂಗೆ-ಟಿಸಿಲಿನವರೆಗು
ಮರಮರದ ಮರ್ಮರ, ವಿಚಿತ್ರ ನೋವು-ನಲಿವು.

ಸ್ವಲ್ಪ ಕಾಲೆತ್ತರಿಸಿದರೆ ಕನಸುಗಳು ಕೈಗೆಟಕಿ
ಬಿಡುವಂತೆ ಹೂ ಬಿಟ್ಟು, ಎಲೆಯ ಮರೆಯಲ್ಲಿ ಕೆಲವು,
ಹೊರಗೂ ಹಲವು ಹಣ್ಣು ಕಾಯ್ ಗೊಂಚಲು
ತೂಗಿ, ಮೈಚಳಿ ಬಿಟ್ಟು, ಋತುಮಾನಕ್ಕೆ ತಕ್ಕಂತೆ-
ಶಬ್ದಕೋಶಗಳಲ್ಲಿಸಿಗದ ಬಣ್ಣಗಳ ಎಲೆ ಎಲೆಯಲ್ಲಿ
ಹಿಡಿದು, ಬಯಲಿಗುಡುಗೊರೆಯಾಗಿ ಮುಗಿಲೆಡೆಗೆ ದೃಷ್ಟಿ
ಮಳೆಯಲ್ಲಿ ತಟಸ್ಥ, ಅಂತರ್ಮುಖಿಯಾಗಿ ನೆನೆದು
ನಿಂತಮೇಲೂ ಎಲೆದುಟಿಯಲ್ಲಿ ತಟಪಟ ಮಂತ್ರ.

ಎಲೆಯುದುರುವಾಗ ನಿರ್ಭಾವದಲಿ ನಿಂತ, ಗಾಳಿಯಲಿ
ಗಿರಿಗಿರಿ ತಿರುಗಿ, ನೆಲವನಪ್ಪುವುದು ನೋಡುತ ಸಂತ.
ಇಡಿಯ ಮರವೀಗ ಎಲೆಯ ಮರ್ಮರವಿರದ ಮೂಲಾಕೃತಿ.
ಬರುವ ಸಂವತ್ಸರಕೆ ಬರೆದ ಭರವಸೆಯ ನಕ್ಷೆ.
ಕಾಯುತ್ತದೆ ವಸಂತಕ್ಕೆ ನೆನಪು-ಹಸಿಯುಳಿಸಿಕೊಂಡು
ಅನುಭವಿಸುತ್ತ ಈ ಬಗೆಯ ಬರಡು ಶಿಕ್ಷೆ.

ಕಾಯಲಾರದೆ ಮನುಷ್ಯ ಕೊಡಲಿಯೆತ್ತುತ್ತಾನೆ;
ಮಾಯಾಲಾರದ ಗಾಯ ಭವಿಷ್ಯಕ್ಕೆ, ಭೂತಕ್ಕೆ ಬಲಿ?
ಒಂದೊಂದು ಏಟಿಗೂ ಒಂದೆಡೆಗೆ ಭೂಕಂಪ
ಮತ್ತೊಂದೆಡೆಗೆ ಚಂಡಮಾರುತ, ನೂರು ಅಪಘಾತ.
ಕಡಿದ ಟೊಂಗೆಯ ಬದಿಗೆ ಚಿಗುರು ಪಿಳಿಪಿಳಿಕಣ್ಣು,
ಅನುಮಾನಿಸುವ ಮೊಗ್ಗೆ: ಈ ಮನುಷ್ಯನ ಬಗ್ಗೆ
ಎಲ್ಲೆಡೆಗು ಸಂಶಯವೆ. ಇದರ ತಣ್ಣೆಳಲಲ್ಲಿ ಕುಳಿತು
ನಲ್ಲೆಯ ಗಲ್ಲ ಮುಟ್ಟಿ, ಮಗುವ ಮುದ್ದಿಸಿದವನು
ಹೂ ಹಣ್ಣು ಕಾಯಿಗಳ ಪಡೆದು ಗುಡಿಗೆ ಹೋದವನು
ಯಾರು? ಹೌದು, ಇವನೆ, ಈ ಮನುಷ್ಯನೆ.

## ಹೂವು ಹೊರಳುವವು

ಹೂವು ಹೊರಳುವವು ಸೂರ್ಯನ ಕಡೆಗೆ
ನಮ್ಮ ದಾರಿ ಬರಿ ಚಂದ್ರನವರೆಗೆ-
ಇರುಳಿನ ಒಡಲಿಗೆ, ದೂರದ ಕಡಲಿಗೆ
ಮುಳುಗಿದಂತೆ, ದಿನ ಬೆಳಗಿದಂತೆ
ಹೊರ ಬರುವನು ಕೂಸಿನ ಹಾಗೆ.

ಜಗದ ಮೂಸೆಯಲಿ ಕರಗಿಸಿ ಬಿಡುವನು
ಎಲ್ಲ ಬಗೆಯ ಸರಕು;
ಅದಕೆ ಅದರ ಗುಣದೋಷಗಳಂಟಿಸಿ-
ಬಿಡಿಸಿಬಿಟ್ಟ ತೊಡಕು.

ಗಿಡದಿಂದುದುರುವ ಎಲೆಗಳಿಗೂ ಮುದ-
ಚಿಗುರುವಾಗಲೂ ಒಂದೆ ಹದ.
ನೆಲದ ಒಡಲಿನೊಳಗೇನು ನಡೆವುದೋ
ಎಲ್ಲಿ ಕುಳಿತಿಹನೊ ಕಲಾವಿದ.

ಬಿಸಿಲ ಧಗೆಯ ಬಸಿರಿಂದಲೆ ಸುಳಿವುದು
ಮೆಲು ತಂಗಾಳಿಯು ಬಳಿಗೆ.
ಸಹಿಸಿಕೊಂಡ ಸಂಕಟವನು ಸೋಸಲು
ಬಂದೆ ಬರುವುದಾ ಗಳಿಗೆ.

ಸಹಜ ನಡೆದರೂ ಭೂಮಿಯ ಲಯದಲಿ
ಪದಗಳನಿರಿಸಿದ ಹಾಗೆ.
ವಿಶ್ವದ ರಚನೆಯ ಹೊಳಹಿನಲ್ಲಿ
ಕಂಗೊಳಿಸಿತು ಕವಿತೆಯು ಹೀಗೆ.

## ಶರಣಭಾವಕ್ಕೆ ಹೊಸರೆಕ್ಕೆ

ಮಠ–ಪೀಠ-ಪಲ್ಲಕ್ಕಿ : ಸಂದಿಗ್ಧ ಸಂಕೇತ.
ಹತ್ತಿ ಮೆರೆದವರು ಇಳಿದು ಹೋದರು ಧರಾತಳ-
ದೊಳಗೆ, ನಿಜದ ನಿಲವಿಗೆ ತೂಗಿನಿಂದವರು, ಒಳ-
ದನಿಗೆ, ತಿಳಿವಿಗೆ ತಮ್ಮನೊಡ್ಡಿ, ಸಂಪದ್ಭರಿತ
ಜನಸಮೂಹದಿ ಬೆರೆತು, ಮೂಢ ರೂಢಿಯ ಕೀಲಿ
ಜಡಿದ ಬಾಗಿಲು ತೆರೆದು, ಮೂಲೆಮೂಲೆಯ ಜೇಡ–
ಬಲೆ ಗುಡಿಸಿ, ಪೊರಕೆ ಹಿಡಿದುದೆ ಹರಕೆ, ಉದ್ದಂಡ.
ಮುಳ್ಳು ಹೂವಾಗಿ ಅರಳಿತು ಮನೆ-ಮನದ ಬೇಲಿ.

ಎದ್ದೇಳಬೇಕು ಹೀಗೆ ಸದ್ದುಗದ್ದಲವಿರದೆ
ಕನಸುಗಳ ಕಂಡರಿಸೆ, ಶುದ್ಧ ಮನಸಿಗೆ ಬುದ್ಧಿ

ಸದಾ ಬೆಂಬಲಿಸಿ, ಹೃದಯ ಹಂಬಲದೊಳದ್ದಿ.
ಆಕಾಶ ಗೋಪುರಕೆ ಭೂಮಿ ಗದ್ದುಗೆ ಎಂದೆ.
ಸಂಕಲ್ಪದೊಳಗೆ ಸಂಕೇತ ಕರಗಿಸಿ, ಶರಣ
ಭಾವಕ್ಕೆ ಹೊಸರೆಕ್ಕೆ: ಮುಟ್ಟು ನೀಲಾಂಗಣ.

## ಒಲವು

ಒಲವಿನಿಂದಲೆ ನಲಿವು, ನಲುಗದಂತಿದೆ ಚೆಲುವು,
ಬಿರುಗಾಳಿಗಲ್ಲಾಡಿದರು ನಿಶ್ಚಲದ ನಿಲವು.
ದೂರದಾಳದಲಿ ಬೇರು; ಮೇಲೆ ಎಲೆ ಕೋಮಲ,
ನೆಲಕಚ್ಚಿ ಹೀರುತ ನಿತ್ಯ ಸಂಸಾರ ಸಫಲ.
ಹೂವು ಬಿಡದಲೆ ಕಾಯಿ ಹಿಡಿವ ಗಿಡವೂ ಉಂಟು
ಕಾವು ಕೂರುವ ಹಕ್ಕಿ ಬಿಡಿಸಲಾರದ ನಂಟು.
ತೆರಿಗೆ ಹೇರದ ರಾಜ್ಯ ಹುಡುಕಿದರೆ ಸಿಗಬಹುದು,
ಹೆರಿಗೆ ನೋವಿರದ ತಾಯನೆಲ್ಲಿ ತರಬಹುದು?

ಮುಗಿಲಿನಂಗಳದಿ ಸೆಲೆಯೊಡೆದು ಮಿಂಚದ ಮೋಡ
ಯಾವ ಗೂಢ? ಕಾಡಿನ ಬಾಹುಬಂಧನ ಕೂಡ
ಸಡಿಲಿ, ನಡು ಸರೋವರ ಬತ್ತಿ, ಪಕ್ಷಿಗಳ ವಲಸೆ.
ಹೊಲದುದ್ದ ನೇಗಿಲನೆಳೆವ ಎತ್ತಿಗೊತ್ತಾಸೆ.
ಒಲವಿನೆಳೆ ಹಿಡಿದು ಹೊರಟರೆ, ಸೃಷ್ಟಿ ಮೂಲಕ್ಕೆ
ಮುಟ್ಟಿ, ಅಂತಃಕರಣ ತಟ್ಟಿ ಬರುವೆ ಮೇಲಕ್ಕೆ.

## ಪ್ರೀತಿ-ಸಂಬಂಧ

ಪ್ರೀತಿ-ಸಂಬಂಧಗಳ ಸಡಿಲುಗೊಳಿಸದೆ ಹಿಡಿವ
ಕರುಳ ಬೆರಳಿನ ವಿರಳ ಕೌಶಲ್ಯ: ಜೀವನದ
ಮೌಲ್ಯ, ಕೂಡಿ ಬಾಳಲಿಕೆಂದೆ ಕಾದಾಟ. ಕದ
ಮುಚ್ಚಿ ತೆರೆವಷ್ಟರಲ್ಲಿ ಹದಗೊಳುವುದೇ ಜೀವ?
ನಮ್ಮ ಮಾತೇ ನಮಗೆ ಅಸ್ಪಷ್ಟ: ಸಂವಹನ-

ಕೆಲ್ಲಿದೆ ಹಾದಿ? ಶಬ್ದಕ್ಕೆ ತಡಕಾಡಿ, ಮುರಿದ
ಸೇತುವೆ ಕಟ್ಟಿ ದಾಟಿದರೆ ಅಷ್ಟೆ ಸಂಮೋದ,
ಕೃತಿಯಲ್ಲಿ ಒಡಮೂಡಿ ಪ್ರೀತಿ ತಳೆವುದು ಮೌನ.
ಆಗ ಮಾತಿನ ರೀತಿ ಎಣ್ಣೆ-ಬತ್ತಿಗೆ ಜ್ಯೋತಿ.
ಸಂತೋಷದಭಿವ್ಯಕ್ತಿ ಮುಕ್ತ ಸಂಬಂಧಕ್ಕೆ
ಶಕ್ತಿ, ಯೋಚಿಸದೆ, ಯಾಚಿಸದೆ ತನ್ನಷ್ಟಕ್ಕೆ
ಸಂಭವಿಸಿ ನಿತ್ಯದ ರೂಢಿ-ರಂಗು ಸಂಗಾತಿ.
ತೆರೆದ ತೋಳಿಗೆ ಕುಸಿದವರನೆತ್ತಿ ತಬ್ಬುವದು.
ಅಪೂರ್ಣತೆಯರಿತು ಆಜನ್ಮ ಸ್ವೀಕರಿಸುವುದು.

## ಒಂದು-ಹಲವು

ಎಷ್ಟು ಹಣತೆಗಳಿಂದ ಕತ್ತಲೆಯು ಕರಗುವದು?
ಎಷ್ಟು ಕವಿತೆಗೆ ಜಗದ ಕಣ್ಣು ತೆರೆಯುವದು?
ಒಂದಿದ್ದರೂ ಸಾಕು, ಮನೆಗೆ ಬೆಳಕಾಗುವದು,
ಒಂದು ಕವಿತೆಗೆ ಕೂಡ ಮನ ಕರಗಬಹುದು.

ಹಲವು ಬಣ್ಣದ ಕಣ್ಣು ಸೆಳೆಯುವ ಗುಲಾಬಿಗಳು:
ಸುಂದರ ಪ್ರದರ್ಶನಕೆ ಕಸಿಗೊಂಡ ಒನಪು;
ಚೆಂಗುಲಾಬಿಯ ಕಂಪು, ಕೋಮಲತೆ ನಯವೊಂದೆ
ಕಣ್ಣು, ಮನಸಿಗೆ ತಣ್ಣಗೊಂದು ಸವಿನೆನಪು.

ಆಕಾಶದಲ್ಲಿ ಹಲವು ಚಿಕ್ಕೆ ಚೆಲ್ಲಾಪಿಲ್ಲಿ-
ಬಿದಿಗೆ ಚಂದ್ರನ ಬದಿಗೆ ಒಂದೆ ಕಿರು ತಾರೆ.
ಉದಯಾಸ್ತಗಳ ಹೊನ್ನ ಬೆಳಕು ಚಿಮ್ಮುವ ತವಕ-
ತುಂಬಿ ತುಳುಕದ ಹಾಗೆ ಈ ಕ್ಷಿತಿಜ ಮೇರೆ.

ಹಲವಕ್ಕೆ ತೆಕ್ಕೆ ಬಿದ್ದರೆ ಎಲ್ಲ ದಕ್ಕಬಹುದೆ?
ವೈವಿಧ್ಯಕ್ಕು ಒಂದೆಡೆಗೆ ಮಧ್ಯಬಿಂದುವಿರದೆ?

## ನೇಣು ನುಡಿದದ್ದು

ಇಲ್ಲ, ಈ ಕ್ರೂರ ಸರಕಾರಕ್ಕೆ ನಾನು ಹುರಿಗೊಂಡಿಲ್ಲ.
(ಬೆಳ್ಳಗಿದ್ದರು ಇದು ಕುದಿವ ಸುಣ್ಣದ ನೀರು)
ಇಪ್ಪತ್ತೆಂಟರ ಗಂಡು ಗಂಟಲವ ಬಿಗಿಯಲೆ?
ಬಿಡುಗಡೆಯ ಹಾಡು ಹೊಡಮರಳಿ, ಕಪ್ಪು ಕಾಡಿನ
ಕೆಂಪು ಜ್ವಾಲೆಗಳಾಗಿ ಹರಡುವವು. ದಿಕ್ಕುದಿಕ್ಕಿನ
ಮೊರೆ-ಕರೆಗಳಪ್ಪಳಿಸಿ ತತ್ತರಿಸಿದವು ಪ್ರಿಟೋರಿಯದ
ಕಲ್ಲು ಜೇಲಿನ ಗೋಡೆ, ಬೋಥಾನ ಹಿಂದಿದೆ ಭೂತ.
ಭವಿಷ್ಯದ ಮಿಂಚಿನಂಚಿಗಿದೆ: 'ನಿಕೊಸಿ ಸಿಕೆಲೆ
ಆಫ್ರಿಕಾ ' : ಗಲ್ಲುಗಂಬದವರೆಗು ಧೀರ ಹೆಜ್ಜೆ.
ಪ್ರತಿಧ್ವನಿ: 'ಇಂದಿಲ್ಲ ನಾಳೆ ಕಪ್ಪು ಪ್ರಜೆ ಆಳಿ ಬಾಳುವದು
ನಿಶ್ಚಿತ: ಇದೇ ದಾರಿ ಅಂಜದಿರಿ, ಹೋರಾಟವೊಂದು ಸತತ'-
ತಾಯಿ ಮುಟ್ಟಿಸಿದಳೀ ಕೊನೆಯ ಸಂದೇಶ: 'ಮಕ್ಕಳ ಬೆನ್ನು ಕಟ್ಟಿ,
ಜೊತೆಗಿದ್ದು ಗಟ್ಟಿ ಕೈಕೈ ಹಿಡಿದು ಧೈರ್ಯದಲಿ ಮುಂದೆ ಸಾಗಿ.
ಕರುಣೆಗೆ ಕೋರಿದ್ದು ಒಬ್ಬ ಮಗನಿಗೆಂದೆ? ಅಲ್ಲ, ಇಡಿ ದೇಶಕಾಗಿ.'
-ಇದಕೆಲ್ಲಕೂ ನಾನು ಸಾಕ್ಷಿ. ನನ್ನೊಳಗಿನೆಳೆಯ ಸೆಳೆದಿದೆ ನೋವು
ನನ್ನ ಕತ್ತರಿಸಿ, ತಿಳಿಯದೆ ನಿಮಗೆ? ಈ ಕೊರಳು ಬಿಗಿಯಲಾರೆ.

## ಕುಂದಣ

(ಪ್ರೊ. ಕೆ. ಜಿ. ಕುಂದಗಣಗಾರ)

ಬಾಳ ಅಗ್ಗಿಷ್ಟಿಯಲ್ಲಿ ಬೆಂದುನೊಂದರೂ ಒಂದು
        ಕುಂದಿರದ, ಅಂಗಾರವಡಗಿಸಿದ ಬಂಗಾರ-
        (ಕೌಜಲಗಿಯಿಂದ ಕೊಲ್ಹಾಪುರಕೆ ಸಿಂಗಾರ)
ಕರಗಿ, ದಿಟಪುಟಗೊಂಡು, ಒರೆಬಣ್ಣಕ್ಕೆ ಬಂದು
ಬೀರಿದ ಮಂದಹಾಸ; ಸಾಹಸದ ವಿನ್ಯಾಸ.
        ಶೋಧನದ ದೀವಿಗೆ ಹಿಡಿದು ಮೂಲೆಮೂಲೆಗೆ-
        ಶಿಲಾಶಾಸನ, ತಾಮ್ರಪಟ, ನಾಣ್ಯ, ತಾಡೋಲೆ-
ಕಂಡು ಹಿರಿಹಿರಿ ಹಿಗ್ಗಿ ಒಡಮೂಡಿದಿತಿಹಾಸ-
ಪರಿಹರಿಸಿತಾಯಾಸ. ಸಂಸ್ಕೃತಿಯ ಕಡೆದ ಕಲೆ

ಮಿಡಿದ ಕಾವ್ಯದ ಹೊನಲು, ಪಡೆದ ಜನಜೀವನ
ನಡೆದುಬಂದಿಹ ದಾರಿ ತೆರೆದು ತೋರಿದ ಬೆರಳ
ಹಿಡಿದು ಮುನ್ನಡೆದ ಶಿಷ್ಯಪಡೆ: ನಿಮಗಿಷ್ಟರಲೆ
ತೃಪ್ತಿ: ಮಾಡಿದ್ದು ಮನದಲ್ಲಿ ಹೊಳೆಯದವರು
ಆ ಸತ್ವ ಸಾತ್ವಿಕತೆ ಈ ಕನ್ನಡದ ತೇರು.

## ಪುಟ್ಟ ಹಕ್ಕಿಯ ಪಾಡು

ಕೈ ತೋಟದಲ್ಲಿ ದಾಳಿಂಬೆಯ ರೆಂಬೆಗೆ
ಮಕ್ಕಳ ಟೊಪ್ಪಿಗೆಯಂತೆ ಜೋತ ಚಿಕ್ಕ ಗೂಡಿನೊಳಗೆ
ಕೊಂಚ ಬಾಗಿದ, ಉದ್ದ ಚುಂಚಿನ ನಸುಹಸುರು ಬಣ್ಣದ
ಪುಟ್ಟ ಹಕ್ಕಿ ಕತ್ತು ಚಾಚಿದ್ದು ಕಂಡೆ.
ದಿನವೂ ಇಲ್ಲೇ ಹಾಯ್ದಾಡಿದರೂ ಈ ಗೂಡಿನ ಕುಶಲಕರ್ಮ
ನನ್ನ ಕಣ್ಣಿಗೆ ಹೇಗೆ ಬೀಳಲಿಲ್ಲ?- ಎಂದು ಅಚ್ಚರಿಗೊಂಡೆ.
ಅದಕ್ಕೇನನಿಸಿತೋ ಬುರ್‌ನೆ ಹೊರಬಿದ್ದು
ಪಿಟಿಕ್ ಪಿಟಿಕ್ ಎಂದು ಗಾಳಿಯಲ್ಲಿ ಜಿಗಿಯುತ್ತ
ಅತ್ತ ಹಾರಿಹೋಯಿತು.
ಹತ್ತಿ, ಅರಳಿ ಮೆತ್ತಗೆ ಒಳಗೆ; ಕಡ್ಡಿ ದಾರದ ಹೆಣಿಗೆ ಹೊರಗೆ-
ಮಾಟವಾಗಿತ್ತು ಗೂಡು, ಹಕ್ಕಿ ಬಂದು ಸ್ವಸ್ಥ ಕುಳಿತು ಕೊಂಡಾಗ
ಅದಕ್ಕರಿವಿಲ್ಲದಂತೆ ಆಗಾಗ ಕಂಡು, ಮನಸ್ಸು ಅರಳಿಸಿಕೊಂಡೆ.

ಹಾಗೇ ಒಮ್ಮೆ ಗೂಡಿನಲ್ಲಿಣಿಕಿದೆ:
ಕಂದು ಬಣ್ಣದ ಎರಡು ಚಿಕ್ಕ ತತ್ತಿಗಳು.
(ಚಿಕ್ಕವನಿದ್ದಾಗಿನ ಕುತೂಹಲವೆ ನನಗೆ ಈಗಲು)
ಮತ್ತೆರಡು ದಿನ ಕಳೆದಾಗ ತತ್ತಿಯ ಮೇಲೆ ಅಲ್ಲಲ್ಲಿ ಚಿಕ್ಕಿಗಳು.
ಆ ಹಕ್ಕಿ ಹುಳು-ಗಿಳ ಹಿಡಿಯುತ್ತಿರಬಹುದು ಎಂದುಕೊಂಡಿದ್ದೆ-
ಹೂವಿನೊಳಗೆ ಚುಂಚಿಟ್ಟು ರಸ ಹೀರುವುದು ಕಂಡು ಆಶ್ಚರ್ಯಪಟ್ಟೆ.
(ಬಣ್ಣದ ಚಿಟ್ಟೆಗಳನ್ನು ಸ್ವಲ್ಪಕಾಲ ಮರೆತು ಬಿಟ್ಟೆ)
ಹಕ್ಕಿಯ ರೆಕ್ಕೆಯಲ್ಲಿ ಕುಳಿತು ಹಗಲಿರುಳು ಹಾರಿದವು.
ಆಗಲೇ ತತ್ತಿಯೊಡೆದು ಮಾಂಸಲ ಮುದ್ದೆ.
ಹೊಳೆದದ್ದು ಬರೀ ಬಟ್ಟಲಗಣ್ಣು. ಮರಿಗಳು ಬೆಳೆದು
ದೊಡ್ಡವಾದಂತೆ, ಚಿಂವ್‌ಗುಡುವುದನ್ನು, ತಾಯಿ ಗುಟುಕಿಡುವುದನ್ನು
ಉತ್ಸುಕತೆಯಿಂದ ಚಿತ್ರಿಸಿಕೊಂಡೆ.

ಒಂದು ಮಧ್ಯಾಹ್ನ ಊಟ ಮುಗಿಸಿ, ಪುಸ್ತಕ ಹಿಡಿದು ಅಡ್ಡಾಗಿದ್ದೆ.
ಕಿಟಕಿಯ ಹೊರಗೆ ಒಮ್ಮೆಲೆ ಚಿರ್ ಬರ್ ಚಿಂವ್ ಚಿಕ್ ಚೀರಾಟ!
ಗಡಬಡಿಸಿ ಎದ್ದು ದಾಳಿಂಬೆಗಿಡದ ಬಳಿ ಧಾವಿಸಿದೆ:
ಗೂಡು ಹರಿದು ಕೆಳಗೆ ಬಿದ್ದಿತ್ತು; ಮೆಲ್ಲಗೆ ಎತ್ತಿ ನೋಡಿದೆ.
ಮರಿಗಳೇ ಇರಲಿಲ್ಲ. ಎದುರಿನ ಗಿಡದಲ್ಲಿ ಕಪ್ಪು ಕಾಗೆ-
ಗುಳುಗುಳುನುಂಗಿ ಚುಂಚು ತಿಕ್ಕುತ್ತಿತ್ತು.
ಪುಟ್ಟ ಹಕ್ಕಿ ಚಡಪಡಿಸಿ ಬಿಕ್ಕುತ್ತಲೇ ಇತ್ತು.
ದಾಳಿಂಬೆಯ ಕೆಂಪು ಹೂ ನೆಲದಲ್ಲಿ ಚೆಲ್ಲಾಡಿತ್ತು.

## 'ಕ್ರೋಧನ'ಕ್ಕೆ ಬೀಳ್ಕೊಡುಗೆ

ಟೊಂಗೆಗಳನತ್ತಿತ್ತ ಕಡಿದು, ಬೊಡ್ಡೆಗಲ್ಲಲ್ಲಿ ಕಚ್ಚು
ಹಾಕಿದರು, ಮತ್ತೆ ಚಿಗುರಿದೆ ಮರ-
'ಕ್ರೋಧನ'ವೆ ಸಾವಧಾನದಿ ನಿನ್ನ ಬೀಳ್ಕೊಡುವೆ,
ಕ್ಷಯಕ್ಕೆ ಮದ್ದುಂಟು; 'ಪ್ರಭವ'ಕ್ಕೆ ಕಣ್ಣು ತೆರೆವೆ.

ಸೃಷ್ಟಿ-ಸ್ಥಿತಿ-ಲಯದ ಎಡೆಬಿಡದ ಗೂಢ ವಿನ್ಯಾಸದಲಿ
ಆ ಮಾವು-ಈ ಬೇವು, ನಡುವೆ 'ಕೂಹು-ಕೂಹು'-
ಹೂಹೂವಿನೊಳಗೆ ಕೆರಳಿ, ನರಳಿ, ಅರಳಿದ ನೋವು-
ಬಿಸಿಲು ಬಲಿಯುವ ಮೊದಲೆ ಬಲಿಗೊಂಡ ಕಾವು.

ಉರಿವ ಸೂರ್ಯನ ಕಾರ್ಯವೈಖರಿಗೆ ತಣ್ಣಗಾದನು
ಚಂದ್ರ; ಪೃಥ್ವಿಯ ಪರಿಭ್ರಮಣ ತಾರ-ಮಂದ್ರ;
ತುಂಬಿ ತುಳುಕಿಸಿತೆನುವ ಕನಸು ಬೀಳುವ ಮೊದಲೆ
ತಳದಲ್ಲಿ ವಾಸ್ತವದ ಸಣ್ಣ ರಂಧ್ರ.

ಇಪ್ಪತ್ತೊಂದನೇ ಶತಮಾನಕ್ಕೆ ಜಿಗಿದು ಹಾರುವ ಮಲ್ಲ
ಹದಿನಾಲ್ಕು ವರ್ಷ ವನವಾಸ ಹೇಗೆ ಕಾಣುತ್ತಿಲ್ಲ?
ಗಾಯ ಮಾಯದೆ, ಹಿಡಿದ ಸೇಡಿನ ಕೊಳ್ಳಿ ನಂದಿಸದೆ
ಇಡಿಯಾಗಿ ನಾಡು ಸ್ಪಂದಿಸದೆ ಮುಂದೆ ಹೆಜ್ಜೆಯಿಲ್ಲ.

ಅವರೆದೆಯ ಡವಗುಟ್ಟುವಿಕೆ ನಮ್ಮ ಕಿವಿಗಪ್ಪಳಿಸಿ.
ಗಟ್ಟಿ ಬೆಸೆದಾಗ ಹೃದಯಕ್ಕೆ ಹೃದಯ ಕರಗಿ:
ದೈವರೇಖೆಗಳು ಒಂದರೊಡನೊಂದು ಹೆಣೆದಿರುವಾಗ
ನಡೆಯಲಾರೆವು ನಾವು ಒಬ್ಬಂಟಿಯಾಗಿ.

## ಪ್ರಶ್ನೆ

ಮುಷ್ಟಿಯಲಿ ಜೀವ ಬಿಗಿ ಹಿಡಿದು ಮಲಗಿದೆ ಮಗುವು-
ಏಕೆ ಈ ಪರಿ ಕೆಂಪು ಕಣ್ಣ ತುಂಬ?
ಯಾವ ಜೀವದ ರಕ್ತ ಬಸಿದು ಬಾನಂಚಿನಲಿ
ಹೆಪ್ಪುಗಟ್ಟಿತು ಹೀಗೆ ಸೂರ್ಯ ಬಿಂಬ?

ಎಷ್ಟೊಂದು ಹಗಲು ಬರಿ ಹೆಗಲುಗೊಟ್ಟವೊ ನಿನಗೆ-
ಹುಗಿದು ಹೋದವೊ ಚಿಕ್ಕೆ ಮಿನುಗದಂತೆ!
ಕರುಳೆಂಬುದೊಂದು ಒಳಗೆಲ್ಲಿಯಾದರು ಇಹುದೆ?
ಮುಗಿಲೇಕೆ ಆಗಿಹುದು ಚಿಂದಿಬಟ್ಟೆ?

ಗಾಳಿಯಲಿ ಹಾರಿಹುದು ಕಪ್ಪು ಮಸಣದ ಬೂದಿ
ಹೋಳಿಯಾದವು ಎಲ್ಲ ಹುಣ್ಣಿಮೆಗಳು;
ಧೂಳಿಪಟವಾಗಿಹುದು ಬುದ್ಧಿ ಭೂಮ್ಯಾಕಾಶ-
ತೆರೆಯದಾಗಿದೆ ಕರುಣೆ-ಕಣ್ಣೆವೆಗಳು.

ಮುಖವಾಡವಿರದಂಥ ಮುಖವನರಸುತ್ತಿರುವೆ-
ಅದರ ಸಮ್ಮುಖದಲ್ಲಿ ದುಃಖ ಸುಖವೆ;
ಚೈತ್ರ, ವೈಶಾಖಗಳ ಮೈತ್ರಿಯಲಿ ಚಿಗುರೊಡೆದು
ವರುಷದುದ್ದಕು ಹೀಗೆ ಹೆಜ್ಜೆಯಿಡುವೆ.

ಆ ಹಾದಿ, ಈ ಹಾದಿ ಹುಡುಕಿ ಬೇಸತ್ತಾಗ
ಯಾವ ಮಾಯದಿ ಬಂದೆ ಓ ಯುಗಾದಿ?
ಊದುವ ಸನಾದಿಯಲಿ ಉತ್ಸವದ ದನಿಯಿಹುದು
ನಂಬಲೆ, ಮಂಗಲಕೆ ಇದು ಬುನಾದಿ?

## ಸ್ವಾತಂತ್ರ್ಯ : ೪೦

೧

ಕಾಲೇಜು ಹುಡುಗ ನಾನಂದು, ಅನುಭವಿಸಿದ್ದೆ:
ಮಧ್ಯರಾತ್ರಿಗೆ ಮಿಂಚು ಹೊಡೆದದ್ದು, ಮೈತುಂಬ-
ಬಾನಿಗೇರಿದ ಮೂರು ಬಣ್ಣ ಬಾವುಟದಿಂದ
ಕನಸು-ಹೂಮಳೆ ಸುರಿದು ಒಂದು ಕ್ಷಣ ಮಿನುಗಿದ್ದೆ.
ಸಂಘರ್ಷ-ಶತಮಾನ: ಹಿಂಸೆಗೆದೆಗೊಟ್ಟಿರುವ
ತ್ಯಾಗದಾವಿರ್ಭಾವ; ತೇಲಿಬಂದಿತು ಹಂಸ.
ಬೆನ್ನು ಬಿದ್ದ ಕಪೋತ ಪಕ್ಷಿಗಿದೆ ತೊಡೆಮಾಂಸ.
ಬಾಳು ಹೋಳಾದಂತೆ ನುಂಗಿದ ನಂಜು-ನೋವ.
ಅರುವತ್ತು: ನನಗಂಥ ಅರಳು-ಮರಳೇನಿಲ್ಲ;
ನಾಲ್ವತ್ತು ವರುಷ ಬದುಕಿಸಿದ ಬಿಡುಗಡೆ-ಬಾಳು
ದೇಶಕ್ಕೆ ಇತಿಹಾಸ ಹಾಸಿಬೀಸಿದ ನೆರಳು-
ಎಡವಿ ಮುಗ್ಗರಿಸಿದರು ಕಣ್ಣು ಮಂಜಾಗಿಲ್ಲ.
ಶ್ವಾಸಕೋಶಕ್ಕಿಲ್ಲ ಧಕ್ಕೆ-ಸ್ಪರ್ಧೆಗಿಳಿಯದೆ
ಓಡಬಹುದಲ್ಲ ಹಾಗೇ, ತನ್ನ ಗುರಿ ಮರೆಯದೆ?

೨

ವಿರೋಧಾಭಾಸವೆ ಇದರ ಪ್ರಕೃತಿಗುಣವೇನೊ
ಇದ್ದುಬಿದ್ದದ್ದೆಲ್ಲ ಕೊಚ್ಚಿಹೋಗುವ ಹಾಗೆ
ಅತಿವೃಷ್ಟಿ. ಇಡಿವರುಷ ಒಂದು ಹನಿಯೂ ಬರದೆ
ನೆಲ ಬಿರಿದು ಬಾಯ್‌ಬಿಡುವ ಪರಿ. ಮುಂದೆ ಗತಿಯೇನೊ-
ಎಲ್ಲದಕು ಬರಗಾಲ, ಕಾಯಬೇಕೆಂತು ಸಮ-
ತೋಲ? ಅಣೆಕಟ್ಟಿನಲು ಸೋರಿಹೋಗುವದು ಹಣ
ಸೇತುವೆಯು ನಡುಗುವದು. ಜೇನುಹುಟ್ಟೋ?- ಮೇಣ.
(ಉತ್ಸವಮೂರ್ತಿ ಬಂಗಾರ ರಥದಲ್ಲಿ ಕ್ಷೇಮ)
ಬಲೆಗೆ ಬೀಳಲು ಮೀನು; ತಿಮಿಂಗಿಲಕೊ ಸಾಗರ
ತಾನೇ ತಾನು. ಗಂಗೆಗೂ ಸ್ವಚ್ಛತಾಕ್ರಮ.
ನಮ್ಮೊಡಲಿಗಂತು ಅಂತರಗಂಗೆಯದೆ ವಿಕ್ರಮ.
ಬಿತ್ತಿದ್ದೇನೊ ಧರ್ಮ, ಬೆಳೆಯಿತೆಲ್ಲಿಂದ ಕ್ರೂರ
ಕರ್ಮ? ದುರ್ದರ್ಷ ಭಯ, ಅತಿರೇಕಗಳ ನಡುವೆ
ಮುಗ್ಧ, ಸಂದಿಗ್ಧ ಜೀವಗಳನೆಲ್ಲಿ ಬಚ್ಚಿಡುವೆ?

೩

ಭಾಷಣದ ಕ್ರಿಯಾ ವಿಧಿ ಮುಗಿಸಿ, ಮೊಣಕಾಲೂರಿ
ಭರ್‍ರೆಂದು, ಎಂಬತ್ತೇಳರುತ್ಸವದ ಕಾರು
ಸುರಕ್ಷಿತ ದಾಟಿ, ಬಿಟ್ಟು ಸಮಾಧಾನದುಸಿರು-
ಕಟ್ಟಿರುವ ಭದ್ರಕಾವಲು; ಅದಕೆ ಅಭಾರಿ.
ಮಾತು ಮಾತಿನ ಹೊರಗೆ ಕುಸಿದಿರುವ ಸಾಮಾನ್ಯ:
ತಲೆ ಎತ್ತಿದರೆ: ಹಾರಾಡಿ ಬಣ್ಣದ ಬಲೂನು
ಈ ಮಣ್ಣ ದಿಣ್ಣೆಗಳಾಚೆ ಧವಳಗಿರಿ ಸಾನು.
ಬೆಳಗಿನಲಿ ಹೊಂಗನಸು ನೆನೆಸಿಕೊಂಡರೆ ಧನ್ಯ.
ಹೇಗಾದರೂ ಹುಡುಕಿ ರಂಗದ ಮೇಲೆ ತನ್ನಿ:
ತೆರೆಗುಂಟ ತೇಲಿಬಂದಿಹ ಕೊರಡುಗಳ ದೂಡಿ,
ಎದುರೀಜಿ, ಬರಡು ಬಾಳಿಗೆ ಭವಿತವ್ಯ ಮೂಡಿ-
ಸುವ ಧೀರ ಚೇತನರ, ದೂರವಾಗಲಿ ಸನ್ನಿ.
ಹೋರಾಟಕಣಿಗೊಳಿಪ ಸತ್ಪೋನ್ನತಿಯ ಕಾಲ
ಮತ್ತೆ ಬಂದಿದೆ; ಓದು ಮೂಲ ಗಾಂಧೀ ಪಾಠ.

## ಬೆಳ್ಳಿದೀಪ: ಬಂಗಾರ ಬೆಳಕು

ಮಣ್ಣ ಹಣತೆಗೂ ಬೆಳ್ಳಿಯ ದೀಪಕು
ಬಂಗಾರದ ಬೆಳಕು
ಎಣ್ಣೆ-ಬತ್ತಿಗಳ ನೇಹದಿ ಅರಳಿವೆ
ಎಲ್ಲ ಒಳ್ಳೆ ಬದುಕು.
ಇರುಳನು ಜಾಳಿಸಿ, ಬೆಳಗಿನ ಜಾವಕೆ
ಮೂಡಿ ಬೆಳ್ಳಿ ಚಿಕ್ಕೆ.
ಗೂಡು-ಮಾಡಗಳು ಮೂಡಣ ಕೆಂಪಿಗೆ
ತೆರೆದವಣ್ಣ ರೆಕ್ಕೆ.
ಗರ್ಭಗುಡಿಯ ಗೋಪುರದ ಕಳಸ
ಹಿಡಿದೆತ್ತೆ ಅಮೃತ ಕುಂಭ-
ಮಬ್ಬು ಹರಿದು, ಹೆಬ್ಬಾಗಿಲು ತೆರೆಯಲು
ಅಬ್ಬ, ಸೂರ್ಯಬಿಂಬ!

ಗಂಟುಬಿಚ್ಚಿ ಹೊಸಬಾಳಗಂಟೆ
ನಾಲಗೆಯ ಪಡೆದ ಹಾಗೆ;
ಎಂಟುದಿಕ್ಕಿಗೂ ನಾದ, ಮೋದ
ಉನ್ಮಾದ ಇಳಿವವರೆಗೆ.
ಮರ್ತ್ಯದಲ್ಲಿ ಆ ಕರ್ತೃ ಗದ್ದುಗೆಯು
ಕರ್ಮಕಿಲ್ಲ ಹೊರತು;
ಕ್ರಿಯಾಪದಕೆ ಬಾಗಿದರೆ ಬಾಗು
ಹಿರಿ-ಕಿರಿದನೆಲ್ಲ ಮರೆತು.
ಶ್ರೀಗುರುವೆ ಸಿದ್ಧ, ಮಾನವನಿಗಿದ್ದ
ಅರಿವೆಲ್ಲ ಅರಗಿಸಿದ್ದ,
ಮರವೆಯೊಡನೆ ಚಿನ್ನಾಟವಾಡಿ
ತೆರವೆಲ್ಲ ತುಂಬಿಸಿದ್ದ.
ಎಷ್ಟೊ ಕ್ಷೇತ್ರ ಹರ ಹರಗಿಸಿದ್ದ
ಆ ಮೇಲೆ ಮರುಗದಂತೆ,
ಮುಗಿಲು ಕಣ್ಣು ತೆರೆದಾಗ ಬಿತ್ತಿ
ಹೊಡೆಬಿಚ್ಚಿ ನಿಲ್ಲುವಂತೆ.
ಒಳಗೆ ಇರುವೆ, ಹೊರಗೆಲ್ಲೊ ಕರೆವೆ
ಹುತ್ತಕ್ಕೆ ಹಾಲು ಸುರಿವೆ;
ನರನರಗಳೆಲ್ಲ ಹುರಿಗೊಳ್ಳುತಿರಲು
ನೆತ್ತರಿಗು ಮೀರಿ ಹರಿವೆ.
ನನ್ನೆಣಿಕೆ ಮೀರಿ ಸರಗುಣಿಕೆ ಹಾಕಿ
ಕರುಳಲ್ಲಿ ಜಗ್ಗುತಿರುವೆ,
ದುಡುಕಿದಂತೆ ಹುಡುಹುಡುಕಿದಂತೆ
ಒಳಗಡಗಿ ಹಿಗ್ಗುತಿರುವೆ.
ಹೂ ಬಳ್ಳಿಯಲ್ಲಿ ಎಷ್ಟೊಂದು ಮಗ್ಗಿ
ಬೆರಳೆತ್ತಿ ಮುಗಿಲ ಕಡೆಗೆ,-
ಆ ಬಾನಿನಲ್ಲಿ ಅಡಗಿರುವ ಚಿಕ್ಕಿ
ನಿಬ್ಬೆರಗು ನೆಲದ ಸಿರಿಗೆ.
ಅದೇ ಸುಗ್ಗಿ, ಮತ್ತದೇ ಹುಗ್ಗಿ
ದಾಸೋಹ ನಡೆಯಲೆಂದೆ;
ನೆಲದ ಕಂಪು, ಅನುಭಾವದಿಂಪು
ಈ ಜೀವ ಪಡೆಯಲೆಂದೆ.

## ಕನ್ನಡ ಜ್ಯೋತಿಯ ದೀಪಗಳು

ನೃಪತುಂಗ ಪ್ರೇರಣೆಯೆ ಆದ್ಯ ಗ್ರಂಥದ ಸ್ಮರಣೆ-
ಕಾವೇರಿಯಿಂದ ಗೋದಾವರಿಯವರೆಗೆ;
ನಾಡು-ನುಡಿ-ಗುಡಿತೇರು ಕವಿರಾಜ ಮಾರ್ಗದಲಿ
ಚೆಲುವ ಸುಭಟರ್ಕಳಿಗೆ ಅಭಿಮಾನದೊಸಗೆ.

ಕಾವ್ಯಧರ್ಮಕೆ ತುಡಿದು, ಮಾರ್ಗ-ದೇಸಿಯ ಬೆಸೆದು
ವಾಗ್ವಿಭವದುನ್ನತಿ ರಸಧ್ವನಿಯ ಮಿಡಿದು,
'ಒಂದೆ ಮಾನವ ಜಾತಿ' ಸ್ತಂಭ ದೀಪಿಕೆಯಂತೆ
ಪ್ರಜ್ವಲಿಸೆ, ಕನ್ನಡಕ್ಕೊಡೆಯನದೆ ಪೆಂಪು.

ರನ್ನ, ಕೃತಿಯೂ ಘನ್ನ, ಅತ್ತಿಮಬ್ಬೆಯ ಚಿನ್ನ-
ವೀರ-ಕರುಣೆಯ ನಾಟ್ಯ ನಿರ್ಮಾಣ ತಾಣ;
ಗುಣಕೆ ಮಚ್ಚರವಿರದೆ, ಉತ್ಸಾಹ ಬಚ್ಚಿಡದೆ
ಸಾಹಸ ಮಹೋನ್ನತಿಯೆ ಪಂಚಪ್ರಾಣ.

ಅನುಭಾವದಾಳದಲಿ ಜ್ಞಾನಶಿಖರದ ಬಿಂಬ
ಮಾತು ಜ್ಯೋತಿರ್ಲಿಂಗ: ನಿಸ್ಸಂಗ ಸಂಗ;
ಮತ ಪಂಥ ಮೀರಿ ಗಗನಾಂತರದ ಪೀಠದಲಿ
ಶೂನ್ಯ ಗುರು ಅಲ್ಲಮನ ಗುಡುಗಿನ ತರಂಗ.

ಭಕ್ತಿಭಾಂಡಾರಿ, ನಿರ್ಭಯದ ನಿಷ್ಠುರ ಭೇರಿ-
ವಿನಯ ಮಾರ್ದವ, ಸಮತೆ-ಸಂಗಮದ ವೀಣೆ.
ಸಹಜ ನಿಜಗನ್ನಡದಿ ಅರಳಿ ವಚನೋದ್ಯಾನ
ಸಕಲಜೀವರ ಲೇಸು ಬಸವಣ್ಣನಾಣೆ.

ಅಳಿಬಳಗ, ಮಾಮರವೆ, ಕೋಕಿ, ಬೆಳುದಿಂಗಳೇ-
ಮಲ್ಲಿಕಾರ್ಜುನಗೊಲಿದ ಚೊಕ್ಕ ಮಾದೇವಿ;
ಮಧುರಭಕ್ತಿ-ವಿರಕ್ತಿ, ಭಾವಗೀತೆಯ ಚಿಲುಮೆ
ಸಾವಿಲ್ಲ, ಕೇಡಿಲ್ಲ ಸವಿಗನ್ನಡ ಧರಿತ್ರಿ.

ಸುರ ನರರ ತೊರೆದು, ಸರಳ ಸಾಮಾನ್ಯರಂಗಳಕೆ
ಉತ್ಸಾಹ, ಲಲಿತ, ಮಂದಾನಿಲದ ರಗಳೆ,
ಹೊಸದಿಕ್ಕಿನೆಡೆ ಕಾವ್ಯ ತುಂಗಭದ್ರೆಯ ಹೊನಲು,
ಶಿವಕವೀಂದ್ರಗೆ ಸಹಜ ಕ್ರಾಂತಿ ಕಹಳೆ.

ಧರ್ಮಬೋಧೆಯ ದಾಹ ಸೌಂದರ್ಯ ಪ್ರಜ್ಞೆಯಲಿ
ಕರಗಿ ಮಿರುಗಿದ ಯಶೋದುಂದುಭಿಯ ಚರಿತೆ;
ಜೀವನದದಮೃತೆಗೆ, ವಿಧಿವಿಲಾಸದ ಪರಿಗೆ
ಜನ್ನದೃಷ್ಟಿಗೆ ಸೃಷ್ಟಿ ನೆಲದಾಳದೊರತೆ.

ಬಂಧ ಸುಂದರ, ದೃಷ್ಟಿ ಭಾಗವತ, ಜಟಿಲ ಜೀ-
ವನ, ಚಿತ್ಕಲಾಪದಿ ವೀರನಾರಯಣ;
ಕುಮಾರವ್ಯಾಸನ ದೇಸಿ ಎರಡೂ ದಡವ ಸೂಸಿ
ಜನಮನವ ನಿಚ್ಚ ಹಸುರಾಗಿಸಿದ ವರುಣ

ಪಲ್ಲವಿಯು ಫುಲ್ಲೆನಿಸಿ ಹಾಡು-ಹೆಜ್ಜೆಯ-ಗೆಜ್ಜೆ
ಈಸಿ ಜೈಸುವ ಶ್ರದ್ಧೆ: ಉಳಿದ ಹಂಗೇಕೆ?
ತಂಬೂರಿ ನಾದ, ಚಿನ್ಮಯ ಧ್ಯಾನ ತನ್ಮಯದಿ
ಮೂರುತಿ ನಿಲಿಸಿ ಪುರಂದರ ದಿವ್ಯ ಶ್ರುತಿಗೆ.

ನಿಜಗುಣಿ ನಿಜಾನಂದ ವೀಣೆ, ಕನ್ನಡ ಜಾಣೆ-
ಜ್ಞಾನಚಿಂತಾಮಣಿಯ ಲೋಕ ವಿಖ್ಯಾತೆ,
ಪರಮಾನುಭವದ ಪರಮಾರ್ಥ ಬೆಟ್ಟವೆ ಶಂಭು-
ಬೆಳಗಿತು ಪರಂಜ್ಯೋತಿ, ನಿತ್ಯನಿಶ್ಚಲತೆ.

ಧಾರಿಣಿಯು ಕುಲದೈವ, ಸ್ವಾತಂತ್ರ್ಯ ಬಿಡದಿರುವ
ಎಲ್ಲರನು ಹಿಡಿದು ಅಲ್ಲಾಡಿಸುವ ಧೈರ್ಯ,
ಮನೆಮನೆಗು ತ್ರಿಪದಿ: ದೀಪಾವಳಿಯು, ಸಿಡಿಮದ್ದು,
ಸಾರ್ವಕಾಲಿಕ ಮೌಲ್ಯ, ಸರ್ವಜ್ಞ ಆರ್ಯ.

ತ್ಯಾಗ-ಭೋಗದ ಮಹಾ ಸಾಂಗತ್ಯದೆರಕದಲಿ
ರತ್ನಮೌಕ್ತಿಕದಚ್ಚು ಭರತೇಶ ಮೂರ್ತಿ,
ಆಧ್ಯಾತ್ಮ ರಸವಂತರಂಗ, ಬಹಿರಂಗದಲಿ
ಪೂರ್ಣಜೀವನದರ್ತಿ ರಸಚಕ್ರವರ್ತಿ.

ಚಿತ್ತ ಬತ್ತಿಯ ಹೊಸೆದು, ಜೀವದೆಣ್ಣೆಯನೆರೆದು
ಭಾವ ಪ್ರಕಾಶದಲಿ ಬದುಕಿಸುವ ಪ್ರೀತಿ;
ದೀಪಕ್ಕೆ ದೀಪ ಹೊತ್ತಿಸಿ ಕಾವ್ಯ ರೂಪಕದಿ
ಭವ್ಯಜೀವನದರ್ಶಿ ಕನ್ನಡ ಜ್ಯೋತಿ.

## ಮುರಗೋಡದ ಮಹಾಂತರು

ಎಲ್ಲರನು ಬೆಳೆಸಿ ತಾನಿಹನು ಕೂಸಿನ ಹಾಗೆ-
ಮುಖವೆಲ್ಲ ನಸುನಗೆಯ ಬೆಳುದಿಂಗಳೆ.
ದೂರದ ದಿಗಂತದಲಿ ಹಾಲು—ಸಕ್ಕರೆ ಬೆಳಕು-
ಈ ಮಹಾಂತರ ಕರುಣೆ-ಕಿರಣಂಗಳೆ.

ಜನಸಮೂಹದ ನಡುವೆ ಸಾಂತ್ವನದ ತಿಳಿಗೊಳವು-
ದೀನ ದಲಿತರಬಳಿಗೆ ಹರಿವ ತೀರ್ಥ;
ಮುಟ್ಟಿದರೆ ಬಂಡೆಯೂ ಮೃದುವಾಗಿ ಬಿಟ್ಟೀತು-
ಹೃದಯ ತಟ್ಟುವದೊಂದೆ ಮಾತಿನರ್ಥ.

ನೂರು ಕಾಲಕು ನಿಜದ ಊರುಗೋಲನು ಹಿಡಿದು
ಭಾರವಾಗದ ಹಾಗೆ ಹೆಜ್ಜೆಯಿರಿಸಿ,
ಹೂವರಳಿದಂತೆ, ಮೆಲ್ಲಗೆ ಗಾಳಿ ಸುಳಿದಂತೆ
ನೊಂದ ಜೀವಕ್ಕೆ ನರುಗಂಪು ಸೂಸಿ,

ಮಾತಿಲ್ಲದೆಯೆ ಸಭೆಯ ಅಂತರಂಗವ ಹೊಕ್ಕು-
ಏಕಾಂತದಲಿ ಲೋಕ ಸಹಚಿಂತನ;
ಭಕ್ತಿಯಲಿ ಬಾಳಿ ಬದುಕಿದ ವಿರಕ್ತಿ, ಚಿಚ್ಛಕ್ತಿ
ಸೃಷ್ಟಿ ಕೌತುಕ, ದೃಷ್ಟಿಗಾಪ್ಯಾಯನ.

ಬೇವಿನೆಲೆಯನು ಸವಿದ ಬಾಲ್ಯ ವೈಶಾಲ್ಯವೇ-
ಅರಬಾವಿಯನು ತುಂಬಿತುಳಕಿದರಿವು-
ಜನಮನದ ತೋಟಕ್ಕೆ ನೀರು-ನಂಬುಗೆ-ಬೇರು,
ದುಡಿಮೆ ದಾಸೋಹದಲಿ ಹಣ್ಣಾದವು.

ಶಿವನು ನಡೆಸಿದ ಹಾಗೆ ಸಾಗಿ ಮಾಗಿದ ಜೀವ-
ಅವನೆ ಆಗುವದೊಂದೆ ಉಳಿದ ಭಾವ:
ಶರಣರುಳಿವೆಯ ಕಡೆಯ ಬಾಗಿಲವ ತೆರೆದಿರಲು
ಮುರಗೋಡು ಕರೆದಿತ್ತು ಬೆಳಗು ಜಾವ.

ನಿತ್ಯಪೂಜೆಗೆ ಅರಳಿ ನಿಂದಿರುವ ಹಗಲಿರುಳು-
ದರ್ಶನಕೆ ತೆರೆಪಿಲ್ಲವರುಷ ವರುಷ;
ಯಾವ ಜೀವಕು ನೋವುತಾಗದಾನಂದವೇ-
ಮಣ್ಣೊಳಡಗಿದ ಲೋಹಕೆಲ್ಲ ಪರುಷ.

## ಹನಿಗವನಗಳು

*

ಬೇಸಗೆಯಲ್ಲಿ ಬೇವಿನ ಮರದ ಕೆಳಗೆ
ಬೇರೆಲ್ಲಿಯೂ ದೊರೆಯದ ತಂಪು.
ಕಹಿಯ ಕಲ್ಪನೆಯೇ ಬಾರದ
ಹೂವಿನ ಗಮಗಮ ಕಂಪು.
ಎಲೆಗಳ ಚಿತ್ತಾರದ ಹಸುರು ಹಚ್ಚೆಯ ಹಿಂದೆ
ನೀಲಾಕಾಶದ ಬರಿ ಮೈಯೊಂದೆ.
ಸುಳಿಗಾಳಿ ಪಿಸುಗುಡುತ್ತಿದೆ-'ಬಂದೆ'.
ಇಂಥ ನೆಮ್ಮದಿಯ ಹೊತ್ತಿನಲ್ಲಿ
ನಿಮ್ಮ ಕಣ್ಣು ತಂತಾನೆ ಮುಚ್ಚಿಕೊಳ್ಳುತ್ತಿರುವಾಗ
ಲೊಟ್ ಎಂದು ಮೈಮೇಲೆ ಬೀಳುತ್ತದೆ:
ಮೇಲೆ ನೋಡಿದರೆ
ಹಾಯಾಗಿ ರೆಕ್ಕೆ ಬಿಚ್ಚಿದ ಕಾಗೆ.

*

ಪೇಟೆಯಿಂದ ತಂದ ಬಗೆ ಬಗೆಯ ಆಟಿಗೆಗಳನ್ನು
'ನನಗೆ' 'ತನಗೆ' ಎಂದು ತೆಗೆದುಕೊಂಡು
ಮಕ್ಕಳು ಸಂತೋಷಗೊಂಡು
ಆಡಿ ಆಡಿ ಸಾಕಾದ ಮೇಲೆ
ತಾವೇ ತಗೆದಿಟ್ಟುಕೊಂಡವು.
ಸೊಗಸಾಗಿ ಪ್ಯಾಕು ಮಾಡಿದ
ರಟ್ಟಿನ ಖಾಲಿ ಪೆಟ್ಟಿಗೆಗಳನ್ನು
ಅಷ್ಟೇ ಜೋಪಾನವಾಗಿ
ನಾನು ತೆಗೆದಿಟ್ಟುಕೊಂಡೆ.

*

ಆರುತಿಂಗಳ ಜೈಲುವಾಸದ ಖೊಟ್ಟಿ
ಸರ್ಟಿಫಿಕೇಟಿನಿಂದ
ಪಿಂಚಣಿ ಪಡೆಯುತ್ತಿರುವ ಶೆಟ್ಟಿ-
ಸ್ವಾತಂತ್ರ್ಯಯೋಧ:
ಇಪ್ಪತ್ತೈದು ವರುಷಗಳಿಂದ ಸೆರೆಮನೆಯಲ್ಲಿರುವ

ನೆಲ್ಸನ್‌ಮಂಡೇಲಾ ಬಿಡುಗಡೆಯಾದಲ್ಲಿ
ಎಷ್ಟು ಪಿಂಚಣಿ ಪಡೆಯಬಹುದು-
ಎಂದು ಲೆಕ್ಕ ಹಾಕ ತೊಡಗಿದ.

## ಯುಗಾದಿ : ೧೯೮೮

ನೆಟ್ಟಗೆ ಧ್ವಜಸ್ತಂಭದಂತಿರುವ ಅಶೋಕ
ವೃಕ್ಷದ ಕೆಳಗೆ ಹಣ್ಣೆಲೆ ರಾಶಿ. ಹಗಲಿರುಳು
ಉದುರಿ, ಗಾಳಿಗೆ ಚದುರಿ; ಅತ್ತ ಹೊರಳಿದೆ ನೆರಳು.
ಮೈತುಂಬ ಎಣ್ಣೆ ಬಸಿಯುವ ಚಿಗುರು ಈತನಕ.
ಈಗ ವಿದ್ಯುತ್ತಂತಿ ದಾಟಿ, ಮೀಟಿ ಹೋಗುವ
ತವಕ, ಬೆಳಗಿನ ಮಂಜು ಕರಗಿ, ಎಳೆಬಿಸಿಲು ಹೊಳೆ-
ದು, ತೊಟ್ಟಿಕ್ಕಿ; ತುತ್ತ ತುದಿಗೆ ಕುಳಿತ ಹಕ್ಕಿ-ಜೊತೆ
ದನಿಯೆತ್ತಿದರೆ ಸಾಕು, ಅರ್ಥವಾಗುವ ಭಾವ.
ಅರ್ಥವಾಗದು ಪತ್ರಿಕೆಯ ಭಯೋತ್ಪಾದಕ
ಭಾಷೆ, ಏರಿ ಮನುಷ್ಯ ಆಕಾಶಕ್ಕೆ ತೆಕ್ಕೆ-
ಜಾರುವದೆ ನೆತ್ತರವ ಚೆಲ್ಲಿ ರಸಾತಳಕ್ಕೆ?
ನೆಲದಲ್ಲಿ ನಡೆಗಲಿತಾಗ ಬದುಕು ಸಮತೂಕ.
ಸಂಜೆಗೆಂಪಿಗೆ ರೆಕ್ಕೆ ಬೀಸಿದರೆ ಬೆಳ್ಳಕ್ಕಿ-
ತಮಸ್ಸಿನಿಂದ ಹೊರ ಬರುವುವೊಂದೊಂದೆ ಚುಕ್ಕಿ.

## ಹೆಬ್ಬಾವು

ಚಾಕು, ಚಮಚೆ, ಫೋರ್ಕು ಸಾಧನ ಬೇಕು ಕೆಲವರಿಗೆ,
ಕೈ-ಬೆರಳು ಸಾಕು ನಮ್ಮಂಥವರ ಆಹಾರ ಸೇವನೆಗೆ.

ಇತರ ಪ್ರಾಣಿಗಳಂತೆ ಯಾವ ನೆರವೂ ಇರದ ಹಾವು
ಕಚ್ಚಿ ತಿನ್ನದೆ ಇಡಿಯಾಗಿ ನುಂಗಬೇಕವು ತಮ್ಮ ಬೇಟೆ.
ಗಿಡದಿಂದ ಜೋತು, ಕೆಳಗೆ ಹುಲ್ಲಿನಲ್ಲಡಗುವದು ಹೆಬ್ಬಾವು.
ಇಲ್ಲವೆ ನದಿ, ಸರೋವರದ ನೀರಲ್ಲಿ ಮುಳುಗಿಸಿ ದೇಹ
ಮೂಗು ಕಣ್ಣುಗಳಷ್ಟೆ ಮೇಲಕ್ಕೆ ಚಾಚಿ ಕಾಯುವದು,
(ಮೃತ್ಯುವಿಗೆಷ್ಟು ಅವಸರವೋ; ಅಷ್ಟೇ ತಾಳ್ಮೆಯೂ ಉಂಟು.)

ಇಲಿಯೊ ಮೊಲವೊ-ಚಿಕ್ಕ ಪ್ರಾಣಿಯೂ ಸಾಕು ಅದರ ಮರಿಗೆ;
ಹೆಬ್ಬಾವಿಗೆ ಸಂಪುಷ್ಟ ಹಂದಿ ಇಲ್ಲವೆ ಚಿಗರಿ ಈಡು ಗುರಿಗೆ.
ನೀರು ಕುಡಿಯಲು ಬಂದು ಮುಖವಿಡುವುದೊಂದೆ ತಡ
ಇಲ್ಲ- ಆ ಗಿಡದಡಿಯಲ್ಲಿ ಸುಮ್ಮನೆ ಹಾದುಬಂದರೂ ಕೂಡ

ಮಿಂಚಿನಂತೆ ಗಬಕ್ಕನೆ ಹಿಡಿದುಬಿಡುವದು ಸಿಕ್ಕ ಭಾಗ.
ಪ್ರತಿಕ್ರಿಯೆ ಬರುವ ಮೊದಲೆ ಒತ್ತಿ ಸುತ್ತಿಕೊಳ್ಳುವದು ಬೇಗ.
ನಿಟ್ಟುಸಿರು ಬಿಟ್ಟಾಗ ಬೇಟೆ-ಬಿಡಲೇಬೇಕಲ್ಲ-ಇನ್ನಿಷ್ಟು ಬಿಗಿತ,
ಅವುಕಿ ಉಸಿರ್ಗಟ್ಟಿಸಿ ನೋಡಿ ತಿಳಿಯುವದು ಎದೆಯ ಬಡಿತ,
ಸತ್ತದ್ದು ಖಾತ್ರಿಯಾಗುವವರೆಗೆ ಸಡಿಲಿಸದು ಕಚ್ಚಿದ ಹಿಡಿತ,
ಆಮೇಲೆ ಮೆಲ್ಲಗೆ ಬಿಚ್ಚಿ ಹುಡುಕಾಡುವದು ಅದರ ಮೂಗು ಮುಖ.
(ಹಸೀ ಧಡ್ಡ), ಸಿಕ್ಕೊಡನೆ ಆರಂಭ, ನುಂಗುವ ಸಮಾರಂಭ.

ನಮ್ಮ ದವಡೆಗೊಂದೇ ಎಲುವು, ತಲೆಬುರುಡೆಗಂಟಿಸಿ ಕೀಲು,
ಅದಕೊ ಮೇಲರ್ಧ, ಕೆಳಗರ್ಧ ದವಡೆ, ನಡುವೆ ಬೇಕಾದಷ್ಟು
ಹಿಗ್ಗಿಸಬಲ್ಲ ಸ್ನಾಯುಜಾಲ. ಎರಡು ಪ್ರತ್ಯೇಕ ಕೀಲು,
ಮೇಲ್ದವಡೆಯಲ್ಲಿ ನೂರಕ್ಕು ಹೆಚ್ಚು ತೆಳ್ಳಗಿನ ಹಲ್ಲು, ನಾಲ್ಕು ಸಾಲು.
ಬಾಗಿವೆ ಹಿಮ್ಮಗ್ಗಲು, ಹಾಗೆ ಎಳೆದುಕೊಳ್ಳುವದೊಳಗೆ ಸಲೀಸು;
ಗ್ಲೋವ್ ಹಾಕಿಕೊಳ್ಳುವುದಿಲ್ಲವೆ ಜಗ್ಗಿ ಕೈಗೆ? ಅದಕ್ಕೆ ಹೋಲಿಸು.
ಎಲ್ಲೂ ಧಕ್ಕೆಗೊಳಿಸದೆ ದವಡೆಯಿಂದಲೆ ನಡೆವುದೆಲ್ಲ ಪವಾಡ;
ಇಂಥ ದಕ್ಷತೆ ಪ್ರಾಣಿಲೋಕದಲ್ಲಿ ಬೇರಿಲ್ಲ, ಜೀರ್ಣಶಕ್ತಿಯೊ ನಿಗೂಢ.

ಹಿಂಬದಿಯಿಂದ ಹೊರಬಿದ್ದಾಗ ಏನೂ ಬದಲಾಗದಿರುವ ವಸ್ತು,
ಕೂದಲೊಂದೆ, ಕೋಡು ಕೊಳಗಗಳು ಕೂಡ ಅದಕ್ಕೆ ಅಸ್ತು.

ಹೊಟ್ಟೆಯಲಿ ಹೊಕ್ಕ ಇಂಥ ಮುದ್ದೆ ಹತ್ತು ದಿನದಲ್ಲಿ ಖಾಲಿ-
ತಿಂಗಳವರೆಗೂ ಸಾಕು; ಎರಡು ವರ್ಷಗಳ ದಾಖಲೆ ಕೂಡ ಉಂಟಂತೆ,

ಹತ್ತು ತಿಂಗಳು, ಎರಡು ವರ್ಷಗಳ ದಾಖಲೆ ಕೂಡ ಉಂಟಂತೆ,
ಆಮೇಲೆ ಮತ್ತೆ ಆಹಾರ ನುಂಗಿ ಯಥಾಪ್ರಕಾರ ನಿಶ್ಚಿಂತೆ.

ಇಷ್ಟೆಲ್ಲ ಕಷ್ಟಪಡದೆ ನಿರಾಯಸ ನುಂಗಿಹಾಕುವ ಪ್ರಾಣಿ ಮನುಷ್ಯ-
ದಕ್ಕಿಸಿಕೊಂಡ ಮೇಲೆ, ದೇಶ–ಜನತೆಗಿದ್ದೇ ಇದೆ ಉಜ್ವಲ ಭವಿಷ್ಯ.

## ಕೀಟಕ

ಕೀಟಗಳೆಂದರೆ ಎಲ್ಲಿಲ್ಲದ ಕುತೂಹಲ ನನಗೆ;
ಅವುಗಳ ಬಗೆಬಗೆಯ ಮಾಟ, ಆಟ, ಬೇಟ ಕೂಡ.
ಅಡ್ಡಾದಿಡ್ಡಿ ಕಡ್ಡಿಯಂತಹ ಕಾಲು, ವಿಚಿತ್ರ ನಡಿಗೆ ನೋಡ,
ಒಡೆದು ಕಾಣುವಶರೀರದ ಖಂಡ-ತುಂಡದ ತುದಿಗೆ
ಮೂಸಿ, ಮೆಲ್ಲನಲುಗುವ ಮೀಸೆ, ಅವಲೋಕಿಸುವ
ಗುಂಡು ಗಾಜಿನಂತಹ ಕಣ್ಣು, ವಿವಿಧ ಮೈಬಣ್ಣಗಳು.

ಉಳಿಪರೆಯಂಥ ರೆಕ್ಕೆಗಳಲ್ಲಿ ಒಳ್ಳೊಳ್ಳೆ ನಕ್ಷೆ
'ಜಿರ್‌ಜಿರ್' ಜಿಗಿದು ಹಾರುತ್ತ, ನಮ್ಮ ಸುತ್ತಮುತ್ತ
ತಮ್ಮ ಮಿತಿಯಲ್ಲೆ ನಡೆಸಿರುತ್ತವೆ ಸೃಷ್ಟಿ-ಸಮೀಕ್ಷೆ.
ಮಾನವನೊಂದಿಗೇ ಹುಟ್ಟಿ ಬೆನ್ನಟ್ಟಿ ಬಂದಿರಬಹುದು;
ತಮ್ಮ ಲೀಲೆಗೆ, ಹಾರುವ ಕಲೆಗೆ, ಒಂದಿಷ್ಟು ಕೀಟಲೆಗೆ
ಪರಸ್ಪರ ದಾಳಿ-ಧೂಳಿ, ಆಮೇಲೆ ತಂತಮ್ಮ ನೆಲೆಗೆ.

ಬೇರು ಕಡಿದು, ಕಾಂಡ ಕೊರೆದು, ಎಲೆತಿಂದು, ಕಾಳು ಜೊಳ್ಳಾಗಿಸಿ-
ಕಚ್ಚಿ, ಚುಚ್ಚಿ ರಕ್ತದ ರುಚಿ ನೋಡಿ ಹಾಡಿಕೊಂಡಿವೆ ಕೆಲವು.
ಹೊಲಸಿನಲಿ ಹುಲುಸಾಗಿ ಸಿಕ್ಕತ್ತ ಹಾರುವ ನೊಣ-
ಜಾಡಿಸುವದೆ ನಮಗೆ ಉದ್ಯೋಗ-ಹರಡುತ್ತ ರೋಗ.

ವೈವಿಧ್ಯದಲ್ಲಿ ಮಾನವನಿಗಿಂತ ಮಿಗಿಲು ಕೀಟ ಪ್ರಪಂಚ;
ದಿಗಿಲು ಹುಟ್ಟಿಸಬಹುದು ಅಗಾಧ ಸಂತಾನ ಶಕ್ತಿ.
ಬೆರಳು ಕಚ್ಚುವ ಹಾಗೆ ಬೆಳವಣಿಗೆ. ಇಲ್ಲವೆಂದಲ್ಲ
ಹಿತಶತ್ರುಗಳು, ಅಥವ ನಿರುಪದ್ರವಿ ಕ್ಷುದ್ರ ಜೀವಿಗಳು.
ಬಣ್ಣಬಣ್ಣದ ಚಿಟ್ಟೆ, ಹೂವಿನ ತಟ್ಟೆ ಗಾಳಿಯಲಿ ಹಾರಬಿಟ್ಟು,
ಜೇನ್ನೊಣದ ಹಿಂಡು ಬಂಡುಂಡು ಕಟ್ಟಿದ ಹುಟ್ಟು
ಎಟುಕದಂತಿದೆ ಇಂದಿಗೂ ಆ ಕಲೆಯ ಗುಟ್ಟು.

ಪಿಡುಗು ಕೀಟಗಳ ಹುಟ್ಟಡಗಿಸಲು ಹುಡುಕಿದೌಷಧ
ಕುಡಿದು ಬದುಕಿ ಬಲಗೊಂಡ ಮಾಯಕ.

ಹೊಸ ಬಗೆಯ ರಾಸಾಯನಿಕ, ಅವಕೆ ಕುಡಿದಂತೆ ಪಾನಕ
ಉಳಿದೆಡೆಗಳಲ್ಲಿ ಪಸರಿಸಿಬಿಟ್ಟ ವಿಷಧಾರೆ,
ಸೋಲು-ಗೆಲುವಿನ ಮಾನವ ಪ್ರಯೋಗಶಾಲೆ.

ಶೋಧನೆ, ಶೋಧನೆ ಇನ್ನೂ ಶೋಧನೆ-
ನಿಸರ್ಗದ ಮಡಿಲಿಗೇ ಹಿಂದಿರುಗಿದ್ದಾನೆ ಕೊನೆಗೆ,
ಪರಿಸರವ, ಜೀವಜಾಲದ ಏರುಪೇರಾಗಿಸದ ಕ್ರಮಕ್ಕೆ.

ವಂಶ ನಿರ್ವಂಶಗೊಳಿಸುವ ಸಾಹಸ ವ್ಯರ್ಥವೆನಿಸಿ
ಕೀಟಗಳಿಂದಲೇ ಕೀಟಗಳ ನಾಶ: ಜೈವಿಕ ನಿಯಂತ್ರಣಕ್ಕೆ.

ನಡೆದಿಲ್ಲವೇ ಮತ್ತೆ ಮನುಷ್ಯನಿಂದಲೇ ಮನುಷ್ಯನ ಕೊಲೆ?
ಜೀವಕೆಲ್ಲಿದೆ ಬೆಲೆ? ನನ್ನೆದುರು ಉರಿವ ಮೇಣಬತ್ತಿಗೆ
ರೆಕ್ಕೆಬಡಿದು ಸುಟ್ಟುಕೊಂಡಿದೆ ಪತಂಗ: ಸುತ್ತೆಲ್ಲ ಕತ್ತಲೆ.

## ಈ ವರ್ಷ ಕಂಡ ಮಳೆಗಾಲ

೧

ಈಟಿದ್ದದ್ದು ನೋಡ ನೋಡುತ್ತ ಇಷ್ಟಗಲ ಹರಡಿ,
ಉಬ್ಬಿ, ಕೊಬ್ಬಿ, ತೂರಾಡಿ, 'ಏನು ಮಾಡಲಿ'
ಎಂದು ಹೊಯ್ದಾಡುತ್ತ ಮುಂಗಾರು ಕಾರ್ಮೋಡ
ಆಕಾಶದಲ್ಲಿ ತೆಕಿಮುಕ್ಕಿ ಬಿದ್ದಾಗ-
ಬಯಲು ತುಂಬೆಲ್ಲ ಧಗಧಗಿ, ನೆಲದಲ್ಲಿ ಒಂಥರಾ ಹುಕಿ.
ಪಳ್ಳನೆ ಮಿಂಚಿ, ದಿಕ್ಕೆಲ್ಲ ಗುಡುಗಿದ ಪ್ರತಿಧ್ವನಿಗೆ
ಒಳಗೊಳಗೆ ಸಣ್ಣಗೆ ನಡುಗಿ, ಭೂಮಿ ಬೆವರೊಡೆದು
ಸಂತೂರಿನ ನೂರು ತಂತಿಗಳ ಝಣತ್ಕಾರ
ತೋರಮುತ್ತಿನ ಮಳೆ; ಮೇಘ ಮಲ್ಹಾರ.

ನಿಂತಲ್ಲೆ ನೂರುತರ ಮಣಿದು, ಕುಣಿದು ಕುಪ್ಪಳಿಸಿದವು
ಮರ-(ಕೆಲವು ಭವ್ಯವಾಗಿಯೆ ನೆಲಕ್ಕೊರಗಿದವು).
ಬೇರಿಂದ ತುದಿವರೆಗು ಹೀರಿ, ಹೊಚ್ಚ ಹೊಸತಾಗಿ,
ಬಿರುಗಾಳಿ ಬೀಸಿತು ಮತ್ತೆ ಮೋಡಗಳ ದೂಡಿ
ಆಕಾಶದಂಚಿಗೆ ಒಯ್ದು ನಿಲ್ಲಿಸಿತು: ಬೇರಡೆಯ
ನೆಲವನಾಕ್ರಮಿಸಿಕೊಳ್ಳಲು ಸಜ್ಜುಗೊಳಿಸಿ.

(ಒಮ್ಮೊಮ್ಮೆ ರಾತ್ರಿ ಸರುವೊತ್ತಿನಲಿ ಸಪ್ಪಳಿಲ್ಲದೆ ಬಂದು
ಕಿಟಕಿ ಗಾಜಿನಲಿ ಮಿಂಚಿ, ಹೊಳೆಹೊಳೆವ ಹನಿ
ಬಾ (ಬ್ಯಾ)ಲೆ, ಜುಳುಜುಳು ಹರಿವನಾದ,
ಯಾವ ನಾಟಕದ ರಂಗ ತಾಲೀಮೊ ಅಲ್ಲಿ ಮೇಲೆ!)

೨

ಎಷ್ಟು ವರ್ಷಗಳಾದವೊ ಇಂಥ ಮಳೆಗಾಲ ಕಂಡು-
ಬಡಕಲು ದನವ ಹೊಡಕೊಂಡು ಮಕ್ಕಳು ಮರಿ ಸಹಿತ
ಗುಳೇ ಕಟ್ಟಿಕೊಂಡು ಹೋದವರು ಮರಳಿ ಬಂದಾರು
ಗುಡಿಸಲಿಗೆ, ಗೇಣು ಹೊಲ ಗದ್ದೆಗೆ, ಹಿಡಿ ಮುದ್ದೆಗೆ.
ಒಮ್ಮೆಯಾದರು ತುಂಬಿ ತುಳುಕಿದವಲ್ಲ-ನೀರಿನಂತೆ
ಹಣ ಚೆಲ್ಲಿ ಕಟ್ಟಿದಣೆಕಟ್ಟು, ಹರಿದು ಹರಸಿದವಲ್ಲ
ಎರಡೂ ದಡವ ಸೂಸಿ ಜೀವನದಿ, ಜನುಮ ಜನುಮದ
ರೇವೆತಂದು ಬಿಟ್ಟು, ಈಗಲೇ ಬರುವ ಸುಗ್ಗಿಯ ನೆನೆದು
ಹುಗ್ಗಿಯುಂಡಂತಾಯ್ತು: ಮುಗ್ಗರಿಸದಿರಲಿ ಕನಸುಗಳ
ರಾಶಿ ಹೇರಿ ಹೂಡಿರುವ ಕೊಲ್ಲಾರಿ ಬಂಡಿ.
(ರಗ್ಗಿನ ಮುಸುಕಿನಲ್ಲೂ ನುಗ್ಗಿ ಬಂದಿದೆ ಥಂಡಿ)
ನೌಕರಿ ಜನಕ್ಕೆ ಕೊಡೆ, ರೇನ್‌ಕೋಟು ಹುಡುಕಿ ಝಾಡಿಸಿ,
ಹಿಡಿದು ಓಡುವದೊಂದೇ ಕೆಲಸ. ಸುಮ್ಮನೆಲ್ಲಿ ಬರುತ್ತಾರೆ
ಮಕ್ಕಳು ಶಾಲೆಯಿಂದ? ಬಸ್ಸು ತಪ್ಪಿದ ನೆವಕೆ ತೊಯ್ಯಿಸಿಕೊಂಡು
ಮತ್ತೆ ಬಯ್ಯಿಸಿಕೊಂಡು, ಪುಸ್ತಕದ ಹೊರೆಯನಿಳಿಸುತ್ತಾರೆ.
ಸೋರಿದಲ್ಲೆಲ್ಲ ಮಾಸ್ತರು ಹರಕು ಗೋಣಿಯ ತಟ್ಟು ಹಾಕಿ
ಹಾಜರಿ ಬುಕ್ಕು ಒಳಗಿಟ್ಟು, 'ಸೋರುತಿಹುದು ಮನೆಯ ಮಾಳಿಗಿ'
ಎಂದು, ವಿಶ್ವ ಕನ್ನಡ ಮೇಳಕ್ಕೆ ಕೇಳದಂತೆ ಹಾಡಿಕೊಳ್ಳುತ್ತಾರೆ.

ಜಡಿಮಳೆಯಲ್ಲಿ ಕೆಲಸದವಳೆಲ್ಲಿ ಕೈಕೊಡುತ್ತಾಳೊ-
ಕಸ, ಮುಸುರೆ, ಒಗ್ಯಾಣ ಹಾಗೇ ಬಿದ್ದಿವೆ. ಬಂದಾನೊ
ಬಾರನೊ 'ನಂದಿನಿ'ಯ ಹಾಲಿನವ. ಬೂಟುಗಾಲಿನ ರಾಡಿ
ಒಳಗೆ ತರಬೇಡಿ ಮಾರಾಯರೆ... ತಡವಾದರೂ ಚಿಂತೆಯಿಲ್ಲ
ಬಂದೆ ಬರುತ್ತದೆ ಪೇಪರು. ತೊಯ್ದರೂ ಆರುವದಿಲ್ಲ
ಬಿಸಿಬಿಸಿ ಸುದ್ದಿ:ನೇರ ಗುಂಡಿಟ್ಟು ಕೊಲೆ, ಹಾಡೇ ಹಗಲು ದರೋಡೆ;
ಕಾರು-ಲಾರಿಯ ಢಿಕ್ಕಿ (ಎಲಾ, ಎಲ್ಲ ಮಾಮೂಲಿ) ತುಂಬ
ಬಹುದೆ ಈ ವರುಷ ಲಿಂಗನಮಕ್ಕಿ? ಎಲ್ಲಿಗೆ ಬಂತು.

ಭಿನ್ನಮತೀಯರ ದೌಡು?-ದಿಲ್ಲಿಯವರೆಗೆ ಹುಚ್ಚು
ಮಹಮ್ಮದನ ದರಬಾರು; ಯಾವ ಭರವಸೆ ಹೊತ್ತು, ಮತ್ತೆ
ಕೈಬೀಸಿ ಬಂದರೊ ಕಾಣೆ- ('ನಿನ್ನನ್ನೈವರ ನೋಯಿಸೆನು
ರಾಜೀವಸಖನಾಣೆ') ಮೋಡದ ಮರೆಯಿಂದ ಹೇಗೆ
'ಟೀ.ವಿ'ಯಲ್ಲಿಮುಗುಳ್ನಗುತ್ತಾನೆ ನೋಡು ಜಾಣೆ.

೩

ಎಂದಿನಂತಲ್ಲ ಬಿಡಿ. ಈ ವರ್ಷ ಕಂಡ ಮಳೆಗಾಲ-
(ಜೇಲಿನೊಳಗಿಂದ ಆಸ್ಪತ್ರೆಯೊಳಗೆ ನೆಲ್ಸನ ಮಂಡೇಲ)
ವರುಷ ವರುಷಕ್ಕೆ ಪಾತ್ರ ಬದಲಾಯಿಸುವ ನದಿಗಳು,
ಬುಡಮೇಲು ನಾಡ ದೋಣಿಗಳು, ಬೋಗಿ ಕಳಚುವ ರೈಲು
ಇಟ್ಟಲ್ಲೆ ಮರೆಯಾಗಿ ಬಿಡುವ ರಹಸ್ಯಗಳ ಫೈಲು.
ಉರಿದುರಿದು ಚೂರು ಚೂರಾಗಿ ಬಿತ್ತು ಅಲ್ಲಿ ವಿಮಾನ,
ಇಲ್ಲಿ ಉಕ್ಕಿನ ಕವಚದಲ್ಲಿ ಸದಾ ಜಪ್ಪಿಸಿಕೊಂಡ ಮಾನ.
ಸುತ್ತೆಲ್ಲ ನೀರು ಭೋರ್ಗರೆದು, ನಡುವೆ ಭೂಕಂಪ-
ತೋರಿಸಬೇಕು ಯಾರು ಯಾರಿಗೆ ತಮ್ಮ ಅನುಕಂಪ?

ಹವಾ ಬಹಳ ಕೆಟ್ಟಿದೆ; ರಸ್ತೆಯ ತುಂಬ ತಗ್ಗು, ರಾಡಿ-
ನೋಡಿ ಹೆಜ್ಜೆಯಿಡಿ; ನೀರು ಕಾಯಿಸಿ ಕುಡಿವಿರಲ್ಲ?
ಭಾವಾತಿಸಾರಕ್ಕೆ ಈಡಾಗದಿರಿ. ಇಷ್ಟೆಲ್ಲ ಗದ್ದಲದಲ್ಲಿ
ವಯಸ್ಸಾದದ್ದನ್ನೆ ಮರೆತಿದ್ದೀರಿ ಅಲ್ಲ? ಅದೂ ಒಳ್ಳೆಯದೆ.

ತುಸು ಬಿಸಿಲು ಬಿದ್ದರೆ ಸಾಕು, ಎಲ್ಲೆಡೆಗು ಹಚ್ಚನೆ ಹುಲ್ಲು,
ಹೂಗಳಿಗೆ ಹೊಸ ಬಣ್ಣ: ನೋಡಿ ಹೇಗಿದೆ ಮುಗಿಲು-
ಒಂದಲ್ಲ, ಎರಡು ಕಾಮನ ಬಿಲ್ಲು.

## ಸೂರ್ಯನಿದ್ದಾನೆ ಬೆನ್ನ ಹಿಂದೆ

ಸೂರ್ಯನಿದ್ದಾನೆ ಬೆನ್ನ ಹಿಂದೆ-
ಅಂತೆಯೇ ದುಡುದುಡು ಹೆಜ್ಜೆಯಿಟ್ಟು ಮುಂದೆ ಸಾಗುತ್ತೀರಿ
ನಿಮ್ಮ ನೆರಳನ್ನೇ ತುಳಿಯುತ್ತ.
ನೆತ್ತಿಯ ಮೇಲೆ ಬಂದಾಗ ಸ್ವಲ್ಪ ಸುಸ್ತಾಗಿ

ತಲೆಯ ಮೇಲೆ ಕೈಹೊತ್ತು ಕೂಡುತ್ತೀರಿ-
ನೆರಳು ಹುಡುಕುತ್ತ.

ನಿಮ್ಮ ಕಣ್ಣೆದುರಿಗೇ ಇಳಿಯುತ್ತ ಬರುತ್ತಾನೆ.
ನೆರಳು ಹಿಂದೆ ಸರಿದು, ದಾರಿ ಮಾಡಿಕೊಡುತ್ತದೆ.
ಹೊರಳಿ ಹೊರಳಿ ನೋಡುತ್ತ ಮತ್ತೆ ಹೊರಡುತ್ತೀರಿ.

ಮೋಡದ ಮರೆಗಿದ್ದರೂ ಕೆಳಗೆ ತಗ್ಗು ದಿನ್ನೆಗಳಲ್ಲಿ
ಹೊಲಗದ್ದೆಗಳಲ್ಲಿ ಹಸುರು ಬೆಳಕಾಗಿ ಹರಡಿಕೊಳ್ಳುತ್ತಾನೆ.
ತುಂಬಿನಿಂತ ಕೆರೆಗಳಲ್ಲಿ, ತುಳುಕಿ ಹರಿವ ಹೊಳೆಗಳಲ್ಲಿ
ಪ್ರೀತಿಯ ಪ್ರತಿಬಿಂಬಕ್ಕೆ ಚುಂಬಿಸುತ್ತಾನೆ.
ಮುಳುಗುವ ಮುನ್ನ ಮುಗಿಲಿನ ತುಂಬ
ಕೆಂಪು ಹೂವಿನ ಕುಡಿಕೆಗಳನ್ನು ಹಾರಿಸಿ
ಸುರುಸುರು ಬತ್ತಿ ಹಚ್ಚಿ,
ಸದ್ದಿಲ್ಲದೆ ಸರಿದು ಹೋಗುತ್ತಾನೆ,
ನಿಮ್ಮ ನೆರಳನ್ನೂ ಜೊತೆಗೆ ಒಯ್ದುಬಿಡುತ್ತಾನೆ.

ಇದ್ದವರು ವಿದ್ಯುದ್ದೀಪ ಹಚ್ಚಿ, ಗ್ಯಾಸಿನ ಮೇಲೆ ಕುಕ್ಕರ್ ಇಟ್ಟು
ಟಿ.ವಿ. ಮುಂದೆ ಠೀವಿಯಿಂದ ಕುಳಿತುಕೊಳ್ಳುತ್ತಾರೆ.
ಇಲ್ಲದವರು ಬುಡ್ಡಿಗೆ ಕಡ್ಡಿ ಕೊರೆದು, ಒಲೆಗೆ ಉರಿ ಹಚ್ಚಿ
ಗೋಡೆಯ ಮೆಲೆ ನೆರಳು ನೋಡುತ್ತಾರೆ.
ಮತ್ತೆ ಬರುತ್ತಾನೆಂಬ ಭರವಸೆಯಲ್ಲಿ
ನಿದ್ದೆಯೊಡನೆ ಮುದ್ದಾಡುತ್ತ, ಬಾರದಿದ್ದರೆ
ಒದ್ದಾಡುತ್ತ, ಗುರ್ಖಾನ ಬಡಿಗೆಯ ಸಪ್ಪಳಕ್ಕೆ
ಧೈರ್ಯಗೊಂಡು ಮಗ್ಗುಲಿಗೆ ಹೊರಳುತ್ತಾರೆ.

ಇರುಳಿನ ಚಳಿಯಲ್ಲಿ ಸೂರ್ಯನ ನೆನಪು
ಎಷ್ಟೊಂದು ಸುಖ ಕೊಡುತ್ತದಲ್ಲವೆ?
ಸಂದಿಗೊಂದಿಗಳಲ್ಲಿ ಬೆಳಕು ತೂರಿ ಶಾಖ(ಕ್)ಕೊಟ್ಟು
ಹುಟ್ಟು-ಸಾವು ಕೆಂಪಾಗುತ್ತವೆ.
ನೆಲದ ಹಸಿರನ್ನು ಕಂಡು ಹಿಗ್ಗಿ, ಆಕಾಶದಲಿ ನೀಲಿ
ಕಡಲಿಗೆ ಕನ್ನಡಿ ಹಿಡಿದಾಗ, ಅದರ ಒಡಲಿನಲ್ಲಿ
ಸೂರ್ಯ ವಿಶ್ರಾಂತಿ ಪಡೆಯುತ್ತಾನೆ.

## ಗೋಸುಂಬೆಗಳು

ಗಿಡಗಂಟಿ ಬೇಲಿಗಳಲ್ಲಿ ಸರಕ್ಕನೋಡುವ ಓತಿಕಾಟ:
ರಕ್ತಗೆಂಪಿನ ಕೊರಳನುಬ್ಬಿಸಿ ಬಿಡುವ ದುರುದುರು ನೋಟ.
(ಮನುಷ್ಯನ ರಕ್ತ ಹೀರುವದೆಂಬ ಮಾತು ದಿಟವಲ್ಲವಂತೆ)
ಬೆದೆಗಾಲದಲ್ಲಿ ಗಂಡಿಗೆ ವಿಲಕ್ಷಣ ಬಣ್ಣ:
ತುದಿಗಾಲು ಕಪ್ಪು, ಮೇಲ್ಬದಿಗೆ ಎದ್ದು ಬಡಿಯುವ ಕೆಂಪು, ಹಳದಿ.
ಗರಗಸದಂತೆ ಬೆನ್ನು, ತಲೆಯ ಮೇಲೆದ್ದ ಶಿಖೆ.
ಅಂದವಿಲ್ಲದ ತಮ್ಮ ಹೆಣ್ಣುಗಳ ಮುಂದೆ ಒಂದಿಷ್ಟು
ದೊಂಬರಾಟವನಾಡಿ ಮೆರೆಯುವ ಹುಂಬತನ.
ಇರಬಹುದು ಉಳಿದ ಸ್ಪರ್ಧಿಗಳಿಗೂ ಒಂದು ಎಚ್ಚರಿಕೆ.

ನಿಜವಾದ ಗೋಸುಂಬೆಗಳೆ ಇವು?-ಇರಲಿಕ್ಕಿಲ್ಲ. ಅವು
ಸಿಕ್ಕ ಸಿಕ್ಕಾಗ ಕಣ್ಣಿಗೆ ಬೀಳುವ ಜಾತಿಯಲ್ಲ.
ಹುಲುಸಾದ ತೋಟ, ತೋಪುಗಳಲ್ಲಿ ವಾಸ.
ತಪ್ಪಿ ರಸ್ತೆಗಿಳಿದಾಗ ಮಾತ್ರ ನಿಸ್ಸಹಾಯಕವಾಗಿ ಕಂಡಾವು.
ಒಮ್ಮೆಲೆ ಓಡಲಾರದೆ, ಚಲಿಸಲಾರದೆ ಯಾವ ಬದಿಗೂ
ನಿಧಾನ ಹೆಜ್ಜೆಯಿಟ್ಟು, ಹಿಂಬದಿಗೆ ಹೊರಳಿ ನೋಡುತ್ತ
ಹೊರಟಾಗ ಸಿಕ್ಕಿಬೀಳುತ್ತವೆ ಅಕಸ್ಮಾತ್ತಾಗಿ.
ಒಯ್ದು ಗಿಡದಲ್ಲಿ ಬಿಟ್ಟರೆ ಅರೆಕ್ಷಣದಲ್ಲಿ
ತೀಕ್ಷ್ಣ ಕಣ್ಣಿಗೂ ಮಣ್ಣೆರಚಿ ಮಾಯ.
ಬಣ್ಣ ಬದಲಾಯಿಸಲು ಪರದೆಯೂ ಬೇಕಿಲ್ಲ.
ದೇಹ ಚಪ್ಪಟೆಗೊಳಿಸಿ ಎಲೆ ತೊಗಟೆ-
ಗಂಟಿ ಬಿಡುತ್ತವೆ ಕಂಡರೂ ಕಾಣದಂತೆ.

ಸಾಮಾನ್ಯವಾಗಿ ಎಲ್ಲ ಪ್ರಾಣಿಗಳ ಕಣ್ಣಿನ ದೃಷ್ಟಿ
ನಮ್ಮ ಹಾಗೇ, ಒಂದೇ ವೇಳೆಗೆ, ಒಂದೆ ದಿಕ್ಕಿಗೆ ನೋಟ
ಹರಿಸುವ ಧಾಟಿ. ಗೋಸುಂಬೆ ಹಾಗಲ್ಲ:
ನಿಮ್ಮ ಮೇಲೊಂದು ಕಣ್ಣು, ತಿರುಗಣೆಯಂತೆ ಹೊರಳಿ
ಇನ್ನೊಂದು ಹಿಂಬದಿಗೆ ನೋಟ. ನೊಣವೊ, ಕೀಟವೊ
ಹಾರಾಡುತ್ತ ಬಂದು ಕುಳಿತರೆ ಸಮೀಪ-
ಎರಡೂ ಕಣ್ಣು ಗರಕ್ಕನೆ ತಿರುಗಿ, ದುರ್ಬೀನು ಹಚ್ಚಿ
ನೋಡಿದ ಹಾಗೆ ಅಂತರವಳೆದು, ದೇಹದಷ್ಟೇ
ಉದ್ದವಾಗಿರುವ ನಾಲಗೆಯ ಚಾಚಿ ಬಾಚುವದು.

ಬಣ್ಣ ಬದಲಿಸುವ ಹಾಗೇ ಇದು ಕೂಡ ಅದ್ವಿತೀಯ.
ಮೂರನೆಯದೂ ಒಂದಿದೆ ಮುಖ್ಯ ವೈಶಿಷ್ಟ್ಯ:
ದೇಹದ ಕೆಳಗೇ ಬಾಲ ಸುರುಳಿಸುತ್ತಿ, ಕುಳಿತ
ಟೊಂಗೆಗೆ ಬಿಗಿದು, ತನ್ನ ಸ್ಥಾನಕ್ಕೆ ಚ್ಯುತಿ ಬರದಂತೆ ಭದ್ರ.
ಇವು ಅಂಥ ವಿಷಕಾರಿ ಪ್ರಾಣಿಗಳಲ್ಲ-
ಎಂದು ಒಂದು ಪಕ್ಷ ಹೇಳುವದುಂಟು.
ಗೊತ್ತಿರಬೇಕಲ್ಲ ನಿಮಗೂ
ವೇದಾಂತಕ್ಕೂ ವ್ಯವಹಾರಕ್ಕೂ ಸಾಕಷ್ಟು ಅಂತರವುಂಟು.
ಒಂದು ವೇಳೆ ಇವನ್ನೆಲ್ಲ ಹುಡುಕಿ, ಹಿಡಿದು
ಬಂಧನದಲ್ಲಿಟ್ಟರೂ ಹೊಟ್ಟೆಗೆ ಹಾಕುವದು ಕಷ್ಟ.
ಏಕೆನ್ನುವಿರಾ? ಇವುಗಳ ಆಹಾರ
ಜೀವಂತವಾಗಿ ಹಾರಾಡುತ್ತಿರುವ ನಿಷ್ಪಾಪಿ ಕ್ರಿಮಿ-ಕೀಟ.

## ಶ್ರಾವಣದ ಒಂದು ಸಂಜೆ

ಬಾನೆಲ್ಲ ಮೋಡದ ಮುಸುಕು, ಮಬ್ಬು ಗತ್ತಲು ಕೋಣೆ
ಸಣ್ಣಗೆ ಹಿಡಿದು ಬಿಟ್ಟ ತಂತು ತುಂತುರು ಮಳೆ.
ದುರಸ್ತಿ ಕಾಣದ ರಸ್ತೆ-ಗುಂಡಿಗಳ ತುಂಬ ರಾಡಿ ನೀರು.
ಗಾಳಿ ಬೀಸಿ, ಮೋಡ ಚದುರಿದರೆ ಒಂದಿಷ್ಟು ಹೂ ಬಿಸಿಲು.
ಕೋಣೆಯ ಮೂಲೆಗಳಲ್ಲಿ, ನನ್ನೆದುರಿನಲ್ಲೆ
ರಾರಾಜಿಸುತ್ತಿರುವ ಜೇಡಬಲೆ.
ಕಸಗೂಡಿಸುವಾಗ ಕಾಣಿಸದಿರುವ ಪುರಾತನ ಕಲೆ.

ಗಾಳಿಗೆ ಚೌರಿ ಬೀಸಿ ಬೀಸಿ ಸೋತ ತೆಂಗಿನ ಗರಿ
ವರುವರುಷ ಮೇಲಕ್ಕೇರುತ್ತಲೇ ಇದೆ ತೇರಿನ ಮರ
(ಅಕಸ್ಮಾತ್ ಬಿದ್ದು ಬಿಟ್ಟರೆ?)
ತುತ್ತತುದಿಯಲ್ಲಿ ಹಾಯಾಗಿ ಕುಳಿತ ಬಣ್ಣದ ಹಕ್ಕಿ.
ಬಯಲಲ್ಲಿ ಶ್ರಾವಣದ ಹುಲ್ಲು ಮೇಯುವ ಎಮ್ಮೆಗಳ ಹಿಂಡು.
(ಮನೆಯಲ್ಲಿ ಗೌಳಿಯ ಹಾಲು ನೀರೆ.)
ಮುಂದಿನೆರಡೂ ಕಾಲು ಮೇಲೆತ್ತಿ ಬೇಲಿಗೆ-ಗಪಗಪ ತಿನ್ನುವಾಡು,
ಎದ್ದು ಓಡಿಸಿದಾಗ ಕದ್ದು ನೋಡುತ್ತಾನೆ ಕಾಯುವ ಹುಡುಗ.
ಅರ್ಧತೊಯ್ದಿರುವ ಅಂಗಿ, ಚೊಣ್ಣ, ಅವನಿಗಿಂತಲೂ ಉದ್ದಬಡಿಗೆ.

ಹೂವಿನ ಗೆಜ್ಜೆ ಕಟ್ಟಿ ನಿಂತ ಗಿಡ್ಡ ಗೌರಿ ಹೂ-ಗಿಡ ಸಾಲು.
ಹಿಡಿಹಿಡಿ ಉದುರಿ ಬಿದ್ದಿವೆ ಮೃದುವಾದ ಪಕಳೆ-ಮಣ್ಣುಪಾಲು.
ರಾತ್ರಿಯಲ್ಲರಳಿ ಮುಂಜಾನೆ ಮುದುಡಿದ ಬ್ರಹ್ಮಕಮಲ
ಮುಳ್ಳು-ಕಳ್ಳಿ-ಕುಂಡಗಳಲ್ಲಿ ತುಂಬಿದ ಕಮಂಡಲ.
ದಾಳಿಂಬೆ ಗಿಡದಲ್ಲಿ ನಿತ್ಯ ಇಣಚಿಗಳ ಕಾಟ,
ಅರ್ಧಮರ್ಧ ತಿಂದು ಟೊಕಳೆ ಉಳಿಸಿದ ಹಣ್ಣು-ಕಾಯಿ.

ಹೊರಗೆ ಹೊರಟಾಕ್ಷಣವೆ
ಹೇಳಿ ಕಳಿಸಿದ ಹಾಗೆ ಹನಿದು ಜಿನುಗುಡುವ ಮಳೆ,
ಹೇಗೋ ಬಸ್ಸು ಹಿಡಿದು ಪೇಟೆಯವರೆಗೆ ಹೋದಾಗ-
ನನ್ನ ಹಾಗೇ ಎಲ್ಲರೂ ಗಡಿಬಿಡಿಯಲ್ಲಿ ತಿರುಗಿ ಮರಳುವವರೆ,
ಆದರೆ,
ಅಲ್ಲೊಂದು ಕಡೆ ತಟಸ್ಥವಾಗಿದ್ದಾರೆ ಸಾಲಾಗಿ ಹೆಣ್ಣು-ಗಂಡು,
ಮಕ್ಕಳು-ಮರಿ.
ಚಿಮಣಿ ಎಣ್ಣೆಗೆ ಕಾದು ರಸ್ತೆಯುದ್ದಕೂ.
ದೂರದರ್ಶನದಲ್ಲಿ ಓಡುತ್ತಾರೆ ಅವರು ಪಂಜು ಹಿಡಿದು
ಇವರು ಸೋತು ನಿಂತಿದ್ದಾರೆ ಕೈಯಲ್ಲಿ ಖಾಲಿ ಡಬ್ಬಿ ಹಿಡಿದು.
ಮೇರಾ ಭಾರತ ಮಹಾನ್.
ಬೀದಿ ದೀಪಗಳಲ್ಲಿ ಕೆಲವಾದರೂ ಹತ್ತಿಕೊಂಡಿವೆ.
ನಡುಕ ಹುಟ್ಟಿಸುವ ಚಳಿಗಾಳಿ, ಮತ್ತೆ ಇರುಳೆಲ್ಲ ಜಿಟಿಜಿಟಿ ಮಳೆ.

* * *

'Modern poetry of the Arab World' ಸಂಗ್ರಹದಿಂದ
(ಇಂಗ್ಲೀಷಿಗೆ ಅನುವಾದಿಸಿದವರು: ಅಬ್ದುಲ್ಲಾ ಅಲ್-ಉಧಾರಿ)

## ೨೦ನೇ ಶತಮಾನಕ್ಕೊಂದು ಕನ್ನಡಿ

ಹುಡುಗನ ಮುಖವನ್ನು ಹೊತ್ತಿರುವ ಶವದ ಪೆಟ್ಟಿಗೆ,
ಕಾಗೆಯ ಹೊಟ್ಟೆ. ಮೇಲೆ ಬರೆದ
ಪುಸ್ತಕ,
ಹೂವಿನಲ್ಲಡಗಿರುವ ಕಾಡಪಶು.
ಹುಚ್ಚನ ಪುಪ್ಪುಸಗಳಿಂದ ಉಸಿರಾಡಿಸುವ
ಬಂಡೆ,
ಇದೇ ಅದು
೨೦ನೇ ಶತಮಾನ.

## ಮಸೀದಿಯ ಮಿನಾರ್

ಯಾರೋ ಒಬ್ಬ ಹೊರಗಿನವ ಬಂದಿಳಿದ.
ಮಸೀದಿಯ ಮಿನಾರ್ ಅತ್ತಿತು.
ಅವನದನ್ನು ಕೊಂದು
ಅದರ ಮೇಲೊಂದು ಹೊಗೆಕೊಳವೆ ಏರಿಸಿದ.

ಅಡೋನಿಸ್
(ಅಲಿ ಅಹ್ಮದ್ ಸಯೀದ್)

## ಹುಡುಗಿ ಪಾತರಗಿತ್ತಿ ಹುಡುಗಿ

ತಾನೊಂದು ಪಾತರಗಿತ್ತಿಯಾಗಿ ಹುಡುಗಿ
ಕನಸಕಂಡಳು, ಎಚ್ಚೆತ್ತಳು.
ಪಾತರಗಿತ್ತಿಯೆಂದು ಕನಸು ಕಾಣುತಿದ್ದ ಹುಡುಗಿ ತಾನೆ?
ಅಥವಾ
ಪಾತರಗಿತ್ತಿ ತಾನೊಂದು ಹುಡುಗಿಯಾಗಿ
ಕನಸು ಕಾಣುತ್ತಿತ್ತೆ?
ಅವಳಿಗೆ ಗೊತ್ತಿರಲಿಲ್ಲ.

ನೂರಾರು ವರ್ಷಗಳಾದ ಮೇಲೆ
ಮಕ್ಕಳೆ
ಇರುಳಿನ ಗಾಳಿ,
ಅದು ಹುಡುಗ ಮತ್ತು ಹುಡುಗಿಯೆಂದು ಕನಸು ಕಂಡು
ಹುಡುಗ ಮತ್ತು ಹುಡುಗಿ
ಪಾತರಗಿತ್ತಿಯಂತೆ ನಲಿದಾಡುತ್ತಿದ್ದರೆ?
ಅಥವಾ
ಒಬ್ಬ ಹುಡುಗ, ಒಂದು ಹುಡುಗಿ ತಾವೇ ಪಾತರಗಿತ್ತಿಯೆಂದು
ಕನಸು ಕಾಣುತ್ತಿದ್ದರೆ?
ಗಾಳಿ ಬಲವಾಗಿ ಬೀಸಿತು
ಮಕ್ಕಳೆ,
ಪಾತರಗಿತ್ತಿಯೊಂದು
ಹೊರಗೆ ಚೂರುಚೂರಾಗಿ ಬಿದ್ದಿತು.

ಉನ್ಸಿ ಅಲ್ ಹಾಜ್

## ಅಂಚೆಯಾಳಿನ ಅಂಜಿಕೆ

ಎಲ್ಲಾ ಕಡೆಯ ಕೈದಿಗಳೆ
ನಿಮ್ಮಲ್ಲಿರುವುದನ್ನೆಲ್ಲ ನನಗೆ ಕಳುಹಿಸಿ-
ಅಂಜಿಕೆ, ಚೀರಾಟ, ಬೇಸರಿಕೆ-ಎಲ್ಲ,
ಕರಾವಳಿಯ ಎಲ್ಲ ಮೀನುಗಾರರೆ
ನಿಮ್ಮ ಬಳಿಯಿರುವುದನ್ನೆಲ್ಲ ನನಗೆ ಕಳುಹಿಸಿ
ಬರಿದಾಗಿರುವ ಬಲೆಗಳನ್ನು, ಸಮುದ್ರ ಪಿತ್ತವನ್ನು,
ಎಲ್ಲಡೆಯ ರೈತರೆ
ನಿಮ್ಮ ಸೊತ್ತನ್ನೆಲ್ಲ ನನಗೆ ಕಳುಹಿಸಿ
ಹೂವುಗಳು, ಚಿಂದಿ ಬಟ್ಟೆಗಳು
ತರಿದೊಗೆದ ಸ್ತನಗಳು
ಬಗಿದು ಹಾಕಿದ ಬಸಿರುಗಳು
ಕಿತ್ತೆಸೆದ ಉಗುರುಗಳು
ನನ್ನ ವಿಳಾಸಕ್ಕೆ... ಯಾವುದೇ ಕೆಫೆ
ಜಗತ್ತಿನ ಯಾವುದಾದರೂ ಬೀದಿ.
ಎಲ್ಲೆಡೆಗೂ ಹರಡಿರುವ ದುಃಖಿತರೆ,
ಮನುಷ್ಯನ ನೋವು ನರಳಾಟಗಳನ್ನು ಕಲೆಹಾಕಿ
ನಾನೊಂದು ದೊಡ್ಡಫೈಲು ತಯಾರಿಸುತ್ತಿದ್ದೇನೆ,
ಹಸಿದವರ ತುಟಿಗಳಿಂದ, ಇನ್ನೂ ಕಾಯುತ್ತಿರುವವರ
ಕಣ್ಣೆವೆಗಳಿಂದ
ಅದಕ್ಕೊಮ್ಮೆ ಸಹಿ ಬಿದ್ದೊಡನೆಯೇ
ಅದನ್ನು ದೇವರ ಕೈಗೆ ಒಪ್ಪಿಸುತ್ತೇನೆ.
ಆದರೆ, ನನಗಿರುವ ದೊಡ್ಡ ಹೆದರಿಕೆಯೆಂದರೆ
ದೇವರೂ ನಿರಕ್ಷರಿಯಾಗಿದ್ದರೆ?

ಮಹಮ್ಮದೇ ಅಲ್ ಮಾಘುಟ್

## ಹೊಸ ವರುಷ

ಹೊಸ ವರುಷವೆ, ನಮ್ಮ ಮನೆಗೆ ಬರಬೇಡ,
ಪಿಶಾಚಿ ಪ್ರಪಂಚದ ಪ್ರತಿಧ್ವನಿಗಳು ನಾವು.
ಜನ ನಮ್ಮ ಕೈಬಿಟ್ಟಿದ್ದಾರೆ.
ಇರುಳು, ಹಾಗೆಯೇ ಗತಕಾಲ ನಮ್ಮಿಂದ ಜಾರಿ ಹೋಗಿದೆ.
ದೈವ ನಮ್ಮನ್ನು ಮರೆತುಬಿಟ್ಟಿದೆ.
ಬಯಕೆಯೆಲ್ಲ ಬರಿದಾಗಿವೆ, ಆಶೆ ಬತ್ತಿ ಹೋಗಿದೆ.

ನಮಗೆ ನೆನಪೂಗಳೂ ಇಲ್ಲ, ಕನಸುಗಳೂ ಇಲ್ಲ;
ನಮ್ಮ ಪ್ರಶಾಂತ ಮುಖಗಳು ಕಳೆಗೆಟ್ಟು
ತೇಜೋಹೀನವಾಗಿವೆ.
ಪಶ್ಚಾತ್ತಾಪದ ಅರಿವೇ ಇಲ್ಲದೆ
ಕಾಲದಿಂದ ಶೂನ್ಯಕ್ಕೆ ಕತ್ತರಿಸಿ ಹೋಗಿದ್ದೇವೆ.
ಮೆತ್ತಗಿನ ಅರಮನೆಗಳಲ್ಲಿ
ಸುಮ್ಮನೆ ಬದುಕುತ್ತ ಸಾಗಿದ್ದೇವೆ.
ಹೊಸ ವರುಷವೆ ಮುಂದೆ ಸಾಗು-
ನಾವು ಎಚ್ಚರಗೊಳ್ಳುವ ಲಕ್ಷಣವೇ ಇಲ್ಲ:
ನಮ್ಮ ರಕ್ತನಾಳಗಳನ್ನು ಪೊಳ್ಳು ಕಡ್ಡಿಗಳಿಂದ ಮಾಡಿದೆ.
ರಕ್ತದಲ್ಲಿ ಕ್ರೋಧ ಹರಿಯುವುದೇ ನಿಂತುಹೋಗಿದೆ.
ಆತ್ಮ ಸ್ಫೋಟಗೊಳ್ಳುವದೆಂದು ಯಾರು ಹೇಳಿದರು?
ನಾವೆಲ್ಲ ಸತ್ತು ಹೋಗಿ, ನಮ್ಮನ್ನು ಗೋರಿಗಳೂ ತಿರಸ್ಕರಿಸಿದ್ದರೆ
ಚೆನ್ನಾಗಿತ್ತೇನೊ.
ಕಾಲವನ್ನು ವರುಷಗಳಿಂದ ಮಾತ್ರ ನಾವು
ಅಳೆಯಬಲ್ಲವರಾದರೆ
ಒಂದು ಪ್ರದೇಶಕ್ಕೆ ಸೇರಿದವರೆಂಬ ಭಾವನೆ
ನಮಗಿದ್ದಿದ್ದರೆ
ನಾವು ಹುಚ್ಚಿಗೆ ಅಂಜುವವರಾಗಿದ್ದರೆ
ದೇಶ ಸಂಚಾರ ನಮ್ಮ ಪ್ರಾಣಗಳನ್ನು
ಒಡೆದು ಹಾಕುವಂತಿದ್ದರೆ
ನಾವೂ ಉಳಿದವರಂತೆ ಸಾಯಬಲ್ಲವರಾಗಿದ್ದರೆ.

ನಾಝಿಕ್ ಅಲ್-ಮಲೈಕಾ

* * *

'A land apart- A South African Reader' ಸಂಗ್ರಹದಿಂದ
(ಸಂ: Andre Brink ಮತ್ತು J.M. Coetzee)

## ಕೆರಳಿದ ಪೀಳಿಗೆ
(The rise of the angry generation)

ಕನಸಿನಿಂದೆಚ್ಚತ್ತು ರೆಕ್ಕೆ ಬೀಸಿದೆ ಮಹಾ ಗರುಡ.
ಚೆದರಿ ಬಿದ್ದಿವೆ ಶೈಶವದ ಚಿಪ್ಪು,

ಅರುಣೋದಯದ ಮೇಲೆ ಉಗ್ರ ದೃಷ್ಟಿಯನಿಟ್ಟು
ಕತ್ತಲೆಯಿಂದ ಭೂಮಿಯನು ಮುಚ್ಚಿ ಬಿಡುವಂತೆ,
ಗೂಡು ಕಟ್ಟುತಿದೆ ಸುಂದರ ಪಕ್ಷಿ ಹಣ್ಣೆಲೆಗಳಿಂದ
ಸಜ್ಜುಗೊಳಿಸುತ ಮೂಲ ಸಸ್ಯದ ಟೊಂಗೆ ಟಿಸಿಲುಗಳ-
ಅದನು ಮರೆಮಾಡಿಹುದು ಕೆಂಪು ಗರಿಗಳಿಂದ,
ತನ್ನ ಕೋಪ ತಾಪದ ಬಗೆಗೆ ಭೂಮಿಗೆಚ್ಚರಿಕೆ ನೀಡುವಂತೆ.
ಭಯದಿಂದ ಒಮ್ಮೆ ಹೆಮ್ಮೆಯ ಗ್ರಹವು ಚೀತ್ಕರಿಸಿ
ನಿಗೂಢ ತರುಣ ಪಕ್ಷಿಗೆ ತೆರೆದು ವಿಸ್ತಾರದಾಕಾಶ
ಹೊಸ ಪೀಳಿಗೆಯ ನಿಷ್ಕರುಣ ಮೊನೆಯುಗುರುಗಳಿಗೆ
ಮೋಸದಲಿ ಕರೆವ ಕಣ್ಣೀರಿಗವರು ಹಿಂಜರಿಯದವರು.
ಕಬ್ಬಿಣದ ಮಕ್ಕಳವರು
ಇರುಳ ನಿರ್ಭಯದ ಜೇನುಗಳು
ಜ್ವಾಲಾಮುಖಿ ಪರ್ವತದ ಕ್ರೋಧ ಕೇತನಗಳು
ಅವರೆ ಪ್ರಾಚೀನ ಪಿತೃಗಳ ಕೊನೆ ಬಾಳುವ ರೋಷ ಭೀಷಣರು.

ಮ್ಯಾಝಿಸಿ ಕುನೆನೆ

## ಗುಡಿಸಲಿನ ಆಯ್ಕೆ

(Choosing a Cottage)

ರೋಷದ ನಗರಗಳಿಂದ ಶೀತಲಗ್ರಾಮಗಳಿಗೆ ಬರುವವರೆ
ನಿಮ್ಮ ಗುಡಿಸಲವ ನೋಡಿ ಚೆನ್ನಾಗಿ ಆಯ್ಕೆ ಮಾಡಿ.
ಮಳೆಗಾಲದಲ್ಲಿ ನಿಮ್ಮನದು ಬೆಚ್ಚಗಿಡಬೇಕು.
ಮೋಡಗಳೇರಿ ಬಂದು ನಿರಂತರ ನೀರು ಸುರಿದಾಗ
ಕೆಲವರಿಗೆ ಇದು ಮನೆಯಾಗಬಹುದು.
ಬೇಲಿಯ ಪೊದೆಯ ಸಾಲು, ಬಡಕಲು ಗಿಡಗಳು
ಕಪ್ಪು ಮಣ್ಣು ನಿಮಗೆ ಉತ್ತರವ ದಕ್ಷಿಣದಿಂದ ಭೇದಿಸುವದು:
ಬೀಳು ಬಯಲಿಂದದರ ಬೆಟ್ಟಗಳ ಪ್ರತ್ಯೇಕಿಸುವದು.

ಸೀಸದ ಚೌಕಟ್ಟಿನ ಕಿಡಕಿಗಳಿಂದ ಹಳ್ಳಿ ಬೀದಿಗೆ ಇಣುಕಿ ನೋಡಿ:
ಬೆರಿ ಹಣ್ಣುಗಳ ಕುಕ್ಕುವ ಪಕ್ಷಿಗಳ ಹೆಸರು ಗುರುತಿಸದ
ಇರುಳು ಚಿತ್ರಹಿಂಸೆಗೀಡಾದ ಅಸಹಾಯ ಅರಚುಗಳ
ಶಮನಗೊಳಿಸಲಾರದ, ಕೋಣೆಯಿಂದ ಕೋಣೆಗೆ
ಕದಲುವ ಅಮೃತ ಶಿಲೆಯಂಥ ಮುಖ.

ಬತ್ತಿದುಸಿರಿಂದ ಮಂಜಾದ ಕಿಟಕಿ ಗಾಜನ್ನೊರಸಿ,
ಬೇರೆ ಕಡೆ ಎಲ್ಲಾ ಯಥಾಪ್ರಕಾರವೆಂದು ಭಾವಿಸಿ-
ವಿಧಿವತ್ತಾಗಿ ಪ್ರಶ್ನಿಸುವವನ ಬಿಳಿಯರ ಕನಸು
ಮುಂದುವರಿದಿದೆಯೆಂದು.

ಹೊಳೆಬದಿಗೆ ಸ್ಥಳದ ಕಲ್ಲುಗಳಿಂದ ಕಟ್ಟಿ, ಹುಲ್ಲು
ಹೊಚ್ಚಿದ ಚಾವಣಿಯ, ಓಮಗಿಡ, ಸಸ್ಯಮೂಲಿಕೆ ನಡುವೆ
ಹಾಯ್ದು, ಬಾಗಿಲವರೆಗೆ ನೇರ ದಾರಿಯ ಗುಡಿಸಲು,
ಚಳಿಗಾಲದ ತಡವಾದ ಸೂರ್ಯನ ನಸುಗೆಂಪು ತಳೆದು-
ಹಳ್ಳಿ ಬಾಳಿನ ಚಿತ್ರ ಕಾಣುವದು -ಅನುರೂಪದ ಚಿತ್ರದಂಚೆಯ ಕಾರ್ಡು
ಆದರಿನ್ನುಳಿದವರು, ಎತ್ತರದ ಗೋಡೆಯ ಹಿಂದೆ, ಸಮುದ್ರ
ಸುತ್ತುವರಿದವರು, ಅವರ ಗತಿಯೇನು-ಪರಿಭಾವಿಸು.

ಇದು ಗೊತ್ತಿರಲಿ, ಯಾವ ಕಾಟ್ಸವೋಲ್ಡ್ ಗುಡಿಸಲೂ
ಮುಕ್ತಗೊಳಿಸದು ನಿನ್ನ ಗತ ಕಾಲದಿಂದ. ಥಂಡಿಗೆ ಹೊದ್ದು,
ಮಳೆಮಾರನೆದುರಿಸಿ, ನಾಯ ತಿರುಗಾಟಕೊಯ್ದಾಗ ಗಡಿಯಲ್ಲಿ
ಸಾವು, ಊರ ಚೌಕದಲಿ ಸಾವು ಹಿಡಿದುಕೊಂಡಿದೆ
ನಮ್ಮನಿನ್ನೂ ಚಹಕುಡಿದು ಬೆಚ್ಚಗೆನಿಸಿದಾಗಲು
ಮರೆಯ ಕೂಡದು ನಾವು ಅವನನ್ನು ಅಥವಾ ಅವಳನ್ನು
ಗುಡಿಸಲುಗಳಲ್ಲಿ ಬಂದು ನೆಲಸುವ ನೀವು ಸರಿಯಾಗಿ
ಆಯ್ಕೆ ಮಾಡಿ, ಯಾರಿಗೂ ದ್ರೋಹ ಬಗೆಯದಿರಿ,
ಸ್ವೀಕರಿಸಿ ಕಪ್ಪಲ್ಲದ ಬಿಳಿದಲ್ಲದ ಬೂದು ಬಣ್ಣ.

## ಚಕ್ರದಂತೆ

(Like a wheel)

ಇದು ನೋಡು ಚಕ್ರದಂತೆ
ಇದು ತಿರುಗುತ್ತದೆ
ಇಂದು ನಾನು
ನಾಳೆ ನೀನು,

ಇಂದು ಹಸಿದವ ನಾನು
ನಾಳೆ ನೀನು,
ಮನೆಯಿಲ್ಲವಿಂದು ನನಗೆ
ನಾಳೆ ನಿನಗೆ.

ಇಂದು ಜೈಲಿನಲಿ ನಾನು
ನಾಳೆ ನೀನು
ಇದು ನೋಡು, ಚಕ್ರದಂತೆ.

ಔಪಾ ಥಾಂಡೊ ಥಿಮ್ಕುಲು



# ಶಿಶಿರದಲ್ಲಿ ಬಂದ ಸ್ನೇಹಿತ

೧೯೮೯-೧೯೯೪

## ಶಿಶಿರದಲ್ಲಿ ಬಂದ ಸ್ನೇಹಿತ

ಚಳಿಗಾಲದಲ್ಲಿ ಒಬ್ಬನೇ ಬೆಚ್ಚಗೆ ಹೊದ್ದು ಕುಳಿತಾಗ
ಮುಪ್ಪು ಮಾತಾಡಿಸಿತು, ತೀರ ಹತ್ತಿರಕೆ ಬಂದು:
ಏನಪಾ, ಎಲ್ಲ ಸೌಖ್ಯವೆ? ಇತ್ತೀಚೆ ಮತ್ತೆ ಬರವಣಿಗೆ?
ಷಷ್ಟ್ಯಬ್ದಿಗೂ ನಾನು ಬಂದಿದ್ದೆನಲ್ಲ, ನೆನಪಿರಬಹುದು.

ವಿಶ್ರಾಂತ ಜೀವನದಲ್ಲು ಬಿಡುವಿಲ್ಲವೆಂದರೆ ಹೇಗೆ?
ಮಾತಾಡು, ಭಾಷಣ ಬಿಟ್ಟು, ಬೇರೆ ವಿಷಯ;
ಮಕ್ಕಳೆಲ್ಲರು ದೂರ, ಮನೆಯಲ್ಲಿ ಇಬ್ಬರೇ ರಾಜರಾಣಿಯರು-
ತಮಾಷೆಗೆಂದೆ ಮಾರಾಯ, ಕುಡಿದಿಲ್ಲವೆ ನಾನೂ ಕಷಾಯ?

ವಸಂತದ ಚಿಗುರು, ಮೊಗ್ಗುಗಳ ಹಿಗ್ಗು ಯಾರಿಗೆ ಬೇಡ?
ಅಂಬೆಗಾಲು, ಅಚ್ಚರಿಗಣ್ಣು, ತೊದಲು ಮಾತು;
ನೋಡ ನೋಡುವಷ್ಟರಲಿ ಕರಗಿ ಹೋಗಿತ್ತು ಪೆಪ್ಪರಮಿಂಟು-
ಬಿದ್ದ ಹಲ್ಲಿನ ಜಾಗದಲ್ಲಿ ನಾಲಗೆಯ ನಂಟು.

ವೈಶಾಖಕ್ಕೆ ಯೌವನದ ಸೊಕ್ಕು, ಬಿಸಿಲೂ ಪ್ರಖರ-
ಮುಂಗಾರಿನೊಡಲ ಮಿಂಚು, ಮಳೆಯ ರಭಸ:

ಬೇಗೆಯಿಲ್ಲದ ಬಿಸಿಲ ಹದ ಈಗ, ಉದ್ವೇಗವಿಲ್ಲದ ನಡಿಗೆ
ಮುಗಿದ ಸುಗ್ಗಿಯ ಕೊಡುಗೆ; ನಕ್ಷತ್ರಗಳ ಮಂದಹಾಸ.

ಹಂಪುಗಾಲಕ್ಕೆ ಹಣ್ಣಿಗೆ ಬೇರೆ ಬಣ್ಣ, ರುಚಿಯೂ ಅಷ್ಟೆ
ಮಾಗಿದನುಭವದ ಕಳೆ ಮುಖದ ಮೇಲೆ;
ಬದುಕಿನಿತಿಮಿತಿಯನರಿತ ಸಂತೃಪ್ತಿ, ನಿಶ್ಚಿಂತ ನಿಲುವು
ಹೊಸ ಚೆಲುವಿನಾವಿಷ್ಕಾರ, ಸುಕುಮಾರಲೀಲೆ.

ಹಿರಿಯನೆಂದೆನಿಸಿಕೊಳ್ಳುವದು ನಿನ್ನಂಥವಗೆ ಸ್ವಲ್ಪ ಕಿರಿಕಿರಿಯೆ
ಅದಕಾಗಿ ಸಲಿಗೆ ಮೊಮ್ಮಕ್ಕಳಿಗೆ ಅಜ್ಜನೊಡನೆ;
ಶಿಶಿರದ ಬಸಿರಿನಲ್ಲೆ ಚೈತ್ರ ಕಣ್‌ತೆರೆವ ಜೀವದ ಕುಸುರು
ಒಣಗಿರುವ ಕೊಂಬೆದುದಿಯಲ್ಲಿ ಹಕ್ಕಿಯಾಲಾಪನೆ.

ಸಂಜೆಗೆಂಪಿನ ಮುಂದೆ ಬದುಕಿನ ಗುಟ್ಟು ಬಿಚ್ಚಿಡುವಂತೆ
ಬೆಟ್ಟ, ಸ್ತಬ್ಧ ಗಿಡಮರ, ನಿಶ್ಶಬ್ದ ಹಕ್ಕಿ-ಸಾಲು;
ಕಾಡಿನಂಚಿಗೆ ಕಣ್ಣು ಮುಚ್ಚಾಲೆ ಮಿಂಚು-ಹುಳ
ಹುಬ್ಬುಗೈಹಚ್ಚಿ ನೋಡುವ ಚಂದ್ರ, ಹಿಡಿದು ಲಾಂದ್ರ.

ಬೆಳಗಿನ ವಿಹಾರದಲಿ ಮೈಕೊರೆವ ಚಳಿ, ಮೂಡ ಗಾಳಿಯ ಮೊರೆತ-
ನಗುನಗುತ ಹಣ್ಣೆಲೆಗಳುದುರಿ ಚದುರುವಾಟ;
"ಜೀವನ ಲಯದ ಸ್ವೀಕಾರದಲ್ಲಿದೆ ಸೊಗಸು; ಇದೆಲ್ಲಿಯ ತರಲೆ
ಎನಬೇಡ, ನಾನಿನ್ನು ಬರಲೆ? ಗೊತ್ತಲ್ಲ ನಾ ಸ್ವಲ್ಪ ಒರಟ."

ಚಹವ ಗುಟುಕರಿಸುತ್ತ ಮೇಲೆದ್ದ ಬಾಲ್ಯದ ಗೆಳೆಯ
ನಕ್ಕು, ಕೈಕುಲುಕಿ ದಟ್ಟಮಂಜಿನಲಿ ಕರಗಿಹೋದ.

## ಕವಿತೆ

ಇರುಳು
ನಕ್ಷತ್ರ ಮಿನುಗುತ್ತವೆ-
ಎಂದರೆ,
ಬೆಳಕು ಬಾಯ್‌ಬಿಟ್ಟು, ತುಟಿಗೆ ತುಟಿ
ಹಚ್ಚದೆ ಮಾತಾಡಿಕೊಳ್ಳುತ್ತವೆ. ಕವಿತೆ
ಕಿವಿಗೊಟ್ಟು ಕೇಳುತ್ತದೆ.

ಮಂದ ಬೆಳಕಿನಲ್ಲಿ ಗಿರಿ ಸಿಖರ
ಗಿರಿಗಿರಿ ಬುಗುರಿಯಾಡಿ
ಇದ್ದಲ್ಲೆ ನಿದ್ದೆ ಹೋಗುತ್ತವೆ.
ಗಿಡಮರಗಳು ಆಕಾಶದಲ್ಲಿ
ಬೇಕಾದ ಹಾಗೆ ಹಾರಾಡಿ
ಬಂದು ತೂಕಡಿಸುತ್ತವೆ.
ಮರೆಯಲ್ಲಿ ನಿಂತು ಕವಿತೆ
ಬಟ್ಟಲುಗಣ್ಣು ತೆರೆದು ನೋಡುತ್ತದೆ.

ಹಳ್ಳ-ಹೊಳೆ ನಿರಂತರ ಹರಿದು
ಕಡಲ ಒಡ ಹಾಯ್ದು
ಮಿಂಚಿ, ಗುಡುಗಿ, ಕಾವ್ಯಮೇಘದಮೋಘ ಸಾಲು
ಅನುರಣಿಸಿ ಮಣ್ಣರಳಿಸುತ್ತದೆ.

ಹೂ-ಮಕ್ಕಳ ನಗೆಯರಳಿ, ಕೊಳದಲ್ಲಿ
ಮೀನು ಹೊಡಮರಳಿ;
ಬಾಗಿ ನೇಗಿಲು ಹೊಡೆದು ಇಳಿದ ಬೆವರಿಗೆ
ಮುತ್ತು-ಕಾಳು ತೆನೆ ಹಿಡಿದು
ಕವಿತೆ ಹೊಳೆಯುತ್ತದೆ.

ಕಸದ ತೊಟ್ಟಿಗೆ ಹಸಿವೆ
ಮುಗಿಬಿದ್ದು ಅನ್ನದಗುಳನು ಹೆಕ್ಕಿ
ತೆಗೆವಾಗ-
ಮಂತ್ರಿಗಿಂದ್ರ ಪದವಿಯ ಭೋಗ;
ಕವಿತೆ ತುಟಿ ಕಚ್ಚಿ ತಲೆ ತಗ್ಗಿಸುತ್ತದೆ.

ಹಲವು ದಾರಿಗೆ ಹಲವು ಗುರಿ ನೇರ-ವಕ್ರ,
ಅತಿಕ್ರಮಿಸಿದ ವೇಗ ಎಡರು -ತೊಡರಾಗಿ
ಅಪಘಾತ; ಲಯ ತಪ್ಪಿಹೋದ ಕವಿತೆ
ಮಾನವ ಭಗ್ನ ಪ್ರತಿಮೆ.

ಕಣ್ಣಲ್ಲಿ ಕಣ್ಣಿಟ್ಟು ಕಡೆದ ಶಿಲಾ-
ಬಾಲಿಕೆಯರೆದ್ದು ಬರುವಂತೆ
ವಾದ್ಯವೃಂದೋನ್ಮಾದವಿಳಿದಾಗ, ಬಳಿಗೆ
ನುಸುಳಿತು ಕಾವ್ಯದೇಕತಾರಿ.

ಬಟ್ಟ ಬಯಲಿನ ನಡುವೆ ಬೆಟ್ಟ-
ಬಂಡೆ ಅಖಂಡ ಗೊಮ್ಮಟ ಕಲೆ;
ನೆಲದಿಂದ ಮುಗಿಲವರೆಗೂ
ಕವಿತೆ, ಬರಿಬತ್ತಲೆ.

## ಚೇಳಿಗೊಂದೇ ಬಸಿರು

ಮುಖದ ಎಡಬಲಕ್ಕೆರಡು ಚೂಪಾದ ಚಿಮುಟ
ಬಾಲಕ್ಕೆ ವಿಷದ ಮುತ್ತನ್ನೆತ್ತಿ ಮೆರೆಯುವ ಕೊಂಡಿ.
ಮೆಲ್ಲಗೆ ಗೋಡೆಬದಿ ಹಿಡಿದು ಹೊರಟಾಗ
ತಟ್ಟನೆ ಕಂಡು ಮೆಟ್ಟಿ ಬೀಳುತ್ತೇವೆ.

ಈ ಭಯೋತ್ಪಾದಕನೆಲ್ಲಿ ಅಡಗಿದ್ದ?
(ಶಿಲಾಬಾಲಿಕೆಯ ಸೀರೆಯ ನಿರಿಗೆಯಲ್ಲೂ ಇದ್ದ.)

ಜಂತಿಯಿಂದ ಲೊಟ್ಟನೆ ಬಿದ್ದಾಗ, ಅವ್ವ
ದೀಪಹಚ್ಚಿ ಹುಡುಕಿ, ಪಟ್ಟನೆ ಬಡಿದು ಗತಿಗಾಣಿಸಿದ್ದು
ನೆನಪಿನ ಕೊಂಡಿಯಲ್ಲಿ ಜೀವಂತವಿದೆ.
ಸುತ್ತಿಟ್ಟ ಗಾದಿ, ಬಿಚ್ಚಿ ಹಾಸಿರುವ ಜಮಖಾನೆ
ಮಾಡಿನಲ್ಲಿ ಬಿಟ್ಟ ಚಪ್ಪಲಿ, ಬೂಟಿನೊಳಗೆ,
ಕಲ್ಲು, ದಿಮ್ಮಿಗಳ ಬುಡದಲ್ಲಿ, ಇಲ್ಲ ಗುದ್ದಿನೊಳಗೆ.

ಇರುಳು ಹೊರಬಿದ್ದು ಮೆಲ್ಲಗೆ ನುಸುಳಿ
ಹುಳು-ಹುಪ್ಪಡಿಯ ಬೇಟೆ.
ಸಂದಿಗೊಂದಿಗಳೆ ತಂಗುದಾಣ.
ತುಳಿದರೆ ಇರುವೆಯೂ ಕಚ್ಚುವುದು, ಚೇಳು
ಬಿಡುವುದೆ ಹೇಳು?
ಗುರಿಯಿಟ್ಟು, ಹೊರಟಿರದಿದ್ದರೂ
ತಡವಿದರೆ, ಅಡ್ಡದಾರಿಗೆ ಬಿದ್ದು ಎಡವಿದರೆ
ಆತ್ಮರಕ್ಷಣೆಯ ಗಡಿಯಲ್ಲಿ
ಹಿಂಸೆಗೆ ಪ್ರಚೋದನೆ.

ವಂಶ ಬೆಳೆಸುವ ಇಚ್ಛೆಗಾವ ಪ್ರಾಣಿಯೂ ಹೊರತಲ್ಲ.
ಗಂಡು-ಹೆಣ್ಣು ಕೈ ಕೈ ಹಿಡಿದು ಕುಣಿದು
ಕೊಂಡಿಕೊಂಡಿಗೆ ಹೆಣೆದು
ತಿರುಗಿ ತಿರುಗಣಿಯಂತೆ, ಕೊನೆಗೊಂದು ತಿರುವಿನಲಿ
ಗಂಡು, ಹೆಣ್ಣಿಗೆ ಭಕ್ಷ್ಯವಾಗುವುದಕ್ಕೆ
ಸಾಕ್ಷಿಯುಂಟು.
ಪ್ರಣಯ ನೃತ್ಯದ ಕ್ರೂರಕೃತ್ಯಕ್ಕೆ ಮುಂದೆ
ತಾಯ್ತನದ ಸಂಭ್ರಮ.
ಮಿದುವಾದ ಮರಿಗಳನೆಲ್ಲ ಬೆನ್ನಿನ ಮೇಲೆ ಹೊತ್ತು
ಹೊರೆಯುವದು, ಇಳಿದು ಓಡಾಡುವರೆಗೆ.
'ಚೇಳಿಗೊಂದೇ ಬಸಿರು' ಇರಬಹುದು-
'ಊರದ ಚೇಳು, ಏರದ ಬೇನೆಯಲ್ಲಿ
ಮೂರು ಲೋಕ ನರಳುವದು' ಬರಿಯ ಬೆಡಗೆ?

## ಒಂದು ಬೆಳಗು

ನಸುಕಿನಲ್ಲಿ ಎಲ್ಲರಿಗಿಂತ ಮೊದಲೇ
ಎಲ್ಲಿಂದಲೋ ಕೂಗಿದ್ದು ಕೋಗಿಲೆಯೇ-
ಎಂದು ಕಿವಿ ನಂಬದಾಯ್ತು.
ಮನೆಯ ಪಕ್ಕದಲಿ ಹಕ್ಕಿ ಚಿಲಿಪಿಲಿಗುಟ್ಟಿದಾಗ-
ನಾಭಿ ಮೂಲದಿಂದ ಕಹಳೆಯ ಪಾಂಗಿನಂತೆ ಹೊಮ್ಮಿದ 'ಕುಹೂ'
ಅದೇ ಅದೇ ಎಂದು ಖಾತ್ರಿಯಾಯ್ತು.

ಮಬ್ಬುಗತ್ತಲೆಯನ್ನು ಭೇದಿಸಿ ನಮಾಜಿನ ಆವಾಜು
ಆಕಾಶಕ್ಕೇರಿ ಇಳಿದಾಗ,
ದೂರದಿಂದ ಧಾವಿಸಿ ಬರುತ್ತಿದ್ದ ರೈಲಿನ ಸಿಳ್ಳು
ದಿಗಂತದ ನಸುಗೆಂಪನ್ನು ತಿದ್ದಿ ತೀಡಿ
ದೀರ್ಘರೇಖೆಯನ್ನೆಳೆದಾಗ,
ಸಂಧಿಕಾಲಕ್ಕೆ ಪ್ರಯಾಣ ಸಮೀಪಿಸಿತ್ತು.

ನಗರದ ಕೋಳಿಗಳಿಗೆ
ಬೀಸಾಗಿ, ಪಟಪಟ ರೆಕ್ಕೆ ಬಡಿದು

ಕೊರಳೆತ್ತಿ ಕೂಗುವಭ್ಯಾಸ ಮರೆತೇ ಹೋಗಿದೆ.
ಎಡೆಬಿಡದೆ ತತ್ತಿ ಇಡುವುದೊಂದೇ ಅವಕ್ಕೆ
ಮನುಷ್ಯ ವಹಿಸಿಕೊಟ್ಟಿರುವ ಕುಟುಂಬ ಯೋಜನೆ.
ಅದಕ್ಕಾಗಿ ಪಂಜರದಲ್ಲೆ ಪೌಷ್ಟಿಕಾಹಾರ, ಜೋಪಾಸನೆ.

ಕೋಗಿಲೆಯೊಂದು ಮಾತ್ರ ಇದುವರೆಗೆ
ಯಾರ ಕೈಗೂ ಸಿಗದೆ
ಸ್ವಚ್ಛಂದ ಹಾರಿ ಬದುಕುತ್ತಿರುವುದೇ ಆಶ್ಚರ್ಯ.
ಕೋಗಿಲೆ-ನಮಾಜು-ರೈಲು
ಕಲೆ-ಧರ್ಮ-ವಿಜ್ಞಾನದ ಪೈಲು
ಪರಸ್ಪರ ಸಂಧಿಸಿ, ಸ್ಪಂದಿಸಿ ದಿನವೂ
ಹೀಗೆ ಬೆಳಗಾದರೆ?-
ಎಂದು ಪ್ರಶ್ನೆಯ ಬೆತ್ತ ಹಿಡಿದು
ಬೆಳಗಿನ ವಿಹಾರಕ್ಕೆ ನಾನು ಹೊರಬಿದ್ದೆ.

## ಶಬ್ದ–ನಿಶ್ಶಬ್ದ

'ನಾ' 'ನೀ' ಎಂದು ಹಿಗ್ಗಿ, ನುಗ್ಗಿ ಬರುತ್ತಿದ್ದ
ನನ್ನಅಂತಃಕರಣದ ಮುಗ್ಧ
ಸ್ನಿಗ್ಧ ಶಬ್ದಗಳೆ, ಶೂನ್ಯಕ್ಕೆ
ಕೊಂಬುಕೊಟ್ಟು, ಜಗ್ಗಿ ಕೆಳಗಿಳಿಸಿದಿ'ರಾ'?
ಮ'ಮ'ಕಾರಕ್ಕೆ ಈಡಾಗಿ
ಕಲ್ಲು ಇಟ್ಟಿಗೆ ನಡುವೆ ಎದೆಯ ಸೊಲ್ಲಡಗಿ
ಕಣ್ಣುಪಟ್ಟಿಯ ಕಟ್ಟಿ ಓಡಿಸಿದ ರಥ-ಪಥದ
ಚಕ್ರಕ್ಕೆ ಸಿಕ್ಕು ಚೀತ್ಕರಿಸಿ
ನೋಡ ನೋಡುತ್ತ ಹಾಡೇ ಹಗಲು
ಕವಿದ ಕತ್ತಲು;
ಬೇತಾಳಗಳ ಪದಾಘಾತಕ್ಕೆ
ರಾಮಾರಗತವಾಗಿ ಹೋದಿರಾ?

ಇಲ್ಲ-
    ಓಂಕಾರದ ಶಂಖದಿಂದ ನಾಭಿಮೂಲಕ್ಕಿರಿದು
    ಕರುಳು ಹೊರದೆಗೆದು, ಜೈಕಾರಗೈದ

ಸಾಧು ಸತ್ಪುರುಷರ ಕಂಡು
ಮರಾ ಮರಾ ಮರಾ ಮರುಗಿದಿರಾ?

ಸೇಡಿನ ಹೋಮ ಹವನಕ್ಕೆ ಪ್ರೀತಿ, ಮೈತ್ರಿಯ ಕವನ
ಎಲ್ಲಾ ಆಹುತಿಯಾಗಿ ಹೋದ-
ವಲ್ಲಾ!
ತಿಳಿವಿನ ತುಪ್ಪ ಸುಟ್ಟ ಕಮಟು ವಾಸನೆಯಲ್ಲಿ
ಶ್ವಾಸೋಚ್ಛ್ವಾಸಕ್ಕೆ ಕೂಡ ದಾರಿಯಿಲ್ಲ.
ಗೂಢ ಗುಮ್ಮಟದೊಳಗೆ
ಗುಟುಕಿಟ್ಟು, ಪಟಪಟ ರೆಕ್ಕೆ ಬಡಿವಾಗ
ಬಿಳಿ ಪಾರಿವಾಳ,
ಸುತ್ತಿಗೆ ಹಿಡಿದು ಬಡಿದು ಕತ್ತರಿಸಿ
ತಾಯ ಮೊಲೆತೊಟ್ಟು
(ಮಕ್ಕಳಿವರೇನಮ್ಮ... ಮಕ್ಕಳಿವರೇನಮ್ಮ)
ಚರಿತ್ರೆಯ ಪುಟಪುಟದಲ್ಲಿ ಮತ್ತೆ
ರಕ್ತ ತಟಗುಟ್ಟಿ
ಸರಯೂ ನದಿಯು ಮುಂದೆ ಹರಿಯಲಿಲ್ಲ.

ಚೂರಿ ಇರಿತಕ್ಕೆ ಕುಸಿದ ನಿಶ್ಶಬ್ದ ಶಬ್ದಗಳೆ
ಮೆಲ್ಲಗೆ ಎತ್ತಿ, ಗಲ್ಲಕ್ಕೆ ಒತ್ತಿಕೊಳ್ಳುತ್ತೇನೆ.
ಅಕ್ಷರಕ್ಷರದಲ್ಲಿ ಬೆಸೆದು, ಭಾಷೆ
ಕೊಟ್ಟಿದ್ದೀರಿ ಭಾವಕ್ಕೆ
ಹೃದಯ ಸಂವಾದಕ್ಕೆ, ಅನುಭಾವ ಗೀತಕ್ಕೆ
ಈಗ ಏತಕ್ಕೆ ಮೂಕವಾಗಿದ್ದೀರಿ?

ಬೆಂಕಿಯಾರಿಸಿ, ಕಣ್ಣೀರನೊರೆಸಿ, ಅಕಲಂಕವಾಗಿ
ಬನ್ನಿ, ಬನ್ನಿ ಕನಸುಗಳೇ ಮರಳಿ ತಲೆಯ ಗುಮ್ಮಟಕೆ
ಕಾದಿರುವ ಹೃದಯ ಕಮ್ಮಟಕೆ;
ಸೌಹಾರ್ದದ ಮುದ್ರೆ ಪಡೆದು ಚಲಾವಣೆಯಾಗಿ
ದೇಶದುದ್ದಗಲಕ್ಕು ಸಂಚರಿಸಿ
ಸಮ-ರಸ-ಧ್ವನಿಯಾಗಿ.

## ಬೆಳುದಿಂಗಳಾಟ

ಎಷ್ಟು ಮಿದುವೇ ತಾಯಿ, ಇದರ ರೆಕ್ಕೆ-ಪುಕ್ಕ
ಬೆಳುದಿಂಗಳನೆ ಮುಟ್ಟಿದಂತಾಯಿತಕ್ಕ.

ಬೆಳಗು ಮುಂಜಾವದಲಿ ಕೇಳಿಸಿದ ಹಾಡು
ಇದರದೇ ಇರಬಹುದು, ಎಲ್ಲಿದರ ಗೂಡು?

ಮಾಡಬೇಡವೆ ಹಾಗೆ ಹಿಚುಕಿ ಗಾಸಿ ಬೀಸಿ,
ಯಾಕೊ ನೆನ್ನೆದೆಯೊಳಗೆ ಒಂಥರಾ ಕಸಿವಿಸಿ.

ತಾ ನನಗು ಒಂದಿಷ್ಟು ಈ ಬೊಗಸೆಯೊಳಗೆ
ಹಗುರಾಗಿ ಹಿಡಿಯುವೆನು ಹಸುಗೂಸಿನಂತೆ.

ಹವಳದಂತಹ ಕಣ್ಣು, ಆಹಾ ಬೆಳ್ಳಿ ಚುಂಚು!
ನೋಡಿಲ್ಲಿಕಾಲಿನಲಿ ಉಂಗುರದ ಮಿಂಚು.

ಯಾರನೋ ಹುಡುಕಿ, ದುಡುಕಿ ಬಂದಿರಬಹುದೆ ತಂಗಿ?
ಹಾಗೆಯೇ ತೋರುವದು ನೋಡದರ ಭಾವಭಂಗಿ.

ತಮ್ಮೊಳಗೇನೊ ಮಾತಾಡಿಕೊಳುತಿಹರಲ್ಲ ಅಪ್ಪ ಅವ್ವ?
ನಮ್ಮ ಮೂವರ ನಡುವೆ ಬೆಳುದಿಂಗಳಿನ ಟೆಂವಕ್ಕಿ ಚಕ್ಕಚವ್ವ.

ಚಂದ್ರ ಹೊರಬಂದನದೊ ಕುತೂಹಲದಿ ಮೋಡದಾಚೆಯಿಂದ
ಹಾರಿಸಿಬಿಡೋಣ, ಹೋಗಿ ಮುಟ್ಟಲಿ ಅವಗು ನಮ್ಮ ಆನಂದ.*

## ಅದೃಷ್ಟ

ಬೆಟ್ಟದ ಮೇಲೆ ಹಿಂದೆ ತಲೆಯೆತ್ತಿ ಮೆರೆದು, ಇಂದು
　　ಹಾಳು ಬಿದ್ದಿರುವಂಥ ಕೋಟೆ.
ಅಲ್ಲಿದ್ದನೊಬ್ಬ ಮುದುಕ, ಅವಗೊಬ್ಬನೇ ಮಗ
　　ಹೇಗೋ ಸಾಗಿಸುತ್ತಿದ್ದ ಬದುಕ.

ಒಂದು ದಿನ ಇದ್ದಕ್ಕಿದ್ದಂತೆ ಕಾಣೆಯಾಯಿತು ಅವನ
　　ಕುದುರೆ, ಅವನಿಗಿದ್ದಾಸರೆ.

---

* ಎಂ.ಜಿ. ಬಂಗ್ಲೆವಾಲೆಯವರ ವರ್ಣಚಿತ್ರದಿಂದ ಪ್ರೇರಿತ

ಬೆಟ್ಟದ ಕೆಳಗೆ ಮನೆ ಕಟ್ಟಿಕೊಂಡಿದ್ದ ಮಂದಿ
ಬಂದರು, ಮರುಕ ತೋರಿದರು:
'ಪಾಪ, ದುರ್ದೈವ' ಎಂದು.
ನಿರ್ಲಕ್ಷ್ಯದಿಂದಿದ್ದ ಮುದುಕ ಕೇಳಿದ:
"ಹೇಗೆ ಬಲ್ಲಿರಿ ಇದು ದುರ್ದೈವ ಎಂದು?"

ದಿನಗಳುರುಳಿದವು; ಅವರಷ್ಟಕ್ಕೆ ಅವರು, ಇವನಷ್ಟಕ್ಕೆ ಇವನು.
ಖುರಪುಟದ ದನಿಕೇಳಿ ಒಂದು ದಿನ ಹೊರಬಂದ ಮುದುಕ-
ಹೌದು, ತನ್ನದೆ ಕುದುರೆ, ಜೊತೆಗೇ ಕಾಡುಕುದುರೆಗಳ ಹಿಂಡು,
ಬಂದರೋಡೋಡಿ ಕುದುರೆಗಳ ಕೆನೆತ ಕೇಳಿ ಅದೇ ನೆರೆಹೊರೆಯ ಮಂದಿ.

ಕೈಕುಲುಕಿ ಮುದುಕನ ತಬ್ಬಿ ಉದ್ಗರಿಸಿದರು; 'ಎಂಥಾ ಸುದೈವ!'
ಹಿಂದೆ ಕೇಳಿದ್ದನಲ್ಲ, ಅದೇ ದನಿಯಲ್ಲಿ ನುಡಿದ ಮುದುಕ:
"ಹೌದೆ? ಹೇಗೆ ಹೇಳುವಿರಿ ಇದು ಸುದೈವವೆಂದು?"
ಉತ್ತರವು ಹೊಳೆಯದೆ ಅವರು ಮರಳಿದರು ಹಿಂದಿನಂತೆ.

ಒಂದಕ್ಕಿಂತ ಒಂದು ಸುಟಿಯಾದ ಕುದುರೆ, ಯಾವುದನು
ಹತ್ತಲಿ? ಯಾವುದ ಬಿಡಲಿ?ಎಂದು ತಕತಕ ಕುಣಿದ ಮಗ.
ದಿನಕ್ಕೊಂದು ಸವಾರಿ, ಕಾಡು-ಮೇಡು ಸುತ್ತಿ ಹೊಡೆದ ಫೇರಿ.
ದಡಕ್ಕನೊಂದು ದಿನ ಥಡಿ ಜಾರಿ ಬಿದ್ದ ಹುಡುಗ-
ಮುರಿದು ಬಿಟ್ಟಿತು ಅವನ ಬಲಗಾಲ ಮೂಳೆ.

ಮತ್ತೆ ಬಂದರು ಜನ ಯಥಾಪ್ರಕಾರ ವಿಷಾದಪಟ್ಟು
ಮುದುಕನ ಮಗನ ದುರದೃಷ್ಟಕ್ಕೆ;
ತೋಡಿಕೊಂಡರು ತಮ್ಮ ವಾಡಿಕೆಯ ಅನುಕಂಪ
ನಿರ್ಲಿಪ್ತ ಭಾವದಲಿ ಮುದುಕನೆಂದ:
"ಹೇಗೆ ಹೇಳುವಿರಪ್ಪ ಇದು ಅವನ ದುರದೃಷ್ಟವೆಂದು?"
ಒಬ್ಬರ ಮುಖವನೊಬ್ಬರು ನೋಡಿ ಹಿಂದಿರುಗಿದರು
ಏನು ಉತ್ತರಿಸಬೇಕೆಂಬುದೇ ಹೊಳೆಯದಾಗಿ.

ಮರುವರ್ಷವೇ ಬಂತು ಭೀಕರ ಯುದ್ಧ-
ಯುವಕರಿಗೆಲ್ಲ ತುರ್ತುಕರೆ.
ಮುದುಕನ ಮಗನು ಮಾತ್ರ ಸೇರಬೇಕಾಗಲಿಲ್ಲ ಸೈನ್ಯ-
ಅವನ ಬಲಗಾಲೆ ಊನ."

* ಒಂದು ಹಳೆಯ ಚೀನೀ ದೃಷ್ಟಾಂತ ಕಥೆ.

## ಪರಪುರುಷ

ಗದಾಧರನಿಗೆ ಆಗ ಹದಿವಯಸ್ಸು, ವಿದೂಷಕ-
ನಂತೆ ಚೇಷ್ಟೆ, ವಿನೋದಗಳಲ್ಲಿ ಮನಸು, ಅಣಕ
ನಾಟಕ ನಿಪುಣ. ಒಮ್ಮೆ ಇವನೆದುರು ಒಬ್ಬ ಜಂಬ
ಕೊಚ್ಚಿದ ಹೀಗೆ, ಅವನೆ ದುರ್ಗಾದಾಸ ವೈನೆ:
"ಪರಪುರುಷರಾರೂ ಕಣ್ಣೆತ್ತಿ ನೋಡದ ಹಾಗೆ
ಗೋಪ್ಯವಾಗಿಟ್ಟಿರುವೆ ನನ್ನ ಮನೆ ಹೆಂಗಸರ.
ಪರದಾಪದ್ಧತಿಯು ಕುಟುಂಬದಲ್ಲಿ ಕಡ್ಡಾಯ."
ಬಿಡಬಾರದೆನಿಸಿತು ಇಂಥ ಅವಕಾಶ ಗದಾ-
ಧರಗೆ ; ಸ್ವೀಕರಿಸಿದನು ಸವಾಲು ಮನದೊಳಗೆ.

ಮೊದಲೆ ಜನಪ್ರಿಯ, ನಂಬಿಕೆಗೆ ಪಾತ್ರ, ಪುನೀತ.
ಎಲ್ಲ ಮನೆ ಇವಗೆ ಮುಕ್ತದ್ವಾರ. ಯಾರಿಗೂ
ಸಂಶಯ ಬರದ ತರುಣ : ಇಂಥ ವಾತಾವರಣ.
"ನೀ ಮುಚ್ಚಿಟ್ಟ ಹೆಂಗಸರ ನಾ ನೋಡಬಲ್ಲೆ,
ಎಲ್ಲ ಕೊಠಡಿಗಳಲ್ಲಿ ಓಡಾಡಿ ಬರಬಲ್ಲೆ
ಆಗಬಹುದೆ?" ಗದಾಧರನ ಮಾತಿಗಿಲ್ಲೆನದೆ
ಸುಮ್ಮನೊಪ್ಪಿ ತಲೆಯಾಡಿಸಿದ ದುರ್ಗಾದಾಸ.
ಕೇವಲ ವಿನೋದಕಿರಬಹುದೆಂದು ಕೇಳಿದವ-
ರೆಲ್ಲ ಮರೆತರು ಪ್ರಕರಣ, ಕಾಲಕ್ರಮೇಣ.

ಒಂದು ದಿನ ಸಂಜೆ ಮಬ್ಬಿನಲಿ ಒಬ್ಬ ನೇಕಾರ
ಹೆಣ್ಣು ಬಂದಳು ದುರ್ಗಾದಾಸನ ಮನೆಯ ಕಡೆ.
ಮಾರುಕಟ್ಟೆಯ ಬುಟ್ಟಿ ಬಗಲಲ್ಲಿ, ಮುಖಕ್ಕೆ
ಮುಸುಕು. ಗೆಳೆಯರ ಜೊತೆಗೆ ಹಜಾರದಲ್ಲಿ ಹರಟೆ
ಹೊಡೆಯುತ್ತಿದ್ದ ದುರ್ಗಾದಾಸ. ನೇರ ಅವನ
ಬಳಿ ಬಂದು ಕೋರಿದಳು ನೇಕಾರ ಹೆಣ್ಣು: "ನೂಲು
ತರಲು ಪರಸ್ಥಳದಿಂದ ಪೇಟೆಗೆ ಬಂದೆ. ಜೊತೆ-
ಗಿದ್ದವರು ಜಗಳಾಡಿ ಹೊರಟುಹೋದರು, ನನ್ನ
ಬಿಟ್ಟು, ಕತ್ತಲಾಯಿತು, ನಿಮ್ಮ ಮನೆಯೊಳಗಿಷ್ಟು
ಜಾಗ ಕೊಡಿ, ನಾಳೆ ಬೆಳಗಾಗ ಊರು ಸೇರುವೆ."

"ಒಳಹೋಗಿ ಹೆಂಗಸರ ಕೇಳು. ಕೊಠಡಿ ಕೊಟ್ಟರೆ
ಇರು. ಇದೆಲ್ಲ ಅವರಿಗೆ ಸಂಬಂಧಪಟ್ಟ ವಿಷಯ."

ದುರ್ಗಾದಾಸನನಿಂದ ಅಪ್ಪಣೆ ಪಡೆದು ಆಕೆ
ಅಡಿಯಿಟ್ಟಳಂತಃಪುರಕೆ, ಹೆಂಗಸರೊಡನೆ ಕುಳಿತು
ಹರಟಿದಳು, ಮರುಳಾದರವಳ ಮಾತಿಗೆ ಒಲಿದು.

ರಾತ್ರಿ ಹೊತ್ತಾದರೂ ಮನೆಗೆ ಬಾರದ ಗದಾ-
ಧರನ ಹುಡುಕುತ ಬೀದಿಗಿಳಿದು, ಗಾಬರಿಯಾಗಿ
ಗಟ್ಟಿ ಕೂಗಿದನು ಅಣ್ಣ ರಾಮೇಶ್ವರ 'ಗದಾ
ಗದಾ' ಎಂದು ಗಡಬಡಿಸಿ. 'ಬಂದೆ ಅಣ್ಣಾ ಬಂದೆ'-
ದುರ್ಗಾದಾಸನಂತಃಪುರದಿಂದ ಮರುಕೂಗು.
ಓಡಿ ಬಂದಳಲ್ಲಿಂದಲೆ ನೇಕಾರ ಹೆಣ್ಣು.
ಗೊಂದಲದಿ ದುರ್ಗಾದಾಸ ಇಣಿಕಿದ ಹೊರಗೆ:
ಹೆಣ್ಣು ವೇಷದ ಗದಾಧರನೆ ಅಣ್ಣನ ಜೊತೆಗೆ!
ಸೋಲನೊಪ್ಪಿ ಗದಾಧರನ ಕುಚೇಷ್ಟೆಗೆ ಮೆಚ್ಚಿ
ಬೀಳ್ಕೊಟ್ಟ ದುರ್ಗಾದಾಸ ಅಣ್ಣ-ತಮ್ಮದಿರ.*

## ಭಗ್ನ ಪ್ರತಿಮೆ

ಗದಾಧರ ದಕ್ಷಿಣೇಶ್ವರಕೆ ಬಂದ ಮುಹೂರ್ತ-
ದಲಿ 'ರಾಮಕೃಷ್ಣ'ರಾದರು, ರಾಣಿ ರಾಸಮಣಿ
ದೇವಿ, ಅಳಿಯ ಮಥುರಮೋಹನರತ್ಯಾದರಕೆ.
ಕಾಳಿಕಾದೇವಿ ಅರ್ಚನೆಗೆ ಅಲಂಕಾರದ
ಹೊಣೆಯ ಹೊತ್ತು ನೆಲೆಸಿದರು ಪ್ರೀತಿ ಒತ್ತಾಯಕೆ.

ಅದೇ ವರ್ಷ ಸಂಭವಿಸಿತೊಂದು ಆಕಸ್ಮಿಕದ
ಘಟನೆ. ಕೃಷ್ಣ ಜನ್ಮಾಷ್ಟಮಿಯ ಪೂಜೆಯು ಮುಗಿದು
ರಾಧಾಕಾಂತ ದೇವಾಲಯದಿ ಕ್ಷೇತ್ರನಾಥ (ಅರ್ಚಕ)
ಕೃಷ್ಣ ವಿಗ್ರಹವ ಶಯನಾಗಾರಕೊಯ್ಯುತ್ತಿರು –
ವಾಗ, ಹಾಸುಗಲ್ಲಿನ ಮೇಲೆ ಜಾರಿ ಬೀಳಲು
ವಿಗ್ರಹಕ್ಕೆ ಪೆಟ್ಟಾಗಿ ಪಾದ ತಟ್ಟನೊಡೆಯಿತು.
ಅಪಶಕುನ, ಅನಿಷ್ಟ ಸೂಚನೆ ಎಂಬ ತಳಮಳ..

---

* ಶ್ರೀ ರಾಮಕೃಷ್ಣ ಪರಮಹಂಸರ ಬಾಲ್ಯದ (ಗದಾಧರ) ಒಂದು ಪ್ರಸಂಗ

ಆಗಮಶಾಸ್ತ್ರ ಬಲ್ಲಿದರು ಸೇರಿ ಚರ್ಚಿಸಿ
ತೀರ್ಮಾನಿಸಿದರು: "ಭಗ್ನ ಪ್ರತಿಮೆ ಪೂಜೆಗನರ್ಹ.
ಮುರಿದುದನು ಗಂಗೆಯಲಿ ವಿಸರ್ಜಿಸಿ ಹೊಸದೊಂದು
ವಿಗ್ರಹವ ಕಡೆಸಿ ಸ್ಥಾಪಿಸುವದೀಗ ಯೋಗ್ಯ."

ಪೂಜೆಗೊಂಡ ವಸ್ತುವನೆಸೆವುದೆಂತು? ರಾಣಿಗೆ
ಆ ಕೃಷ್ಣ ಪ್ರತಿಮೆಯಲಿ ಮೋಹ; ರಾಮಕೃಷ್ಣರು
ಹೇಗೂ ಪ್ರತಿಮಾ ನಿರ್ಮಾಣ ಕಲೆಯ ಬಲ್ಲವರು
ಎಂದು "ಪಿತಾಜಿ"ಗೆ ಸಮಸ್ಯೆಯ ನಿವೇದಿಸಿದರು.

ರಾಮಕೃಷ್ಣರು ಭಗ್ನಪ್ರತಿಮೆಯ ಪಾದ ಒಡೆದ
ಚೂರನು ಪರೀಕ್ಷಿಸುತ ಕೆಲಹೊತ್ತು ಮೌನದಲಿ
ನಿಂತರು ಭಾವ ಸಮಾಧಿಯಲಿ ತನ್ಮಯರಾಗಿ.
ಆ ಬಳಿಕ ನುಡಿದರು ಇಂತು ಬಹಿರ್ಮುಖರಾಗಿ:

"ರಾಣಿಯ ಅಳಿಯನೊಬ್ಬ ಅಪಘಾತದಲಿ ಮೂಳೆ
ಮುರಿದುಕೊಂಡರೆ ಆಕೆ ಎಸೆದು ಬಿಡುವಳೆ ಅವನ?
ಬದಲಿಗೆ ಬೇರೊಬ್ಬನನು ತಂದು ಕೂರಿಸುವಳೆ?
ವೈದ್ಯರಿಗೆ ಒಪ್ಪಿಸುತ, ಕಾಲು ನೆಟ್ಟಗಾಗಿಸಿ-
ಕೊಳುವುದಿಲ್ಲವೇ? ವಿಗ್ರಹಕು ಅದುವೆ ಪರಿಹಾರ."
ಯುವಕನ ವಿಲಕ್ಷಣ ದಿವ್ಯ ಸ್ಫೂರ್ತಿಯ ನುಡಿಗೆ
ಆಘಾತಗೊಂಡರು ಆಗಮಶಾಸ್ತ್ರ ಪಂಡಿತರು,
ಆನಂದ ಪಟ್ಟರು ರಾಣಿ ರಾಸಮಣಿ, ಮಥುರ.
ವಿಗ್ರಹವ ತರಿಸಿ ರಾಮಕೃಷ್ಣರು ಜೋಡಿಸಲು
ಅಖಂಡವಾಯಿತು ಪಾದ ಮೊದಲಿನಂತೆ,
ಅಂತರಂಗದ ಭಕ್ತಿ ಹಸ್ತಕವತರಿಸಿದಂತೆ.

ದಿನಗಳೆದ ಮೇಲೆ ಹೀಗೊಬ್ಬ ಕೇಳಿದನಂತೆ
ಜಮೀನುದಾರ : "ದಕ್ಷಿಣೇಶ್ವರದ ಕೃಷ್ಣನಿಗೆ
ಕಾಲು ಮುರಿಯಿತಂತೆ ನಿಜವೆ?" "ಅಖಂಡ ಪರಿಪೂರ್ಣ-
ನಾದವನ ಕಾಲು ಮುರಿವುದೆ?" ಎಂಥ ಅವಿವೇಕ!"
ರಾಮಕೃಷ್ಣರಿಂದ ಆಯಿತವನಿಗಭಿಷೇಕ.

## 'ಪ್ರವಾದಿ'

ನ್ಯೂಯಾರ್ಕ ನಗರದ ಪುಸ್ತಕದ ಅಂಗಡಿಯೊಂದು
ನನಗೆ ಸುಪರಿಚಿತ; ಅದರೊಡನೆ ನಿತ್ಯ ಸಂಪರ್ಕ.
ಒಂದು ಮಧ್ಯಾಹ್ನ ಬಂದಳಲ್ಲಿಗೆ ಒಬ್ಬಳೇ
ತಬ್ಬಲಿ ಮುದುಕಿ. ಹುಡುಕುಗಣ್ಣಿನಲಿ ನೋಡತೊಡ-
ಗಿದಳು ಸುತ್ತ. ಆಗ ಅಲ್ಲಿದ್ದ ನಾನು ಕೇಳಿದೆ:
"ಏನಾದರೂ ಬೇಕೆ? ಸಹಾಯ ಮಾಡಲೆ?" "ಹೂಂ,
ತಿಳಿಯದು... ಹೌದು, ಬೇಕು... ಒಂದು ಪುಸ್ತಕ... ಮರೆತು
ಹೋಗಿದೆ ಅದರ ಹೆಸರು." "ಅದನ್ನು ಬರೆದವರಾರು?"
"ಅದು ಗೊತ್ತಿಲ್ಲ." ತಬ್ಬಿಬ್ಬಿನಲಿ ಸ್ವಲ್ಪ ಹೊತ್ತು
ನೆನಪಿಸಿಕೊಂಡು ಹೇಳಿದಳು : "ಮಿತ್ರರೊಬ್ಬರ
ಪತ್ರದಲಿ ಆ ಪುಸ್ತಕದ ಹೆಸರಿತ್ತು. ಅದೂ
ಕಳೆದು ಹೋಗಿದೆ... ನೆನಪಾಗದು. ಆದರೆ ಅವರು
ಉದ್ಧರಿಸಿದೊಂದು ವಾಕ್ಯ ಹೀಗೆ: "ನಿಮ್ಮ ನೋವು
ಎಂದರೆ ನಿಮ್ಮ ಅರಿವನಾವರಿಸಿರುವ ಚಿಪ್ಪ-
ನೊಡೆಯುವಿಕೆ"-ಮತ್ತೆ ಮತ್ತೆ ಉಚ್ಚರಿಸಿದಳು ಆ
ವಾಕ್ಯವನು ಆಕೆ ಸವಿದು. ತಕ್ಷಣವೆ ಪುಸ್ತಕ
ತೆಗೆದುಕೊಟ್ಟೆ: ಖಲೀಲ್ ಗಿಬ್ರಾನರ 'ಪ್ರವಾದಿ.'
'ನೋವು' ಕುರಿತ ಅಧ್ಯಾಯದ ಪುಟ ತೆರೆದು ಹಿಡಿದೆ-
ನೆರಿಗೆ ಬಿದ್ದ ಮುಖದಲ್ಲಿ ಚೆಲುವಿನ ತೆರೆ ಹಾಯ್ದು
ನಲಿವ ನೋಟ! ಆ ಪಂಕ್ತಿಯನೆ ಹಿಡಿದು, ಪುಟವೆಲ್ಲ
ನೋಡಿ, ಕುಳಿತು ಸುಖಾಸನದಿ ಓದತೊಡಗಿದಳು.
ಅಷ್ಟರಲ್ಲಿ ಬಂದು ಹೋದರಂಗಡಿಗೆ ಎಷ್ಟೋ ಜನ.
ಇವಳ ಲಕ್ಷ್ಯವೆಲ್ಲ ಪುಸ್ತಕದಲ್ಲಿ. ಮೆಲ್ಲನೆದ್ದು
ಬಂದು ಬಳಿಗೆ, ಯಾವುದೋ ತೃಪ್ತಿಯಲಿ ನುಡಿದಳು:
"ಇದೇ, ಈ ಪುಸ್ತಕವೆ ನನಗೆ ಬೇಕಾದ್ದು... ಇದು
ಪುಸ್ತಕವೇ? ಅಲ್ಲ ... ಬಾಳಿನಲಿ ಬೆಂದು ಬೆಂಡಾದ
ನನ್ನಂಥ ಜನಕೆ ಇದು ಮುದವೀವ ಬ್ರೆಡ್ಡು, ವೈನು."

## ಬಾಪು-ಭಾಪು

೧

"ನಿಮಗೇಕೆ ಮೂರನೇ ದರ್ಜೆಯ ಪ್ರಯಾಣ?"
"ನಾಲ್ಕನೆಯದಿಲ್ಲಲ್ಲ, ಏನು ಮಾಡೋಣ"

೨

(ಕಲಾವಿದನಿತ್ತ ತಮ್ಮ ಭಾವಚಿತ್ರ ನೋಡಿ)
"ನನ್ನ ಕಿವಿಗಳು ಏಕೆ ಇಷ್ಟುದ್ದವಾಗಿವೆ?"
"ನಿಮ್ಮ ಕಿವಿ ಇರುವುದೇ ಹಾಗಲ್ಲವೆ?"
"ನಾನೇನು ಬಲ್ಲೆ, ಕನ್ನಡಿಯ ನೋಡಿದ್ದರಲ್ಲವೆ?"

೩

"ನಿಮಗೆ ಕೋಪ ಬರುವುದೆ ಬಾಪು?"
"ನನ್ನ ಹೆಂಡತಿಯನ್ನು ಕೇಳಿ: ಅದರ ತಾರೀಪು."
"ನನ್ನ ಪತಿ ಮಾತ್ರ ಎಂದಿಗೂ ಸಿಟ್ಟಾದುದಿಲ್ಲ, ನಿಜಕು"
"ಹಾಗೊ? ಅವರಿಂದ ಸಾಕಷ್ಟು ಲಂಚ ಪಡೆದಿರಬೇಕು."

೪

"ಅರ್ಜುನನ ಚಿಕ್ಕ ಪ್ರಶ್ನೆಗೆ ಕೃಷ್ಣನುತ್ತರ ಒಂದು ಅಧ್ಯಾಯ.
ಮಾತು ಮಾತಿಗೆ 'ಗೀತೆ' ಉದ್ಧರಿಸುವಿರಿ ಬಾಪು
ನಿಮ್ಮ ಉತ್ತರವೇಕೆ ಒಂದೆ ವಾಕ್ಯದಲ್ಲಿ ಮುಕ್ತಾಯ?"
"ಕೃಷ್ಣನಿಗೆ ಪ್ರಶ್ನೆ ಕೇಳಿದವನೊಬ್ಬನೇ ಅರ್ಜುನ,
ನನಗೊ? ಅರ್ಜುನರು ನೂರು, ಸಾವಿರ ಜನ."

೫

"ಸತ್ತಮೇಲೆ ಸ್ವರ್ಗಕ್ಕೆ ಹೋಗುವ ನಂಬಿಕೆಯುಂಟೆ ನಿಮಗೆ?"
"ಸ್ವರ್ಗಕ್ಕೊ, ನರಕಕ್ಕೊ ಗೊತ್ತಿಲ್ಲ, ಆದರೆ ಎಲ್ಲಿ ಹೋದರೂ
ಬೆನ್ನು ಹತ್ತುವನು ನಿಮ್ಮಂಥ ಪತ್ರಕರ್ತ."

೬

"ಇಗೊ, ಇವರೇ ಬಾಪು, ಚೆನ್ನಾಗಿ ನೋಡು ಮಗು"
-ಹಿಗ್ಗಿನಲಿ ಹೇಳಿದಳು ತಾಯಿ

"ಇವರೇ? ಏನೇನೂ ಚಂದವಿಲ್ಲಮ್ಮ"
-ತಾಯಿ ಮುಚ್ಚಿದಳದರ ಬಾಯಿ.
"ಬೆದರಿಸಬೇಡ, ಮಗು ನಿಜವನ್ನೆ ಹೇಳಿದೆ"
–ಬಾಪು ನಕ್ಕರು ತೆರೆದು ಬೊಚ್ಚುಬಾಯಿ.

೭

"ಸುಳ್ಳನಾಡಲುಬೇಡಿ ಎಂದು ಹೇಳಿಯೇ ಹೇಳುವಿರಿ
ಇರುವನೇ ಅಂಥ ವ್ಯಕ್ತಿ ಈ ಪ್ರಪಂಚದಲ್ಲಿ?"
"ಪ್ರಪಂಚದ ಮಾತು ಬಿಡಿ, ಈ ಸಭೆಯಲ್ಲೆ ಇಹರು
ಎಂದೂ ಸಟೆಯನಾಡದೆ ಇರುವ ಪುಣ್ಯಶಾಲಿಗಳು."
"ಯಾರವರು? ದಯವಿಟ್ಟು ತೋರಿಸಿರಿ ನಮಗೂ"
ಅಲ್ಲಿಯೇ ನಲಿದಾಡುತ್ತಿದ್ದ ಚಿಕ್ಕ ಮಕ್ಕಳ ತೋರಿ
ನಕ್ಕುಬಿಟ್ಟರು ಬಾಪು ಮಕ್ಕಳಂತೆ.

೮

ಗಾಂಧೀಜಿಯನು ಭೇಟಿ ಮಾಡಲು ಮೊದಲ ಸಲ
ಬಂದಿದ್ದನೊಬ್ಬ ಮುಗ್ಧ ಮಾರವಾಡಿ-
ನೋಡಿದನು: ಅವರ ತಲೆಯ ಮೇಲಿರಲಿಲ್ಲ 'ಗಾಂಧಿ ಟೋಪಿ'
ಅಚ್ಚರಿಗೊಂಡು ಕಾರಣವ ಕೇಳಲು ಆತ
ಹೀಗೆ ನಡೆಯಿತು ಅವರ ನಡುವೆ ಪ್ರಶ್ನೋತ್ತರ:
"ನೀವು ಸುತ್ತಿರುವ ಪಗಡಿಗೆ ಎಷ್ಟು ಗಜ ಬಟ್ಟೆ?"
"ಹತ್ತು ಗಜ ಬೇಕಾಗಬಹುದು, ಅಷ್ಟೆ"
"ಇಷ್ಟರಲಿ ಇಪ್ಪತ್ತು ಜನರಿಗೆ ಹೊಲಿಸಬಹುದಲ್ಲ ಟೋಪಿ
ಅದನೆಲ್ಲ ನೀವೊಬ್ಬರೇ ಬಳಸಿದಿರಿ ಸೇಠ್‌ಜಿ.
ಇನ್ನುಳಿದ ಹತ್ತೊಂಬತ್ತು ಜನ ಬರಿತಲೆಯಿಂದ
ಇರಬೇಕಾಗಿ ಬಂತಲ್ಲ-
ಅವರಲ್ಲಿ ನಾನೂ ಒಬ್ಬ, ತಿಳಿಯಿತಲ್ಲ?"

೯

ಗಾಂಧೀಜಿ ಧರಿಸುತ್ತಿದ್ದರು ಮೊದಲು ಗಾಂಧಿಟೋಪಿ.
ಸಮಾರಂಭದಲೊಮ್ಮೆ ಬಂದರೊಬ್ಬರು ಒಳಗೆ,
ಅವರ ಕಂಡೊಡನೆ ತಮ್ಮ ತಲೆಯ ಮೇಲಿನ ಟೋಪಿ
ತೆಗೆದು ಇಟ್ಟುಬಿಟ್ಟರು ಕೆಳಗೆ.

ಅಧ್ಯಕ್ಷರಚ್ಚರಿಪಟ್ಟು ಕೇಳಿದರು: "ಯಾಕೆ ಹೀಗೆ?"
ಗಾಂಧೀಜಿ ಹೇಳಿದರು ಅವರೊಬ್ಬರಿಗೆ ಕೇಳಿಸುವ ಹಾಗೆ:
"ಭ್ರಷ್ಟ ರಾಜಕಾರಣಿಯೊಬ್ಬ ಗಾಂಧಿ ಟೊಪ್ಪಿಗೆ ಧರಿಸಿ
ಕೈಬೀಸಿ ಬರುವುದ ಕಂಡೆ ಈಗ ತಾನೆ;
ಇದಕಿಲ್ಲ ಇನ್ನು ಸ್ಥಾನ ನನ್ನ ತಲೆಯ ಮೇಲೆ."

## ಹನಿಗವನಗಳು

೧

ಹುಣ್ಣಿಮೆಯ ದಿನ ಇಡೀ ರಾತ್ರಿ
ಬೆಳುದಿಂಗಳನ್ನು ಕುಡಿದು ತೂರಾಡಿದ
ಗಿಡ, ಬಳ್ಳಿ, ಮರಗಳೇ-
ಬಿಳಿ ಶಾಲು ಹೊತ್ತು, ಆಕಾಶದಲ್ಲಿ
ವಾಕಿಂಗ್ ಮಾಡಿದ ಮೋಡಗಳೇ,
ನನಗೆ ನಿದ್ದೆ ಬಂದುಬಿಟ್ಟಿತು, –
ಎದ್ದು ನೋಡಿದಾಗ
ಪಶ್ಚಿಮದಲ್ಲಿ ಚಂದ್ರಬೋರಲಾಗಿದ್ದ.

೨

ಮೊನ್ನೆ ಬಿದ್ದ ಭಾರಿ ಮಳೆ-ಗಾಳಿಯಲ್ಲಿ
ಥೈ ಥೈ ಕುಣಿದು
ಬಟ್ಟೆಯನೆಲ್ಲ ಕಳಚಿ, ಕೂದಲು ಬಿಚ್ಚಿ
ಮೈ, ಕೈ ತಿಕ್ಕಿಕೊಂಡು ಚೆಲ್ಲಾಟವಾಡಿ
ಯಥೇಚ್ಛ ಜಳಕ ಮಾಡಿದ ಗಿಡಮರಗಳೇ,
ನನ್ನ ಮನೆಯ ನಲ್ಲಿಯಲ್ಲಿ
ನೀರೇ ಬರಲಿಲ್ಲ.

೩

ಸಂಜೆ, ಇನ್ನೂ ಮಾರು ಹೊತ್ತಿರುವಾಗ
ಹೊರಗೆ ಅಂಗಳದಲ್ಲಿ ಕುಳಿತು,
ಯಕ್ಷಗಾನದ ಕಿರೀಟದಂತೆ ಥಳಥಳ ಹೊಳೆಯುತ್ತ
ಸದ್ದಿಲ್ಲದೆ ಬುಗುರಿಯಂತೆ ತಿರು ತಿರುಗಿ

ಪರದೆಯ ಹಿಂದೆ ಮೆಲ್ಲನೆ ಸರಿಯುವ
ಸೂರ್ಯನನ್ನು ನೋಡಬೇಕೆಂದಿದ್ದೆ-
ಹಾಳು ಟಿ.ವಿ.ಯ ಮುಂದೆ ಕುಳಿತು
ಮರೆತುಬಿಟ್ಟೆ.

ಯಾವುದೊ ಪತ್ರಿಕೆಯಲ್ಲಿ
ಉತ್ತಮ ಕವಿತೆಯೊಂದು ಅಕಸ್ಮಾತ್ ಸಿಕ್ಕಾಗ
ನಿಧಿ ಕಂಡವನಂತೆ ಸಂತೋಷಗೊಂಡು
ಕೊಂಡು ತಂದೆ.
ಓದಲು ಒಯ್ದ ನೆರೆಮನೆಯವರು
ಅಡಿಗೆ ಮನೆಯಲ್ಲಿ ಅದನ್ನು
ಇನ್ನೂ ಹುಡುಕುತ್ತಿದ್ದಾರೆ.

೫

ಮೊನ್ನೆ ಯುದ್ಧದ ಸಂದರ್ಭದಲ್ಲಿ
'ಕೊಲ್ಲಿಯುದ್ಧ' 'ಕೊಲ್ಲಿ ಕೊಲ್ಲಿ' ಎಂದು
ಪೇಪರಿನ ಹುಡುಗ ಕೂಗುತ್ತಿದ್ದಾಗ,
'ಕೊಲಬೇಡ, ಬೇಡ, ಬೇಡಾ' ಎಂದು
ಎಣ್ಣೆ ಮುಳುಗಿದ ಕಡಲಹಕ್ಕಿಯ ಕೊರಳಲ್ಲಿ
'ಅಣ್ಣ' ಮೊರೆಯಿಡುತ್ತಿದ್ದ.

೬

ಎಂದಿನಿಂದಲೋ
ನಿದ್ದೆಯಿಲ್ಲದೆ ಸದಾ
ಎಚ್ಚರದಲ್ಲಿಯೇ ಇದ್ದ ಭಗವಂತ.
'ಸುಪ್ರಭಾತ'ದ ಧ್ವನಿಸುರುಳಿಗಳ
ಹಾವಳಿಗೆ ಬೆಚ್ಚಿ
ಇನ್ನು ಮಲಗುವುದೆ ಲೇಸೆಂದು
ನಿಶ್ಚಯಿಸಿಬಿಟ್ಟ.

೭

ದೊಡ್ಡವರ ಆಕಸ್ಮಿಕ ಸಾವು
ಅತ್ಯಂತ ಘೋರವಾದದ್ದು;

ಆದರೆ ಒಮ್ಮೊಮ್ಮೆ ಅದಕ್ಕೂ ಘೋರ
ಅವರ ಅಂತ್ಯಸಂಸ್ಕಾರ.

೮

ಎಲ್ಲೋ ಓದಿದ ನೆನಪು:
ಆಕಸ್ಮಿಕವೂ ಒಂದು ಸಣ್ಣ ಪವಾಡ,
ಅಲ್ಲಿ ದೇವರಿದ್ದರು ಕೂಡ
ಅವ ಅನಾಮಧೇಯ.

೯

ಇಬ್ಬರೂ ಒಂದಾಗಿ ಹೊಂದಿಕೊಂಡಿದ್ದರೂ
ನಡುವೆ ಒಂದಿಷ್ಟು ಜಾಗವಿರಲಿ.
ಸ್ವರ್ಗದ ಗಾಳಿ ಅಲ್ಲಿಗೆ ಬಂದು ಸುಳಿದಾಡಿ
ನಿಮ್ಮೊಡನೆ ಉಸಿರಾಡಲಿ.

೧೦

ಈ ಮೊದಲೆ ತೋಡಿ, ತೆಗೆದು ಕರಗಿಸಿದ
ಲೋಹದ ಗಣಿ: ಗ್ರಂಥದ ಭಾಷೆ.
ಜನರು ನಿತ್ಯ ಆಡುವ ಭಾಷೆ
ಹೊಚ್ಚ ಹೊಸ ಅದಿರುಗಳ ಖಣಿ
ನಿಜವಾಗಿ ಕವಿಗೆ ಅದೇ ಚಿಂತಾಮಣಿ.

## ಗುಲ್‌ಮೊಹರ್

೧

ಗಿಡ ಬರಡಾಗಿ ಉಳಿದದ್ದು ಮೊಳದುದ್ದ ಕಾಯಿ-
        ಹುಡುಗರಾಟದ ಕತ್ತಿ. ಕೊಂಬೆಗಳು ಜಡಗಟ್ಟಿ
        ಮಿಸುಕಾಡದಿದ್ದ ಅಸ್ಥಿಪಂಜರದ ಹಠಯೋಗಿ.
ವೈಶಾಖದೊಂದು ಉಷಃಕಾಲದಲಿ ದೃಷ್ಟಿಸಿ
ಅರಿವಿನಾಸ್ಫೋಟ: ತಲೆತುಂಬ ಕೆಚ್ಚನೆ ಮುಗುಳು,
        ಹುಚ್ಚೆದ್ದು ಅರಳಿರುವ ನೂರು, ಸಾವಿರ ಗುಚ್ಛ-

ಉರಿವ ಸೂರ್ಯನಿಗೀಗ ಮೂಡು-ಮುಳುಗಿನ ಅಚ್ಚ
ಕೆಂಪು ನೆನಪಿನ ತಂಪು; ಹಗಲಲ್ಲೆ ಹೊಂಗನಸು
ಆಮೇಲೆ ಚಿಗುರಿದೆಲೆ ಮುಂಗಾರು ಮಳೆಹನಿಗೆ
ತನಿಗೊಂಡ ಹಸಿರು ಚಾಮರ. ಗಾಳಿಗುದುರುದುರಿ
ಬಿದ್ದ ಹೂವಿನ ನೆರಳು: ಹರಡಿರುವ ನವಿಲುಗರಿ.
ಸಿಮೆಂಟು-ಡಾಂಬರಿನ ನಡುವೆ ಮಣ್ಣಿ ಮೆರವಣಿಗೆ.
ಆಗೀಗ ಫಲ-ಪುಷ್ಪ ಸಿದ್ಧಿ ಕಂಗೊಳಿಸಿದರು
ನಿಚ್ಚ ಉಸಿರಾಟಕ್ಕೆ ಸಾಧನೆ ಹಚ್ಚಹಸಿರು.

೨

ಈ ಗುಲ್‌ಮೊಹರ್ ಕಂಡ ಸಲಕೊಮ್ಮೆ ಎಲ್ಲಿಂದ-
ರಲ್ಲಿ ಚೆಲ್ಲಾಡಿರುವ ಮುಗ್ಧ ಜೀವಿಗಳ ನೆತ್ತರು
ಸಿಡಿದು ಕಣ್ಣೆ ಕತ್ತಲು. ದೇಶದುದ್ದಗಲಕ್ಕು
ಹರಿದು ತಿನ್ನುವ ಹದ್ದುಗಳ ಸದ್ದು ಮೇಲಿಂದ
ಕೆಳತನಕ. ಉಗಮದಲ್ಲಿಯೆ ನದಿಯು ಬತ್ತಿದರೆ
ಹರಿವ ಮಾತೆಲ್ಲಿ? ಸಂಗಮಕಾವ ಪುರುಷಾರ್ಥ?
ನಡುವೆ ತೋಡಿದಂತಃಕರಣದೊರತೆ ವ್ಯರ್ಥ-
ವಾಗದ ಹಾಗೆ ಮಾನವೀಯತೆಗಿಲ್ಲ ಮೇರೆ.
ಕೊರಡು ಕೊನರುವದು ಆಳದ ಬೇರಿನೊಲವಿಂದ.
ಮೋಡಗಳ ಮನಸು ಹೇಗೋ: ಓಡುವವು ಬೇಕು-
ಬೇಡಗಳ ಗಮನಿಸದೆ. ಮಿಂಚಿ ಬಂದರೆ ಸಾಕು
ಸಾಕೆನಿಸಿ ಕರುಣಾವೃಷ್ಟಿ; ಪ್ರಕೃತಿ ಸ್ವಚ್ಛಂದ.
ಲಯ ತಪ್ಪಿದರೆ ಹಿಂಸೆ, ಆಘಾತ. ಸಮತೋಲ-
ಕ್ಕೆ ಬೇಕು, ತಾಳ್ಮೆ, ನಿಗ್ರಹ ಬದುಕಿನಾದ್ಯಂತ.

## ಬಡವರ ಬಂಗಾರ

ಕೈದೋಟದಲ್ಲಿ ಖುದ್ದು ಗುದ್ದಲಿಯಿಂದಗೆದು
ತೆಗೆದು ಕಲ್ಲು-ಮಣ್ಣು, ಕಸಕಡ್ಡಿ ಬೇರ್ಪಡಿಸಿ
ಹಸನಾದ ಮಡಿಗೆ ನಾಕು ಹಿಡಿ ಗೊಬ್ಬರ ಬೆರೆಸಿ
ಊರಿ ಭರವಸೆಯ ಸಸಿ, ನಳ ಬಂದಾಗ ಕಾದು
ನೀರುಣಿಸಿ ತಣಿಸಿದರೆ, ಮುಂದೆ ಅದರ ಪಾಡಿಗೆ

ಅದು: ಶ್ರಾವಣದಲ್ಲಿ ಮುಗಿಯದ ಪುರಾಣಕ್ಕೆ
ಇದರ ಚಿಗುರು ನವೀನ. ದಿನಕೊಂದು ಚಂದಕ್ಕೆ
ಸೊಂಡಿಲಾಡಿಸಿ ಬಂದ ಗಣಪ, ನೇರ ನಡುಮನೆಗೆ.
ಪಟಾಕಿ, ಸುರುಸುರು ಬತ್ತಿ, ಧಡಲ್‌ಬಾಜಿಗೆ ಹಟ-
ಹಿಡಿದ ಮಳೆ ಬಿಟ್ಟಿತು ಕೊನೆಗೆ. ನೆಲವೆಲ್ಲ ಹಸಿರು,
ಬಾನೆಲ್ಲ ನೀಲಿ, ಬಿಸಿಲಿಗೇನೆಲ್ಲ ಹೊಳೆದು
ಹಿಗ್ಗಿನ ಮೊಗ್ಗೆಯರಳಿ, ದೀಪಾವಳಿ ಸಂಪುಟ.
ಚೆಂಡು ಹೂಗಳೆ ಬಡವರಂಗಳದ ಬಂಗಾರ
ಇದ್ದವರು ಖಾಲಿಗೊಳಿಸಿದ್ದಾರೆ ಕೋಲಾರ.

## ಅರುವತ್ತರಾಚೆ

೧

ಅರುವತ್ತರಾಚೆ ನಡೆದಂತೆ ಎಡವದ ಹಾಗೆ
ನಿದಾನ ನೆನಪಾಗುವರು: ನಮ್ಮ ಹಾಗೇ ಇರುವ
ಎದುರಿಗೇ ಬರುವ ನಿಮ್ಮಂಥವರು. ಸೊರಗಿರುವ
ಮುಖದಲ್ಲು ಹಗುರಾಗಿ ತೇಲಿಬಿಟ್ಟಿರುವ ನಗೆ,
ದುಡಿಮೆಯ ಹಡಗದಿಂದಿಳಿದು ಬಂದರದೆಡೆಗೆ-
ಮರಳ ದಂಡೆಯಲಿ ಹೆಜ್ಜೆಹಾಕುತ್ತ, ಹೊರಳಿ
ದೂರದ ತೆರೆಗಳಲ್ಲಿ ದೃಷ್ಟಿ ಹಾಯಿಸಿ, ಮರಳಿ
ಗೂಡಿಗೆ, ಕಿವಿ ತೆರೆಯುವರು ತಮ್ಮದೇ ಹಾಡಿಗೆ.
ಒಳದಾರಿಯಿಂದ ಹೊರಗೆ ಅಡ್ಡರಸ್ತೆಗೆ ನಿಂತು
ವರ್ತುಲಗಳಲಿ ತಿರುಗಿ, ಸಭೆ ಸಮಾರಂಭಕ್ಕೆ
ಶೋಭೆ; ಬಿಡುವಿಲ್ಲದೋಡಾಡಿ ದಣಿಯದ ರೆಕ್ಕೆ-
ಮನೆ ಹಿಡಿದು ಕೂಡುವುದೆ? ಮೌನದಲಿ ಏನಾದರು
ಒಂದು ಸೃಷ್ಟಿಸಬೇಕು. ನೆಲ ಅಗೆದು ಬೀಜ ಹಾಕಿ.
ಮಾತುಗಳ ಬಿತ್ತಿ ಬೆಳೆಸಿದ ಕವಿತೆ ಮೂಕಸಾಕ್ಷಿ.

೨

ಸಂಜೆಯ ವಿಹಾರಕ್ಕೆ ಜೀರ್ಣವಾಗಲು ಬಹುದು
ಆಹಾರದೊಡನೆ ಮಿಕ್ಕ ವಿಚಾರ. ಏಕಾಕಿ
ಛತ್ರಿ ಬಿಚ್ಚಿದರೆ ಆಗ ಅಂತರ್-ಬಹಿರ್ ಮುಖಿ.

ಏಕಕಾಲಕ್ಕೆ. ಎದುರು ವಾಹನದ ಹೆಡ್‌ಲೈಟು:
ಬದಿಗೆ ಸರಿದರೂ ಒಂದು ಕ್ಷಣ ಕಣ್ಣು ಕತ್ತಲೆ.
ಮೊದಲೇ ಮಂಕು ಕವಿದಿರುವ ಬೀದಿ ದೀಪಕ್ಕೆ
ಜೇಡಬಲೆ; ಅಡ್ಡಾಡ್ಡ ನೆರಳು ದಾಟುವದಕ್ಕೆ
ಉದ್ದಕ್ಕು ಉರುಳಿಸಿದಂತೆ ಗಾಲಿ-ಮೈಮೇಲೆ.
ಇವುಗಳ ಮಧ್ಯೆ ಅಕಸ್ಮಾತ್ತಾಗಿ ಭೆಟ್ಟಿಯಾಗು-
ತ್ತಾರೆ ನಿಜಕು ಯೋಗಕ್ಷೇಮದಾಕಾಂಕ್ಷಿಗಳು.
ಬೆಳಗಿನ ಪರಿಶುದ್ಧ ಹವೆಯಂತೆ ಒಳಮನಸು
ತೆರೆದು, ಹೊಂಬಿಸಿಲ ಪರಿಮಳ ಸೂಸಿ, ಸಂತುಷ್ಟಿ-
ಯಿಂದ ಮರೆಯಾಗುವರು. ಕಾಯಬೇಕೆನಿಸುವದು
ಮತ್ತೆ ಕತ್ತಲೆಯಲ್ಲಿ ನೆನಪಿನ ದೀಪ ಹಿಡಿದು.

## ಕುಂಜಾಲು ಕಣಿವೆ

ದಿನವು ಗಡ್ಡಕ್ಕೆ ಬ್ಲೇಡು, ತೋರಿಕೆ ಸುಖದ ನುಣುಪು
ಸಕಲ ಸೌಕರ್ಯಗಳ ನಡುವೆ ತಿರುಗುವ ಗಾಣ-
ದೆತ್ತು; ತೊಡಗಿಸಿಕೊಂಡು ತನ್ನ ತಾ ಸಂಪೂರ್ಣ
ಖುಷಿಗೊಳುವ ಕಾರ್ಯಕೆ ತುಡಿತ; ಅದಕೆಲ್ಲಿ ತೆರಪು?
ಕುಂಜಾಲು ಕಣಿವೆಯಲಿ ಹತ್ತು ವರುಷಕ್ಕೊಮ್ಮೆ
ಕೆಂಪು ಹೂವರಳಿ ಪ್ರಜ್ವಲಿಪ ಕೌತುಕ ಕಂಡ
ಅಪ್ಪನ ಜೀವನೋತ್ಸಾಹಕ್ಕೆ ಬೆರಗು. ದಂಡ
ತನ್ನೆಲ್ಲ ಓದು, ನೆಮ್ಮದಿಯಿರದ ಒಣಹೆಮ್ಮೆ.
ಹೊರಟ ರಜೆ ಹಾಕಿ ಕಳಕೊಂಡ ಅಮೌಲ್ಯನಿಧಿ
ಶೋಧಕ್ಕೆ: ಕ್ಯಾಮರಾ ಹಿಡಿದು ಸಾಹಸಪಟ್ಟು,
ಅಂದಿನ ಬಾಳ ಹೊಳೆಗಿಂದು ಕಟ್ಟಿದಣೆಕಟ್ಟು
ದಾಟಿ, ತಲೆಮಾರುಗಳ ಬದುಕಿನಂತರ ಪರಿಧಿ.
ಕೊನೆಗೂ ಕಣಿವೆ ತಲುಪಿ ಹಿಗ್ಗಿ ನೋಡಲಚ್ಚರಿ.
ಅಲ್ಲಿ ಬರಿ ನೆಗ್ಗಲಿಮುಳ್ಳು, ಪಾರ್ಥೇನಿಯಂ, ದತ್ತೂರಿ."

* ಪ್ರೇರಣೆ : ಶ್ರೀ ನಾ. ಡಿಸೋಜ, ಅವರ 'ಕುಂಜಾಲು ಕಣಿವೆಯ ಕೆಂಪು ಹೂ' ಕಾದಂಬರಿ.

## ಮೂರ್ತಿಪೂಜೆ

"ಮೂರ್ತಿ ಪೂಜೆಯಲಿ ನನಗೆ ನಂಬಿಕೆಯಿಲ್ಲ. ಅವು
        ಕಲ್ಲು, ಮಣ್ಣು, ಲೋಹವೆ"- ದೊಡ್ಡ ಜ್ಞಾನಿಯ ಹಾಗೆ
        ನುಡಿದ ಮಹಾರಾಜ ಮಂಗಳಸಿಂಗ. ಮನಸಿಗೆ
ನಾಟುವೊಲು ನರೇಂದ್ರ ನಿಜಾರ್ಥವನ್ನರುಹಿದರು,
ಒಪ್ಪನವ, ಆಗ ಕಂಡಿತು ಎದುರು ತೂಗಿಸಿದ
        ರಾಜನ ಭಾವಚಿತ್ರ. "ಇಗೊ ಇದರ ಮೇಲುಗುಳಿ"
        ಎಂದರು ದಿವಾನರಿಗೆ ಸ್ವಾಮೀಜಿ: ಬೆಚ್ಚಿ ಬವಳಿ
ಬಂದು, ಸ್ವಲ್ಪ ಚೇತರಿಸಿಕೊಂಡು ಅವ ಕೇಳಿದ:
"ಎಂಥ ಮಾತಿದು! ನಮ್ಮ ಮಹಾರಾಜರ ಭಾವ-
        ಚಿತ್ರದ ಮೇಲೆ?" "ಮಹಾರಾಜರ ರಕ್ತವಿಲ್ಲ,
        ಮಾಂಸವಿಲ್ಲ ಇದರೊಳಗೆ, ಆದರೂ ನೀವೆಲ್ಲ
ಗೌರವಿಸುವಿರಿ ಮಹಾರಾಜರೆಂದೆ. ಹಾಗೆಯೆ
        ಮೂರ್ತಿ ನೋಡಿ ಭಗವಂತನ ನೆನಪು ಭಕ್ತನಿಗೆ."
        ತಪ್ಪಿನರಿವಾಗಿ ರಾಜ ಮಣಿದನು ನರೇಂದ್ರನಿಗೆ.

## ಜಯದೇವಿ ತಾಯಿ

ತ್ರಿಪದಿಯಲ್ಲವೆ ನಮ್ಮ ವೃತ್ತ-ವೃತ್ತಿಗೆ ತಾಯಿ?
        ಸರಳ-ಶ್ರೀಮಂತಿಕೆಯ ಮೂರು ಬೆರಳ ವಿಭೂತಿ,
        ನುಡಿ-ಗಡಿಯ ಮೀರಿದಂತಃಕರಣದನುಭೂತಿ,
ಬಾಳಿ—ಬದುಕಿಸಿದುಭಯ ಭಾಷೆಗಳಿಗೂ 'ಬಾಯಿ'.
ಕಂಟಕವ ದಾಟಿದುತ್ಕಂಠೆಯಲಿ ಆಡಿದರೆ,
        ಎದೆ ತುಂಬಿ ಹಾಡಿದರೆ, ಹಾಲು ಹಳ್ಳವೆ ಹರಿದು
        ಮುಳ್ಳು ಕಂಟಿಗಳೆದೆಯ ಕೊಳ್ಳವೂ ತುಂಬುವದು-
ತುಳುಕುವದು ಸೊನ್ನಲಾಪುರ ಸಿದ್ಧರಾಮನ ಕೆರೆ.
ಗಡಿಯಲ್ಲಿ ಕಟ್ಟಿ ಕನ್ನಡ ಕೋಟೆ, ಉಡಿಯಲ್ಲಿ
        ಇಡಿಯ ನಾಡಕ್ಕರೆಯ ಮಕ್ಕಳಾಡುಂಬೊಲವೆ;
        ಒಡವೆಗಳನುಳಿದ ರುದ್ರಾಕ್ಷಿ ಕಂಕಣ ಬಲವೆ.
ಕಲ್ಯಾಣ ಮುಟ್ಟಿ ಮರಳಿದಿರಿ ಕೊನೆಗಳಿಗೆಯಲಿ.
        ಕನ್ನಡದ ಕರ್ಮೋದ್ಯೋಗ ಭೂಮಿಯಲಿ ಯೋಗ
        ಯೋಗ್ಯರ ಕೊರತೆ: ಯೋಚಿಸಬೇಕು ಮತ್ತೆ ಈಗ.

## ಕಟ್ಟೀಮನಿಯವರನ್ನು ನೆನೆದು

ಕೊನೆಯವರೆಗು ಕೈಬಿಡದೆ ಹರಿತವಾಗಿಹ ಪೆನ್ನು:
ಬಿಳಿಹಾಳೆಗಚ್ಚೊತ್ತಿ, ಬಿಚ್ಚುಗತ್ತಿಯ ನೆನಪು.
ಪದವಿಟ್ಟಳುಪದಗ್ಗಳಿಕೆ, ಸ್ವಂತಿಕೆಯ ಛಾಪು,
ಅಟ್ಟಹಾಸದಾಡಂಬರವ ಭೇದಿಸಿ, ಹೊನ್ನು-
ಹೆಣ್ಣು-ಮಣ್ಣಿನ ತೀಕ್ಷ್ಣ ವಾಸ್ತವ ಬದುಕ ಬಗೆದು
ನೆಲದ ಮಕ್ಕಳ ಕಷ್ಟದೊಡಲು ಕುಡಿಯುವ ಭಟ್ಟಿ-
ಇಳಿಸಿ ತೆಗೆದಿಟ್ಟ ಪಾತ್ರ; ನೇರ ಜೀವನ ದೃಷ್ಟಿ.
ತಂತಾನೆ ಜಾರಿತ್ತು ಕಲೆಗೆ ಹೊಚ್ಚಿದ ಮುಸುಕು.

ಯಾವ ಪಕ್ಷವೊ? ಪಕ್ಷಪಾತವಿಲ್ಲದ ಹಾಗೆ
ಹೋರಾಟದಲಿ ನೇದ ಸ್ನೇಹದ ಕೆಂಪು ಶಾಲು-
ಆ ಹೆಗಲು, ಬಿಟ್ಟೆನೆಂದರು ಬಿಡದ ಸಿಗರೇಟು:
ವಾದ ವಿವಾದಗಳ ಹೊಗೆ ಸುರುಳಿಯಾಗಿ, ಕೊನೆಗೆ
ಉಕ್ಕುವ ನಗೆ. ಮಲಾಮರಡಿಯ ಹೊಲದ ಮಣ್ಣಿನಲಿ
ಕಣ್ಣು ತುಂಬಿ ತೂಗುವ ತೆನೆ, ತಣ್ಣನೆಯ ಗಾಳಿ.

## ಸೌಜನ್ಯದ ಗಣಿ

ಸಿರಿತನವನಡವಿಟ್ಟು ಸಜ್ಜನಿಕೆಯನು ಪಡೆದು,
ಮರಳಿ ಹಿಂದುರುಗಿಸದೆ ಬದುಕಿನುದ್ದಕು ಬಳಸಿ
ಸರ್ವಕ್ಷೇತ್ರಗಳ ಸೌಜನ್ಯದಲಿ ಹದಗೊಳಿಸಿ
ಬಿತ್ತಿ ಸಹಕಾರದಲಿ ನಿರಹಂಕಾರ ಬೆಳೆದು
ಸಂಸ್ಥೆಗಳ ಸುಗ್ಗಿ ಮಾಡಿದ ನಿರಂತರ ಹಿಗ್ಗು.
ರಾಜಕೀಯದ ದೊಂಬರಾಟದೊಳೊಮ್ಮೆ ಎಡವಿ
ಬಿಳಿಯ ಬಟ್ಟೆಗೆ ಹತ್ತಲಿರುವ ಧೂಳನು ಕೊಡವಿ
ಹೊರಬಂದು, ಎಂದಿನಂತೆಯ ಶುಭ್ರ ಒಳ-ಹೊರಗು.
ಗಂಭೀರ ನಡೆ; ಮುಗುಳುನಗೆಯಲ್ಲಿ ಸಮ್ಮಾನ.
ದೂರದೃಷ್ಟಿಗೆ ಮಾತ್ರ ಹೊಳೆವ ತಾರಾವಳಿ.

ಎದುರು ಹಾಯಲು ಬರುವ ಮೋಡಗಳ ತಡೆದು, ಬಿಳಿ
ಶಾಲು ಹೊದಿಸಿ ಬೀಳ್ಕೊಡುವ ಬಾನ ಯಜಮಾನ.
ಋಣಭಾರವಿರದೆ ದುಡಿದು ದಣಿಯಲಾರದ 'ಧಣಿ'
ಹೊಸ ಗಣಿಯೊಳಗೆ ಮತ್ತೆ ಸಿಗಬಹುದೆ ಇಂಥ ಮಣಿ?'*

## ಧವಳಶ್ರೀ

ನಂಬಿಕೆಯ ಮಾತಿರಲಿ, ಹೃದಯವಂತಿಕೆ ತುಂಬು
ಧೀಮಂತ ಚೇತನವನೊಡಗೂಡಿದಧಿಕಾರ-
ತೆರೆದಂತೆ ಲೋಕೋಪಕಾರಕೆ ಮಹಾದ್ವಾರ;
ಸತ್ಕರ್ಮಧರ್ಮದ ಪ್ರಜ್ಞೆ ಸರ್ವಾಂಗದಲು
ಮೊಳೆತು, ನಾಡ ಬಾಳಿನ ಗಾಳಿಗಾಡುತ್ತ ಬೆಳೆದ
ಹಾಲ್ದೆನೆಯ ಸಫಲತೆಯಲ್ಲು ನಿರ್ಲಿಪ್ತ ನಿಲವು.
ಎದುರಿಗೆ ರಾಶಿ ಒಕ್ಕಿ ಒಡ್ಡಿದರು, ಅಳೆದು—ಸುರಿದು
ನೋಡುವ, ಪರಂಪರೆಗೆ ಪ್ರಗತಿ ಮುಖವನು ಪಡೆದ
ಸರ್ವಸಮರಸ ಭಾವ; ನಿಗರ್ವ. ತಿದ್ದಿ ತೀಡಿದ
ನಿರಾಡಂಬರದ ಶುಭ್ರತೆಯ ಸಹಜ ವೈಭವ.
ತರುಣದಲಿ ಈ ಬಗೆಯ ಅನಾವರಣಕ್ಕಾವ
ಕಾರಣವೆಂಬ ಶೋಧಕ್ಕೆ ಸಿಗಬಹುದು, ಸ್ಥಳದ
ಮಹಿಮೆಯ ಮೀರಿದಂತಃಕರಣದಮೃತ ಕೊಡುಗೆ.
ಧವಳದೈಸಿರಿಗೇಕೆ ಮುತ್ತು-ಹವಳದ ತೊಡಿಗೆ?+

## ಶಾಂತರಸ

ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿದ್ದರೆ
ಎಷ್ಟೋ ವ್ಯಕ್ತಿಗಳ-ವಿರೋಧಾಭಾಸ ಸೂಕ್ತಿ-
ಗಳ ಹುಟ್ಟಡಗಿಸಿ ಬಿಡುತ್ತಿದ್ದರೊ ಏನೊ, ಶಕ್ತಿ
ಸಾಲದ ಈ ಅಶಾಂತ ಶಾಂತರಸ! ನಕ್ಕರೆ
ಅಷ್ಟೆ ಸಹಜ, ಪ್ರಶಾಂತ. ಬಯಲು ಸೀಮೆಯ ಬಿಸಿಲಿ-

---

* ಶ್ರೀ ಆರ್. ಬಿ. ಮಾಮಲೆದೇಸಾಯಿಯವರಿಗೆ ೭೫ ತುಂಬಿದಾಗ

\+ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವಿರೇಂದ್ರ ಹೆಗ್ಗಡೆಯವರು

ಗೊಡೆದ ಹತ್ತಿಯ ತೊಳೆಯ ಅರಳೆಯಾಗಿಸಿ, ನೂಲು
ತೆಗೆದು, ಕೊಂಡಿಯ ಸುತ್ತು ಕೊಟ್ಟಿಹ ಕಥೆ; ಕತ್ತಲು
ಮನೆಯ ಮಾಡದಲಿ ಹಚ್ಚಿಟ್ಟ ಕವಿತೆಯ ಚಿಮಣಿ.
ಉ.ಕ., ಮೈ.ಕ. ದೊಲು ಹೈ.ಕ. ವೇಕಿಲ್ಲೆಂಬ ಕೊರಗು.
ಉಳಿದವರು ಕಾಣದಿಹ ಬೆನ್ನ ಹಿಂದಿನ ಬೆಳಕ
ತೋರಿಸಿಕೊಡುವ ಹಠ, ಸಂಶೋಧನೆಯ ಪುಳಕ.
ಹರಗಿರುವ ಹೊಲದ ಬದುವಿನಲಿ ಚಿಗುರಿದ ಮಾವು:
ನೆರಳಿನಲಿ ಎಲ್ಲರೊಡಗೂಡಿ ಬಾಳಿನ ಬುತ್ತಿ
ಹಂಚಿಕೊಂಡುಂಡಂತೆ ಇವರ ಬದುಕಿನ ರೀತಿ.*

## ಗ್ರಂಥ ನಿವೇದನೆ

ಕಾಜಿನ ಕಪಾಟಿನಲ್ಲಿಟ್ಟರೂ ಪ್ರದರ್ಶನದ
ವಸ್ತುಗಳಲ್ಲನಾವು, ಬೇಡಿ ಬಯಸಿರಲಿಲ್ಲ
ಈ ಬಗೆಯ ವಿಶ್ರಾಂತಿ. ಹರಿದರು ಚಿಂತೆಯಿಲ್ಲ.
ಹರಿಯುತ್ತಿರಬೇಕು ಕೈಯಿಂದ ಕೈಗೆ; ಭೇದ-
ವಿಲ್ಲದೆ, ತೆರೆದ ಮನಸ್ಸಿನ ಪದರು ಪದರೊಳಗೆ
ಇಳಿದು, ವ್ಯಾಪಿಸಿ ಇಡಿ ಶರೀರ, ಮುಖಮಂಡಲದಿ
ಹೊಳೆದು, ಬೆಳೆದು ನಮ್ಮೊಳವಿತಿಟ್ಟಮೂಲ್ಯ ನಿಧಿ
ಸೂರೆಗೊಂಡರಪಾರ ಖುಷಿ ಕೃತಿಗೆ, ಕರ್ತನಿಗೆ.
ಮಾತು, ಬರಹ, ರುಜು, ನೀರು, ಆಕಾಶ, ತಪಸ್ಸು-
'ಅಕ್ಷರ' ಕುಂಟು ಅನೇಕಾರ್ಥ ಬಗೆ ಮೊಗೆದಷ್ಟು-
ಭಾವದಾಕಾಶದಲಿ ಮಾತು ಹಿಗ್ಗುವ ನಿಘಂಟು-
ತೇಲುವ ಮೋಡ, ಮಿಂಚು-ರುಜು, ಗುಡುಗು ಹುಮ್ಮಸ್ಸು
ಧ್ವನಿಸಿ ವಾಸ್ತವಕಿಳಿದ ಮಳೆ ಇಂಗಲಂತರ್ಜಲ
ಪುಸ್ತಕದ ಪುಟ ಪುಟಕ್ಕಿಟ್ಟಂತೆ ಮೂರು ಕಾಲ.

* ಉ.ಕ.- ಉತ್ತರ ಕರ್ನಾಟಕ, ಮೈ.ಕ.-ಮೈಸೂರು ಕರ್ನಾಟಕ, ಹೈ.ಕ.-ಹೈದರಾಬಾದ್ ಕರ್ನಾಟಕ.

## ಮತ್ತೆ ನೀಲಿಯ ಹೂವು!

ಸುತ್ತು ಬೇಲಿಯ ಮೇಲೆ ಮತ್ತೆ ನೀಲಿಯ ಹೂವು!
ಇಡಿಯ ಮುಂಜಾವನ್ನೆ ಹಿಡಿದು, ಮಿದುವಾಗಿ ಹೂ-
ಗೆನ್ನೆಗೊತ್ತಿದ ಮುತ್ತು. ಆಕಾಶ ನೆಲದಲ್ಲಿ
ಕಂಡ ನೀಲಿಯ ಕನಸು ನನಸಾಗಿ, ಉತ್ತರೆಯ
ಮಳೆಗೆ ಹೂವಿನ ಹುತ್ತ: ವಿದ್ಯುತ್ ಕಂಬ ಸುತ್ತಿ
ತಂತಿಗೆ ಹಬ್ಬಿ, ಹಚ್ಚಿ ನೀಲಿ ಬಣ್ಣದ ಬಲ್ಬು !
ಸೂರ್ಯ ಮೇಲೇರಿದರೆ ಮುದುಡಿ ಅಡಗುವ ನೀಲ
ಬೆಡಗಿಯರು, ಅಂಗೈಯಗಲ ಎಲೆ ಎಲೆಯ ಮರೆಗೆ.
ಬೇಲಿಯೀಚೆಗೆ ತೋಟದೊಳಗೆ ಕಳೆಯನು ಕಿತ್ತು
ಹಸನಾದ ಪಾತಿ, ನೀರು-ಗೊಬ್ಬರ, ಹಚ್ಚಗಿನ
ಗಿಡಬಳ್ಳಿ, ಹೂವಿನ ಕುಂಡ, ಕತ್ತರಿಸಿ ಮಾಟ.
ಮುಳ್ಳುಕಳ್ಳಿಗು ಬಡಿದ ನಾಗರಿಕ ನಾಜೂಕು.
ಬೇಲಿಯಾಚೆಗೆ ನೀಲಿಗಣ್ಣು ಪಿಳುಕಿಸಿ, ಬಳುಕಿ
ಬಾಡಿದರು, ಇರುಳು ಬರುವರು ತೆರೆದು ಬಾನ ಬುರುಕಿ.

* * *

'Last Mile Together'- (an anthology of south Africal Poems) ದಿಂದ ಸಂ. ಎಸ್. ಬಾಲುರಾವ್

## ನನ್ನ ನಾಡಿನಲ್ಲಿ

ನನ್ನ ನಾಡಿನಲ್ಲಿ
ನಿಮ್ಮನ್ನು ಸೆರೆಮನೆಗೆ ಅಟ್ಟುತ್ತಾರೆ.
ಯಾಕೆ ಗೊತ್ತೆ?
ನೀವು ಏನು ವಿಚಾರಿಸುತ್ತೀರೆಂದು ಊಹಿಸಿ
ಅವರೂ ಅದರ ಬಗ್ಗೇ ವಿಚಾರ ಮಾಡುತ್ತಾರೆ.

ನನ್ನ ಕಕ್ಕ ನನಗೊಮ್ಮೆ ಹೇಳಿದ:
ನಮ್ಮ ಮನಸ್ಸುಗಳಲ್ಲಿ ಅವರು
ಮೈಕ್ರೋಚಿಪ್ ಇಟ್ಟು
ನಮ್ಮ ಆಲೋಚನೆಗಳನ್ನೂ, ಕನಸುಗಳನ್ನೂ
ಜಾನ್‌ವೋಸ್ಟರ್ ಸ್ಕ್ವೈರ್‌ನಲ್ಲಿಯ ಪರದೆಯ ಮೇಲೆ
ಮೂಡುವಂತೆ ಮಾಡುತ್ತಾರೆ.

ನಾನು ಗಾಬರಿಗೊಂಡೆ.
ಹಗಲು ನನ್ನ ನಾಲಗೆಯ ಮೇಲೆ
ಇರುಳು ನನ್ನ ಕನಸುಗಳ ಬಗ್ಗೆ
ನಿಗಾವಹಿಸಿದೆ.

-ಇತಿಕಾ ಅಂತೂಲಿ (ದಕ್ಷಿಣ ಆಫ್ರಿಕಾ)

## ಅವರು ಸದಾ ಕೇಳುತ್ತಾರೆ

ನನಗೆ ಇಷ್ಟೊಂದು ಉದ್ದನಾಲಗೆ
ಏಕಿದೆ? ಎಂದು ನನ್ನ ನಾಡಿನಲ್ಲಿ
ಅವರು ಸದಾ ನನ್ನನ್ನು ಕೇಳುತ್ತಾರೆ.
ಇಲ್ಲಿಯ ವ್ಯವಸ್ಥೆ
ಅದನ್ನು ದಿನವೂ ಹೊರಗೆ ಜಗ್ಗಿ
ಅದರ ಕೆಳಗಿನ ಶಬ್ದಗಳನ್ನು ಹುಡುಕುತ್ತಿರುವಾಗ
ಬೇರೆ ಹೇಗಿರಬಲ್ಲುದು?
ನಮಗೆ ಇಷ್ಟುದ್ದ ಕಿವಿಗಳು
ಏಕಿವೆಯೆಂದು
ಸದಾ ಅವರು ನನ್ನನ್ನು ಕೇಳುತ್ತಾರೆ.
ಬದುಕಿ ಉಳಿಯಲು
ಅವರಮಾತಿನ ಸೂಕ್ಷ್ಮಧ್ವನಿಗೆ
ಕಿವಿಗೊಡಲೇಬೇಕಾದಾಗ
ಬೇರೇನು ಸಾಧ್ಯ?
ದುಃಖದಲ್ಲಿಯೂ ನಾವು ನಗುವುದೇಕೆ?
ಎಂದು ಅವರು ಸದಾ ಕೇಳುತ್ತಾರೆ.
ಅವರ ಕಪಿ ಮುಷ್ಠಿಗಳಿಂದ ನಾವು
ಪಾರಾಗುತ್ತೇವೆಂಬ ತುಂಬು ನಂಬಿಕೆ
ನಮಗಿರುವಾಗ
ನಗದಿರುವುದು ಹೇಗೆ?

-ಇತಿಕಾ ಅಂತೂಲಿ

## ಸೆನ್ಸಾರ್‌ನ ಶಿರಚ್ಛೇದಕದ ಕೆಳಗೆ

ಸಂಜೆಯ ಕಡಾಯಿಯನ್ನು ಕುಡಿಯಲು
ನಾನು ಹವಣಿಸುತ್ತಿರುವಂತೆಯೇ
ನಮ್ಮ ದೇಶದಲ್ಲಿ
ನಮ್ಮ ಯುದ್ಧ ಸುರುವಾಗುತ್ತದೆ.

ನಮ್ಮ ಜಜ್ಜಿ ಹೋದ ಕಣ್ಣು
ಬೆನ್ನಿಗೆ ಕಟ್ಟಿದ ಕೈಗಳು
ಮೂಲದಲ್ಲಿಯೇ ತುಂಡರಿಸಿದ ನಾಲಗೆಗಳು
ಗಾಳಿಯಲ್ಲಿ ಬೆರೆತು ಹೋದ ನಮ್ಮ ಶಬ್ದಗಳು
ಧ್ವನಿಗಳ ಕಚ್ಚಾ ಸಾಮಾನು.

ವಿಚಾರಗಳನ್ನು ಉಸುರುವ ಮೊದಲೇ
ಪ್ರತಿಧ್ವನಿಗಳನ್ನು ಕೇಳುತ್ತೇವೆ.
ಕಿವಿಯ ಪರದೆಗೆ ಶಬ್ದಗಳು ಬಡಿಯುವ ಮೊದಲೇ
ಉತ್ತರಗಳನ್ನು ಕೆತ್ತಿರುತ್ತೇವೆ.
ಪಿಸು ಮಾತಿನ ತೆರೆಗಳಲ್ಲಿ
ನಮ್ಮ ಕವಿತೆಗಳು ತೇಲಿ ಬರುತ್ತವೆ.

-ಇತಿಕಾ ಅಂತೂಲಿ

## ಸರಪಳಿಯಲ್ಲಿಯ ಕೊಂಡಿಗಳು

ಚಲಿಸಬಲ್ಲ ಚಿಲಕತ್ತು
ಮೃತ್ಯುವಿನ ಬೆಂಗಾವಲಾಗಿ ಹೋಗುತ್ತಿರುವ ಕಡೆ
ನಾನು ಬೆರಳೆತ್ತಿ ತೋರಿಸಿದೆ.
ನನ್ನ ಬೆರಳನ್ನೇ ಅವರು ಕತ್ತರಿಸಿದರು.
ಹನಿಯುತ್ತಿರುವ ರಕ್ತದಿಂದಲೇ
ಭರವಸೆಯ ಕವಿತೆ ಬರೆದೆ;
ಅವರ ಸಾವಿನ ಸಂಜೆಯ ವರ್ಣಚಿತ್ರ ಬಿಡಿಸಿದೆ.

ಸೆರೆಮನೆಯ ನನ್ನ ಸಣ್ಣ ಕೋಣೆಯಲ್ಲಿ
ಗೋಡೆಗಾನಿಸಿ

ಸರಪಳಿಯಿಂದ ನನ್ನನ್ನು ಬಿಗಿದರು.
ಅದರ ಪ್ರತಿಯೊಂದು ಕೊಂಡಿಗೂ
ನನ್ನ ತುಟಿಯೊತ್ತಿದೆ,
ನನ್ನ ಕನಸುಗಳನ್ನು ಮೆಲ್ಲಗುಸುರಿದೆ.
ಪ್ರತಿಯೊಂದು ಕೊಂಡಿಯೂ
ಒಂದು ಕವಿತೆ...

-ಇತಿಕಾ ಅಂತೂಲಿ

## ಕೇವಲ ದಾರಿ ಹೋಕ

ಅವನ ಕಿತ್ತ ಚರ್ಮಕ್ಕೆ ಔಷಧಿ ಅಂಟಿಸುವದನ್ನುಕಂಡೆ.
ಕೊಲೆಗೆ ಬಲಿಯಾದವನ ಹಾಗೆ
ಯಾತನೆಯಿಂದ ಅವನು ಚೀರುವುದು ಕೇಳಿದೆ.
ಮೂಗಿನ ಹೊರಳೆಗಳಿಂದ ಬಿಸಿರಕ್ತ ಚಿಮ್ಮಿ
ಬೀದಿಯ ಮೇಲೆ ಹರಿಯುವಾಗ
ಅದರ ವಾಸನೆ ಕೂಡ ಬಂತು.
ನಾನು ನೇರ ಚರ್ಚಿನೊಳಗಡೆ ಹೋಗಿ
ಪ್ರತ್ಯೇಕ ಪೀಠದಲ್ಲಿ ಮೊಳಕಾಲೂರಿ ಪ್ರಾರ್ಥಿಸಿದೆ:
"ಪ್ರಭು, ನಾನು ನಿನ್ನನ್ನು ಪ್ರೀತಿಸುತ್ತೇನೆ,
ನನ್ನ ನೆರೆಯವರನ್ನೂ ನಾನು ಪ್ರೀತಿಸುತ್ತೇನೆ, ಅಮೆನ್"
ಪವಿತ್ರ ಜೀವಿಯ ಗಲ್ಲಕ್ಕೆ
ದೇವದೂತನು ಕೊಟ್ಟ ಮುತ್ತಿನಂತೆ
ನನ್ನ ಹೃದಯ ಹಗುರಾಗಿತ್ತು.
ದಾರಿಯಲಿ ನೋಡುತ್ತ ನಿಂತ
ಜನರ ಗುಂಪಿನ ಬದಿಗೆ ಹಾಯ್ದು
ಬಿಂಕದಲಿ ಬಿರಬಿರನೆ ಮನೆಗೆ ಬಂದೆ.
ಆಗ ಒಳಗೆ ಬಂದವಳೆ
ನೆರೆಮನೆಯವಳು ಹೇಳಿದಳು:
"ಕೇಳಿದಿರಾ? ನಿಮ್ಮ ಸೋದರನ ಕೊಲೆ ಮಾಡಿದ್ದಾರೆ ಅವರು"
"ಓ, ಇಲ್ಲ! ನನಗೇನೂ ಗೊತ್ತಿಲ್ಲ, ನಾನು ಚರ್ಚಿಗೆ ಹೋಗಿದ್ದೆ."

- ಓಸ್ವಾಲ್ಡ್ ಜೊಸೆಫ್ ಮತ್ಸಲಿ (ದಕ್ಷಿಣ ಆಫ್ರಿಕಾ)

## ಸ್ವರ್ಗದ ಬಾಗಿಲಲ್ಲಿ

ಅಲ್ಲಿಅಟ್ಟದ ಮೇಲೆ
ಏನೊ ಸರಿಯಿದ್ದಂತಿಲ್ಲ;
ದೋಷ ಇಲ್ಲಿಯೇ
ಕೆಳಗೆ ಇದ್ದಿರಬಹುದು.

ಪ್ರಾರ್ಥಿಸುವದು ಹೇಗೆ? ಎಂಬುದನು
ಕಲಿತಂದಿನಿಂದಲೂ
ನಾನು
ಬಾಗಿಲು ಬಡಿಯುತ್ತಲೇ ಇದ್ದೇನೆ.
ಎಲ್ಲೆಡೆಗೂ ಗಾಢ ಮೌನ.
ಎಲ್ಲಿ ಸೇವಕರು? ಅರ್ಥಾತ್
ದೇವತೆಗಳು?

ಯಾರು ಕರೆಯುತ್ತಿರಬಹುದೆಂದು
ಅವರು ಪರದೆಯ ಹಿಂದೆ ಹಣಿಕಿ ಹಾಕಿದ್ದು
ನಾನು ನೋಡಲಿಲ್ಲ.
ಕೊನೆಗೊಮ್ಮೆ ಆ ಸ್ವರ್ಗಾಧಿಪತಿ
'ಒಳಗೆ ಬಾ' ಎಂದರೆ,
ನನ್ನನ್ನು ಎಲ್ಲಿಂದ ಒಳಬಿಡಬಹುದು?
ಮುಂಬಾಗಿಲಿನಿಂದ, ಇಲ್ಲ
ಹಿಂಬಾಗಿಲಿನಿಂದಲೊ?

-ಓಸ್ವಾಲ್ಡ್ ಜೊಸೆಫ್ ಮತ್ಸಲಿ

## ಸತ್ತವರ ಧ್ವನಿ

ನಿದ್ದೆಯಲಿ ನಾನದನು ಕೇಳಿದೆ;
ಮೃದುವಾಗಿತ್ತು ಕರೆ.
ನನ್ನ ತಾಯಿಯೇ ತನ್ನ
ಗೋರಿಯಿಂದ ಮಾತಾಡುತ್ತಿದ್ದಳು;
ಮಗನೆ!
ಮೋಡಗಳಾಚೆ ಸ್ವರ್ಗವಿಲ್ಲ,
'ಏನೆಂದೆ?'

ಹೌದು,
ಸ್ವರ್ಗ ನಿನ್ನ ಹೃದಯಲ್ಲಿದೆ.
ದೇವರೆಂದರೆ
ಮಂಜು ಬಿಳುಪಿನ ಗಡ್ಡದ ಚಿತ್ರವಲ್ಲ.
'ನಿಜವೇ?'
ಹೌದು ಮಗು, ದೇವರು
ಬೀದಿಯ ಮೂಲೆಯಲ್ಲಿ ಮುದುಡಿಕೊಂಡಿರುವ
ಆ ಹೇಳವ ಭಿಕ್ಷುಕನೇ.
ಗಂಧಕದಲ್ಲಿ ಉರಿಯುವ ಭಯಾನಕ
ನರಕ ಇಲ್ಲವೇ ಇಲ್ಲ.
'ಏನೆಂದೆ?'
ಹೌದಪ್ಪ ನಿನ್ನ ಕಣ್ಣಿನಲ್ಲಿ ಕಿಡಿ ಕಾರುತ್ತಿರುವ
ದ್ವೇಷವೇ ನರಕ.

- ಓಸ್ವಾಲ್ಡ್ ಜೋಸೆಫ್ ಮತ್ಸಲಿ

## ಭರವಸೆ

ಸೂರ್ಯ ಸತ್ತಿದ್ದಾನೆ, ಗಾಯಗೊಂಡು
ನೆತ್ತರು ಸೋರಿಸುತ್ತ.
ಕಣ್ಣು ಮುಚ್ಚಿದ ಸೂರ್ಯ
ನಿದಾನ ಮುಳುಗುತ್ತ, ತಳಕ್ಕಿಳಿಯುತ್ತ
ಕಣ್ಮರೆಯಾದ.
ಈ ದುಃಖದ ದೃಶ್ಯ ಕಂಡು ಗಿಡಮರಗಳು
ತಲೆಬಾಗಿಸಿದವು. ಕೆಂಬೆಗಲ್ಲುಗಳಿಂದ
ಉದುರಿದವು ಎಲ್ಲೆಯ ಕಣ್ಣೀರು.
ಮೇಲೆ ಪಕ್ಷಿಗಳು ಗಂಭೀರವಾಗಿ ಹಾರುತ್ತ
ಸಾಯುವ ಸಾಮ್ರಾಟನಿಗೆ ಗೌರವ ದಳವಾಗಿ
ವಂದಿಸಿದವು. ಬಾನಾಡಿಯೊಂದು
ಅಂತ್ಯಸಂಸ್ಕಾರದ ಕಹಳೆಯೂದಿ
ಇರುಳ ಬಾವುಟವ ಕೆಳಗಿಳಿಸಲಾಯಿತು,
ಜಗವೆಲ್ಲ ಮುಚ್ಚಿ ಹೋಯಿತು.
ಶೋಕ ಪ್ರದರ್ಶನದ ಕಪ್ಪು ನಿಲುವಂಗಿಯಲ್ಲಿ.

- ಡಾನ್ ಮಟ್ಟೇರಾ (ದಕ್ಷಿಣ ಆಫ್ರಿಕಾ)

## 'ನಾನೇ ಮರ...'

ಹೊರಗೆ ಬಯಲೊಳಗೆ
ಕಿರುಗುಟ್ಟುತ್ತ ಗಾಳಿಗೆ
ತಿರುಚಿದರೂ ಜಗ್ಗದ
ಮರವೇ ನಾನು.

ದುಃಖದಲ್ಲಿ ಕುಗ್ಗಿ, ಪ್ರತಿಭಟಿಸಿ
ಗಾಳಿಗುಚ್ಚಿ ಕರ್ಕಶವಾಗಿ
ಮುರಿಗೆ ಮಾಡಿದ, ಗುಡಿಸಲ
ತಗಡು ಹಾಳೆ ನಾನು.

ಒಂದೇ ಸವನೆ ಚೀತ್ಕರಿಸಿ
ಇರುಳೆಲ್ಲ ಗೋಗರೆವ
ಸಮಾಧಾನವೇ ಸಾಧ್ಯವಿಲ್ಲದ
ಅಬ್ಬರದ ದನಿಯೆ ನಾನು

-ಡೆನ್ನಿಸ್ ಬ್ರುಟುಸ್ (ದಕ್ಷಿಣ ಆಫ್ರಿಕಾ)

## ಕೆಂಪು ನಮ್ಮ ಬಣ್ಣ

ನೆತ್ತರುಗೆಂಪು ಬಣ್ಣದ
ಕವಿತೆಗಳ ಬರೆಯೋಣ-
ಗಣಗಣ ಗಂಟೆ ಬಾರಿಸಿದಂತೆ.

ದಬ್ಬಾಳಿಕೆಯ ಮುಖವ ಛಿದ್ರಗೊಳಿಸಿ
ಕಪಿಮುಷ್ಟಿಗೆ ಬಲವಾಗಿ ಹೊಡೆವ
ಕವಿತೆಗಳು.

ಮನುಷ್ಯನನ್ನು ಎಚ್ಚರಗೊಳಿಸುವ ಕವಿತೆ:
ಸಾವಲ್ಲ ಬದುಕು,
ನಿರಾಶೆಯಲ್ಲ ಭರವಸೆ
ಮುಚ್ಚಂಜೆಯಲ್ಲ, ಮುಂಬೆಳಗು
ಹಳತಲ್ಲ ಹೊಸತು,
ತಗ್ಗಿ ಬಗ್ಗುವುದಲ್ಲ; ಹೋರಾಡುವದು.

ಕವಿಯೆ
ಜನಕೆ ಗೊತ್ತಾಗಲಿ
ನನಸಾಗಬಲ್ಲವು
ಕನಸು.

ಧನಿಕವರ್ಗ
ಅರ್ಥವಿಲ್ಲದ ಚಿತ್ರಗಳಿಗೆ ಅತ್ತರು ಸವರಿ
ದಿವಾಣಖಾನೆಯನ್ನು ಅಲಂಕರಿಸಲಿ
ನೀನು ಸ್ವಾತಂತ್ರ್ಯ ಕುರಿತು ಮಾತಾಡು.

ಜೈಲು ಕಂಬಿಗಳ ಹುಲ್ಲು ಕಡ್ಡಿಯಂತೆ ಮುರಿವ
ಕಗ್ಗಲ್ಲು ಗೋಡೆಗಳ ಪುಡಿಗೊಳಿಸಿ
ನೆಲಸಮಗೊಳಿಸಬಲ್ಲ,
ಜನಸ್ತೋಮದ ಶಕ್ತಿಯನ್ನರಿತು
ಮಾತಾಡು ಸ್ವಾತಂತ್ರ್ಯ ಕುರಿತು
ಜನತೆಯ ಕಣ್ಣು ತಟ್ಟು.

ಕವಿಯೆ
ಜನತೆಯನು ಸಂಧಿಸು
ಕಾಸಿ, ಬಡಿದು ಕೀಲಿಕೈ ತಯಾರಿಸು
ನೆರವಾಗು
ದಶಕನುಂಗುವ ಮೊದಲು ದಶಕ
ದಶಕ ದಶಕಗಳನ್ನು.

-ಎ.ಎನ್.ಸಿ.ಕುಮಲೊ (ದಕ್ಷಿಣ ಆಫ್ರಿಕಾ)

## ಐದು ಜೆಕ್ ಕವಿತೆಗಳು:

## ಸೇಂಟ್ ವೆನ್ಸರ್‌ಲ್ಯಾಸ್ ಸ್ಕ್ವೇರ್‌ನಲ್ಲಿ ಸಂಜೆ

ಬಿಸಿಲುಗಂದಿದ ಹುಡುಗಿಯರು
ಚರ್ಚಿನ ಕತ್ತಲೆ ಮೂಲೆಗಳಂತೆ
ಅವರೇ ಆಕಾರಗೊಂಡ ಗೋಡೆಗೂ ಅವರಿಗೂ
ವ್ಯತ್ಯಾಸವೇ ಇಲ್ಲ.
ದೀಪಗಳ ಕೆಳಗೆ ಸಿಳ್ಳು ಹಾಕುತ್ತಿದೆ ಗಾಳಿ, ಒಳಗೆ.

ಬಾಯಿಬಿಟ್ಟುಕೊಂಡ ಬೀದಿವಾಸನೆಗಳ ವೇಷತೊಟ್ಟ
ಓ ಅಪರಿಚಿತ ಹೆಣ್ಣೆ.
ಎಷ್ಟೊಂದು ಆರಾಧಿಸುವೆ, ನಿನ್ನನೆಷ್ಟೊಂದು ಪ್ರೀತಿಸುವೆ
ಕಳೆಯಲಿನ್ನೊಂದು ದಿನ, ನಮ್ಮ ಭ್ರಾಂತಿಗಳೂ ಹಾಗೇ ಇರಲಿ.
ಪ್ರಾಗ್ ಉಳಿದೆಲ್ಲ ನಗರಗಳೊಂದಿಗೆ ಬೆರೆತು ಹೋಗುತ್ತಿದೆ-
ತಮ್ಮದೇ ಆದ ಸೂಕ್ಷ್ಮವ್ಯತ್ಯಾಸವುಳ್ಳ ಮಾಯಾವಿ ಸುಗಂಧದ
ಎಲ್ಲ ಹೆಂಗಸರೊಂದಿಗೂ ನೀನು ಬೆರೆಯುವಂತೆ.

-ವಿಜೆಸ್ಲೋವ್ ನೆಜ್ವಾಲ್ (ಜೆಕ್)

## ಸೇಂಟ್ ವೆನ್ಸರ್‌ಲ್ಯಾಸ್ ಸ್ಕ್ವೇರ್ ಮ್ಯೂಜಿಯಂ ಬಳಿಯ ಲೈಲಕ್

ನಾನು ಹೂವುಗಳನ್ನು ಪ್ರೀತಿಸುವದಿಲ್ಲ
ಹೆಣ್ಣುಗಳನ್ನು ಪ್ರೀತಿಸುತ್ತೇನೆ.
ಆದರೂ ಲೈಲಕ್ ಪೊದೆಯ ಬದಿಯಲ್ಲಿ ಮಲಗಿಕೊಂಡೆ.

ನಿನ್ನ ಕೃತಕ ಕಣ್ಣು, ತುಟಿ, ಮೊಲೆ, ಕೇಶಾಲಂಕಾರಗಳ
ಕೃತಕ ರಾತ್ರಿಯಲ್ಲಿ
ಉಸಿರುಗಟ್ಟಿಸುವ ಮುಖ್ಯ ರಸ್ತೆಯ ಬದಿಯ
ಕೊಟಡಿಗಳ ಪಡಿಪಾಟಿನಂತೆ
ದೂರದ ನೆಲಮಾಳಿಗೆಯ ಉಸಿರು ಬೀಸಿ ಬಂತು.

ಅಗಣಿತ ಗುಲಾಬಿ ಹೂಗಳಿಂದ
ಸಂಜೆಯ ವಿಹಾರದ ಹಾದಿಗೆ ಚಾಚಿದುಪವನದ
ಲೈಲಕ್ ಗೊಂಚಲೆ, ನಿನ್ನ ಮನವಾರೆ ಪ್ರೀತಿಸುತ್ತೇನೆ.
ಗುಲಾಬಿ ಪಕಳೆಗಳಿಂದ ಮುಚ್ಚಿದ ಮೊಲೆಯ ಪ್ರಾಗ್
ತೆರೆದ ಕಿಟಕಿಗಳಿಂದ ಉಸಿರಾಡಿಸುತ್ತದೆ.

ತಂಪಾದ ಬೈಗು
ನನಗೆ ನಿದ್ದೆ ಹತ್ತಿದಾಗ
ಸೇಂಟ್ ವೆನ್ಸರ್ ಲ್ಯಾಸ್ ಸ್ಕ್ವೇರ್‌ನಲ್ಲಿ ಲೈಲಕ್ ಹೂ
ಒಮ್ಮೆಲೆ ಬಿರಿದರಳಿದವು.

-ವಿಜೆಸ್ಲೋವ್ ನೆಜ್ವಾಲ್

## ಉಪನಗರ

ಉಪನಗರ
ಹೊಳೆಯುವ ಒಣಹುಲ್ಲಿನ ಹ್ಯಾಟು
ಕೊನೆಗಾಣದ ಇಸ್ಪೀಟಾಟ
ಸ್ಥಳಾಂತರಗೊಳಿಸಬಲ್ಲ ಸಾಮಾನು ಸಾಗಾಣೆ ಬಂಡಿ-
ಉಪನಗರ.

ಕುರ್ಚಿಗಳು, ಬುಟ್ಟಿ ಹೆಣೆಯುವ ಕೆಲಸ
ಎಲ್ಲವೂ ಅದರೊಳಗಿವೆ.
ಹೇಗೋ ಸುತ್ತಿಟ್ಟ ಗಿಣ್ಣದ ವಡೆ: ಕಟ್ಟಡಗಳು
ಅಗ್ಗದರಿವೆಯ ಟೊಪ್ಪಿಗೆ ಕೂಡ.
ರಹಸ್ಯ ಕಥೆಯೊಂದಿಗಿನ ದರಿದ್ರ ಯುವಕನಂತೆ
ಉಪನಗರ ಹೊಗೆ ಕಾರುತ್ತದೆ.

-ವಿಜೆಸ್ಲೊವ್ ನೆಜ್ವಾಲ್

## ವಸಂತ ಕಾಲದ ಒಂದು ಸಂಜೆ : ನಾಲ್ಕು ಗಂಟೆ

ನಾನೊಂದು ಕಥೆ ಓದಿದೆ
ಅದರ ಹೆಸರೇ ಮರೆತು ಹೋಗಿದೆ.
ನನ್ನ ನೆನಪಿನಲ್ಲಿ ಈಗ ಉಳಿದಿರುವುದಿಷ್ಟೆ:
ಅಂಗಳದಲ್ಲಿ ಒಂದು ಕಟ್ಟಿಗೆಯ ಮೇಜು
ಹೆಸರಿಲ್ಲದ ಊರು, ಸೂಟಿಯ ದಿನಗಳು
ಕತೆಯ ಮಾಳಿಗೆಯಲ್ಲಿ ಇಂದು ಅದೆಲ್ಲ ನೆನಪಾಯಿತು.
ಇದ್ದಲಿ ತುಂಬಿದ ಗಾಡಿಗಳು ಗಡಗಡ ಸಾಗುತ್ತಿವೆ.
ಸ್ಟ್ರಾಬೆರಿ ಕಾಡಿನಲ್ಲಿ ಬುಡಮೇಲಾದ ಹೂಜಿ,
ಸಂಜೆಯ ಉಪಹಾರಕ್ಕೆ ಕರೆಯದ ನನ್ನ ತಾಯಿ
ಇಂಗ್ಲಿಷ್ ಸಿಗರೇಟುಗಳ ಸುವಾಸಿತ ಹೊಗೆಯನ್ನು
ಹಿಂಬಾಲಿಸಿದ ಹೆಂಗಸರು.
ಮರೆತು ಹೋದ ಕತೆಯ ಹುಡುಗನೇ ನಾನು.
ಸದಾ ಲಕ್ಷ್ಯಗೊಟ್ಟು ನೋಡುತ್ತಿದ್ದೇನೆ
ಸೂರ್ಯನ ಕೊನೆಯ ಕಿರಣ ಹೊತ್ತಿಸಿದ
ರಕ್ತ–ತಡೆ ಪಟ್ಟಿಯನ್ನು.

-ವಿಜೆಸ್ಲೊವ್ ನೆಜ್ವಾಲ್

# ಪ್ರಾಗ್ ನಗರದ ಮೇಲೆ ಚಂದ್ರ

ಮನೆಯ ಗೋಡೆಗಳಿಗೆ ಬಣ್ಣ ಬಳಿಯುವವನು
ಪ್ಲಾಸ್ಟರ್ ಕಲಿಸಿಕೊಳ್ಳುತ್ತಿದ್ದಾನೆ.
ನಿಚ್ಚಣಿಕೆಯ ತುದಿಗೆ ಎಣ್ಣೆಯ ದೀಪ ಹಚ್ಚಿಟ್ಟಿದ್ದಾನೆ.
ಅಗೋ ಚಂದ್ರ
ಡೊಂಬನಂತೆ ಸರಿದಾಡುತ್ತಿದ್ದಾನೆ.
ಕಣ್ಣಿಗೆ ಬಿದ್ದ ಕಡೆಗೆಲ್ಲ ಗಾಬರಿ ಹುಟ್ಟಿಸುತ್ತ.
ಕಪ್ಪು ಕಾಫಿಯನ್ನು ಬೆಳ್ಳಗೆ ಮಾಡುತ್ತಾನೆ,
ಹೆಂಗಸರ ಕಣ್ಣುಗಳಿಗೆ ಮೃದುಗಾಜಿನಾಭರಣಗಳನ್ನು ಹಿಡಿಯುತ್ತಾನೆ
ಮಲಗುವ ಕೋಣೆಗಳನ್ನು ಮೃತ್ಯುಪಂಜರವಾಗಿಸುತ್ತಾನೆ.
ಕೂತು ನೋಡುತ್ತಾನೆ ಪಿಯಾನೋದ ಮೇಲೆ.
ಕೋಟೆಗೆ ನಾಟಕೀಯವಾಗಿ ಹರಿಸುತ್ತಾನೆ ಹೊನಲು ಬೆಳಕು.

ಪ್ರಾಗ್ ಇಂದು ತನ್ನ ಇತಿಹಾಸವನ್ನು ನೆನೆಸಿಕೊಳ್ಳುತ್ತದೆ.
ಇದೀಗ ನದಿಯ ಉತ್ಸವ
ತೂಗಾಡುವ ಆ ಚೀನೀ ಕಂದೀಲು ನೋಡು
ಗಂಟೆಗಳು ಗಾಜಿನ ಬಟ್ಟಲುಗಳಷ್ಟೇ ಭಂಗುರವಾಗಿವೆ.

ದೊಡ್ಡ ಕ್ರೀಡಾಸ್ಪರ್ಧೆಯೊಂದು ನಡೆಯಲಿದೆ
ನಗರದ ತುಂಬ ಬಿಳಿ ಜಮಖಾನೆ ಹಾಸಿದೆ.
ಮಹಾರುದ್ರ ನಾಟಕದಲ್ಲಿ ಕಟ್ಟಡಗಳೂ ಪಾತ್ರವಹಿಸಲಿವೆ
ಎಲ್ಲವೂ ಅಧೋಲೋಕಕ್ಕೆ ಸೇರಿವೆ.

ಅಟ್ಟದ ಕಿರುಕೋಣೆಗಳನ್ನು ಪ್ರವೇಶಿಸುತ್ತಾನೆ ಚಂದ್ರ
ಮೇಜಿನ ಮೇಲೆ ಮಿನುಗು ಬೆಳಕು ಚೆಲ್ಲಿ: ಅಲ್ಲೊಂದು ದೊಡ್ಡ ದೌತಿ
ಅದರ ಮಸಿಯಿಂದ ಸಾವಿರ ಪತ್ರ ಬರೆಯಲಾಗುತ್ತದೆ.
ಒಂದು ಕವಿತೆಯನ್ನು ಕೂಡ.

-ವಿಜೆಸ್ಲೊವ್ ನೆಜ್ವಾಲ್

## ಜಾತ್ರೆಯಿಂದ ಬಂದ ಮೇಲೆ

ಪ್ರತಿಯೊಬ್ಬರೂ ಹೋದರು
ಜಾತ್ರೆಗೆ.
ಈಗ ಎಲ್ಲರೂ ಮರಳಿ ಬಂದಿದ್ದಾರೆ.
ಹೋಗುವ ಮೊದಲು
ಅವರೆಲ್ಲರೂ ಹೇಳಿದರು:
ಓ, ಅಲ್ಲೇನೂ ಅಂಥದಿಲ್ಲ
ಬರೀ ಜಾತ್ರೆ.

ಅಲ್ಲಿಗೆ ಹೋದ ಮೇಲೆ
ಎಲ್ಲರೂ ಅಂದರು:
ಇಲ್ಲೇನೂ ಆಗುತ್ತಿಲ್ಲ
ಕೇವಲ ಜಾತ್ರೆ.

ಈಗ ಮರಳಿ ಬಂದ ಮೇಲೆ
ಎಲ್ಲರೂ ಹೇಳುತ್ತಾರೆ:
ಹಾ, ಅಲ್ಲೇನೂ ನಡೆಯಲಿಲ್ಲ
ನಡೆದದ್ದು ಅದು ಒಂದೇ : ಜಾತ್ರೆ
ಪ್ರತಿಯೊಬ್ಬರೂ ಅಲ್ಲಿಗೆ ಹೋದರು
ಈಗ ಎಲ್ಲರೂ ಮರಳಿ ಬಂದಿದ್ದಾರೆ.

-ಭರತ್‌ಭೂಷಣ ಅಗರವಾಲ್ (ಹಿಂದಿ)

## ಬೆಂಕಿ

ಇಡೀ ಬದುಕನ್ನು
ಸುತ್ತುಗಟ್ಟಿವೆ
ಹಾಟ್‌ಪ್ಲೇಟ್, ಹೀಟರ್,
ಬರ್ಸೇನ್ ಗ್ಯಾಸ್,
ಇಸ್ತ್ರಿಪೆಟ್ಟಿಗೆ, ವಿದ್ಯುಚ್ಛಕ್ತಿ
ಬೆಂಕಿ ಎಂದರೆ ಹೇಗಿತ್ತು?
ಮರೆತೇ ಹೋಗಿದೆ.

ಇದೀಗ
ಕಿಟಕಿಯಲ್ಲಿಣಿಕಿದೆ:
ಬೀದಿಯಲ್ಲಿ ಝಾಡಮಾಲಿ
ಒಣಗಿದ ಎಲೆಗಳನ್ನು ಗುಡಿಸಿ
ಉರಿಹಚ್ಚಿದ.
ಆಹಾ! ಆ ಜ್ವಾಲೆ !
ಬತ್ತಲೆ !
ಏಳುತ್ತಿದೆ ಮೇಲೆ!
ಜಯ್ ಅಗ್ನಿದೇವ.

-ಭರತ್‌ಭೂಷಣ ಅಗರವಾಲ್



# ಹಕ್ಕೀ ಪುಚ್ಚ

## (ಮಕ್ಕಳ ಕವಿತೆಗಳು)

೧೯೮೫

### ಹುಟ್ಟಿದ ದಿನ

ರವಿವಾರ ಹುಟ್ಟಿರುವ ಮಕ್ಕಳೆಲ್ಲ
ಕಲಿಯುವರು ಸರಿಯಾಗಿ ಪಾಠಗಳನು.

ಸೋಮವಾರ ದಿವಸ ಹುಟ್ಟಿದವರು
ನಿತ್ಯವೂ ಸತ್ಯವನೆ ಮಾತನಾಡುವರು.

ಯಾರು ಮಂಗಳವಾರ ಹುಟ್ಟಿದವರು
ಯಾವ ಕೆಲಸಕು ಹಿಂದೆ ಸರಿಯದವರು

ಬುಧವಾರ ಹುಟ್ಟಿರುವ ಹುಡುಗ-ಹುಡುಗಿಯರು
ತಂದೆ-ತಾಯ್ಗಳ ಮಾತು ಮೀರದವರು.

ಸರಿಯಾಗಿ ಗುರುವಾರ ಹುಟ್ಟಿದವರು
ಎಂದೆಂದಿಗೂ ತಾಳ್ಮೆ ತಪ್ಪದವರು.

ಯಾರು ಹುಟ್ಟಿದದಿನವು ಶುಕ್ರವಾರ
ಅವರು ಮಾಡುವುದೆಲ್ಲ ಪರೋಪಕಾರ.

ಶನಿವಾರ ಹುಟ್ಟಿದರೆ ಒಂದು ವೇಳೆ
ಶಾಂತ ಗುಣಿಗಳು ಅವರು, ತಪ್ಪಿಸರು ಶಾಲೆ.

ಈಗ ಹೇಳಿರಿ ಬೇಗ ಕುಣಿ ಕುಣಿದು ಬಂದು
ನೀವು ಹುಟ್ಟಿದ ದಿವಸ ಯಾವುದೆಂದು.

## ಮಿಂಚು ಹುಳ

ಯಾರೂ ಎಣ್ಣೆಯ ಹಾಕಿಲ್ಲ
ಯಾರೂ ಕಡ್ಡಿಯ ಕೊರೆದಿಲ್ಲ;
ಆದರೂ ಸಣ್ಣಗೆ ದೀಪವಿದೆ
ಗಾಳಿಗೆ ಆರದೆ ಮಿನುಗುತಿದೆ.
ಸುಮ್ಮನೆ ಒಂದಡೆ ಕುಳಿತಿಲ್ಲ,
ಅಮ್ಮನು ಕೈಯಲಿ ಹಿಡಿದಿಲ್ಲ,
ಗಾಳಿಗೆ ತೇಲುವ ದೀಪವಿದು
ಹೇಳಿರಿ ನೋಡುವ, ಯಾವುದಿದು?
ಕತ್ತಲೆ ಕವಿದಿಹ ಬಯಲಲ್ಲಿ
ಚಿಕ್ಕೆಯು ಮಿನುಗುವ ತೆರದಲ್ಲಿ
ಇರುಳಿಗೆ ಬೆಳಕಿನ ಮಣಿಯಾಗಿ
ಹೊಳೆಯುವದೇನದು ಚೆಲುವಾಗಿ?
ಆಹಾ ಹೊಳೆಯಿತು ನನಗೀಗ!
ಹೇಳುವೆನೀಗಲೆ ಒಂದೆ ಸಲ,
ಹತ್ತುವ, ಆರುವ, ಹಾರುವ ದೀಪ
ಹೌದೆ, ಹೌದೆ, ಮಿಂಚುಹುಳ?

## ದುಡಿಮೆ

ಸಿಪ್ಪೆಯ ಸುಲಿದು ತೆಗೆದರೆ ಮಾತ್ರ
ಹಣ್ಣಿನ ತಿರುಳನು ಮೆಲಬಹುದು;
ತೆಂಗಿನ ಕಾಯಿಯ ಚಿಪ್ಪನು ಒಡೆದರೆ
ಕೊಬ್ಬರಿ ತಿಳಲನು ತಿನಬಹುದು.

ಅಕ್ಕಿಯ ಸುಡುಸುಡು ನೀರೊಳು ಕುದಿಸಲು
ಗಮ ಗಮ ಅನ್ನವನುಣಬಹುದು:
ಅರಿವೆಯ ತಂದು , ರಾಟಿಗೆ ಹೊಲಿದರೆ
ಚಂದದ ಅಂಗಿಯ ತೊಡಬಹುದು.

ಅಕ್ಷರ ಓದಲು ಬರೆಯಲು ಕಲಿತರೆ
ಕವಿತಾ, ಕಥೆಗಳು ತಿಳಿಯುವವು.
ದಿನವೂ ತಪ್ಪದೆ ಶಾಲೆಗೆ ಹೋದರೆ
ಪ್ರಶ್ನೆಗೆ ಉತ್ತರ ಹೊಳೆಯುವವು.

ದಿನ ದಿನ ಹೂವಿನ ಬಂಡನು ಹೀರಲು
ಜೇನು ತುಪ್ಪ ಕೊಡ ತುಂಬುವದು;
ಹನಿ ಹನಿ ಸೆಳಕಿನ ಮಳೆ ಸುರಿದಾಗಲೆ
ಹಳ್ಳ, ಬಾವಿ, ಕೆರೆ ತುಳುಕುವವು.

ಎಲ್ಲರು ತಮ್ಮ್ಮಯ ಕೆಲಸವ ತಾವೇ
ಮಾಡಲು ದೇಶವು ಬೆಳೆಯುವದು;
ದುಡಿದರೆ ಮಾತ್ರವೆ ದೊಡ್ಡವನಾಗುವೆ
ಸ್ವಾತಂತ್ರ್ಯದ ಸವಿ ತಿಳಿಯುವದು.

## ಸ್ವಂತ ಮನೆ

ಸಿಮೆಂಟು ಬೇಡ, ಇಟ್ಟಿಗೆ ಬೇಡ;
ನಾವೇ ಮನೆಯನು ಕಟ್ಟುವೆವು;
ಝಣ ಝಣ ರೊಕ್ಕವು ಸಿಕ್ಕರು ಬೇಡ
ಮಣ್ಣೂ ಉಸುಕೂ ಒಟ್ಟುವೆವು.

ಕಟ್ಟಿಗೆ ಬೇಡ, ಕಬ್ಬಿಣ ಬೇಡ
ಆಳುಗಳೊಬ್ಬರು ಬೇಡಣ್ಣ;
ಕಣ್ಣು ಮುಚ್ಚಿ ಕಣ್ ತೆರೆದರೆ ಸಾಕು
ತಯಾರಾಗುವದು ನೋಡಣ್ಣ.

ಬಡಿಗರು ಕಮ್ಮಾರುಪ್ಪಾರೇತಕೆ?
ಬಡ ಬಡ ನಾವೇ ಒಟ್ಟುವೆವು;
ಎಲ್ಲಿ ಹುಡುಕಿದರು ಸಿಗಲಾಗದ ಮನೆ
ಒಂದೇ ಚಣದಲಿ ಕಟ್ಟುವೆವು.

ಕಪಾಟು, ಕಿಟಕಿಯು ಕಿಂಡಿಗಳಿಲ್ಲ
ಸುಣ್ಣ ಬಣ್ಣಗಳ ಬಳಿದಿಲ್ಲ;
ಕಳ್ಳರು–ಗಿಳ್ಳರು ನುಗ್ಗಲು ಸಾಧ್ಯವೆ?
ಯಾರು ಚಿಂತಿಸಬೇಕಿಲ್ಲ.

ಚಿಲಕವು, ಕೊಂಡಿಯು, ಕೀಲಿಗಳೇತಕೆ?
ಅಗಳಿಯು ರಗಳೆಯ ಹಚ್ಚಿಲ್ಲ;
ಖರ್ಚಿನ ಮಾತೇ ಬಾರದು ಇಲ್ಲಿ
ನಗರಸಭೆಯು ಕರ ಹೇರಿಲ್ಲ.

ಸಾಲದ ಚಿಂತೆಯು, ಆಳಿನ ಗೋಳು-
ಒಂದೆ? ಎರಡೆ? ಎಲ್ಲಿ ಕೊನೆ?
ಅಪ್ಪಟ ಮಳಲಲಿ ಕಟ್ಟಿದೆವಿದನು
ಗುಬ್ಬಿಯ ಗೂಡಿದು, ಸ್ವಂತ ಮನೆ.

## ನನ್ನ ಗೊಂಬೆ

ಚಿಕ್ಕ ಗೊಂಬೆ, ನನ್ನ ಗೊಂಬೆ
ಚಂದವಾದ ಗೊಂಬೆ,
ನಗುತ ಒಮ್ಮೆ ಮಾತನಾಡು
ನಾನು ಬೇಡಿಕೊಂಬೆ.

ಹಾಡಲೊಲ್ಲೆ, ಕುಣಿಯಲೊಲ್ಲೆ-
ನೋಡಲೆಷ್ಟು ಸುಂದರ!
ಬೀದಿಗೋಡಿ ಆಡಲಾರೆ-
ನನಗೆ ಮಾತ್ರ ಆತುರ.

ವರುಷವಾಯ್ತು, ಬೆಳೆದೆ ಇಲ್ಲ-
ಚೋಟುದ್ದವೆ ಇರುವೆ;
ಒಮ್ಮೆ ಕೂಡ ಅಮ್ಮನನ್ನು
ಅತ್ತು ಕಾಡದಿರುವೆ.

ನನ್ನ ಮೇಲೆ ನಿನ್ನ ಕೋಪ
ಬೇಡ, ಊಟ ಮಾಡು;
ಮೆತ್ತಗೊಂದು ಹಾಸಿಕೊಡುವೆ
ಗಪ್ಪು ನಿದ್ದೆ ಮಾಡು.

ನನ್ನ ಮೇಲೆ ಎಷ್ಟು ಪ್ರೀತಿ
ಅಮ್ಮನಿಗೆ, ಗೊತ್ತೆ?
ನಾನು ಕೂಡ ನಿನ್ನ ಮೇಲೆ
ಅಷ್ಟು ಪ್ರೀತಿ ಮತ್ತೆ!

## ಆಮೆ

"ಆಮೆ, ಆಮೆ, ಎಲ್ಲಿಗೆ ಹೊರಟೆ?
ಬೆನ್ನಿಗೆ ಗಂಟೂ ಮೂಟೆ!
ಬಡ ಬಡ ನಡೆದರೆ ಎಡವೀ, ಬಿದ್ದೀ
ನಿನಗೂ ಅವಸರ ಉಂಟೆ?"

"ನಿನ್ನೆಯೆ ಸಂಜೆಗೆ ಬಂದಿತು ತಂತಿ-
ಮರಿಮೊಮ್ಮಗನಿಗೆ ಮದುವೆ."
"ಓಹೊ! ಚಕ್ಕಡಿ ಹೂಡಿಸು ಗಿಲ್ ಗಿಲ್ !
ನಾನೂ ಮದುವೆಗೆ ಬರುವೆ."

"ಎತ್ತುಗಳೆರಡೂ ಮಲಗೇ ಬಿಟ್ಟರೆ
ಹೊತ್ತಿಗೆ ಹೇಗೋ ಹೋಗುವದು?"
"ಭರ್ರನೆ ಪೊಂವ್ ಪೊಂವ್ ಕಾರನು ಬಿಟ್ಟರೆ
ಮದುವೆಯ ಮಂಟಪಕೊಯ್ಯುವದು."

"ದಾರಿಯ ನಡುವೇ ಕೆಟ್ಟರೆ ಹೇಗೋ?
ಮಳೆಯೊಳಗೆಲ್ಲಾ ಹುದಲು."
"ಭುಕುಚುಕು ಭುಕುಚುಕು ರೈಲಿಗೆ ಹೊರಡು
ಬೀಗರ ಜೊತೆಗೇ ಬರುವೆ."

"ಕಂಬಿಯು ತಪ್ಪಿ ಡುಮಕೀ ಹೊಡೆದರೆ
ಆಯಿತು ನಂದೇ ಮದುವೆ."
"ಟ್ರಿಣ್ ಟ್ರಿಣ್ ಸೈಕಲ್ ಡಬಲ್ ಸವಾರಿ
ಒಂದೇ ತಾಸಿಗೆ ಒಯ್ಯುವೆನು."

"ಪೊಲೀಸ್ ಕಂಡರೆ ಬಿಡುವನೆ ತಮ್ಮಾ
ನಾನೇ ಮೆಲ್ಲಗೆ ಸಾಗುವೆನು."

## ಕಪ್ಪೆ

ಟುಣಕ್ ಪುಣಕ್ ಜಿಗಿಯುವ ಕಪ್ಪೆ
ಏನಿದು ಸಡಗರ! ಸುತ್ತೂ ಕಡೆಗೆ?
ನಿಲ್ಲುವೆಯಾ ಚಣ, ಮಾತಾಡುವ ಜೊತೆಗೆ,

ದಿನವೂ ತಪ್ಪದೆ ನೀರೊಳು ಮುಳುಗಿ
ಜಳಕವ ಮಾಡುವೆ, ಆದರು ಏತಕೆ
ಹಕ್ಕಳೆಗಟ್ಟಿದ ಮೈಯಾಗಿರುವೆ?

ಮಳೆಯು ಮುಗಿದು ಚಳಿಗಾಲವು ಬರಲು
ದಂಡೆಯೊಳೆಲ್ಲೊ ಕಾಣದೆ ಕುಳಿತು
ಏತಕೆ ಒಟಗುಟ್ಟುವೆ ಹೇಳು.

ಹುಳು ಹುಪ್ಪಡಿಗಳ ತಿಂದರು ನೀನು,
ನುಂಗೇ ಬಿಡುವದು ನಿನ್ನನು ಹಾವು
ಸುಳಿವೇ ತಿಳಿಯದು ನಿನಗೆ.

ಕೆರೆಯೊಳು ಸಲೀಸು ಈಜುತಲಿರುವೆ
ನೆಲದ ಮೇಲೆ ಕುಪ್ಪಳಿಸುತ ಬರುವೆ
ಯಾವದು ಖುಷಿ ಈ ಎರಡರೊಳು?

ದುಂಡಗೆ ಕಣ್ಣನು ತೆರೆದೇ ಇರುವೆ
ಬೆಳ್ಳಗೆ ಹೊಟ್ಟೆಯನುಬ್ಬಿಸಿ ತೋರುವೆ
ಕಪ್ಪೆ, ಗಪ್ ಚಿಪ್ ಯಾಕಿರುವೆ?

## ಬಸವನ ಹುಳು

"ಬಸವನ ಹುಳುವೆ, ತಂಗೀ ಬಸವನ ಹುಳುವೆ
ಏನಿದು ಹೆಗಲಿಗೆ? ಎಲ್ಲಿಗೆ ಮೆಲ್ಲಗೆ"

"ನಮ್ಮ ಅಮ್ಮನ ದೊಡ್ಡಮ್ಮನ ಜಳಕಕೆ
ನೀರಿನ ಬಿಂದಿಗೆ ಹೊತ್ತಿರುವೆ."

"ಹೌದೇ? ಎಷ್ಟು ಹೊತ್ತಿಗೆ, ಇನ್ನೆಷ್ಟು ದಿವಸಕೆ
ನೀನಲ್ಲಿಗೆ ಹೋಗುವೆ ಹೀಗೆ?"

"ಹತ್ತೇ ದಿವಸಕೆ ಹೋಗುವೆ; ಅಮ್ಮನು ಅಲ್ಲಿ
ಕಾದಿರುವಳು ಬಚ್ಚಲಮನೆಯೊಳಗೆ."

## ಗೂಡು-ಬೀಡು

"ಮುದ್ದಿನ ಗಿಣಿಯೆ ಚೆಲುವಿನ ಖಣಿಯೆ
ಎಲ್ಲಿದೆ ನಿನ್ನಯ ಗೂಡು?"
"ಅರಳೆಯ ಮರದಾ ಪೊಟ್ಟರೆಯೊಳಗೆ
ನನಗೂ ಮರಿಗೂ ಬೀಡು."

"ಗೀಜಗ ಹಕ್ಕಿಯೆ, ಸೋಜಿಗವೆನಗೆ
ನೀನೆಲ್ಲಿರುತಿಹೆ ಹೇಳು-"
"ಗಿಡದ ಟೊಂಗೆಯಲಿ ಜೋತಿದೆ ನೋಡು
ನಾನೇ ಹೆಣೆದಿಹ ಗೂಡು."

"ಹೊಳಪುಗಪ್ಪಿನ ಡೊಂಬ ಕಾಗೆಯೆ
ಎಲ್ಲಿದೆ ನಿನ್ನಯ ಗೂಡು?"
"ಗಿಡದ ಮೇಲೆತ್ತರ ಕಟ್ಟಿಕೊಂಡಿರುವೆ
ಅಲ್ಲೇ ನನ್ನಯ ಬೀಡು."

"ಸಳ ಸಳ ಸಾಗುವ ಬುಸುಬುಸು ನಾಗ
ನೀನೆಲ್ಲಿಂದಲಿ ಬರುವೆ?"
"ಕಂಟಿಯ ಹೊದರು, ಹುತ್ತದ ಡೊಗರು
ಒಳಗೇ ಸುರುಳಿಯ ಸುತ್ತಿರುವೆ."

"ಗುಡುಗು ಹಾಕಿ ಭಯಗೊಳಿಸುವ ಸಿಂಹ
ಯಾವ ಹಕ್ಕಿಯಲಿ ಮಲಗುತಿಹೆ?"
"ಕಾಡಿನಲ್ಲಿ ಬಲುದೂರ ಬಂಡೆಗವಿ
ಬೇಟೆಯಾಡಿ ಕೊನೆಗಲ್ಲಿರುವೆ."

"ಮೆಲ್ಲಗೆ ನುಸುಳುವ ಬಸವನ ಹುಳುವೆ
ಎಲ್ಲಿದೆ, ತೋರಿಸು ನಿನ್ನ ಮನೆ."
"ಇಲ್ಲಿದೆ ನೋಡಿರಿ ಬೆನ್ನಿನ ಮೇಲೆಯೆ
ಹೋದಲ್ಲೆಲ್ಲಾ ಬರುವ ಮನೆ."

## ಬಿದಿಗೆಯ ಚಂದಿರ

ಮಿದು ಬೆರಳಿನ ಸೆಳ್ಳುಗುರಿನ ಹಾಗೆ
ಬೆಳ್ಳಗೆ ಬಿದಿಗೆಯ ಚಂದಿರನೆ,
ಹಾಯಿಯ ಬಿಚ್ಚದೆ ತೇಲುತ ಹೊರಟೆ
ಹೇಳು ಎಲ್ಲಿಹುದು ನಿನ್ನ ಮನೆ?

ನೀಲಾಕಾಶದಿ ದೋಣಿಯ ಹಾಗೆ
ತೇಲಿದೆ, ಉರುಳಿದೆ ಬೆಳ್ಳಿ-ಬಳೆ;
ನನಗೂ ದೋಣಿಯ ಹತ್ತಿಸು, ನಿನಗೂ
ಕೊಡಿಸುವೆ ಉಂಡೀ-ಕೋಡಬಳೆ,

ಮೂಡಲ ಹೋರಿಯ ಕೋಡಿನ ಹಾಗೆ
ಚೂಪಾಗಿರುತಿಹೆ ಎರಡು ಕಡೆ;
ಇರಿಯುತ ನನ್ನನು ಕೆಡವೇ ಬಿಟ್ಟರೆ
ನೋಡು, ನಿನ್ನ ಜೊತೆ ಮಾತಾಡೆ.

ಕುಂಬಳ ಕಾಯಿಯ ಹೋಳಿನ ಹಾಗೆ
ಬಾನ ಬುಟ್ಟಿಯಲಿ ಕುಳಿತಿರುವೆ;
ಅಮ್ಮನ ಕೈಯೊಳು ಸಿಕ್ಕರೆ ನೀನು
ಕಮ್ಮಗೆ ವಡೆಯನು ಮಾಡಿಸುವೆ.

ಬಾನಲಿ ತೇಲುವ ದುಂಡು ಕನ್ನಡಿ
ಹಾಗೆ ಹೊಳೆಯುತಿಹ ಚಂದಿರಗೆ
ನನ್ನೀ ಮುಖವೂ ಕಾಣಿಸುತಿರುವುದೆ?
ನೋಡುವೆ ಬಾರೊ ಕೈಯೊಳಗೆ.

## ಮಿಯಾಂವ್ ಮಿಯಾಂವ್ ಬೆಕ್ಕಣ್ಣ

ಮಿಯಾಂವ್ ಮಿಯಾಂವ್ ಬೆಕ್ಕಣ್ಣ
ಕಲ್ಲೀಮೀಸೆಯ ಚೆಲುವಣ್ಣ;

ಯಾರೂ ಇಲ್ಲದ ಹೊತ್ತನು ನೋಡಿ
ಅಡಿಗೆಯ ಮನೆಯಲಿ ಮೆಲ್ಲನೆ ಓಡಿ
ಗಡಬಡ ಹಾಲಿನ ಪಾತ್ರೆಯ ಹುಡುಕಿ
ಲೊಚ ಲೊಚ ಕುಡಿವೆ ಕಣ್ಣನು ಮುಚ್ಚಿ
ಮಿಯಾಂವ್ ಮಿಯಾಂವ್ ಬೆಕ್ಕಣ್ಣ
ಕಲ್ಲೀಮೀಸೆಯ ಮೋಸಣ್ಣ;

ರಾತ್ರಿಯೊಳೆಲ್ಲಾ ಬೇಟೆಯನಾಡುವೆ
ಇಲಿಗಳ ಕಂಡರೆ ಜಪ್ಪಿಸಿ ಹಿಡಿವೆ;
ಹಗಲೋ? ಅಟ್ಟದಿ ಗುರುಗುರು ನಿದ್ದೆ
ಕನಸಿನಲೂ ಇಲಿ ಕಂಡಿರುವೆ.
ಮಿಯಾಂವ್ ಮಿಯಾಂವ್ ಬೆಕ್ಕಣ್ಣ
ಕಲ್ಲೀಮೀಸೆಯ ಒರಸಣ್ಣ;

ಟಣ್ಣನೆ ಹಾರುವೆ ಕೆಳಗಡೆ ಜಿಗಿವೆ.
ಸಪ್ಪಳಾಗದೊಲು ಹೆಜ್ಜೆಯನಿಡುವೆ;
ಟಾಮಿಯ 'ಬೌ ಬೌ' ಕೇಳಿದ ಕೂಡಲೆ
ಮಟಾಮಾಯ ನೀ ಹೇಳದಲೆ
ಮಿಯಾಂವ್ ಮಿಯಾಂವ್ ಬೆಕ್ಕಣ್ಣ
ಕಲ್ಲೀಮೀಸೆಯ ತಿರುವಣ್ಣ;

## ಪುಟ್ಟ ಪಾಪು

ಎರೆಯುವಾಗ ನಮ್ಮ ಪಾಪು
ಬಹಳ ಅಳುವನು,
ಎರೆದ ಮೇಲೆ ಅಮ್ಮಿ ಕುಡಿದು
ಮಲಗಿ ಬಿಡುವನು.

*   *   *

ಪಾಪು ಅತ್ತರೆ ನಾನು ಆಡಿಸುವೆನು.
ಒಮ್ಮೊಮ್ಮೆ ಬೇಕಂತ ಕಾಡಿಸುವೆನು,
ಆಗ ಅವ್ವನು ಸಿಟ್ಟಿಗೆದ್ದು ನೋಡುವಳು
ಅಮ್ಮ ಮೆಲ್ಲಗೆ ಬಂದು ಗಲ್ಲ ತೀಡುವಳು.

*   *   *

ಪುಟ್ಟು ಯಾರನು ಕಾಡುವುದಿಲ್ಲ,
ಅಕ್ಕನ ಕಂಡರೆ ಬಿಡುವದೆ ಇಲ್ಲ,
ಮೆಲ್ಲಗೆ ಹಿಡಿದರೆ ಎರಡೂ ಗಲ್ಲ
ಹಚ್ಚೇ ಬಿಡುವನು ಬಾಯನ ಚೊಲ್ಲ.

*   *   *

ಪುಟ್ಟನ ಕಣ್ಣು ಕವಳೀ ಹಣ್ಣು,
ಎರಡೂ ಗಲ್ಲ ಮಾವಿನ ಹಣ್ಣು,
ಮೂಗು ಉತ್ತತ್ತಿ ಬಾರೀ ಹಣ್ಣು,
ಅದನೇ ನೋಡುವವೆಲ್ಲರ ಕಣ್ಣು,

*   *   *

ನನ್ನ ತಮ್ಮ ಸತ್ಯಜಿತ
ಸಿಟ್ಟು ಬರಲು ಚೀರುವ;
ಕೈಗೆ ಸಿಕ್ಕ ಪೇಪರನ್ನು
ಪರ್ ಪರ್ ಹರಿಯುವ.

*   *   *

ನಮ್ಮ ಪುಟ್ಟ ಬಹಳ ದಿಟ್ಟ
ನಾಯಿ ಬಾಲ ಜಗ್ಗಿದ,
'ಬೌ, ಬೌ' ಬೊಗಳಿದಂತೆ
ಇವನು ಬಹಳ ಹಿಗ್ಗಿದ.

*   *   *

ಕುಂತಲ್ಲೆ ಕುದರಿ ಹತ್ತಿ ಕುಣಿಯುವನು
ಎರಡೂ ಕೈ ಲಗಾಮು ಜಗ್ಗುವನು
ಕಾಲು ಬಡಿದು ಓಡಿದಂತೆ ಬಗ್ಗುವನು
ಉಳಿದವರು ನೋಡಿದರೆ ಹಿಗ್ಗುವನು.

## ಹಕ್ಕೀ ಪುಚ್ಚ

ಮಿರಿ ಮಿರಿ ಮಿಂಚುವ ಹಕ್ಕೀ ಪುಚ್ಚ
        ಗಿರಿ ಗಿರಿ ತಿರುಗಿದೆ ನೋಡಣ್ಣ,
ಹಣ್ಣಿನ ತೋಟದ ಬೇಲಿಯ ಹೊರಗೆ
        ಸಿಕ್ಕಿತು ನನಗೀ ಗರಿಯಣ್ಣ.

ತೋಟದಿ ಗರಿಯನು ಉದುರಿಸಿ ಹಕ್ಕಿ-
        ಹುಡುಕುತ್ತಿರುವುದೆ ಗಾಳಿಯಲಿ?
ಬಣ್ಣದ ಗರಿಯನು ಚೊಣ್ಣದ ಕಿಸೆಯಲಿ
        ಇಡುವೆನು, ಯಾರಿಗೂ ಹೇಳದಿರಿ.

ಕಾಮನ ಬಿಲ್ಲಿನ ಬಣ್ಣದ ಗರಿಯಿದು
        ಹಾರುತ ಮೆಲ್ಲನೆ ಇಳಿಯುವದು;
ಹಕ್ಕಿಯು ಬಂದು ಹಿಡಿದರೆ ಗುರುತು
        ನಾನೇ ಪುಚ್ಚಕೆ ಚುಚ್ಚುವೆನು.

ಬೆರಳಿಗೆ ಮೆತ್ತಗೆ ರೇಶಿಮೆ ನುಣುಪು
        ಮಿನಿ ಮಿನಿ ಬಂಗಾರದ ಹೊಳಪು,
ಹುಡುಕುವೆ ಏತಕೆ, ಬಾರದೆ ನೆನಪು?
        ಇಲ್ಲಿದೆ ಬಾ, ಗರಿ ಕಿನಕಾಪು

ಟೊಪ್ಪಿಗೆ ತುದಿಯಲಿ ಒಪ್ಪುವ ಗರಿಯಿದು
        ರಾಜನಂತೆ ನಾ ಡೌಲಿನಲಿ
ನಡೆಯುವೆ, ಬಣ್ಣದ ಹಕ್ಕಿಯು ಕೇಳಲಿ
        ಕೊಟ್ಟು ಬಿಡುವೆ ಸಂತೋಷದಲಿ.



# ಬರೆದು ತೀರದ ಬದುಕು

## ೧೯೯೪ -೨೦೦೦

### ನನ್ನವೇ ನಾಲ್ಕು ಶಬ್ದ

ಇಷ್ಟೊಂದು ಸದ್ದುಗದ್ದಲದಲ್ಲಿ ಒದ್ದಾಡು-
ತಿರುವಾಗ ಎಲ್ಲಡಗಿ ಮುದ್ದೆಯಾಗಿರಬಹುದು
ನನ್ನವೇ ನಾಲ್ಕು ಶಬ್ದಗಳು? ಕೋಶಗಳನೊಡೆದು
ಹೊಸ ದೇಸಿಯಲಿ ಬಣ್ಣ ಬಣ್ಣದ ರೆಕ್ಕೆ ಪಡೆದು
ಹೊರಟಿದ್ದ ಸ್ಥಾಯಿ-ಸಂಚಾರಿಗಳು ? ಎಲ್ಲ ಬಗೆ
ಹೂವುಗಳ ಸಖ್ಯದಲಿ ನೋವು-ನಲಿವಿನ ಗಾಳಿ-
ಹಾವು ಹರಿದಾಡದಿಹ ಜಾಗವೆಲ್ಲಿದೆ ಹೇಳಿ-
ಬೀಸಿ ಪರಿಶುದ್ಧಗೊಳಿಸುವ ಪರಿಮಳದ ಪರಿಗೆ.

ರಸ್ತೆ ಹಿಡಿಸಲಾರದೆ ಬಿಡುವಿಲ್ಲದೋಡಾಡು-
ತಿರುವ ಕುರುಡು ಚಕ್ರದ ನಡುವೆ ಸಿಕ್ಕ ಬೆಕ್ಕಿನ
ಮರಿಯನೆತ್ತಿ ತರಹೋದ ಕವನವೆ ಜೋಪಾನ:
ಹದ್ದು ಹಾರಾಡುವಾಕಾಶದೆಡೆಗೂ ನೋಡು.
ಮೋಡ ಮಳೆಗರೆಯಲಿ, ಆಮೇಲೆ ಬರಲಿ ಸೂರ್ಯ
ಈಗ ಪದಪಂಕ್ತಿಯಲಿ ಬೀಜ ಬಿತ್ತುವ ಕಾರ್ಯ.

## ಕಾಣದ ಬೇರು

ಹಲವು ದಿಕ್ಕಿನ ಹಕ್ಕಿ-ಪಕ್ಕಿ ತನ್ನೆಡೆ ಸೆಳೆವ
ಕುಲರಸಿಕ; ನಿಂತಲ್ಲೆ ನಿಂತು ಹತ್ತೂ ಕಡೆಗೆ
ಕೈಚಾಚಿ, ಬಾಚಿ ತಬ್ಬುವನಾಥ ಬಂಧುವಿಗೆ
ನೆಲವೆ ನೆಲಗಟ್ಟು; ಸುರಿಮಳೆಗೆ ಹಿಗ್ಗಿ ಮೈತೊಳೆವ,
ಬಿರುಗಾಳಿ ಬೀಸಿ ದಿಕ್ಕೆಡಿಸಿದರು, ಪಕ್ಕದಲಿ
ಬಾಗಿ,ಯಥಾಸ್ಥಿತಿಯ ಕಾದುಕೊಳ್ಳುವ ಸಾಧು.
ಬಳಲಿದವರಿಗೆ ನೆಳಲು, ಸಹಿಸಿ ಮಾಗಿಯ ಮಂಜು
ಚೈತ್ರಕ್ಕೆ ಜೀವನೋತ್ಸಾಹ ಋತುಚಕ್ರದಲಿ.
ಬಟ್ಟ ಬಯಲಲಿ ತೊಟ್ಟು ಕಳಚಿ ಬೀಳುವವರೆಗೆ
ಹುಟ್ಟುಗುಣ, ತನ್ನಿಷ್ಟಸಾಧನೆಗೆ ಹೋರಾಡಿ
ಹರಿದುಕೊಳ್ಳುವದೆಲ್ಲ ಬಂಧನವ, ಮೂರು ಹಿಡಿ
ಮಣ್ಣುಸಲ್ಲಿಸಿ ಬರುವ ದಾರಿಯಲಿ ಬಿತ್ತನೆಗೆ
ಕಾದ ಹೊಲಗದ್ದೆ; ಹಳ್ಳದಲಿ ಜುಳುಜುಳು ನೀರು
ಬದುಕು ಚಿಗಿವುದು ಕಾಣದಿದ್ದರು ಅದರ ಬೇರು.

## ಪರಮಾರ್ಥದ ಕತೆ

ಡಾವರ ಡಾಕಿನಿ ಶಾಕಿನಿ ದೇವತೆ
ಉಜ್ಜಯಿನಿ ನಗರದಲಿ ಕತೆಗೆ ಪ್ರಖ್ಯಾತೆ.
ಪುಕ್ಕಟೆ ಪುರಾಣವಲ್ಲ, ಒಂದೊಂದು ಕತೆ ಹೇಳಲು
ಸಾವಿರ ಗದ್ಯಾಣ.
ಬಡ ಬ್ರಾಹ್ಮಣ ದೇವದತ್ತನಿಗೆ ಕತೆ ಕೇಳುವ
ಹುಚ್ಚು, ಹೇಗೊ ಹಣ ಕೂಡಿಸಿ ಕೈಕೊಂಡ
ಪಯಣ. ದಾರಿಯಲಿ ದಟ್ಟರಣ್ಯದ ನಡುವೆ
ತಟ್ಟನೆ ಬ್ರಹ್ಮರಾಕ್ಷಸ ನೋಡಿ ತಿನಲು ಧಾವಿಸಿದ.
ಎಲ್ಲಿಂದ ಬಂದಿತೊ ಧೈರ್ಯ ದೇವದತ್ತನಿಗೆ
ವಿವರಿಸಿದ ಕತೆಗಾಗಿ ಕಷ್ಟಪಟ್ಟು ಕೂಡಿಸಿದ
ಹಣದ ವೃತ್ತಾಂತ. "ದಯಮಾಡಿ ನನ್ನ ಆಶಗೆ ಭಂಗ
ತರಬೇಡ, ಐದು ರಾತ್ರಿಗಳ ಕೊಡು, ಕತೆ ಕೇಳಿ
ತಪ್ಪದೆ ಬರುವೆ."

ಏನೆನಿಸಿತೊ ರಕ್ಕಸನೊಪ್ಪಿಕೊಂಡ. ಅಷ್ಟೇ ಅಲ್ಲ
ಹಸಿದಿಹನೆಂದು ಅವನಿಗಾಹಾರ ಕೊಟ್ಟ. ಹರ್ಷದಲಿ
ದೌಡಾಯಿಸಿದ ಉಜ್ಜಯಿನೆಯೆಡೆಗೆ ದೇವದತ್ತ.
ದೇವರು, ದೊರೆ, ಪಂಡಿತರನೆಲ್ಲ ಪಣ ತೊಟ್ಟು
ಮಾರುತ್ತ ಹಲ ಬಗೆಯಲ್ಲಿ ಹೊಕ್ಕಾಡುವ
ಡಾವರ ಡಾಕಿನಿಯ ಮನೆಯ ಹುಡುಕಿ ಒಳಹೊಕ್ಕ.

ಒಯ್ದು ಹಣವನ್ನೆಲ್ಲ ಸುರಿದು, "ತಾಯೆ ಕತೆ ಹೇಳು"
ಎಂದ. ಏಕಚಿತ್ತದಲ್ಲಿ ಕೇಳಬೇಕೆಂದು ಎಚ್ಚರಿಸಿ
ಹೇಳಿದಳು :"ಒಮ್ಮೆ ಕಂಡವರು ಮತ್ತೊಮ್ಮೆ ಕಂಡರೆ
ನೆಂಟರು -ಇದುವೆ ಪರಮಾರ್ಥ ಕತೆ."

ಕೇಳಿ ಅಚ್ಚರಿಬಟ್ಟು. ಕುಂಟಣಿಯ ಬೀಳ್ಕೊಂಡು
ರಕ್ಕಸನೆಡೆಗೆಬಂದು ನೋಡಿದ್ದೆ ತಡ, "ಏನು ಭಾವ
ಬಂದಿರಾ ? ನೀವು ಕೇಳಿದ ಕತೆಯ ನನಗು ಹೇಳಿ"
ಎಂದು ಬ್ರಹ್ಮರಾಕ್ಷಸ ಎಂದಿಲ್ಲದುತ್ಸಾಹದಿಂದ.
"ಧರೆಯೊಳಗೆ ಗುಣಿಗಳಾದವರು ಒಂದೊಮ್ಮೆ
ಕಂಡು, ಮತ್ತೆ ಕಂಡರೆ ಅವರೆ ನೆಂಟರು, ಇದೆ
ಪರಮಾರ್ಥಕತೆ ಎಂದು ಹೇಳಿದಳು " ಎನ್ನಲು
ಬೆಕ್ಕಸಗೊಂಡ ರಕ್ಕಸನು ದೇವದತ್ತನಿಗೆಂದ;
"ನಿನ್ನನೀ ಮೊದಲು ನಾ ಕಂಡುದಲ್ಲದೆ ಆಹಾರವನ್ನೂ
ಕೊಟ್ಟೆ, ಅದರಿಂದ ನೀ ನನಗೆ ನಂಟನೆ." ರಾಕ್ಷಸನು
ದೇವದತ್ತನ ತಿನದೆ ಸಂರಕ್ಷಿಸಿದ.

ಗದ್ಯವೊ ಪದ್ಯವೊ, ಸದ್ಯ ಇದ್ದಕಿದ್ದಂತೆ
ಅದನಿಲ್ಲಿ ಉದ್ಧರಿಸಿರುವ ಪಂಚತಂತ್ರದ ಕತೆಯ
ಇನ್ನೊಮ್ಮೆ ಕೇಳಿ, ಅದರ ಪರಮಾರ್ಥವನು
ಉಳಿದವರಿಗೆ ಹೇಳಿ.

## ಮಡಿ

ಬಿಡುವಿರದ ಕೆಲಸಗಳಲ್ಲಿ ತೊಡಗಿದರೂ
ಶ್ರೀಮಾತೆ ಶಾರದಾದೇವಿ, ಅವರಿಗೆಲ್ಲೆಡೆಗು ಲಕ್ಷ್ಯ.
ಮಾತೃವಾತ್ಸಲ್ಯದ ಸರಳ ಆದರಾತಿಥ್ಯ
ಸಣ್ಣಸಣ್ಣ ಸಂಗತಿಗೂ ತೆರೆದ ಮನ,
ಸಾಧ್ಯವಾದಷ್ಟೂ ಮೌನ.

ಹೀಗೊಂದು ದಿನ, ಅವರಮನೆ ಅಡುಗೆಯವಳನು
ನಾಯಿ ಮುಟ್ಟಲು, ಆಕೆ ಕೆಲಸ ಕೆಟ್ಟಿತು ಎಂದು
ಚಡಪಡಿಸಿದಳು; ಮಹಾ ಮಡಿವಂತ ಬ್ರಾಹ್ಮಣ
ಮಹಿಳೆ. ಆಗ ಒಂಬತ್ತು ಗಂಟೆ ರಾತ್ರಿ
ಕತ್ತಲೆಯಲ್ಲಿ ಹೊರಗೆ ಕಣ್ಣಾಡಿಸಿದಳು.

ಮೈಲಿಗೆಯ ಕಳೆದುಕೊಳ್ಳಲು ಮತ್ತೆ ಮಾಡಲೇ
ಬೇಕು ತಾನು ಸ್ನಾನ, ಹೊರಟು ನಿಂತರು ಹತ್ತಿರದ ಕೆರೆಗೆ.
"ಈ ಚಳಿ ರಾತ್ರಿಯಲಿ ಬೇಡ; ಕೈಕಾಲು ತೊಳೆದು
ಮಡಿಸೀರೆ ಉಡು, ಸಾಕು" ಎಂದರು ಶಾರದಾಂಬೆ.
"ಅದು ಹೇಗೆ ಮಡಿಯಾದೀತು" ಸಂದೇಹದಲಿ
ಗೊಣಗಲು. "ಸ್ವಲ್ಪ ಗಂಗಾಜಲವ ಕುಡಿ" ಎಂದರು
ತಾಯಿ. ಅದಕು ವಿಶ್ವಾಸವಿರದೆ ಅಸಮಾಧಾನಗೊಂಡ
ಆ ಮಡಿ ಹೆಂಗಸಿಗೆ ಮನದಲ್ಲಿ ಗಲಿಬಿಲಿ.

"ಹಾಗಿದ್ದರೆ ನನ್ನ ಮುಟ್ಟು"-
ಮಾತೆಯ ಈ ಮಾತೆ ಮಿಂಚಿನೊಲು ತಾಗಿ
ತಟ್ಟನೆ ಹೋಗಿ ಮುಟ್ಟಿದಳು.
ಸಂಪ್ರದಾಯದ ಕಿಲುಬು ತೊಳೆದು
ಹೃದಯದ ಪಾತ್ರೆ ಹೊಳೆದು
ಅನುಭವದಡಿಗೆಗಾಕೆ ಅಣಿಯಾದಳು.

## ಭಾವ-ಚಿತ್ರ-ಬದುಕು-೧

ಏನೆಲ್ಲ ಒಳಗಿಟ್ಟು, ನಗೆಯ ಚೌಕಟ್ಟಿನಲಿ
ಕುಳಿತಿರುವ ಭಾವಚಿತ್ರಗಳ ಹಿಂದಿನ ರಟ್ಟು-
ನಾಲ್ಕು ಗೋಡೆಗಳ, ಮೂಲೆಗಳ ನಡುವಿನ ಗುಟ್ಟು
ಬಯಲು; ಕಿಡಕಿಯಾಚೆಗೆ, ಗಾಳಿಪಟ ದೂರದಲಿ
ಬಾನಿಗೇರಿದೆ ಉದಾರ, ಆಡಿ ವೀರೋಚಿತ
ಪಾತ್ರ, ಸುಸೂತ್ರ ಇಳಿವ ಲಕ್ಷಣ ಕಂಡು, ಮೆಲ್ಲ-
ಗೆಳೆದರೆ ನೆಲದ ಬಾಂಧವ್ಯಕ್ಕೆ ಚ್ಯುತಿಯಿಲ್ಲ.
ಕಂಡದ್ದು ಹೇಗೂ ಕಾಣಿಸಿಕೊಳ್ಳುವ ಸಂಕೇತ.
ವರ್ಣಚಿತ್ರದ ಹಿಂದೆ ವರ್ತಮಾನದ ಕುಂಚ
ಆಡುತಾಡುತ್ತಲೆ ಮೂಡುವ ಭವಿಷ್ಯದ ರೇಖೆ
ವಾಸ್ತವದಲ್ಲಿ ಕಲ್ಪನೆಗೆ ಶಾಖೋಪಶಾಖೆ:
ಅಲ್ಲಿಯೇ ಗೂಡುಕಟ್ಟುವುದು ಹಾಡಿನ ಪ್ರಪಂಚ.
ಅದಕಾಗಿ ಪ್ರಪಂಚದಿಂದಲೇ ಪಾರಮಾರ್ಥ
ಎಂದಿರಬೇಕು ಅನುಭಾವಿಗಳು; ಎಲ್ಲಿ ಸ್ವಾರ್ಥ?

## ಭಾವ-ಚಿತ್ರ-ಬದುಕು-೨

ಏಕರೇಖಾ ಚಿತ್ರದಲ್ಲು ಮೂಡಿಸಬಹುದು
ಭಾವಲೋಕದ ಅನೇಕಾನೇಕ ರೇಕುಗಳ.
ಲೋಲಕದ ನಿತ್ಯ ತೂಗಾಟದಲ್ಲಿ ಸಮತೋಲ-
ವಿರೆ, ಗೋಡೆ-ಗಡಿಯಾರದಲ್ಲಿ ಮುಳ್ಳು ತಿರುಗುವದು.
ದೇವಾಲಯದ ಗಂಟೆಗೂ ಇದಕು ಸಂಬಂಧ
ಉಂಟೆ? ತಿಳಿಯದು, ಹೊತ್ತಿನ ಕಡೆಗೆ ಗಮನವಿಡದೆ
ದುಡಿಯುವ ಜನಕೆ ಬಿಡುವಿಲ್ಲ. ಅದೇ ಮರ್ಯಾದೆ.
ಬುದ್ಧಿಜೀವಿಗೆ ಸದಾ ಸಿದ್ಧ ವಾದ-ವಿವಾದ.
ವ್ಯಂಗ್ಯ ಚಿತ್ರಕ್ಕು ಇದೆ ಪಾತ್ರಾಪಾತ್ರ ವಿವೇಕ,
ಸದ್ಭಾವ, ಛಿದ್ರಾನ್ವೇಷಿಗದರದೆ ಅಭಾವ;
ತಿಳಿನೀರು ಕುಡಿಯದೆ ಕದಡಿ ರಾಡಿಗೊಳಿಸುವ
ರೂಢಿ; ಚುಚ್ಚಿದ್ದೆಲ್ಲ 'ಹಚ್ಚೆ' ಎನ್ನುವ ಕುಹಕ.
ಎಸೆದು ಕನ್ನಡಿ ಹರಳ, ಚೂರಿನಲಿ ಮುಖ ನೋಡಿ
ಮೀಸೆ ತೀಡುವ ವಿದೂಷಕ ನಾಯಕನ ಜೋಡಿ.

## ನಿಸರ್ಗ - ಮಾನವ

ಬಿರುಸಾದ ಭೂಮಿಯಲ್ಲಿಳಿದು, ಹಸಿಯು ಹತ್ತುವ-
ವರೆಗು ದೂರ ದೂರಕ್ಕೆ ಚಾಚಿ ಬೇರು, ಗಿಡದ
ಅಸ್ತಿತ್ವಕ್ಕೆ ಹೋರಾಡಿ, ಕೊನೆಗೂ ಪಡೆದ
ನೀರು ಬಾಳಿನ ತವರು; ಪ್ರೀತಿ-ಮೈತ್ರಿಯ ಪರ್ವ.
ಚೈತ್ರದ ಚಿಗುರು ಸೃಷ್ಟಿಶಕ್ತಿಯಾವಿಷ್ಕಾರ.
ಸುಖ-ದುಃಖ ಉದಯಾಸ್ತ, ಹುಟ್ಟು-ಸಾವಿನ ಹಾಸು-
ಹೊಕ್ಕಿನಲಿ ವಿಶ್ವವಿಲಾಸ, ಕನಸ ಕಂಡರಿಸು
ಪೂಜಿಸು, ಉಪಭೋಗಿಸು, ಬದುಕನರಳಿಸು ಪೂರ.
ನಿನ್ನಿಂದ ಆಚೆ ನೋಡುವ ದೃಷ್ಟಿ ಪಡೆವರೆಗೆ
ಹೀಚಿ ಕೈಬಿಡುವಾಟ, ದ್ವಂದ್ವದಲಿ ಜೀವನದ
ನೆಲೆ ಕಲೆಯಾಗಿ ಮಾಗಿಸುವ ದಿವ್ಯಾನುಭವದ
ಹದಕ್ಕೊರಗಿ ಓಗೊಡು ಅಂತರಂಗದ ಕರೆಗೆ.
ನಿಸರ್ಗ ಗುರುತಿಸದು ಒಳಿತು-ಕೆಡುಕಿನ ಭೇದ
ಭಾವದ ವಿಕಾಸದಲಿ ಮಾನವಗದರ ಸ್ವಾದ.

## ಸರಳತೆ

ಶ್ರೀಶಾರದಾದೇವಿ
ಕಲ್ಕತ್ತೆಗೆ ಮೊದಲ ಸಲ ಹೆಜ್ಜೆಯಿಟ್ಟಾಗ
ಹದಿಹರಯದ ಯುವತಿ.
ಹಳ್ಳಿಬದುಕಿನ ಸರಳ ಸಾಕಾರ ಮೂರ್ತಿ.
ನಗರದ ಮನೆಯೊಂದರೊಳಗೆ ಇವರು ಅತಿಥಿ.
ಒಮ್ಮೆ ಸ್ನಾನದ ಕೋಣೆಯಲ್ಲಿ
ಇವರು ತಿರುಗಿಸಲು ನಲ್ಲಿ
'ಹಿಸ್' ಎಂದಿತು ಒಂದು ಹನಿಯೂ ಬರದೆ-
ಗಾಬರಿಗೊಂಡು ಓಡಿಬಂದರು ಹೊರಗೆ,
ಹೇಳಿದರು ಅಲ್ಲಿ ಕೂಡಿದ ಹೆಣ್ಣುಮಕ್ಕಳಿಗೆ;

"ಹಾವು ಸೇರಿಕೊಂಡಿದೆ ನೋಡಿ ಆ ನಲ್ಲಿಯೊಳಗೆ!"
ಕೇಳಿ ಅವರೆಲ್ಲ ಬಿದ್ದು ಬಿದ್ದು ನಕ್ಕರು, ಕೊನೆಗೆ
ವಿಷಯ ತಿಳಿದು ತಾವೂ ನಕ್ಕರು ಅವರ ಜೊತೆಗೆ,
ನಾಚಿಕೊಳಲಿಲ್ಲ ತಮ್ಮ ಅಜ್ಞಾನಕ್ಕೆ;
ಅವಮಾನವೆಂದು ಕೂಡ ಭಾವಿಸಲಿಲ್ಲ
ಅಂಥ ಮುಗ್ಧೆ.

ಶ್ರೀರಾಮಕೃಷ್ಣರು ಶಿಷ್ಯರಿಗೆ ಹೇಳುತ್ತಿದ್ದರು ಸದಾಕಾಲ
"ಮನುಷ್ಯ ಸರಳನಾಗುವುದು ಅನೇಕ ಜನ್ಮಗಳ ತಪಸ್ಸಿನ ಫಲ."

## ಬೀಜಾಸುರ

೧

ಕೈತೋಟದಲ್ಲಿ
ಚಂದಕ್ಕೆ ಹಚ್ಚಿದ ಪಾಪಾಸು ಕಳ್ಳಿಗೆ
ಥೇಟು ಮನುಷ್ಯನದೆ ಆಕಾರ.
ಮಕ್ಕಳು ತೆಗೆವ ರಬ್ಬು ಚಿತ್ರ.

ನನಗೆ ನೆನಪಿರುವಂತೆ
ನಮ್ಮ ಗ್ರಾಮದ ಸುತ್ತು ರಾಕ್ಷಸನಂತೆ
ಬೆಳೆದು ಹಬ್ಬಿರುವ ಡಬಗಳ್ಳಿ-
ಮೈತುಂಬ ಸೆಟೆದ ಮುಳ್ಳು
ಅಂಗೈದಪ್ಪದೆಲೆಗೆ ತುಂಡು ಬೆರಳುಗಳಂತೆ
ರಕ್ತಗೆಂಪಿನ ಹಣ್ಣು.
ಹಾವು ಹರಿದಾಡಿರುವ ಠಾವು.
(ಅಲ್ಲೇ ದಾರಿ ಮಾಡಿಕೊಂಡು ಹೋಗುತ್ತಿದ್ದರು
ಜನ ದಿನಾ ಬೈಲು ಕಡೆಗೆ)
ಅಂಥ ಬಂಧನದಲ್ಲು ಅಲ್ಲೊಂದು
ಇಲ್ಲೊಂದು ಮುಳ್ಳು ಕಳ್ಳಿಗೆ
ಒಳ್ಳೆ ಜೇನು ಕಟ್ಟಿದ ಹುಟ್ಟು-
ಒಟ್ಟು ಎಳೆಯ ಮನಸಿಗೆ ನಿಗೂಢ.

ಯಾರು ಕಂಡು ಹಿಡಿದದ್ದೊ
ತಂದುಬಿಟ್ಟರು ಸಣ್ಣಗಿನ ಅಚ್ಚಬಿಳಿಯ ಹುಳ
ಡಬಗಳ್ಳಿ ಪೊದೆಯೊಳಗೆ.
ದಿನ ದಿನಕ್ಕೆ, ನಿಮಿಷ ನಿಮಿಷಕ್ಕೆ ಬೆಳೆದು
ಹುಳದ ಸಂತಾನ, ಹೀರಿದವು.
ಆಮೂಲಾಗ್ರ ಕಳ್ಳಿ ಸಸ್ಯದ ಜೀವರಸ-
ಒಣಗಿ ಅಸ್ಥಿಪಂಜರವಾಗುವವರೆಗೆ.
ಉರುವಲಾದವು ಗುಡಿಸಲುಗಳಲ್ಲಿ ಒಲೆಗೆ,
ಊರ ಬಯಲಲ್ಲಿಮಾತ್ರ
ನೆಲಕ್ಕಂಟಿ ಹಬ್ಬಿದ ಹಾದರಗಿತ್ತಿ ಮುಳ್ಳು
ಆದರಿಸುತ್ತವೆ ತುಳಿದವರನೀಗಲೂ.

೨

ಹಳ್ಳಿ ಪಟ್ಟವೆನದೆ ಈಗ
ಎಲ್ಲೆಂದರಲ್ಲಿ ಕಣ್ಕೆಸುರು ಪಾರ್ಥೇನಿಯಂ
('ಕಾಂಗ್ರೆಸ್‌ಕಸ'ವೆಂದು ಬೇರೆ ಹೆಸರು ಕೊಟ್ಟಿದ್ದಾರೆ-
'ಇಗೋ ಕನ್ನಡ'ದಲ್ಲಿ ನೋಡಬೇಕು)
ಮುಳ್ಳಿಲ್ಲ, ಬಿಳಿಯ ಹೂಗಳು ಬೇರೆ; ಹಬ್ಬಿ
ಹರಡುತ್ತಲೇ ಇದೆ ರಾಜಾರೋಷವಾಗಿ
ಲಂಚ ರುಷುವತ್ತಿನಂತೆ.
ಮುಟ್ಟುವುದು ಒತ್ತಟ್ಟಿಗಿರಲಿ, ಇದರ ಮೇಲಿಂದ
ಬೀಸುವ ಗಾಳಿ ಸೋಕಿದರು ಕೂಡ
ಅಪಾಯ, ಎಂಥದೊ ಅಲರ್ಜಿ,
ಮತ್ತಾವುದೊ ರೋಗರುಜಿನ,
ಬೇರುಸಹಿತ ಕಿತ್ತು ಸುಟ್ಟರೆ ಮಾತ್ರ
ಸಾಯಬಹುದು ಈ ಬೀಜಾಸುರ.
ಇಲ್ಲದಿದ್ದರೆ, ಹೊಸ ಸಹಸ್ರಮಾನದ
ಪ್ರಗತಿ ಪುರುಷನಿಗೆ
ಇದೇ ತುರಾಯಿ.

## ಯಾವ ಪುರುಷಾರ್ಥಕ್ಕೆ ?

ವರುಷಕ್ಕೊಮ್ಮೆ ಹೊಸ ಕವಿತೆ ಹೊಮ್ಮಿಸುವ ಪ್ರಕೃತಿ
ಶಬ್ದವಿಲ್ಲದೆ ಬಾಡಿದೆಲೆ ಕಳಚಿ, ಬೋಳಾಗಿ
ಟೊಂಗೆಗಳ ಅಂಗವಿಕಲತೆಯಲ್ಲಿನಿಸ್ಸಂಗಿ.
ಬಟಾಬಯಲು ಪಟದಲ್ಲಿ ಸ್ಪಷ್ಟವಿರದಾಕೃತಿ.
ಸುಂಟರಗಾಳಿಗೆದ್ದ ಕೆಂಧೂಳಿ, ಕಪ್ಪು ಮೈ-
ಬೆವರಿಗಂಟಿದ ರಸ್ತೆ-ದುರವಸ್ಥೆ; ದುರಸ್ತಿಗೆ
ತೆರೆದ ಚರಂಡಿಗಳ ನೀರು ಹೊಸ್ತಿಲವರೆಗೆ.
ಮುಂಗಾರು ಬಂಡೆದ್ದು ನೋಡಬಹುದೊಂದು ಕೈ.
ಎಲ್ಲಿಂದ ಕೈಹಚ್ಚಲಿಹುದೊ ಏರಿದ ಹುಚ್ಚು
ಇಳಿಸಲಿಕೆ, ಕಾಣದಿದೆ ಸ್ವಚ್ಛಗೊಳಿಸುವ ಪೊರಕೆ.
ಕುಸಿದಿಹುದು ಇಲಿ, ಹೆಗ್ಗಣಗಳ ರಾಜ್ಯಭಾರಕೆ
ನೀತಿ-ನೆಲೆಗಟ್ಟು, ಕೈಗೆಟುಕದಾಗಿದೆ ಸ್ವಿಚ್ಚು
ಚೈತ್ರವನ್ನು ಕೂಗಿ ಕೂಗಿ ಕರೆತರುವ ಕೋಗಿಲೆ
ಯಾವ ಪುರುಷಾರ್ಥಕ್ಕೆ ನಮ್ಮೀ ಕೊಂಬು ಕಹಳೆ?

## ನಿಯಮ - ಸಂಭ್ರಮ

ಗಾಳಿಯಲಿ ಗಿರಿಗಿರಿ ತಿರುಗಿ ಉದುರಿದೆಲೆ ರಾಶಿ
ಗಾಸಿಗೊಳಿಸದೆಯೆ ಮೆಲ್ಲಗೆ ಗುಡಿಸಿ ನೀರೆರೆಯೆ
ಒಂದೊಂದು ಗಿಡದ ಬುಡದಲ್ಲು ಹೊರಬೀಳುತಿವೆ
ಕಟ್ಟಿರುವೆ; ತಂಪು ವರ್ತುಲದೊಳಗೆ ಗುಂಪಾಗಿ
ಮರುಗಳಿಗೆ ಸರಳ ರೇಖೆಯ ಸಾಲು, ಗುರಿ ತಲುಪಿ
ಬರುವ ಅವಸರ ನಡಿಗೆ; ಬೇರು-ಕಾಂಡದ ರುಚಿಗೆ,
ಮೇಲೆ ಚಿಗುರೆಲೆಗೆ ಹೊಂಬಿಸಲ ಹೊಗರು, ನಂಬಿಗೆ-
ಯಿಟ್ಟು ಗೂಡು ಕಟ್ಟಿದೆ ವಲಸೆ ಬಂದಿಹ ಹಕ್ಕಿ-
ಎತ್ತರದ ತೆಂಗಿನೊಳಗೆಳ ನೀರು ತುಳುಕದಿದೆ.
ಇಲ್ಲೆ ಹತ್ತಿರದ ಬಾಳೆ ಇಷ್ಟಗಲ ಹರಡಿ
ಸಫಲವಾಗಿದೆ ಕೊನೆಗೆ. ಮಾಮರದ ತುಂಬ ಮಿಡಿ.
ಈಗ ಕುಡಿವಡೆದ ಮಲ್ಲಿಗೆ ಮೊಗ್ಗು ಹಿಗ್ಗಲಿದೆ.
ಉದ್ದಕ್ಕು ಸಿದ್ಧಗೊಳ್ಳುವದೆ ಸೃಷ್ಟಿಯ ನಿಯಮ.
ಬದ್ಧತೆಯ ಮೀರಿ ಬುದ್ಧಿಯಾಚೆಗಿದೆ ಸಂಭ್ರಮ.

## ಬೆಳಗಿನ ಭೆಟ್ಟಿ
## ('ಎನ್ಕೆ'ಯವರೊಂದಿಗೆ)

ಬೆಳಗಿನ ವಿಹಾರದಲ್ಲಿಲ್ಲ 'ಮುಂಗಾಲ್ ಪುಟಿಗೆ'
ಎಂಟು ದಶಕವ ದಾಟಿ ಹಗುರು-ಹೆಜ್ಜೆಯ ನಡಿಗೆ.
ಕುಂಟು ನೆಪಕೇಳಲೇಬೇಡಿ, ನಿಷ್ಕಲ್ಮಷ ನಗೆ,
ನಾರಣಪ್ಪನ ಕೃಷ್ಣಸ್ತುತಿಯಿಂದ ಬೆಚ್ಚಗಿದೆ
ಸುತ್ತಿರುವ ಸ್ಕಾರ್ಫು, ಹಿಡಿದ ಕೊಡೆಗೆಷ್ಟೊಂದು ಮಳೆ-
ಬಿಸಿಲು! ಅದರದೇ ದೊಡ್ಡ ಕಥೆ; 'ನಾನಿಯ ನೆನಹು.'
ಏಕಾಂಕದಲಿ ನಕ್ಕು, ಏಕಾಂತದಲಿ ಅತ್ತು
ಹರಟೆ ಹೊಡೆದಾಗ ಪೂರ್ಣಾಂಕ, ಸಂಗೀತದಲೆ-
ಯಲ್ಲಿ ಸಂತಸ -ಲೀಲೆ, ಎಡಬಲದಿ ಜೋಲಿ ಹಿಡಿ-
ಯಲು ಬೇಂದ್ರೆ-ವಿನಾಯಕ; ಅರವಿಂದರಿಗೆ ನಮನ.
ಜುಳು ಜುಳು ಹರಿವ ಝರಿಯಂತೆ ಬರೆವುದೇ ಧ್ಯಾನ.
ಅಪೇಕ್ಷೆ -ಉಪೇಕ್ಷೆಗಳಾಚೆ ಎಲ್ಲೊ ಬಾನಾಡಿ-
ಹಾಡು ಕಿವಿಗಿಳಿದಾಗ ಮರೆವುದೆಲ್ಲ ವಿಷಾದ
ತಕ್ಷಣ ತೆರೆವುದಂತಃಕರಣ; ಮಾನಿಷಾದ.

## ಮೂರಾಬಟ್ಟೆ

ಹುಲ್ಲು-ಕಸ ಕಿತ್ತು ಹಸನಾದಾಗ ಹೂಗಿಡದ
ಅಸ್ತಿತ್ವಕ್ಕೆ ಕಳೆ, ಹೊಲ-ಗದ್ದೆ ಮದ್ಯದಿ ಹುಲು-
ಸಾದ ಬೆಳೆ, ಮಳೆ ಬಂದು ನೆನೆಸಿ ಜೀವದ ಗೆಲವು
ಚೆಲುವಾಗಿ ಅಚ್ಚ ಮಾನಸದಿ ಭಾವದುಕ್ಕಂದ.

ಕೊಳೆ ಕೊಚ್ಚಿ ಹರಿದ ಸಂತಸವೆಲ್ಲ ನಾಲ್ಕುದಿನ.
ಮತ್ತೆ ಮುಚ್ಚಿದ ಗುಂಡಿ ತೆರೆದು ಹರಡಿದ ಕೊಚ್ಚೆ
ಸೊಳ್ಳೆ ಪರಿವಾರ, ವಾಹನವನೆತ್ತೆತ್ತಿ ಒಗೆ-
ದು, ಹೊಟ್ಟೆ ಹುಣ್ಣಾಗಿಸುವ ಬಟ್ಟೆ, ಆಕ್ರಂದನ.

ಎಲ್ಲರೂ ನಿತ್ಯ ನಡೆದಾಡಿದರು ಯಾರಿಗೂ
ಸೇರದ ದಾರಿ, ದುರಸ್ತಿಗೆ ಕಾದು ಕುಳಿತಿಹರು.
ಅವಸರದಲ್ಲಿ ದಾಟಿ ಹೋದದ್ದೆ ಬಂತು ಮರು-
ವಿಚಾರಕ್ಕಾಸ್ಪದ ಅಪಘಾತವಾಗುವವರೆಗು.

ಇಷ್ಟಕ್ಕು ದೇವದೂತನೆ ಬರಲೆಂಬ ದೂರು.
ದುಷ್ಟಸಂಹಾರ ಸರಿ; ಎಲ್ಲಿದ್ದಾರೆ ಶಿಷ್ಟರು ?

## ಅವಸ್ಥೆ

ಸಂಜೆ ಸೂರ್ಯನ ಬಿಂಬ ಪ್ರಜ್ವಲಿಸಿ ಪ್ರಶಾಂತ
ಕೆಳಗಿಳಿದ ನಂತರ ಮಬ್ಬು, ಸಂತಸ ಶೂನ್ಯ
ಗಳಿಗೆಯಲಿ ನೆನಪಿನಾಳದಿ ಮುಳುಗಿ, ಅನ್ಯೋನ್ಯ
ಸಂಬಂಧಗಳ ಕೊಂಡಿ ಕಳಚಿ ಚಿಂತಾಕ್ರಾಂತ.

ಅಂಗಾಲು ಜುಮ್ಮೆಂದು, ತಲೆಹಿಡಿದು, ಬಾಯಾರಿ
ವಿಲಕ್ಷಣ ಸ್ಥಿತಿಗೆ ಸಂದ, ನಂಬುಗೆಯ ಮಂದ
ಮುಸುಕಿನ ನಡುವೆ ಧ್ಯಾನಸ್ಥ ಚಿಕ್ಕೆ-ದಿಗ್ಬಂಧ.
ಮೆಲ್ಲಗೆ ನಸುಕು ಹರಿದು ಬೆಳಕು ನಿದ್ದೆಯ ಬುಗುರಿ.

ಖಿನ್ನತೆಯ ಕುಸಿತದಿಂದೆದ್ದಿಹ ಹಸನ್ಮುಖಿದಿ
ಹೊಂಗಿರಣ ಕೈಚಾಚಿ ಬಾಚೆ ಜಗವ ತಬ್ಬುವ
ತವಕ, ಹೂಹೂವ ಬಣ್ಣದಿ ಕಂಪು ಕಲಸಿರುವ
ಗಾಳಿ ತೀಡಿ, ಹಕ್ಕಿ-ಹಾಡಿಗೆ ಸೃಷ್ಟಿ ನೆಮ್ಮದಿ.

ಸುತ್ತಮುತ್ತಲು ಮತ್ತೆ ಪ್ರೀತಿ ಮುತ್ತಿನ ಮಾಲೆ.
ದೌರ್ಬಲ್ಯದರಿವಿದ್ದು ಗೆದ್ದ ಹೃದಯದ ಲೀಲೆ.

## ಸೌಂದರ್ಯ ಸ್ಪರ್ಧೆ

ಸೃಷ್ಟಿ-ಸಂದರ್ಭಕ್ಕೆ ರೂಪ ಅಸ್ಪಷ್ಟ; ದೃಷ್ಟಿ
ತಾಗುವದೆಂದು ಸೆರಗು ಮರೆಮಾಡುವಳು ತಾಯಿ;
ಬಗಲೊಳಗಿರುವ ಕೂಸು ಹಗಲು ಬೆಳಕಿಗೆ ಬಾಯಿ
ಬಿಡುವಂತೆ, ತೆರೆದು ಬಟ್ಟಲುಗಣ್ಣು ಬಿಗಿಮುಷ್ಟಿ-
ಯೊಳಗೆ ಹಿಡಿದಿದೆ ಗುಟ್ಟು, ಕಣ್ಣು, ಮೂಗು, ಗಲ್ಲದ
ಗುಳಿ-ಎಲ್ಲ ಚೆಲುವೆ; ಅತ್ತು ರಂಬಾಟ ಮಾಡುವ
ಆಟವೂ, ರೂಪಸಿಗು ಒಳಗೆ ಬಡಿದುಕೊಳ್ಳುವ
ಹೃದಯ, ಕೈಕೊಂಡ ಕಾರ್ಯಕೌಶಲ ಮೈ-ಮನದ
ಸೌಂದರ್ಯ ಶಿಖರ, ಅಲ್ಲಿಂದಲೇ ದೂರ ಗುರಿ-
ಯೆಡೆಗೆ ಸಾಗುವ, ದಾಹ ತಣಿಸುವ ನದಿಗಳುಗಮ.
ಎಲ್ಲರೊಡಲೊಳಗು ಕಡಲು- ತೆರೆ ನೊರೆಯ ಸಂಭ್ರಮ.
ಮೇಲೆ ನೀಲಾಗಸದಿ ಮೇಘಶಿಲ್ಪದ ಕುಸುರಿ.
ಸ್ಪರ್ಧೆಯರಿಯದ ವಿಶ್ವಸೌಂದರ್ಯ ಸ್ವಚ್ಛಂದ
ಬುದ್ಧಿ ಚತುರತೆ ಕೊಂಚ ತಿದ್ದಿತೀಡಿದ ಗಂಧ.

## ದಂತಪಂಕ್ತಿಯ ನಡುವೆ

ದಂತ ಪಂಕ್ತಿಯ ನಡುವೆ ಎಂತಿರ್ಪುದದು ಜಿಹ್ವೆ?
ಕಚ್ಚಿ ಕಡಿದದ್ದನ್ನು ಮೆಚ್ಚಿ ಮೆಲ್ಲಗೆ ಎಳೆದು
ಮೆತ್ತಗಾಗಿಸಿ ಘನವ, ರಸವತ್ತಾಗಿ ಸವಿದು
ಭಿನ್ನರುಚಿಗಳಿಗವಿಚ್ಛಿನ್ನ ಸೆಲೆಯಾಗಿರುವೆ.

ಹೊಟ್ಟೆ ಕೆಟ್ಟರೂ, ಮಾತಿನಲಿ ಭಟ್ಟಿ ಕೆಟ್ಟರೂ
ಬರುವ ಅಪವಾದಕ್ಕೆ ಗುರಿಯಾಗಿ, ನುರಿಯಾಗಿ
ಹಿಂಡಿ ಒಣಗಿಸುವೆ-ಎಲ್ಲದಕು ಅಣಿಯಾಗಿ.
ಆಡಿದ್ದು ತಿರುಗಿ ಬಾರದು ಏನು ಕೊಟ್ಟರೂ.

ಒಂದೊಂದಾಗಿ ಹಲ್ಲು ಬೀಳುತ್ತ ಹೋದಂತೆ
ನುರಿಸುವದು ಕಷ್ಟ, ಕಟುವಾಸ್ತವ ಪದಾರ್ಥಗಳ,
ಉಚ್ಚರಿಸುವದುಕೂಡ, ಉಳಿದಷ್ಟು ದಂತಗಳ
ಬಳಸುವಾಗಲು ಹೊಡೆತ ಬೀಳುವುದು ನಾಲಗೆಗೆ.

ಹುಟ್ಟಿಸಿದವನಿಗೆಲ್ಲಿ ಕಟ್ಟಿಸಿರುವ ಹಲ್ಲಿನ
ಪರಿವೆ? ನಮಗೂ ಇಲ್ಲ ಮೊದಲಿನ ಅಟ್ಟಹಾಸ.

## ಮೆರವಣಿಗಿ

ಸಾರೋಟು ಮೆಲ್ಲಕ ಸಾಗೇತಿ.
ಕುದುರಿಗೂ ರಗಡ ಸಿಂಗಾರ ಮಾಡ್ಯಾರ.
ಅದಕ ಅದರದs ನಡಿಗಿ
ರೂಢಿಯಾಗೇತಿ,
ನನಗ ಒಳಗೊಳಗ ಜೀವ ಚಡಪಡಿಸಿ
ಕಣ್ಣು ಒದ್ದಿ ಆಗ್ಯಾವ.
ಹೂವಿನ ಹಾರ
ಅದೆಷ್ಟು ಭಾರ!
ಶಬ್ದಗಳೆಲ್ಲಾ ಕರಗಿ
ಕಲಕ ಮಲಕಾಗಿ
ಕವಿತಾ ಅನ್ನೂದು ಮಂಜ್‌ಮಂಜಾಗಿ
ಮಟಾ-ಮಟಾ ಮಧ್ಯಾಹ್ನದಾಗ
ಕಿವಿಯೊಳಗ ಹುಂಜ ಕೂಗಿಧಾಂಗಾತು.

ಹತ್ತು ದಿಕ್ಕಿಗೂ ಕೈ ಮುಗದs ಮುಗಿತೇನಿ
ಆದರೂ ದಾರಿ ಸವಿವಲ್ಲದು.
ಜನ ಮರುಳೊ, ಜಾತ್ರಿ ಮರುಳೋ
ಯಾವುದೂ ಖಾತ್ರಿಯಿಲ್ಲ.
ಅವರಿಗಿರುವಷ್ಟು ಕರುಳು ಮೊದಲ ನಮಗs ಇಲ್ಲ.
ಇದ್ದ ಒಬ್ಬ ಮರುಳಯ್ಯನೂ
ಗದ್ದಲದಾಗ ಎಲ್ಲೂ ಕಾಣ್ತಾಯಿಲ್ಲ.

ನೆತ್ತೀ ಮ್ಯಾಲಿನ ಸೂರ್ಯ ತಿರುಗಿ
ಕುತಿಗೀ ಮ್ಯಾಲೆ ಬಂದ.
ಬೆವರೊರಿಸಿಕೊಂಡು ಹಗೂರಕ
ನಾನು ಇನ್ನ ಕೆಳಗಿಳೀಬೇಕು.
ಪೇಟಾ ತೆಗೆದು, ಒಂದು ಲೋಟಾ ನೀರು ಕುಡದು
ಮಂದ್ಯಾಗ ಒಂದಾಗಿ ಬಿಟ್ಟರ
ಆವಾಗ ನಿಶ್ಚಿಂತಿ.
ಅದೇನಃ ಇದ್ದರೂ
ನಿಮ್ಮ ಪ್ರೀತಿಗೆ ಏನೂ ಕೊಟ್ಟರೂ
ಎಷ್ಟು ಕೊಟ್ಟರೂ
ಕಡಿಮೀನಃ ಐತಿ.

## ಬೆಳಕು-ಬೆರಗು

೧
ಗಾಳಿ ಬೆರಳುಗಳಿಂದ
ಆ ಮಹಾಕಾಶವಿದೊ
ಸೋಕುತಿದೆ ಈ ನೆಲದ ಜಲದ ಮೈಯ;
ಪುಟ್ಟ ಎದೆ ಜಗದಗಲ
ಬಾಯ್ ಬಿಟ್ಟು ನೋಡುತಿದೆ
ಆಕಾಶಕೊಡ್ಡಿ ಕೈಯ.

೨
ಜಗದ ಪಾತ್ರೆಯ ಹರವು
ತೆರವಾಗಿ ತುಂಬುತಿದೆ
ವಿಶ್ವಗಾನದನಂತ ಸೆಲೆಗಳಿಂದ,
ಗಿರಿ ಕೊಳ್ಳಕಾನು ಆ
ಬಾನು, ಅದರೊಳು ನಾನು-
ನೀನು ತಿಂಗಳ ಜೇನು ಹನಿಗಳಿಂದ.

೩
ನೆಳಲು–ಬೆಳಕಿನ ಹಿಂದೆ
ಸುಳಿವು ಹಿಡಿಯುತ ಬಂದು
ಕಣ್ಣು ಕೊರಳಿಗೆ ತಾಗಿ ಮಿಂಚು-ಬೆರಗು;
ಯಾರು ಹಾಯದ ಹಾದಿ-
ಯಲ್ಲಿ ಕಾಯುತ ನಿಂತೆ
ಮುಂಜಾವೊ ಸಂಜೆಯೊ-ಅರಳು ಮರಳು.

೪
ಬಾನು ಬಗೆ ತೆರೆದು
ಭರವಸೆಯ ನರುಗಂಪಿನಲಿ
ನಗೆ ತೂರಿ ಬರುವಾಗ ಜೀವ ಬೆರಗು;
ಮೋಡ ಮೋಡಗಳಲ್ಲಿ
ಬೆಳಕು-ಬಂಗಾರ ಹುಡಿ
ನೋಡ ನೋಡುತ ಸುರಿಯಿತೆಲ್ಲ ಕಡೆಗು.

## ನಮ್ಮ ತಿಮ್ಮಕ್ಕನಿಗೆ

ನಮ್ಮ ತಿಮ್ಮಕ್ಕನಿಗೆ ನೂರಾರು ಮಕ್ಕಳೆಂ-
ದರೆ ಯಾರು ನಂಬುವರು ? ಕಲ್ಲು ಒಡೆದು ಪಡೆದ
ಪುಡಿಗಾಸಿಗೆ ಗಂಡನ ಕೂಲಿ ಬೆರೆಸಿ, ಗಂಜಿಯ
ಕುಡಿದು, ಆ ಬಂಜೆ ಎನ್ನುವ ಶಬುದಕಂಜಿದಳೆ?

ಚಿಲುಮೆ ಚಿಮ್ಮಿತು ಎದೆಯ ವಾತ್ಸಲ್ಯ. ಯಾರಿಗೂ
ಹೊಳೆಯಲಾರದ ಕನಸು ಈ ದಲಿತ ದಂಪತಿಗೆ;
ತಮ್ಮೂರ ದಾರಿಯುದ್ದಕ್ಕು ಎರಡೂ ಬದಿಗೆ
ನೆಟ್ಟು ಬೆಳಸಿದರು ಆಲದ ಸಸಿಯ ನೂರಾರು-
ಎಡೆಬಿಡದೆ ಎರೆದು ಪ್ರೀತಿಯ ಧಾರೆ, ಸಾಲು ಮರ-
ಗಳ ನೆರಳಿನಾಚೆ ಅವಳೊಬ್ಬಂಟಿ, ನೋಡುವಳು
ಹಿಂಗದಕ್ಕರತೆಯಲಿ, ಗೌರವ, ಪ್ರಶಸ್ತಿಗಳು
ಸುಸ್ತಾಗಿ ಇಳಿಸಿದವೆ ತಾಯ ಮಡಿಲಿನ ಭಾರ?

ವನಮಹೋತ್ಸವ ನಾಗರಿಕರಬ್ಬರದ ಹೆಸರು
ಸ್ವಯಂಪ್ರೇರಣೆ ಸದ್ದಿರದೆ ಎರೆಯುವ ನೀರು.

## ಜೀವನ : ನಾಟಕ

ಕಣ್ಣು ತೆರೆದರೂ ಕಂಡುಕೊಳ್ಳುವ ಇಚ್ಛೆ ಇರ-
ದಾಗ ಬರಿದೆ ತೇಲುವ ಮೋಡ ಗಾಳಿ ದೂಡಿದ
ಹಾಗೆ. ಮಳೆ ಹನಿಗಳುದುರಿ ಬಯಲಾಗೆ ಬಿಸಿಲಿನ
ಹೊಳಪು; ಈಗಿದು ಕನಸೊ ನನಸೋ ಎಂಬ ತೆರ.

ನಡೆದುಹೋದದ್ದನ್ನು ನೆನೆಸಿಕೊಳ್ಳಲು ನಡುವೆ
ಅಂಕಪರದೆ. ಮುಂಬರುವ ಪಾತ್ರಗಳ ಸಿದ್ಧತೆ
ಮರೆಗೆ, ಎಲ್ಲರಿಗು ಪ್ರದರ್ಶನದ ಕಾತರತೆ,
ಪ್ರೇಕ್ಷಕರಿಗಿನಿತಿಲ್ಲ ಹೊರಜಗತ್ತಿನ ಪರಿವೆ.

ನೋಡು ನೋಡುತ್ತ ಮುಗಿದೇ ಬಿಟ್ಟಿತಲ್ಲ ಕಥೆ-
ಯೊಂದಿಗೆ ಆ ಹಾಡು, ನೃತ್ಯ, ನಟನೆ ಏಕರಸ-
ವಾಗಿದ್ದ ಮನಸಿನ ಜಗದಗಲ ಚಿಂತೆ, ವಿರಸ-
ಆದರೂ ಒಳಗುಳಿದು ಬಿಟ್ಟಿತಾವುದೊ ವ್ಯಥೆ.

ಒಬ್ಬೊಬ್ಬ ವ್ಯಕ್ತಿಯೊಳಗೊಂದು ಅದ್ಭುತ ಲೋಕ
ಕಂಡಾಗ, -ನಾಟಕ ನೋಡಿದ್ದಕ್ಕು ಸಾರ್ಥಕ.

## ಡಾ. ಎಚ್.ಟಿ. ಸಾಸನೂರ ಅವರನ್ನು ನೆನೆದು

ಅಭಿಮಾನದದ್ದೂರಿ ಅಭಿನಂದನದ ಸುದ್ದಿ
　　　ಕಿವಿಗೆ ಬಡಿಯುವ ಮೊದಲೆ ಬಡಿಗೆ ತೋರಿಸಿ, ತಲೆಯ
　　　ಕೊಡವಿದಿರಿ. ಅಧ್ಯಯನ-ಅಧ್ಯಾಪನದ ನೆಲೆಯ
ಕಂಡು ಮುದಗೊಂಡು, ಬದುಕಿಗೆ ಅದೆ ಒಂದು ಸಿದ್ಧಿ
ಎನುವಂತೆ ಮಿನುಗಿತ್ತು ಮೊಗದ ಕಳೆ, ಒಳಗೊಂದು-
　　　ಹೊರಗೊಂದು ಇರದೆ ಹೊರಹೊಮ್ಮಿ ಬರುವ ಮಾತಿನ
ಜೊತೆಗೆ ಮುಕ್ತ ನಗೆ; ಬೆಳೆವವರ ಬೆನ್ನು ತಟ್ಟುತ
ಹೊಳಹುಗಾಣಿಸುವ ಬಗೆ; ಅಮೃತದ ಬಿಂದು ಬಿಂದು.

'ಗೀತಾಂಜಲಿ'ಯ ಕವಿಯ ಕೃತಿಪುಷ್ಪಗಳ ಬಂಡ-
ನುಂಡು, ಎದೆಯಾಳದಲಿ ಜೇನು ಕಟ್ಟಿದ ಹುಟ್ಟು;
ಸದ್ವಿರದ ಹೆಜ್ಜೆಯಲಿ ಬೆಳಕು ಬರುತಿಹ ಗುಟ್ಟು-
ಬಲ್ಲ ಅನುಭಾವಿಗಳ ಬಟ್ಟೆಯೊಂದೆಳೆ ಹಿಡಿದ.
ಸರಳ ಸಜ್ಜನಿಕೆಗಳ ಗೃಹರಕ್ಷಕರ ದಳಪತಿ
ಪಂಚನದಿಗಳ ನಾಡಅನಧಿಕೃತ ಕುಲಪತಿ.

## ಮೋಡಗಳು

ಸೂರ್ಯ ಮುಳುಗುವುದನ್ನೆ ದಿಟ್ಟಿಸುತ, ಕಡುಗೆಂಪು
ಹೀರಿ, ಮೆಲ್ಲ ಬೆಟ್ಟದ ಬದಿಗೆ ತನ್ನಷ್ಟಕ್ಕೆ
ಅರಳುತ್ತ, ಮೇಲೇರಿ, ಆಕಾಶದಗಲಕ್ಕೆ
ಮೈಯನೀಡಾಡಿ, ಮಿಂಚಿದ ಮೋಡ; ನಸುಗಪ್ಪು
ಮುಸುಕನೆತ್ತಿ ಬೆಳಕಿನ ಕಚಗುಳಿಯನ್ನಿಟ್ಟು, ಅರೆ
ಚಣ ಕಣ್ಣುಮುಚ್ಚಾಲೆ, ಮಣ್ಣು ಕಣಕಣದಲ್ಲಿ
ಝುಣತ್ಕಾರ! ಹನಿಯೊಡೆದ ಸದ್ದಿಗೆ ತಂಗಾಳಿ
ತೀಡಿ ನೀಗಿತು ಭೂಮಿಯಂತರ್ಜಲದ ಅರಕೆ.
ಅಂತರಿಕ್ಷದಲಿ ಸ್ವಂತಸಾಮ್ರಾಜ್ಯ ನಿರ್ಮಿಸಿ
ಸರ್ವತಂತ್ರ ಸ್ವತಂತ್ರವೆನಿಸಿದರು, ಹನಿಯಿರದೆ
ಧ್ವನಿಯಿರದೆ, ಸಾಗಿ ಹೋಗುವುದುಂಟು ಗುರಿಯಿರದೆ-
ಮುಂಗಾರು, ಹಿಂಗಾರು, ಬರಿ ಸಿಂಗಾರವೆನಿಸಿ,
ಮಳೆಗರೆವ ಮೋಡಕ್ಕೆ ಕೊನೆಯಲಿ ನಿರಾಕಾರ
ವಿವಿಧ ಆಕಾರಗಳಿಗದುವೆ ಸಾಕ್ಷಾತ್ಕಾರ.

## ಕವಿಗಳಿಗೆ ಕರೆ

ಕವಿಗೋಷ್ಠಿಯ ಅಧ್ಯಕ್ಷ ಭಾಷಣ ಬಿಗಿದು
ಹೊರಬಿದ್ದಾಗ-
ಒಬ್ಬರ ಮೇಲೊಬ್ಬರು ಕವಿಗಳುಬ್ಬುಬ್ಬಿ
ಅಬ್ಬರದಿಂದ ಓದಿದ ಕವಿತೆಗಳನ್ನೆಲ್ಲ ಕೇಳಿ
ತಬ್ಬಿಬ್ಬಾದ ಸಭ್ಯ ಸಭಿಕನೊಬ್ಬ ದಾರಿಯಲ್ಲಿಯೆ

ನನ್ನ ತಡೆದು ಕೈಹಿಡಿದು ಕೇಳಿದ:
"ಕರೆ ಕೊಡಬೇಕಿತ್ತು ನೀವು ಭಾಷಣದಲ್ಲಿ ಕವಿಗಳಿಗೆ,
ಈ ರೀತಿ ಕೊರೆದರೇನು ಗತಿ ನಮ್ಮ ಕಿವಿಗಳಿಗೆ?
ಹಿತವೆನಿಸುತ್ತಿದ್ದಂತೆ ಎಲ್ಲೊ ಒಂದೆರಡು ಸಾಲು,
ಉಳಿದಂತೆ ಇವರು ಮಾಡಿದ್ದು ಮಾತ್ರ
ಇಡೀ ಸಿರಿಗನ್ನಡ ಕೋಶ ಪೋಲು.
ಕೆಲವಕ್ಕಂತು ಇರಲೇ ಇಲ್ಲ ಕೈ-ಕಾಲು;
ಗುಡುಗುಡು ಉರುಳಿಸಿದಂತಿತ್ತು ಗುಂಡುಕಲ್ಲು.
ನಡುನಡುವೆ ತೋಡಿಕೊಳ್ಳುವುದು ಬೇರೆ
ಕವಿತೆಯ ಹೆಸರಲ್ಲಿ ಉಸಿರು ಕಟ್ಟಿರುವ
ತಂತಮ್ಮ ತೀಟೆ, ತೆವಲು.
ಅಬ್ಬ, ಬಾರಿಸಿದನೊಬ್ಬ ದುರುಗಮುರುಗಿಯ ಡೋಲು-
ಆಗ ಅನಿಸಿತು, ನಮಗೂ ಇರಬೇಕಿತ್ತು
ಕೈಯಲ್ಲೊಂದು ಬಾರುಕೋಲು.
ವಾದ ವಿವಾದಗಳೇನೇ ಇರಲಿ, ಇದ್ದುದರಲ್ಲಿ
ನಮ್ಮ ಕವಯಿತ್ರಿಯರೇ ಸ್ವಲ್ಪ ಮೇಲು.

ಇರಲಿಲ್ಲವೆಂದಲ್ಲ ಒಂದೆರಡು ಹೃದಯ ತಟ್ಟಿದ ಪದ
ಹದಗೊಂಡು ಮನವನರಳಿಸಿ ಹರಡಿದ ಸುಗಂಧ.
ಅದೆಲ್ಲೊ ಬಾನ ಮೂಲೆಯಲಿ ಮಿಂಚಿ ಮಾಯವಾದಂತಿತ್ತು.
ಆಮೇಲೆ ಎಲ್ಲ ಕತ್ತಲೇ.
ಚುಟುಕು ಚುಟುಕಾಗಿ ಹಾರಾಡಿದ್ದು
ಮಿಣುಕು ಹುಳಗಳೇ.

ಕರೆ ಕೊಡುವ ಅವರ ಪ್ರಶ್ನೆಗೆ ನಿದಾನ ಉತ್ತರಿಸಿದೆ;
"ಅಂತರಂಗದ ಕರೆಯು ಬರುವವರೆಗೂ ಕಾದು
ಆಮೇಲೆ ಬರೆದರೆ ಅವರಿಗೂ ಮರ್ಯಾದೆ."
ಈ ತಗಾದೆಯ ನಡುವೆ ಬಾಯಿ ಹಾಕಿದನೊಬ್ಬ;
"ಕರೆ ಕೊಡುವುದಕ್ಕಿಂತ ಬರೆ ಕೊಡುವುದೆ ಲೇಸು.
ತ್ವರೆ ಮಾಡಿ" ಎಂದವನೆ ಗುಂಪಿನಲಿ
ಮರೆಯಾಗಿಬಿಟ್ಟ.

## ಅಚ್ಚ ಪ್ರತಿಭೆಯ ಹುಚ್ಚು

ಸ್ವೋಪಜ್ಞತೆಯ ರಂಗುದುಟಿ ನಡುವೆ ಮುಗ್ಧತೆಯ
ಮುಗುಳು ನಗೆ, ಕೊಂಕಿರದ ನೋಟ, ಕಾವ್ಯಕ್ಕೆ ಕಂ
ಬನಿಗರೆದ ಅಜ್ಜಿ ಅಂಬಕ್ಕನೇ ಮೈತುಂಬ.
ಅಂಬಿಕಾತನಯ 'ಕನಸಿಗ'ನ ಚಿತ್ತದ ಬಿತ್ತ.
ತಲೆಮೇಲೆ ಗಳಗನಾಥರ ಕೈ. ಕಿವಿದೆರೆಗೆ
ಸೂಕ್ಷ್ಮಸಂಗೀತ ಶೃತಿ, ಯಾರಪ್ಪನಿಗು ಎಟುಕ-
ದಿಹ ಹರಪ್ಪಕು ಚಾಚಿದ ಕೈ; ವಿಲಕ್ಷಣ ಎರಕ.
ಸೇವೆ-ಶಾಂತಿಯ ನಾವೆ; ಹುಟ್ಟು ಹಾಕದ ವ್ಯಥೆ.
ಪೂರ್ವದ ಸೂರ್ಯೋದಯವ ಕಾಣದೆ, ಪಶ್ಚಿಮದ
ಹಾದಿ ಹಿಡಿಸಿದವರಿಗೆ ಇವರು ನೂರು ಗಾವುದ
ದೂರ, ಹತ್ತಿರದ ಮಹತ್ತಿಗೆ ಅತ್ಯುತ್ಸಾಹ.
ವಿಮರ್ಶೆಗೆ ಮೊದಲು ಸಾಹಿತ್ಯ-ಅಭಿರುಚಿ ವಾದ.
ಅವ್ವ-ಮಾಯಿ-ಅವಧೇಶ್ವರಿ-ಯೇಟ್ಸ್-ಅವಧೂತ;
ಅಚ್ಚ ಪ್ರತಿಭೆಯ ಹುಚ್ಚಿಗಿದೊ ಈ ಪುಷ್ಪಗುಚ್ಛ.*

---

* ಡಾ. ಶಂಕರ ಮೊಖಾಶಿ ಪುಣೇಕರ ಅವರಿಗೆ

## ಡಾ. ಅಂಬೇಡಕರ ಕುರಿತು

೧

ಎಷ್ಟೊಂದು ಕರುಳು ಹಿಂಡುವ ಇರುಳು
ಯುಗ ಯುಗಗಳಿಂದ!
ಹಗಲನ್ನೆ ಕಾಣದ
ಕರಾಳ ಕತ್ತಲೆಯ ಲೋಕದಲಿ
ತಳಮಳಗೊಂಡ ದನಿಯಿರದ ಕೊರಳು.
ಹೇಗೊ ಕೆಸರಿಂದ ಕೊಸರಿ, ಉಸಿರು ಬಿಗಿ ಹಿಡಿದು
ಬಸಿರು ಹೊಸೆಯುತ್ತ ಕೈಚಾಚಿದರೂ
ದೊರೆಯಲಾರದ ಸ್ಪರ್ಶ.

ನಡು ಬಾಗಿ, ಕೊಳಚೆಗುಡಿಸಿ ದೂರ
ಮೂಲೆಯಲಿ ಕುಕ್ಕರು ಕೂತು
ಕೈಯೊಡ್ಡಿ, ಕಣ್ಣು ಪಿಳುಕಿಸುವ
ಧೂಮ, ಧೂಳ, ಕಾಳ, ದುರುಗ, ಕೊರಗ...

ಕೆರವು ಹೊಲಿದು ಕಾಲಿಗೆ ತೊಡಿಸಿ
ಬರಿಗಾಲಿನಲ್ಲಿ ನೆಲ ತುಳಿದು
ತಲೆ ಮೇಲೆ
ಹೊರಬಾರದುದ ಹೊತ್ತು-
ಮೇಲಿನವರ ಕರ್ಮದ ಭಾರ.
ಎಲ್ಲು ನೆಲೆಗಾಣದೆಯೆ, ಕಣ್‌ಕಪ್ಪಡಿಯಂತೆ
ಗೋಡೆ ಗೋಡೆಗೆ ಹಾಯ್ದು, ನೆತ್ತರು ಬಸಿಯುವಾಗ
ಸನಾತನ ಧರ್ಮ ಧಿಕ್ಕರಿಸಿ ಚಿಮ್ಮಿತು
ವಿನೂತನ ಕಿರಣ.
ಕೇರಿಕೇರಿಯ ಕಪ್ಪು ಹಣತೆಗಳಲ್ಲಿ
ಸ್ವಾಭಿಮಾನವು ಹೊಸೆದ ಬತ್ತಿಯಾಗಿ
ಕಣ್ಣು ಕಿಡಿಸೂಸಿ, ಮಾರಿಮಸಣಿಗಳು ಕೂಡ
ಮೆರವಣಿಗೆಯಲಿ ಘೋಷಣೆ ಕೂಗು:
ಹುಟ್ಟಿದವರೆಲ್ಲರೂ ಸಮಾನ ಹಕ್ಕುಳ್ಳವರು
ಬಾಳಿ ಬದುಕತಕ್ಕವರು.

೨
ಹುಟ್ಟಿದಾಗಲೆ ಮುತ್ತಿ ಮುಗಿಬಿದ್ದ ಮೋಡಗಳ
ತೂರಿ ಚೆಂಡಾಡಿ, ಹೊರಬಂದೆ ನಿಗಿನಿಗಿ ಕೆಂಡವಾಗಿ;
ಧರ್ಮಕರ್ಮದ ಹೆಸರಿನಲಿ ಅಧರ್ಮವನು ಬಿತ್ತಿ ಬೆಳೆದವರ
ನೆತ್ತಿಯ ಮೇಲೆ ತೂಗು-ಖಡ್ಗವಾಗಿ.
ಬಿದ್ದವರನೆದ್ದು ನಿಲ್ಲಿಸಿ, ಹದ್ದು ಮೀರಿದ ಶೋಷಣೆಗೆ
ಅರೆದ ಮದ್ದಾಗಿ, ಖುದ್ದಾಗಿ ನಡೆದೆ
ರಾಜಬೀದಿಯಲಿ ಮದ್ದಾನೆಯಾಗಿ
ಭರತಖಂಡದ ಖಂಡ, ಮಾಂಸ, ಗುಂಡಿಗೆಯ

ಬಿಸಿರಕ್ತ ಒಂದೆ; ಆದರೂ 'ಹಿಂದೂ' ಮುಂದೆ.
'ವರ್ಣ'ಗಳ ವ್ರಣಕ್ಕೆ ಶಸ್ತ್ರ ಚಿಕಿತ್ಸೆಯ ಮಾಡಿ
ಇಡಿಯ ಚರ್ಮಕ್ಕೆ ಹಾಕಿದೆ ತಕ್ಕ ಹೊಲಿಗೆ.
ಮುಟ್ಟಿಸಿಕೊಳ್ಳದವರ ಮುಟ್ಟಿ, ಮೈದಡವಿ
ಹೃದಯ ದೇಗುಲದ ಮೆಟ್ಟಿಲು ದಾಟಿ
ದೇವರಿಗೆ ಭೆಟ್ಟಿ ಮಾಡಿಸಿದೆ.
ಅವಕಾಶ ಒದಗಿಸದೆ, ಬರಿಯ ಆಕಾಶ ತೋರುತ್ತ ಬಂದ
ಆಷಾಢಭೂತಿಗಳನೆತ್ತಿ ಬೀಸಾಡಿದೆ.
'ದಲಿತ ಜನತೆಗೆ ಮಾತೃಭೂಮಿ ಎಲ್ಲಿದೆ?" ಎಂಬ
ಆರ್ತ ಭಾವದ ಪ್ರಶ್ನೆ ಗಾಂಧಿಯಂಥ ಮಾನವ ಸಂತ-
ನೆದುರು ಹಾಕಿಕೊಂಡಾಗಲೂ
ಹೃದಯದೌದಾರ್ಯಕ್ಕೆ ಮಾರುವೋದೆ.
ಆದಿಗ್ರಂಥಗಳ, ಮತ-ಪಂಥಗಳ ಧೂಳು ಕೊಡವಿ
ಅಕ್ಷರಸ್ಥರ ಆತ್ಮವಂಚನೆಯ ಸಂಚು
ಬಯಲಿಗೆಳೆದೆ.
ಬಲಗೈಯ ತೋರು ಬೆರಳೆತ್ತಿ, ಭವಿಷ್ಯದ
ತಾರೆ ತೋರಿಸಿ, ಹಣೆ ಬರೆಹ ತಿದ್ದಿ ಬರೆದೆ-
ಸಮಾನತೆಯ ಸಂವಿಧಾನ.
ಕರುಣೆ ಕಂಡರಿಸಿರುವ ಬುದ್ಧಸ್ಮಿತಕೆ ಬಾಗಿ
ಬೆಳಗಿದೆ ಮಾನವೀಯತೆಗೊಂದು ಜ್ಯೋತಿಯಾಗಿ.

ಬಾಬಾ, ಬಂದು ನಿಂತಿದ್ದಾರೆ ಇವರು
ನಿನ್ನ ಹೆಸರನು ಹೊತ್ತ ಬೀದಿ, ವರ್ತುಲಗಳಲ್ಲಿ
ಎತ್ತರದ ಪ್ರತಿಮೆಗಳ ನೆರಳಿನಲ್ಲಿ-
ಹತ್ತಾರು ಬಣಗಳಲಿ ಸಿಡಿದು, ಸಿಡಿಮಿಡಿಗೊಂಡು
ಕುಳಿತ ಬಂಡಿಯ ಕೀಲು ಕಳಚದಂತೆ
ಒಟ್ಟಾಗಿ ಬಂದು ತಳಿರು ತೋರಣ ಕಟ್ಟಿ
ನಡೆಯಬೇಕಿದೆ ಮುಂದೆ-
ತಮ್ಮ ಕಾಲಮೇಲೆಯೆ ತಾವು ನಿಂತು, ಸೋಲರಿಯದ
ನಿನ್ನ ಹಾದಿಯಲ್ಲಿ.

## ಮುಗಿಯದ ಹಾಡು

ಏಳು ಹತ್ತಲೆ ಎಷ್ಟು? ಮಗ್ಗಿ ಒಪ್ಪಿಸಿ ಆಗ
ನಾ ಪಾಸಾಗಿದ್ದೆ. ಮುಂದಿನ ಇಯತ್ತೆಗೆ ಬಿದ್ದೆ.
ಸಾವಕಾಶ ಎದ್ದೆ. ಸಿಕ್ಕದ್ದು ಓದಿದೆ, ಬರೆದೆ.
ದಕ್ಕಿದ್ದು ಅಷ್ಟೋ ಇಷ್ಟೋ. ಮಿಕ್ಕಿದ್ದು ಈಗ
ಈ ಬದುಕು, ಈ ಬಾಳೆ, ಚಿರಂತನ ಮಂಥನ.
ಅಂತಽನ ಈ ಹೊತ್ತಿನೊಳಗ ನಾವೆಲ್ಲ ಹೀಂಗ
ಕೂಡೀವೆಲ್ಲ;ಮರೆತು ಹಿಂದಿನೆಲ್ಲ ಜಂಜಾಟ-
ಬೇವು-ಬೆಲ್ಲ, ಇದೂ ಒಂದು ಹೊಸ ಯುಗಾದೀನಽ.
ಬಚ್ಚಬಾಯಿಲೆ ನಕ್ಕೋತ ಹಣ್ಣೆಲಿ ಹಾಂಗ
ಗಾಳಿಗೆ ತೇಲ್ತ, ಚಿಗುರು-ಮಗ್ಗಿ ಹಿಗ್ಗಿನ್ಯಾಗ
ನೆಲಕಿಳಿದು, ಮುಗಿಲಿಗೆ ಕೈಮುಗಿತಾವ. ಯೋಗ
ಕೂಡಿಬಂದರ ಪಾಡು; ಹಾಡು ಮುಗಿಯೂದಿಲ್ಲ-
ಅವೂ ನಿನ್ನ ಬಿಡೂದಿಲ್ಲ. ಮೊದಲಽ ಸೂಕ್ಷ್ಮ ಪ್ರಕೃತಿ
ಈ ಜಗತ್ತು ಎತ್ತಿ ಹಿಡಿತಲ್ಲ ಎಂಥ ಸುಕೃತಿ !

---

ನನ್ನ ಎಪ್ಪತ್ತರ ಹುಟ್ಟುಹಬ್ಬದ ಸಂದರ್ಭ

## ಅತ್ತಿಕೊಳ್ಳದಲ್ಲಿ ಸೂರ್ಯ

ಬೇಂದ್ರೆ 'ಬೆಳಗಿ'ನ ಅತ್ತಿಕೊಳ್ಳದಲ್ಲಿ ಸಾವಿರ
ಮಂದಿ ಬಡಬಗ್ಗರು ಮನೆಕಟ್ಟಿ, ಅಲ್ಲಲ್ಲಿ
ಗುಡಿಕಟ್ಟಿ, ಸುತ್ತು ಗುಡ್ಡಗಳ ಇಳಿಜಾರಿನಲ್ಲಿ
ಸಂಸಾರ ಹೂಡಿ, ದಸದಸ ತೇಕಿ ಮೇಲೇರ-
ಬಯಸುವ ಬಸ್ಸಿನೊಡನೆ ಸೆಣಸಾಡಿ- ಸಂಚಾರ.
ಮೂಡಲ ಮನೆಯ ಬಾಗಿಲ ತೆರೆದು, ಸೂರ್ಯ ಹಣಕಿ-
ದರೆ, ನಳದಲ್ಲಿ ಮುತ್ತಿನ ಹನಿಗೆ ಕೊಡಗಳು ಬಾಕಿ.
ಗಡಬಡಿಸಿ ಶ್ರಾವಣದ ಮೋಡಗಳ ಸಮಾಚಾರ
ಕೇಳಿ, ನಡುನೆತ್ತಿಗ್ಯೆತಂದು, ಕೊಳಚೆ ಕೊಂಪೆಗೆ

ಮುಖವ ಸಿಂಡರಿಸಿ, ಹಿಂದಿನ ಗಂಧರ್ವ ಸೀಮೆ
ನೆನೆದು, ಗಿಡಗಂಟೆಗಳ ಕೊರಳ ಹಾಡಿನ ಭ್ರಮೆ-
ಯಲ್ಲಿ ಸಂಜೆಗೆ ಬಳಿದ ರಾಗ ಮುಗಿಲ ಮಾರಿಗೆ.
ಕಾಂಕ್ರೀಟು ಕಾಡಿನಲಿ ಕಣ್ಣೆ ಬಡಿಯುವ ಬಣ್ಣ
ಅರಿಯದಳವಿಗೆ ಟೀವಿಯಲಿ ಮೈದೋರಿತಣ್ಣ.

## ಅಗಲಿದ ಲೇಖಕ ಮಿತ್ರರನ್ನು ನೆನೆದು

ಇಲ್ಲಿದ್ದು, ದೇಹಕ್ಕೆ ಮೀರಿ ಮನಸನು ತೆಯ್ದು
ಕನಸಿನೊಳ ಹೊಕ್ಕು ಹೊರಬಿದ್ದು ಅಕ್ಷರವಾಗಿ
ನಕ್ಷತ್ರಗಳ ಹಿಡಿದು, ನಾಡಿ ಮಿಡಿವಷ್ಟರಲಿ
ಬಾನ ಮೂಲೆಗೆ ಬಾಲ ಬೀಸುವ ಧೂಮಕೇತು!
ಹಗಲಿನುದ್ಯೋಗಕ್ಕೆ ಹೆಗಲುಗೊಟ್ಟಿರುವ ಜಗ;
ಒಳಗೊಳಗೆ ದಿಗಿಲು, ಮುಗಿಲು ಮೆಲ್ಲಗೆ ತೇಲಿ,
ಚೆಲ್ಲಿದರೆ ನಾಲ್ಕು ಹನಿ, ಮತ್ತೆ ಚಿಗಿಯುವ ಬೇಲಿ.
ಮತ್ತ ಮಧುಮಾಸದಲಿ ಗಸ್ತು ತಿರುಗುವ ಭೃಂಗ.
ಜೀವನ ಪ್ರವಾಹಕ್ಕೆ ಯಾವ ಗತಿ? ಎಲ್ಲೊ ಜಲ-
ಪಾತ, ತಿರುಗಣಿಮಡುವನೊಡ ಹಾಯ್ದು, ಎರಡು ದಡ
ಧಿಕ್ಕರಿಸಿ ಹರಿದು, ತಿರುಗಿ ಸಮಪಾತಳಿಯ ಕಂಡ
ದೈತ್ಯ ಶಕ್ತಿಗೆ ಕೊನೆಗು ನಿರ್ಲಕ್ಷ್ಯತೆಯೆ ಮೂಲ-
ವಾಗುವದೆಂಥ ವಿಪರೀತ! ಅರ್ಥಕೆ ಅಪಾರ್ಥ,
ಹೀಗೆಯೇ ಹುಡುಕುತ್ತ, ತಡಕುತ್ತ, ಮಿಡುಕುತ್ತ...

## 'ಮಹಾಮಾರ್ಗ'ದ ಪಥಿಕ

ಅಪರಾತ್ರಿಯಲಿ ದೀಪ ಉರಿಸುವೇಕಾಂತ ಪಥ-
ನಡಿಗೆಯಲಿ, ದುಡಿಮೆಯಲಿ ಅಡೆತಡೆಯಿರದ ವೇಗ
ಒಳದಾರಿ ಹಿಡಿಯದೆ 'ಮಾರ್ಗ'ದಲಿ ಸಾಗುವ ಛಲ.
ಹತ್ತು ಕ್ಷೇತ್ರಗಳ ತೆಕ್ಕೆ ಬಡಿದು ಶೋಧಿಸಿ ತೆಗೆದ
ವಸ್ತುವಿಗೆ ಜ್ಞಾನದ ಶಿಸ್ತು; ಸೃಜನದುಸಿರಾಟ.

ರೂಢಿಗೊಗ್ಗದ, ಹಿಂಸೆಗೂ ಬಗ್ಗದ ವಿಭಿನ್ನ
ವಿಶ್ಲೇಷಣೆಯ ಧಾಟಿ, ತಪ್ಪಿ ದುಡುಕುವ ಮುನ್ನ
ಒಪ್ಪಿ ಅರ್ಧ ವಿರಾಮ; ಇಲ್ಲಿಲ್ಲ ದೊಂಬರಾಟ.
ವಿವಿಧ ಕೋನದ ಗ್ರಹಿಕೆ; ಸಹೃದಯತೆಯ ಕಾಣ್ಕೆ.
ಸೋದನ ದೀವಿಗೆಯಿಂದ ಹೊಳೆಯುವ ವಿಮರ್ಶೆ
ಹೊಸಬಗೆಯ ಸಂವಾದಕ್ಕೆ ತಗುವ ನಿಷ್ಕರ್ಷೆ.
ಸಲ್ಲಲಾರದು ಎಲ್ಲಿಯು ಈರ್ಷೆ, ಈರಾಟಿಕೆ,
ಬಂಡೆ ಮೃದುಗೊಳಿಸಿ ಹೊಸಮೂರ್ತಿ ಕೆತ್ತುವ ತವಕ
ತುಂಗಭದ್ರೆಗೆ ತುಡಿವ ಮಹಾಮಾರ್ಗದ ಪಥಿಕ.

---

ಡಾ. ಎಂ. ಎಂ. ಕಲಬುರ್ಗಿಯವರಿಗೆ ಅಭಿನಂದನ

## ಕವಿಯ ಧನ್ಯತೆ

ಮನುಷ್ಯರಿಗಂಟಿಯೂ ಅಂಟಿಕೊಳ್ಳದೆ, ಕಿಟಕಿ-
ಯಲಿ ಕುಳಿತು, ತಂಟೆ ತೆಗೆಯುತ್ತ, ಗೂಡು ಕಟ್ಟಲು
ಹೊಂಚಿ, ಗಂಟೆಗಟ್ಟಲೆ ಚಿಂವ್ ಚಿಂವ್‌ಗುಟ್ಟಿ ಬಯಲು-
ಆಲಯವನೊಂದುಗೂಡಿಸುತ್ತಿದ್ದ ಗುಬ್ಬಚ್ಚಿ
ಒಮ್ಮೆಲೇ ನಾಪತ್ತೆ, ಏನಾದವೇನುಕತೆ!
ಬಾಲ್ಯದಲಿ ನಮ್ಮೊಡನೆ ಬೆಳೆದ ಇವುಗಳ ಕತೆಗೆ
ಇನ್ನು ರೆಕ್ಕೆಗಳಿಲ್ಲ-ಪಕ್ಕದ ಗಿಡದ ತುದಿಗೆ
ಹಾರಿ ಹಾಡುವ ಹಕ್ಕಿಗಿಲ್ಲ ಇಂತಹ ಮಮತೆ.
ಇತ್ತೀಚೆ ಮುಂಬಯಿಯಲ್ಲಿ ಮಹಡಿಮನೆ ಕಿಟಕಿ
ಬಳಿ ಕುಳಿತಾಗ, ಮೇಲೆ ವಿಮಾನ, ಕೆಳಗೆ ಗುಬ್ಬಿ-
ಗಳ ಚಿಲಿಪಿಲಿ ಕಿವಿಗೆ ಬಿದ್ದು ನನ್ನ ಬಡಿದೆಬ್ಬಿ-
ಸಿತು; ಇಂಥ ಬಿಡುವಿರದ ನಗರದಲಿ ಈ ಗಿರಾಕಿ !
ಅಲ್ಲಿ ಊರಿನಲಿ ಕಣ್ಮರೆಯಾದ ಪುಟ್ಟ ಜೀವಿ
ಇಲ್ಲಿ ಬದುಕಿವೆಯಲ್ಲ, ಧನ್ಯನಾದನು ಕವಿ.

## ಈ ಕ್ಷಣದ ಸುತ್ತು...

ಈ ಕ್ಷಣದ ಸುತ್ತು ತಿರುಗುತ್ತಿದೆ ಅಕ್ಷೋಹಿಣಿ
ಕಣಗಳು;ನೆನಪ- ಹೂಬಿಸಿಲ ಕೋಲಿಗೆ ತಾಗಿ
ಸಿಕ್ಕುಸಿಗದಂತೆ ಗಾಳಿಯಲಿ ಕಣ್ಮರೆಯಾಗಿ.
ಹಾರಿಬಂದರೂ ಬರಬಹುದು ದೂರದ ಕ್ಷಿಪಣಿ.
ಒಂದೆಡೆ ಪಶ್ಚಾತ್ತಾಪ, ಮತ್ತೊಂದೆಡೆ ಚಪಲ.
ಏರುತ್ತಿರುವ ಒತ್ತಡ ಕೆಳಗಿಳಿಯದ್ದಕ್ಕೆ
ತಲ್ಲಣದಲ್ಲಿ ತನ್ನ ತಾನು ತಿಳಿಯದ್ದಕ್ಕೆ
ಶಿಥಿಲ ಸಂಬಂಧಗಳ ತೀವ್ರ ಗೊಂದಲ-ತುಮುಲ.
ಉತ್ತರದ ಚಳಿಗೆ ಕಾಡು ನಾಡೆಲ್ಲ ತತ್ತರ.
ಸಂಕ್ರಮಣ ಕಾಲ, ಮುಗುಳೊಡೆದ ಮಾಮರ-ಕಂಪು
ಮಣ್ಣಗೋಡೆಗೆ ತಿಂಗಳನ ಅಂಗೈ ಛಾಪು
ಮುಪ್ಪಿಗೊಪ್ಪಿಸಿ ಬಾಲ್ಯ-ಯೌವನದ ಸಂಭಾರ.
ಚಿಗುರು-ಚಿಣ್ಣರ ಹೆಗಲಿಗೆತ್ತಿ ಬಂದಿಹ ಚೈತ್ರ
ನೆಲ-ಮುಗಿಲ ನೇದಿರುವ ಬಯಲ ಬದುಕಿನ ಸೂತ್ರ.

## ನಗರ

ಬಂದು ಬಂದುದನೆಲ್ಲ ಬರಸೆಳೆದು, ತನ್ನೊಡಲ
ಹಿಗ್ಗಿಸುತ್ತ, ಕಿಕ್ಕಿರಿದ ಚಕ್ರಪಥದಲಿ ಸಾಗಿ
ಅವರವರ ದಾರಿಯವರಿಗೆ ಬಿಟ್ಟು, ಹಿಂತಿರುಗಿ
ಬರಲು ಪುರಸತ್ತಿರದೆ ಸುತ್ತಿಕೊಂಡಿದೆ ಜಾಲ.

ನಿತ್ಯ ಬದುಕಿನ ಮುಖದಿ ಸುಖದುಃಖದಾವೇಗ
ಹತ್ತಿಟ್ಟು, ಮುತ್ತಿಗ್ಗಾತೊರೆವ ಕಾತರತೆ.
ಸಂಜೆಗೆಂಪಿಗೆ ಅಂಜದಪಘಾತ, ಅಸ್ಥಿರತೆ;
ಸುಸ್ತು ಹೊಡೆದಿರುಳಿಗೆ ಸ್ವಸ್ತಿ-ಕನಸಿಗೆ ಸುರಂಗ.

ನೆನಪಾದಾಗ ಪುಟಿವ ಕಾರಂಜಿ; ಕೂಟಿನಲಿ
ಸಾಕ್ಷೀ ಪ್ರತಿಮೆ, ಅಸ್ತಿತ್ವವಿರದ ರಸ್ತೆಬದಿ
ವಾಹನ ಡೋಲಾಯಮಾನ, ಹಿಂದಿನೊತ್ತಡದಿ
ತತ್ತರಿಸಿ ಮುಂದೆ ನುಗ್ಗುವ ದಾರಿ ನೂರು ಮೈಲಿ.

ನಾಗರಿಕತೆಗನಿವಾರ್ಯ ವೇಗದಾಕರ್ಷಣೆ-
ಕದಡದಿರಲೇಕಾಂತ; ಸೃಷ್ಟಿಮೂಲದ ಠಾಣೆ.



ಜಳಜ

# 'ಪ್ರಮಾಥಿ'ಯ ಪ್ರಾರಬ್ಧ

೧

ಹಬ್ಬಕ್ಕೆ ಎಣ್ಣೆ ಹಚ್ಚಿ ಎರೆದಂತೆ ಚಿಗುರಿ, ಮಿರಿಮಿರಿ
ಮಿಂಚುವಶೋಕವೃಕ್ಷದ ನೆತ್ತಿಯಲ್ಲಿ
ಕುಳಿತ ಬಣ್ಣದ ಹಕ್ಕಿ-
ಗುಡಿಪಾಡ್ಯದ ಗಿಂಡಿ;
ಸೃಷ್ಟಿಗೂ ದೃಷ್ಟಿಗೂ ನಡುವೆ ಸಮದಂಡಿ.

ಉದುರಿದೆಲೆಗಳ ರಾಶಿ
ಫಾಸಿಯಾಗದ ಹಾಗೆ ಗುಡಿಸಿ
ಗುಂಪಿ ಮಾಡಿದೆ.
ಯಾಕೊ, ಬೆಂಕಿ ಹಚ್ಚಲು ಮನಸ್ಸಾಗಲಿಲ್ಲ.
ಮೊನ್ನೆಮೊನ್ನೆ ಕೊಳಚೆ-ಕೊಂಪೆಗೆ ಬೆಂಕಿ ಬಿದ್ದು
ಸುಟ್ಟು ಕರಕಾದ ದೇಹಗಳೇ ಇನ್ನೂ ಕಣ್ಣಮುಂದೆ.

ಕಂಪೌಂಡು ಗೋಡೆಯ ಮೇಲೆ
ನಿರ್ಭಯವಾಗಿ ಓಡಾಡಿ, ಬಾಲವೆತ್ತಿ
ಸರಸರ ತೆಂಗಿನ ಮರವೇರಿ
'ಚೀಂಕ್ ಚೀಂಕ್' ಎಂದು ತನ್ನ ಸ್ವಾತಂತ್ರ್ಯವನು
ಸಾರಿ ಹೇಳಿತು ಅಳಿಲು.
ಅದಕ್ಕೆ ಬಿದ್ದಂತಿಲ್ಲ ಇನ್ನೂ ಭಯೋತ್ಪಾದಕರ ನೆರಳು.
ಎಳನೀರಿನೊಳಗೆ ಬಲಿಯ ತೊಡಗಿದೆ
ತೆಂಗಿನಕಾಯ ತಿಳಲು.
ಮಾವಿನ ಮರದಲ್ಲಿತೂಗಾಡುತ್ತಿದ್ದ ಗೊಂಚಲಿನಿಂದ
ಒಂದೇ ಒಂದು ಕಾಯಿ ಹರಿದು
ಚಟ್ನಿಗೆಂದು ಇವಳಿಗೆ ಕೊಟ್ಟೆ.
ತಟ್ಟನೆ ಯಾವುದೋ ಮೂಲೆಯಿಂದ
ಕೋಗಿಲೆಯೊಂದು ಕೂಗಿ
ಬೇರೊಂದು ಮರಕ್ಕೆ ಹಾರಿ ಹೋಯ್ತು.

೨

ತಲೆಬಾಗಿಲಲ್ಲಿ ತೋರಣದ ಸ್ವಾಗತ;
'ಪ್ರಮಾಥಿ'ಯೊ, ಪ್ರಮಾದವೊ, ಪ್ರಮೋದವೊ
ಸಂವತ್ಸರಕ್ಕೆ ಯಾವ ಹೆಸರಾದರೇನು
ಮತ್ಸರವಿರದಿದ್ದರೆ ಆಯಿತು.
ಮಲ್ಲಿಗೆಯ ಕಂಪು, ಬೇವಿಗೂ ಹೂವಿನ ಸೊಂಪು.
ಮಧು ಮಾಲತಿಗೆ ಮೈತುಂಬ ಹೂಗೊಂಚಲು;
ನಸುಕಿನಲ್ಲಿಯೇ ಸಿದ್ಧ ಪರಿಮಳವ ಹಂಚಲು.
ನಳದಲ್ಲಿ ನೀರು ಬಂದಾಗ
ನೀರು ತುಂಬವ ಹಬ್ಬ;
ಲೈಟು ಬಂದಾಗ ದೀಪಾವಳಿ.
ಬೇರೇನಾದರೂ ಉಪಾಯವಿದ್ದರೆ ನೀವೇ ಹೇಳಿ.
(ಉಂಡದ್ದೆ ಉಗಾದಿ, ಮಿಂದದ್ದೆ ದೀಪಾವಳಿ)
ಹೋಗಲಿ ಬಿಡಿ, ಇಲ್ಲಿನೋಡಿ-
ಹೇಗೆ ಬದುಕುತ್ತಿದೆಯೊ ಈ ಹಂದಿಗಳ ಹಿಂಡು.
ನಗರಸಭೆಯ ಕೃಪೆ; ಕಸದ ತೊಟ್ಟಿಯು ತುಂಬಿ
ಹೊರಚೆಲ್ಲಿ ಹಾರಾಡುತ್ತಿವೆ ಪ್ಲಾಸ್ಟಿಕ್ ಚೀಲಗಳ ದಂಡು.
ಇದನ್ನೆಲ್ಲ ಕಂಡು ಕಂಡೂ
ನಾವು ಸುಮ್ಮನಿದ್ದೇವೆ; ಯಾಕೆಂದರೆ
ಇದರಲ್ಲಿ ನಮ್ಮದೂ ಇದೆ ಅರ್ಧಪಾಲು.

೩

ಯುಗಾದಿಯ ಶುಭಾಶಯ ಕೋರುತ್ತ
ಆಗಲೇ ಸುರುವಾಯ್ತು ಬಿಸಿಲಿನ ಝಳ.
ಆಕಾಶದಲ್ಲಿ ಮೋಡದ ಸುಳಿವಿಲ್ಲ
ಗಾಳಿಯ ಕೈಯಲ್ಲಿ ಬೀಸಣಿಕೆಯಿಲ್ಲ.
ಇವತ್ತೊಂದು ದಿನವಾದರೂ ನಾನು
ದಿನಪತ್ರಿಕೆ ತೆರೆಯುವುದಿಲ್ಲ.
ಬನ್ನಿ ಒಳಗೆ ಕರೆಯುತ್ತಿದ್ದಾರೆ-
ನಿಮಗೇನು ಚಹ? ಅಥವಾ ಬೇವು-ಬೆಲ್ಲ?

## ಶ್ರೀಗುರು ತೋಂಟದಾರ್ಯ

ಎತ್ತಣ ಮಾಮರ, ಎತ್ತಣ ಹುತ್ತ? ತೋಂಟದಲಿ
ಅಲ್ಲಮನಂತೆ ಮಾಟ, ಶಿವಯೋಗ ನಿದ್ರೆಯಿಂ-
ದೆದ್ದ ಸರ್ವಾಂಗ; ಓಂ ಬಸವಲಿಂಗ. ಅರ್ತಿಯಿಂ
ಶರಣ ಪರಂಪರೆ ಧೇನು ಕರೆದ ವಚನಾಮೃತದಿ
ಷಟ್ಸ್ಥಲಜ್ಞಾನಸಾರ; ಸ್ವಸ್ವರೂಪ ದರ್ಶನ-
ಕೆತ್ತಿ ಹಿಡಿದ ಕನ್ನಡಿ ಹೊಳೆದು ಹತ್ತೂ ಕಡೆಗೆ
ಬಯಲು ಸಂಭ್ರಮದ, ತರ್ಕ ಮೀರಿದನುಭಾವಕ್ಕೆ
ತಕ್ಕ ಮಾನವ ಧರ್ಮ ತತ್ವದನುಸಂಧಾನ.
ಏಳು ನೂರೊಂದು ವಿರತರವಿರತಾಂದೋಲನ.
ನಾಡಿನುದ್ದಗಲಕ್ಕು ಜ್ಞಾನ-ಕ್ರಿಯೆ ಸಂಚರಿಸಿ
ಸ್ಪಟಿಕ ಘಟದೊಳೆತ್ತಿದ ಜ್ಯೋತಿ ಪ್ರತಿಬಿಂಬಿಸಿ
ಪುನರುಜ್ಜೀವನ; ಜನದ ಜಂಗಮ ನಿರಂಜನ.
ಇಂಥ ಗುರುವಿಗೆ ಎಂಥ ಶಿಷ್ಯಶ್ರೇಷ್ಠರ ಒಸಗೆ!
ಯುಗವು ಕಾತರಿಸಿತ್ತು 'ಶೂನ್ಯಸಂಪಾದನೆ'ಗೆ.

## ಶ್ರೀ ಸಾಮಾನ್ಯರ ಸಿದ್ಧಲಿಂಗ

ಸೂರ್ಯನಿಗು ಕಿರಣಕ್ಕು ಭೇದವಿಲ್ಲದ ಹಾಗೆ
ಶತಮಾನಗಳ ಮೀಟಿದಂತರಂಗದ ಸ್ಫೂರ್ತಿ:
ಬಸವ ಕಾಯಕ ದೀಕ್ಷೆ ಪಡೆದ ಸಾತ್ವಿಕ ಮೂರ್ತಿ
ಮಠ'ಪೀಠದಂಗಳವ ಗುಡಿಸಿ, ತನ್ನೊಳ ಹೊರಗೆ
ಸರಳ ಸೌಜನ್ಯದಾಕೃತಿ ಕಡೆವ ಸಂಕಲ್ಪ.
ನೂರು ಬಗೆ ಭೇದಗಳ ಭೇದಿಸಿ ಬಂದ ತರುಣ-
ಜನಮಾನಸದ ಶುದ್ಧಿ, ನಿರ್ಮಲಾಂತಃಕರಣ
ಹಿಡಿದು ಮಿಡಿಯುವ ಧೀರವಾಣಿ, ವೀಣಾಲಾಪ.

ನೂತನ-ಪುರಾತನರು ವರ್ತಮಾನಕೆ ತವರು;
ಗಣಿಯ ಅಗಣಿತ ರತ್ನ ಶೋಧನೆಗೆ ಪ್ರಸ್ಥಾನ,
ಚಿರಂತನ ಪುಣ್ಯಪುರುಷರಿಗೆ ಪ್ರತ್ಯುತ್ಥಾನ-
ಸಂಸ್ಥಾನದಲಿ ಸಿದ್ಧ ಸಿರಿಗನ್ನಡದ ತೇರು
ವಾಸ್ತವಾದರ್ಶಗಳ ಬೆಸೆದಿರುವ ಬೀಸು ನಡಿಗೆ
ನೆಲಕಿಳಿಸಿ ತರಬಹುದೆ ಇವರಾಕಾಶ ಗಂಗೆ?

---

ಗದಗಿನ ತೋಂಟದಾರ್ಯ ಮಠದ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು.

## ರಹಸ್ಯ

ಹೆಸರಿಗೆ ನಾಲ್ಕು ಹಸಿರೆಲೆಯಲ್ಲಿ ಜೀವ ಹಿಡಿದು
ಮೊಗ ಬಾಡಿಸದೆ, ಬೇಸಗೆಯ ಬಿಸಿಲಧಗೆಯಲ್ಲಿ
ಬಗೆಗುಂದಿ ಕಸಿವಿಸಿಗೊಳದೆ, ಮುಕ್ಕು ನೀರಿನಲಿ
ಬೇರುಗಳ ಮರೆಗೆ ಜಪ್ಪಿಸುತ ಮಣ್ಣಿಗೆ ಮಿಡಿದು
ಕಾದು ಕುಳಿತಾಗ ಏಕಾಏಕಿ ಮೊದಲ ಮಳೆ!
ಭೂಮಿಯಂತರಾಳದ ಸ್ಪೃಶ್ಯದೊಡನೆ ಹರ್ಷದ
ಹೊನಲು, ಹೊಳೆವ ನೀಲಾಗಸಕ್ಕೆ ರೆಕ್ಕೆ ಬೀಸಿದ
ಕುಕಿಲು, ಹೊಂಬೆಳಕು, ಕಣಕಣದಲ್ಲು ಜೀವ ಕಳೆ.
ಮಲ್ಲಿಗೆಯ ಮನಸು ಕುಡಿಯೊಡೆದು ಹಿರಿಹಿರಿ ಹಿಗ್ಗ-
ಕಳೆದ ಸುಗ್ಗಿಯ ನೆನೆದು ಹೂ-ಬೀಜಗಳ ಮೊಳಕೆ.
ಮೃಗಶಿರವು ಕಾಲಿಟ್ಟ ಚಣವೆ ಚಿಗುರಿದ ಗರುಕೆ
ಒಂದೆ ದೇಟಿನಲಿ ಗುಲಾಬಿಗೇಳೆಂಟು ಮೊಗ್ಗೆ
ಮಳೆಗಾಲಕ್ಕೆ ತನ್ನ ತೆರೆದ ಸೃಷ್ಟಿ-ರಹಸ್ಯ
ದೃಷ್ಟಿಗೆ ಬಿಟ್ಟುಕೊಟ್ಟಂತೆ ಬದುಕಿನ ಭವಿಷ್ಯ.

## ಯಾವುದಕ್ಕೂ ಒಂದು ಮಿತಿಯುಂಟು

ಯಾವುದಕ್ಕೂ ಒಂದು ಮಿತಿಯುಂಟು, ಗತಿಯುಂಟು.
ನಿನ್ನ ಇತಿಮಿತಿಯ ವರ್ತುಲವರಿತು ಗುರುತಿಸದೆ
ಹೀಗೆ ಒಮ್ಮೆಲೆ ಹಾರಿ ಕೊಳ್ಳಕ್ಕೆ ಬೀಳುವದೆ?
ಗಡಿಯ ಮನ್ನಿಸು, ಮನಸು ಮಾಡಿದರೆ ಕಗ್ಗಂಟು
ಬಿಚ್ಚಿ ಸಾರಿಗೆ ಸರಳ. ಆಗ ಯಾರು ಯಾರಿಗೆ
ದೂರ? ಏರಿದರೆ ಏರುವುದು ತೇನ್‌ಸಿಂಗನ
ಹಾಗೆ ಗೌರವದ ಮೇರು-ಶಿಖರದಾಲಿಂಗನ,
ಕಣಿವೆ ಕಂದರದೆದೆಗೆ ಬೇಡ ಸೇಡಿನ ಧಗೆ,
ದ್ವೇಷಕ್ಕೆ ಮದ್ದು ಮದ್ದಲ್ಲ. ಎಂದಾದರೂ
ಕಿಡಿಯುಗುಳಿದರೆ ಹಬ್ಬುವುದು ಕಗ್ಗಾಡು-ಬೇಗೆ
ಆರದದು ನಿನ್ನೊಡಲ ಕಿಚ್ಚು ನಂದುವವರೆಗೆ.
ವಂಚಕ-ಪ್ರಪಾತದಂಚಿಗೆ-ಉರುಳಿಬಿದ್ದರೂ
ಬುದ್ಧಿ ಬಾರದಿರೆ ಕಲಿಸಲು ಸಿದ್ಧರೀ ಯೋಧರು.
ಹಿಮದಲ್ಲು ಪ್ರಜ್ವಲಿಸಿ ದೇಶಭಕ್ತಿಯ ಸೊಡರು.

---

ಸಂದರ್ಭ: ಕಾರ್ಗಿಲ್ ಕದನ

## ಬೇರೊಂದು 'ಕಲ್ಯಾಣ'

ಝಗ್ಗನೆ ಬಿಸಿಲು! ಬಿಳಿ ಮೋಡಗಳ ನಡುವೆ ನೀಲಿ
ಕನ್ನಡಿ ಹಿಡಿದು; ಇಷ್ಟು ದಿನ ಮಳೆಯ ನೀರುಂಡು
ಬೆಳೆದ ಹಸಿರು ಹೊಸ ಹೊಳಪು; ಹೊದ್ದು ಕಿನಕಾಪು
ಹೊರಟಿದೆ ಜಗವ ಮುದ್ದಿಸಲು ದಾಟಿ ಜಾತಿ-ಜಾಲಿ.
ಸುಳ್ಳು ನಟನೆಯ ಜಾಲದಲಿ ಸಿಲುಕಿ ಸಂಕುಚಿತ-
ಗೊಂಡ ಮಾನವ ಮನಸಿಗಿಲ್ಲೇನು ಕೆಲಸ? ಬರಿ
ಗುಲ್ಲು-ಗೊಂದಲ, ಸಂದಿ ಗೊಂದಿಯಲಿ ತರಾತುರಿ-
ತಾನೆ ಹೊತ್ತಿಸಿದಗ್ನಿ ಕುಂಡದಲಿ ಭಯಭೀತ.

ಸುಟ್ಟು ಸುಡುಗಾಡು ಕಣ್ಣೆದುರು ಒಟ್ಟಿಕೊಂಡರೆ
ಬೂದಿಯಲಿ ಹಾದವರಿಗಿಲ್ಲ ಹೆಜ್ಜೆಯ ಗುರುತು.
ಬೋಧಿ ವೃಕ್ಷದ ಟೊಂಗೆಯಲಿ ಕುಳಿತ ಪಕ್ಷಿಗಳು
ಹಾರಿ ಹೋಗಿವೆ ಬೇರೆ ದಿಕ್ಕಿನಲಿ; ಹುಡುಕಿದರೆ
ಹಾಡಿನ ಜಾಡು ಹಿಡಿದು ಸಿಗಬಹುದು ನಿರ್ವಾಣ:
ಕ್ರಾಂತಿ ಅರಗಿಸಿಕೊಂಡ ಭೇರೊಂದು 'ಕಲ್ಯಾಣ.'

## ಸಿದ್ಧರಾಮ ಜಂಬಲದಿನ್ನಿ

ನೊಂದ ನೋವು ಮೊಗವನಂದಗೆಡಿಸದೆ, ಕೋಮಲ
ನಗೆಯ, ಹಾಡು-ಪಾಡಿನ ಬಗೆಯ ಬಗಿದು ನೋಡುವ
ಅಂಗೈಯಲ್ಲಿ ಅಂತಃಕರಣವಿಟ್ಟು, ಭಾವ-
ದುಂಬಿ ಝೇಂಕಾರಕ್ಕೆ ಅರೆ ಬಿರಿದ ಹೃತ್ಕಮಲ.
ಆ ಈ ಘರಾಣೆಗಳ ಹದಿನಾರಾಣೆ ತಿರುಳು
ಅರಗಿಸಿಕೊಂಡರೂ ನಿಜಗುಣರ ಮೇಣೆ ಹೊತ್ತು
ಪದವೆತ್ತಿರಲು ಆತ್ಮಕುನ್ನತ ಪದವಿ. ಹತ್ತು
ಮುತ್ತಿನ ನಡುವೆ ರುದ್ರಾಕ್ಷಿ ಸಾಕ್ಷಿಯ ಕೊರಳು.
ಚಾಮರಸನೊಳ ಹೊಕ್ಕು ಪಡೆದ 'ಶರಣಾರ್ಥಿ'
ಪದ್ಯವ ಮಿದ್ದಿ ಮಿಡಿದಂತೆ ನಾದ ನವನೀತ.
ವಚನದುಕ್ಕಂದಕ್ಕೊ ಸಿದ್ಧ ಸದ್ಯೋಜಾತ.
ಬದುಕಿಗದೇ ಹಂಬಲ, ಭಲಾ ಜಂಬಲದಿನ್ನಿ
ಕವಿ-ಗಮಕಿ-ಗಾಯಕ ಬೆರಸಿ ಬೇರಿಲ್ಲದಿರವು
'ಸಿದ್ದರಾಮಾ'? ಕೊಳ್ಳದಲಿ ಪ್ರತಿಧ್ವನಿಸುತಿಹುದು.

## ಲಂಕೇಶ

ಪ್ರಕೃತಿ - ವಿಕೃತಿಯ ನಡುವೆ ತಕ್ಕ ಆಕೃತಿಯ ಕಡೆ-
ಯಲು ನೂರು ಕನಸುಗಳ ಕೋಟೆಯ ಕಟ್ಟಿ, ಕೆಡವಿ
ಸುರಂಗ ಮಾರ್ಗದಿಂದ ಹೊರಬಂದು, ಮೈಕೊಡವಿ
ಮೀಸೆ-ನಗು; ವೀರಗಾಸೆಯ ಕುಣಿತ ಕಟ್ಟಕಡೆ.

ಬ್ರಹ್ಮಾಂಡಕ್ಕೆ ಕಾವು ಕುಳಿತ ಪ್ರತಿಭೆಯ ಸ್ಫೋಟ-
ಅಂತರಾಳಕ್ಕೆ ಮೌನ- ಧ್ಯಾನದುನ್ಮಾದ
ಬಹಿರಂಗದಲ್ಲಿ ರಣರಂಗ; ದ್ವಂದ್ವ ಯೋಧ.
ವೈರುಧ್ಯಗಳ ಮೀರಿ ಬೆಳೆದದ್ದು ಮಾವು-ತೋಟ.
ಅಧಿಕಾರ ಗದ್ದುಗೆಯನಲುಗಾಡಿಸುವ ತವಕ-
ತಿಮಿಂಗಲಕೊಡ್ಡಿದ ಬಲೆಯೊಳಗು ಪಾಪದ ಮೀನು-
ಕಪ್ಪು ಹಣತೆಗಳಿಗೆಣ್ಣೆಯೆರೆದೆತ್ತಿದ ಬೆಳಕು.
'ಛೆ' ಹೀಗುಂಟೆ? ತಂಟೆ ತೆಗೆವವರೆ ನಗುವ ಅಣಕ.
ಅರ್ಥವುಂಟೆ, ಸ್ವಾರ್ಥವಿರದೆ ಬಂದೆರಗಿದ ಸಾವಿಗೆ?
ಯಾರ ಕಿವಿಗು ಬೀಳದಂಥ ನಟ್ಟಿರುಳಿನ ನೋವಿಗೆ

## ಶಂ. ಗು.

ಎಳೆಯ ಹೃದಯಗಳ ಭಾವದೆಳೆಯ ಹಂದರದಲ್ಲಿ
ಹೂಗನಸುಗಳ ಬಳ್ಳಿ ಹಬ್ಬಿಸಿ
ಬಣ್ಣ ಬಣ್ಣದ ಚಿಟ್ಟೆಗಳ ದಣಿವಿರದೆ ಕುಣಿಸಿ
ನುಣ್ಣಗಿನ ದನಿಯ ಹಾಡಿಗೆ ಚಪ್ಪಾಳೆ ತಟ್ಟಿ-
ಆಟವೆ? ಪಾಠವೆ: ಸಾಹಸದ ಓಟವೆ?
ಎಲ್ಲಿಯೂ ಚಿತ್ಕಾಟವಿಲ್ಲದೆ
ಹೊಚ್ಚ ಹೊಸ ಪಾಟಿಯಲಿ ತಿದ್ದಿ ತೀಡಿಸಿದ ಮೋಡಿ.

ಈ ಬದಿಗೆ ಬನ್ನಿ;
ಇಲ್ಲಿರುವ ಪುಟದಲ್ಲಿ ತೆರೆದುಕೊಂಡಿದೆ
ಬೆಳೆದ ಮನಸುಗಳ ಬದುಕಿನೊಳತೋಟ
ಹತ್ತೋಟಿ ಮೀರದೆ ಮೀಡಿವ 'ರುದ್ರ ವೀಣೆ'
ಕಥೆಯೆಂದರೆ ಕೇವಲ ವ್ಯಥೆಯೆ?
ಸಹನೆಗೂ ಇರಬಹುದು ಒಂದು ಕೋಣೆ.
ಇರುವ ಬಂಧದಲಿ 'ಲಲಿತ' ಬರೆಹವೂ ಚೆಂದ.
ನವಿರು ಹಾಸ್ಯದ ಕುಡಿ
ಏರುಪೇರಾಗದಂತೆ ಎರಡೂ ಪರಡಿ.

ಬಿಳಿ ಜೋಳದ ಕಪ್ಪು ಹೊಲದ ಬದುವಿನಲಿ
ಅಪರೂಪಕ್ಕೆ
ಬೆಳ್ಳಗಿನ ಕೊಕ್ಕರೆ,
ಮೆಲ್ಲಗೆ ಬಂದು ಸಭೆಯಲ್ಲಿ ಕುಳಿತು ನಕ್ಕರೆ-
ಅರೆ ಶಂ. ಗು.!
ಎಷ್ಟೊಂದು ಅಕ್ಕರೆ ನಮಗು ನಿಮಗು.

---

ಬಿಜಾಪುರದ 'ಆದರ್ಶ ಶಿಕ್ಷಕ' ಶ್ರೀ ಶಂ.ಗು. ಬಿರಾದಾರ

## ಅದಕ್ಕದೇ ಮುನ್ನುಡಿ

ಪೂರ್ವಾಶ್ರಯದಲ್ಲಿಯೇ ಹೊತ್ತ ಹೊರೆಯ ಕಿತ್ತೆ-
ಸೆದು ಬಿಡುಗಡೆ ಪಡೆದ 'ಅಂತರ'ದಲ್ಲು ಒಳದನಿ
ಮಿಡಿತ. ಮಾನವಧರ್ಮ ತಳಹದಿಯಾಗಿ ಬದುಕಿ
ಅನಂತವಾಗಿ ಅರಳುವಾಸೆ ಜೀವಂತ. ಬಟ್ಟೆ
ಬದಲಿಸಿದರೂ ಸುಳ್ಳು ಸೃಷ್ಟಿಗೆಡೆಗೊಡದಂತೆ
ಧೂಳು ಬೀಳದ ದೃಷ್ಟಿ, ಪಂಚೇಂದ್ರಿಯ ಮರೆಯದೆ
ಮಣ್ಣಿಗೆ ಮೈಯ, ಮುಗಿಲಿಗೆ ಮನಸ್ಸು ತೆರೆದೆ.
ತತ್ವಕ್ಕೆ ಕೈಗೂಡಿ ಬರದಿದ್ದರೇನಂತೆ
ಒಮ್ಮೆಮ್ಮೆ ಕವಿತ್ವ, ಹುಟ್ಟಿಸಾವ ಕಷ್ಟದಲಿ
ಕಟ್ಟುವ ಕನಸು; ಜೀವಕ್ಕೆ ಬೇಕಾದ ಹಾಡು.
ಮನುಷ್ಯತ್ವಕ್ಕೆ ತೆಕ್ಕೆ ಬಿದ್ದರಾವುದು ಈಡು?
ಸೀಮೋಲ್ಲಂಘನಗೈದು ಜನಮನದ ಮಂಟಪದಿ
ಹೊಸಪಂಜು-ಮೆರವಣಿಗೆ ಗದ್ಯಪದ್ಯವು ಕೂಡಿ
ಕಣ್ಣೆದುರೆ 'ಮಣ್ಣು-ಮುಗಿಲು' : ಅದಕದೇ ಮುನ್ನುಡಿ.

---

ಶ್ರೀ ವೀರಭದ್ರ ಚನ್ನಮಲ್ಲಸ್ವಾಮಿಗಳ 'ಮಣ್ಣು-ಮುಗಿಲು' ಕವನ ಸಂಗ್ರಕ್ಕೆ ಮುನ್ನುಡಿಗೆ ಬದಲು.

## ಬರೆದು ತೀರದ ಬದುಕು

ಬದುಕುಕೊಡುವುದಕ್ಕೆ ಕೊನೆಯಿಲ್ಲ; ಕೊಟ್ಟಷ್ಟು ಪಡೆ-
ದು ಅಟ್ಟುಣುವ ಬಗೆ ಬೇರೆ. ಇಷ್ಟಾನಿಷ್ಟಗಳ
ಕಷ್ಟಸುಖದಲಿ ಕುದಿಸಿ, ಸ್ಥಾಯಿ-ಸಂಚಾರಿಗಳ
ತಾಯಾಗಿ, ಅನುಭವಕೆ ಬಾಗಿ, ನಿಂತ ಕಡೆ
ನೆರಳು ಹರಡುವ ಗಿಡದ ಚಿಗುರು-ಹೂ-ಕಾಯಾಗಿ
ಸಂಪ್ರದಾಯವ ಮೀರಿ ಮಾಗಿದ ಹೆಮ್ಮಿ(ಮ್ಮೆ)ಗೆ ನಗೆ.
ನಡುಗುವ ಬೆರಳ ನಡುವಿನಲಿ ತುಡಿವ ಲೇಖನಿಗೆ
ಮಿಡಿವ ಹೃದಯದ ಸೂಕ್ಷ್ಮ ಸಹಜಾತ್ಮ ಕಥೆ. ತಿರುಗಿ
ಮಕ್ಕಳಿಗೆ ಬೀಸಿ 'ಮಾಯದ ಕೋಲು' ನಕ್ಕುನಲಿ-
ದಾಡಿಸಿತು ಬಣ್ಣದ ಚಿಟ್ಟೆ ಹೂವಿಂದ ಹಾರಿ.
ಅರಳು ಮರಳಿಗು ಹೊಗರು ಹೊಮ್ಮಿದ ಸ್ವಗತಲಹರಿ!
ಮತ್ತೇನು ಹುದುಗಿತ್ತೊ ನೆನಪಿನ ಹಗೇವಿನಲಿ.
ಎಷ್ಟೊ ರಾತ್ರಿಗಳ ದಾಟಿ ಬೆಳಗು ನಿರೀಕ್ಷಿಸಲು-
ಬರೆದು ಮುಗಿಸಿದ ಹಾಗೆ ಸ್ವಚ್ಛವಾಯಿತು ಮುಗಿಲು.

---

ಶ್ರೀಮತಿ ಶಾರದಾ ಹೆಮ್ಮಿಗೆಯವರ 'ಬದುಕು ಕೊಟ್ಟಿದ್ದು,ಕಲಿಸಿದ್ದು'

## ಹನಿಗವನಗಳು

ತನ್ನನ್ನು ಪ್ರದರ್ಶನಕ್ಕಿಟ್ಟು
ಪರಿತಪಿಸುತ್ತಾರೆಂದು
ಸಾವು ಬಹುಶಃ ಭಾವಿಸಿರುವುದಿಲ್ಲ.
ಆಶ್ಚರ್ಯವೆಂದರೆ
'ವಿಧಿ'ಗೂ ವಿಧಿನಿಷೇಧ ತಪ್ಪಿದ್ದಲ್ಲ.

* * *

ಮೂವತ್ತೈದು ಕವಿಗಳ ಕಿಕ್ಕಿರಿದ ಕವಿಗೋಷ್ಠಿ
ನಿಜಕ್ಕೂ ಸಮ್ಮೇಳನ ಸಾಧಿಸಿದ ಹಿರಿಮೆ.
ಆದರೂ
ನಮ್ಮ ರಾಜ್ಯದ ಮಂತ್ರಿಮಂಡಳಕ್ಕಿಂತ
ಗಾತ್ರದಲ್ಲಿ ಇದು ತೀರ ಕಡಿಮೆ.

* * *

ಹೋಳಿ ಹುಣ್ಣಿಮೆಯ ಬಣ್ಣ ತೊಳೆದು
ಬಟ್ಟೆ ಬದಲಿಸುವಾಗ
ಗಿಡಮರದ ಚಿಗುರು-ಹೂಗಳ ಹಿಂದೆ
ಅವಿತು ಕುಳಿತಿದ್ದ ಕಾಮಣ್ಣ
ಹೊಡೆದು ಕಣ್ಣ.

* * *

ಬರಿ ಹೆಸರಿನ ಮೇಲೆಯೇ ಇಂದು
ಯಾರನೂ ನಂಬುವಂತಿಲ್ಲ:
'ಬಹುಧಾನ್ಯ'ದಲ್ಲು ಧಾನ್ಯದ ಕೊರತೆ, ಬೆಲೆ ಏರಿಕೆ,
'ಪ್ರಮಾಥಿ'ಯಲ್ಲೂ ಹಲವು ಪ್ರಮಾದಗಳು.
ಅದಕ್ಕಾಗಿ ಈಗಲೇ ಮನವಿ ಸಲ್ಲಿಸೋಣ
'ವಿಕ್ರಮ'ಕ್ಕೆ
ಯಾವುದೂ ಕ್ರಮ ತಪ್ಪಿನಡೆಯದಂತೆ.

* * *

ಆ ಶಬ್ದ ತೆಗೆದು, ಈ ಶಬ್ದ ಹಾಕಿ
ಮಾತ್ರೆ, ಗಣಗಳ ಜೊತೆಗೆ ಗುದ್ದಾಡಿ
ಅಂತೂ ಪದ್ಯ ಬರೆದು ಮುಗಿಸಿ
ಕೋಣೆಯ ಹೊರಗೆ ಹಣಕಿದಾಗ-
ಗಿಡದ ಕೊಂಬೆಯಲ್ಲಿ ಹೊರಹೊಮ್ಮಿತ್ತು
ಚಿಗುರು-ಹೂಗಳ ಕವಿತೆ ಸಾಲು ಸಾಲು.

* * *

ಬದುಕಿನ ವಿಚಿತ್ರ ಚಿತ್ರಹಿಂಸೆಯ ನಡುವೆ
ಪ್ರೀತಿ ಚಿಗುರಿಸಲಾರೆಯೇಕೆ ಚೈತ್ರ?
ಮನುಕುಲದ ಬೇರಿಗಾ ನೀರು ನಿಲುಕದೆ ಇಹುದೆ?
ಯಾಕೆ ಬರಡಾಗಿಹುದು ಮನುಜ ಹೃದಯ?

# ಠಾಕೂರ ರವೀಂದ್ರರ ನುಡಿಮುತ್ತುಗಳು
## ('Stray Birds' ದಿಂದ ಆಯ್ಕೆ)

೧

ಬೇಸಗೆಯಲ್ಲಿ ಅಲೆದಾಡುವ ಹಕ್ಕಿಗಳು
ನನ್ನ ಕಿಟಕಿಯ ಬಳಿ ಕುಳಿತು
ಹಾಡಿ ಹಾರಿ ಹೋಗುತ್ತವೆ.
ಹೇಮಂತದ ಹಣ್ಣೆಲೆಗಳು
ಹಾಡಲರಿಯದೆ ಗಾಳಿಗೆ ತೇಲುತ್ತ
ಕಿಟಕಿಯ ಬಳಿ ನಿಟ್ಟುಸಿರಿನೊಂದಿಗೆ
ಕೆಳಗುರುಳುತ್ತವೆ.

೨

ಹೂವಿನಲ್ಲಿ
ನೆಲದ ಕಂಬನಿಗಳು
ತಮ್ಮ ನಗೆಯನ್ನರಳಿಸುತ್ತವೆ.

೩

"ಸಮುದ್ರ ಯಾವುದು ನಿನ್ನ ಭಾಷೆ?"
"ಚಿರಂತನ ಪ್ರಶ್ನೆ"
"ನಿನ್ನ ಭಾಷೆ ಓ ಆಗಸವೆ?"
"ಚಿರಂತನ ಮೌನ."

೪

ಹಕ್ಕಿ ಅಂದುಕೊಳ್ಳುತ್ತದೆ
"ನಾನು ಮೋಡವಾಗಬೇಕಿತ್ತು."
ಮೋಡಕ್ಕೆ ಅನಿಸುತ್ತದೆ
"ನಾನೊಂದು ಹಕ್ಕಿಯಾಗಬೇಕಿತ್ತು."

೫

ನಿನ್ನೆಯ ಇರುಳಿನ ಬಿರುಗಾಳಿ
ಇಂದಿನ ಮಂಜಾವಿಗೆ
ಶಾಂತಿಯ ಬಂಗಾರದ ಕಿರೀಟ
ತೊಡಿಸಿದೆ.

೬

ಹಚ್ಚಿ ನೋಡಿ ಹಕ್ಕಿಗೆ
ಬಂಗಾರದ ರೆಕ್ಕೆ-
ಮುಂದೆ ಅದು ಹಾರಲಾರದೆಂದೂ
ಆಕಾಶಕ್ಕೆ.

೭

ಪ್ರೀತಿಯಲ್ಲಿ ಕಂಡುಕೊ ನಿನ್ನನ್ನು
ಸೌಂದರ್ಯವೆ
ಕನ್ನಡಿಯ ಹೊಗಳಿಕೆಯಲ್ಲಲ್ಲ.

೮

ಭೂಮಿಗೆ ಮುತ್ತನಿತ್ತು, ಕಿವಿಯಲ್ಲಿ ಹೇಳಿದವು
ಮಳೆಹನಿಗಳು:
ನಾವು ಮನೆಗಾಗಿ ಕಾತರಿಸಿದ
ನಿನ್ನ ಮಕ್ಕಳು
ಸ್ವರ್ಗದಿಂದ ಮರಳಿ ಬಂದಿದ್ದೇವೆ
ಸೇರಲು ನಿನ್ನ ಮಡಿಲು.

೯

ಬೇರುಗಳು
ಭೂಮಿಯಾಳದ ಟೊಂಗೆಗಳು.
ಟೊಂಗೆಗಳು
ಗಾಳಿಯಲ್ಲಿನ ಬೇರುಗಳು.

೧೦

"ಸರಬರ ಸದ್ದು ಮಾಡುವ ನಾವು
ಬಿರುಗಾಳಿಗುತ್ತರಿಸುವ ಎಲೆಗಳು.
ಇಷ್ಟೊಂದು ಮೌನವಾಗಿದ್ದೀಯಲ್ಲ
ನೀನು ಯಾರು?"
"ನಾನೇ ? ನಾನು ಕೇವಲ ಹೂವು."

೧೧

ಮುಳುಗುತ್ತಿರುವ ಸೂರ್ಯ ಕೇಳಿದ
"ಯಾರಿದ್ದಾರೆ ನನ್ನ ಕರ್ತವ್ಯ ನೆರವೇರಿಸಲು?"
ನಮ್ರವಾಗಿ ನುಡಿಯಿತು ಮೂಲೆಯ ಹಣತೆಯೊಂದು
"ನನ್ನೊಡೆಯಾ, ನನ್ನ ಕೈಲಾದುದನು
ನಾನು ಮಾಡಬಲ್ಲೆ."

# ನೀವೇ ಪ್ರಮಾಣು

## ೨೦೦೨

### ಸ್ವಗತ

ಮುಂಗಾರ ಹನಿಯ ರಭಸದಲಿ ನೆಲವ ತಬ್ಬಿದೆ
ನಾನು. ಮೊದಲ ತೊದಲಿಗೇ ಕುಡಿಚಾಚಿ ಹಬ್ಬಿದೆ
ಕರುಳಬಳ್ಳಿ. ಪ್ರೀತಿ ಬೆಚ್ಚಗೆ ಕಾದ ಹಾಲ ಕೆನೆ-
ಯಲ್ಲಿ ಕಂಪಿಸಿದೆ. ಗೊನೆವಾಳೆ ಗಾಂಭೀರ್ಯಕ್ಕೆ
ಬಾಗಿ, ಬತ್ತದ ಗೋದಿಯ ತೆನೆಗೆ ನಿತ್ಯ ಗೊಬ್ಬರ
ಹೊತ್ತ ಎತ್ತುಗಳ ಕತ್ತಿನಲ್ಲಿ ಗಂಟೆಯಾಗಿ,
ರಂಟೆ-ಕುಂಟೆಗೆ ಜಟಿಲ ಜಂಜಡವು ಸಡಿಲಾಗಿ
ಗಾಸಿಗೊಂಡಾಗ ಇಳಿದಿತ್ತು ಎದೆಯ ಭಾರ.
ಈ ಜಗದ ಸೌಂದರ್ಯಕ್ಕೆ ಎಷ್ಟೊಂದು ಶಸ್ತ್ರ
ಚಿಕಿತ್ಸೆ! ಹೊಲಿಗೆ ಹಾಕಿದರೂ ನಿಲ್ಲದ ಸುಲಿಗೆ,
ಗುಣದ ಹೆಣಹಾಕಿ, ಹಣದ ದುಂದು ಮೆರವಣಿಗೆ.
ಯಾವ ಮೂಲೆಯಲಿ ಅಡಗಿದೆಯೊ ಸ್ಫೋಟಕ ದ್ರವ್ಯ.
ನಾಟಕ ಸಾಕು, ವೇಷ ಭೂಷಣವೆಲ್ಲ ಕಳಚು,
ನಿನ್ನ ಬಟ್ಟೆಯ ತೊಟ್ಟು ಗುಟ್ಟೆಲ್ಲ ಬಿಟ್ಟುಕೊಡು.

# ಹಂಗರಹಳ್ಳಿ

ಹಂಗರಹಳ್ಳಿ! ಹ್ಯಾಂಗ ತಡಕೊಂಡೆ ಕರುಳಿನಲಿ
ಉರಿಸಿದ ಕೊಳ್ಳಿ? ಕಲ್ಲೆದೆಗಳೇ ಜಲ್ಲಿ ತುಂಬಿ
ಉರುಳಿಸಿದ ಕುರುಡು ಚಕ್ರದ ಲಾರಿ ಮೈದುಂಬಿ
ಹಸಿರು ಬೆಟ್ಟದ ನಡುವೆ ಕೋರೆಹಲ್ಲಿನ ಕ್ವಾರಿ.
ಸುತ್ತ ಸುತ್ತಿಗೆ ಪೆಟ್ಟು, ಕುತ್ತುಸಿರು, ಕಬ್ಬಿಣದ
ಸರಪಳಿ ಬಿಗಿದ ಕಾಲು, ಹುರುಪಳಿಸಿಹೋದ ಕೈ
ತೆರಪಿರದೆ ಬೆವರಿಳಿದು ಹಿಪ್ಪೆಯಾಗಿರುವ ಮೈ
ನೆನಪು ಕುಟುಕಿದೆ ಸ್ವಾತಂತ್ರ್ಯ ಸುವರ್ಣೋತ್ಸವ-
ನೃತ್ಯ, ಸಂಗೀತ, ಬಾಣ-ಬಿರುಸು ಮೆರವಣಿಗೆ-
ಇಲ್ಲಿ ಕತ್ತಲೆ ಕೂಪ, ಸದ್ದಿರದ ಸಿಡಿಮದ್ದು
ಬತ್ತಲೆಯಾಗಿ ಬಾಳು ಒಳಗೊಳಗೆ ಬಿಕ್ಕಿದ್ದು
ಕೇಳಿಯೂ ಕೇಳಿಸದೆ, ಕಂಡರೂ ಕಾಣಿಸದೆ.
ದಾಟಿ ಹೋಗಿದೆ ನೂರು ಕೋಟಿಯಲಿ ಜನಸಂಖ್ಯೆ
ಉಳಿದದ್ದು: ಮನುಷ್ಯರೆಲ್ಲಿದ್ದಾರೆನ್ನುವ ಶಂಕೆ.

# ಸೊಡರಕುಡಿ ಚಿತ್ರ*

ಗೆರೆಯೊಳಗೆ ಗರಿಗೊಂಡು ಗಿರಿ ಗಿರಿ ತಿರುಗಿ ತಿಗರಿ -
ಯಲಿ ಬಗೆ ಬಗೆಯ ಆಕೃತಿ-ರೂಪ ವಿನ್ಯಾಸ.
ಪ್ರಕೃತಿ - ಪರಮಾರ್ಥಕ್ಕೆ ತರ-ತಮವಿರದ ಸರಸ.
ಕಣ್ಣು ಸೆಳೆಯುವ ಮಣ್ಣ ಬಣ್ಣದಾಟದ ಬುಗುರಿ.
ಎಂಥೆಂಥ ಕನಸೊ ಮನಸಿನಂತರಾಳಕ್ಕಿಳಿದು
ಮುಳುಗಿ ಹೋಗದ ಹಾಗೆ ಮುತ್ತುಗಳ ಬೊಗಸೆಯಲಿ
ತಂದು ದಂಡೆಗೆ ಸುರಿಯೆ; ಆ ಕ್ಷಿತಿಜದಂಚಿನಲಿ
ಹಿಗ್ಗಿದ ಸೂರ್ಯ, ಹೊಂಗಿರಣಗಳ ಕುಂಚ ಹಿಡಿದು.
ಹಗಲಿಗೆಲ್ಲಾ ದಿಗಿಲು, ಇರುಳೆಲ್ಲ ಕಾರ್ಮುಗಿಲು
ಸ್ನೇಹದ ಮಹಾಪೂರ ಬದುಕಿನೆರಡೂ ಬದಿಗು.
ಅಂಜಿಸಲಿಕಲ್ಲ, ಮಳೆಗಾಗಿಯೆ ಮಿಂಚು-ಗುಡುಗು.
ಕೊನೆಗೆ ಹಚ್ಚಿಟ್ಟ ಹಣತೆ ಪ್ರಶಾಂತ, ಬಟ್ಟ ಬಯಲು.
ಇಡಿಯಾಗಿ ಬಾಳಿಗೆ ತುಡಿದ ಸಡಗರಕೆ ಬಿಡುವೆ?
ಸೊಡರ ಕುಡಿ ಚಿತ್ರ–ಚಿತ್ತದಲಿ, ಹೊಯ್ದಾಡದಿರುವೆ.

* ಕಲಾವಿದ ಶಂಕರ ಪಾಟೀಲರ ಸ್ಮರಣೆ

# ಅಂತರಂಗದ ರತ್ನ*

ಶಬ್ದಕ್ಕಿರುವ ಅರ್ಥದಾಚೆಗೆ ನಿಶ್ಶಬ್ದ ನಿಂತು
ಸ್ವಾರ್ಥ ಸೋಕದ ಪರಮಾರ್ಥಪಥವ ನಿರುಕಿಸುತ
ನಸುಕಿನಲ್ಲಿಯೆ ಎದ್ದು ಹೊರಬಿದ್ದು ಪರಿಕಿಸುತ
ನಸುನಗೆಯಲ್ಲಿ ಎಲ್ಲ ಅಡಗಿಸಿದ್ದೇ ಬಂತು.
ಬಿಸಿಲು-ಮಳೆ-ಗಾಳಿ ಅಬ್ಬರ ತಬ್ಬಿ ಮೌನದಲಿ
ತುಳಿತು, ಹೂತು, ಕಾತು ಹಣ್ಣಾಗಿ ಎಲೆಯ ಮರೆಗೆ
ಬಣ್ಣ ಪಡೆಯಿತು ನೆಲದ ಮರೆ ನಿಧಾನದ ಪರಿಗೆ-
'ಹಲಸಂಗಿ' ಇಂಗಿ ನಿಸ್ಸಂಗ ಅಂಗಾಂಗದಲಿ.
ಹೇಗೆ ಬಂದೆವೊ ಹಾಗೆ ಕೂಡಿದೆವು, ಹಾಡಿದೆವು.
ಪಡೆದು ಬಂದವರಂತೆ ನಾಡು-ನುಡಿಯಲಿ ಬೆರೆತು
ಬುದ್ಧಿ-ಭಾವದ ನಾವಿನಲ್ಲಿ ಓಲಾಡಿದೆವು-
ಕಾಲಾಡಿಸುತ್ತ ತಿಳಿನೀರಿನಲಿ, ಹತ್ತಿದೆವು
ದಂಡೆಗೆ. ಇಲ್ಲಿ ಸಂಜೆಯೂ ಮುಂಜಾವಿನಂತೆ.
ಅಂತರಂಗದ ರತ್ನ ಕಂಡೀತು ಕಾಣದಂತೆ.

---

* ಡಾ. ಗುರುಲಿಂಗ ಕಾಪಸೆ ಅಭಿನಂದನ

## 'ದೇಜಗೌ' ಗೌರವಾರ್ಥ

ಎರಡು ದಶಕದ ಹಿಂದೆ 'ರಸಷಷ್ಟಿ', ಸಾವಿರದ
ಪುಟಗಳಲಿ ದಿಟಪುಟಗೊಂಡ ಬದುಕು-ಬರಹಕ್ಕೆ
ಈಗಲೂ ಗುರಿಯಿರುವ ಚಿಕ್ಕೆ, ಸೋಲದ ರೆಕ್ಕೆ
ಪಕ್ಕದ ಹುಳುವ ಹಿಡಿದು ಗೂಡಿನಲಿ ಗುಟುಕಿಡುವ,
ಕುಗ್ಗಿದರು ಕಂಠ ಕನ್ನಡದ ಸುಗ್ಗಿಯ ತವಕ,
ಕುಕಿಲಿಡುವ ಹಿಗ್ಗಿನಲಿ ತಾವೆ ಮಾಮರವಾಗಿ
ದೋಷ-ದೌರ್ಬಲ್ಯಗಳ ಅರಗಿಸಿಕೊಂಡು ಮಾಗಿ
ಬೇಸಾಯದೊರೆಗಿಟ್ಟ ರಾಶಿ ತೂರಿದ ಎಸಕ.
"ನನ್ನ ಬಾಳೇ ಒಂದು ಪವಾಡ" ಎನುವದು ಬೇಡ-
ಶಬ್ದಕೋಶದಲ್ಲು ಕೂಡ, ದಣಿವರಿಯೆ ದುಡಿದು
ಹೋರಾಟದ ಹಾದಿಯ ಮುಳ್ಳುಕಂಟಿಯ ಕಡಿದು
ಗುರಿ ತಲುಪಿದ್ದೆ ನಿಜ, ಆ ಮೇಲೆ ಗರುಡ.
ಕುಲಪತಿಯ ಮುಚ್ಚುಕೋಟನು ಬಿಚ್ಚಿ ಮೆರೆದ ಛಲ-
ಅಚ್ಚ ಲುಂಗಿಯ ಭಂಗಿ : ಕುವೆಂಪು ದೀಕ್ಷೆ ಸಫಲ.

# ಗಾಂಧಿ ಓದಿದ ಗ್ರಂಥ

೧

ದಕ್ಷಿಣಾಫ್ರಿಕದ ಭಾರತೀಯರನ್ನೆಚ್ಚರಿಸಿ
ಹೋರಾಟವೆಸಗಿದ ಮೇಲೆ ಎರಡನೆಯ ಭೇಟಿ
ಅನಿಶ್ಚಿತ ಜೀವನಕೊಗ್ಗಿ ನಿಂತ ಒಳತೋಟಿ.
ಸತ್ಯದ ಹೊರತು ಉಳಿದೆಲ್ಲ ಅನಿಶ್ಚಿತವೆನಿಸಿ
ಅದರೊಳಡಗಿದ ಪರಮಾತ್ಮ ನಿಶ್ಚಿತವೆಂಬ
ಶ್ರದ್ಧೆ. ಅವನೊಡನೆ ಸೇರಿಸಬೇಕು ಈ ಬಾಳ
ತಾಳ ಮೇಳದಲಿ, ಆ ಸತ್ಯಶೋಧನೆ ಪರಮ
ಪುರುಷಾರ್ಥ. ಹೆಜ್ಜೆ ಹೆಜ್ಜೆಗು ಯಾವುದು ಗ್ರಾಹ್ಯ
ಯಾವುದು ತ್ಯಾಜ್ಯವೆಂಬ ಹಲಬಗೆಯ ಪರೀಕ್ಷೆ.
ನೂರಾರು ಪರಿಚಿತರ ಮೆಚ್ಚುಗೆ ಮತ್ತೆ ಟೀಕೆ;
ಅವರಲ್ಲು ಪೋಲಕ್‌ನಂಥ ಸರಳ ಮನಸಿನ ಜನಕೆ
ಪರಮಾಪ್ತ ಗಾಂಧಿ. ಬುದ್ಧಿಗೆ ಸರಿ ಎಂದು ತೋರಿದರೆ
ತಕ್ಷಣ ಕಾರ್ಯಕಿಳಿಸುವನಾತ ಶಕ್ತಿವಂತ
ಜೀವನ-ವಿವೇಚನೆಯೊಳೀರ್ವರಿಗೂ ಸಹಮತ.

೨

ನೆಟಾಲಿಗೆ ಬೀಳ್ಕೊಡಲು ಬಂದ ಪೋಲಾಕ್ ಪುಸ್ತಕ-
ವೊಂದನಿತ್ತು "ನಿಮಗಿಷ್ಟವಾದೀತು, ರೈಲಿನಲಿ
ಓದಿ" ಎಂದರು. ಅಂದಂತೆ ಗಾಂಧಿ ಕೈಗೆತ್ತಿ-
ಕೊಂಡವರು ಮುಗಿಸಿ ಮುಗ್ಧರಾದರು. ಮಸ್ತಕ-
ದಲ್ಲಿ ಆದರದೇ ಚಿಂತನೆ. ನಿದ್ದೆಬಾರದು ಇನ್ನು-
ಆ ಗುರಿಗೆ ಜೀವನವನಣಿಗೊಳಿಪ ನಿರ್ಧಾರ.
'ಅನ್‌ಟುದಿಸ್ ಲಾಸ್ಟ್' ಗಾಂಧಿಯೋದಿದ ರಸ್ಕಿನ್‌ರ
ಮೊದಲ ಹೊತ್ತಿಗೆ, ತಕ್ಕ ಹೊತ್ತಿಗೆ ದೊರೆತ ಹೊನ್ನು.
ಜೀವನದ ಕರ್ಮರಂಗದಲಿ ಮುಳುಗಿದ ತಮಗೆ
ಪುಸ್ತಕ-ಜ್ಞಾನ ಅಷ್ಟಕಷ್ಟೆ, ಮಿತದ ಓದುವಿಕೆ
ಅರಗಿಸಿಕೊಳಲು ಸಾಧ್ಯ, ಹಾರ್ದಿಕ ಎಂಬನಿಸಿಕೆ.
ಈ ಗ್ರಂಥವಾಯಿತು ಬಾಳಿನಲಿ ಪರಿವರ್ತನೆಗೆ
ಮಂತ್ರ. ಮಾತೃಭಾಷೆಗೆ ತಾವೆ ತಂದ 'ಸರ್ವೋದಯ'
ಶ್ರಮಜೀವಿ ಜೀವನವೆ ನೈಜ, ಅದೆ ಉಪಾದೇಯ.

## ತಕ್ಕಡಿ

ಒಂದು ಪರಡಿಯಲಿ ಬದುಕು, ಇನ್ನೊಂದರಲ್ಲಿ ಭಗ-
ವಂತ, ತೂಗಿ ನೋಡಲು ಯಾವುದು ಮೇಲೆ ಕೆಳಗೆ?
ಅನುಭವದ ಇತಿಮಿತಿಗೆ ಎಟುಕಲಾರದ ಹಾಗೆ
ಮುಳ್ಳು ಹೊಯ್ದಾಡುತಿರೆ ನೆನಪುಗಳ ಸಹಯೋಗ :
ಬಿಂಬದಲಿ ತುಂಬಿ, ಶಬ್ದದಂಚಿನಲಿ ತುಳುಕಾಡಿ
ಗಂಧ ಪೂಸಿದ ನಾದ-ಸ್ಪರ್ಶ ರೋಮಾಂಚನದಿ
ಹೃದಯದೊರತೆಗೆ ಚಿಮ್ಮಿ ಹರಿದಂಥ ಪ್ರೀತಿ-ನದಿ
ಕಡಲ ಕೂಡಲಿ, ಬಿಡಲಿ, ತಣಿದವರೆಡೂ ತಡಿ.
ನಿನ್ನ ರೂಪಾನುಭವ ಕಡೆದ ದೇವರು; ಪಾಪ,
ಜೀವನವೆಷ್ಟು ಹಿರಿದೊ ಭಾವನೆಯಲೂ ಅನಿತು
ದೊಡ್ಡವನೆ, ಊಹೆ ವಿಸ್ತರಿಸಿದನಿತೂ ಒಳಿತು
ಜೀವಕ್ಕೆ. ನಿರಾಕರಣೆ ಏಕೆ? ಇರು ಸಮೀಪ.
ಪುಟಗೊಳ್ಳುತಿರಲಿ ಪಂಚೇಂದ್ರಿಯದ ಪರುಟವಣೆ
ಪ್ರವಾಹದಲ್ಲಿಳಿದು ಬಾಳುವ ಶಕ್ತಿಗಾವುದೆಣೆ.

## ದೂರಾನ್ವಯ

ದಿನವಿಡೀ ದುಡಿದ ಒಡಲಿಗೆ ಇರುಳಿನ ನಿದ್ದೆಯ
ಸುಖ ಸಹಜೀಕ. ಹಗಲೆಲ್ಲ ಸೋಮಾರಿ ಅಲೆದ-
ವಗೆ ನಿದ್ರೆಯಲ್ಲೇನಾಗಬಹುದೊ ಎಂಬ ಭಯ.
ನೈಜ ಬದುಕಿಗೆ ಸಾವಿನ ಚಿಂತೆ ದೂರಾನ್ವಯ.
ಮರಳಿದವರಿಲ್ಲ ಬಂದು ಹೇಳಲದರಾಚೆಯ
ಸುದ್ದಿ. ಬುದ್ಧಿ ಇದ್ದವ ತೀರಿಸದೆ ಹೋಗುವದೆ
ಈ ಪ್ರಪಂಚದಪಾರ ವ್ಯಾಪಾರ-ಮರ್ಯಾದೆ?
ಕೊಟ್ಟು-ಕೊಂಡ ಬೆಲೆ ಮಿಕ್ಕಲು ಋಣದ ಸಂದಾಯ
ಜೀವನದ ಹಿತ ತಿಳಿವ ಬಗೆಯಲ್ಲಿ. ಇಂದಿಲ್ಲಿ
ಸಂದಿಗೆ ನಿನ್ನೆ-ನಾಳೆಯ ಪಾಲು. ಬಯಸುವಷ್ಟೆ
ಬಯಸಿದರೆ, ಅದೆ ಸೊಗಸು; ನಕ್ಕರು ಅಷ್ಟಕಷ್ಟೆ.
ಕೋಟಿಗಟ್ಟಲೆ ಜೀವ ನಿನ್ನಂತರಾಳದಲಿ.
ಕಟ್ಟಳೆಯ ಕಟ್ಟು ಕಳಚಿ ಬೆಳೆಯುವದೆ ಸಾಧನೆ
ಹಿರಿ ಹಿರಿ ಹಿಗ್ಗುತಿರಲಿ ದೈವತ್ವದ ಕಲ್ಪನೆ.

# ಗುರಿ

ಗುರಿಯು ಸುಸ್ಥಿರವೆ? ಅಥವಾ ಅದಕು ಗರಿಯುಂಟೆ?
ದೂರ ಬಾನಿಗೆ ಹಾರಿ, ಮರಳಿಗೂಡಿಗೆ ಬರುವ
ಸಂಭ್ರಮ ಪರಿಭ್ರಮಣ? ಮರಿಗೆ ರೆಕ್ಕೆ ಬಲಿಯುವ
ನಲಿವು. ಪ್ರಕೃತಿ-ಪ್ರಪಂಚಕೆಂದಿಗೂ ಬ್ರಹ್ಮಗಂಟೆ?
ಗುರಿ ತಲುಪಿದಷ್ಟಕೂ ಪೂರ್ಣತೆಯೆಲ್ಲಿ ಬಂತು?
ಒಡಗೂಡಿ ತುಡಿವ, ದುಡಿವ ಸಾಧನೆಯಲ್ಲೆ ಸುಖ-
ಕುತೂಹಲದ ಕೈ ಹಿಡಿದು ಕಣ್ದೆರೆದ ಸಮ್ಮುಖ.
ಕರುಳರಿತ ಚೇತನ ಒಂದರೊಳಗೊಂದು ಬೆರೆತು.
ಒಂದು ಗೆಲುವಿಗೆ ನೂರು ಸೋಲುಗಳ ಮೆಟ್ಟಿಲು.
ಸಾಹಸವನಿಟ್ಟು ತೂಗಿರುವ ತೊಟ್ಟಿಲ ಜೀಕ.
ಆಯಾಸ ಪರಿಹಾರದಲಿ ಏರಿಳಿವ ತವಕ,
ಹರಿವಾಗ ಮಾತ್ರವೆ ನಾದ ಹೊಮ್ಮಿಸುವ ಹೊನಲು.
ಆದರ್ಶ ಕರ್ತವ್ಯದಲಿ ಪಡೆವ ಸಂತೋಷ.
ಮರ್ತ್ಯಕಂದು ಕಾತರಿಸಿಹುದು ಸಂಪ್ರೀತಿ-ಸ್ಪರ್ಶ.

# ಸ್ವಯಂಪ್ರಭೆ*

ಮಾತು ಮಾತಿಗೆ ಗೋಣು ಹಾಕುತ್ತ 'ಹೌದ್ಹೌದು'
ಎಂದರೂ ಅಲ್ಲದುದನಲ್ಲಗಳೆಯದೆ ಬಿಡದ
ಜಿಗುಟುತನ. 'ನೋಡ್ರೀ' ಎಂದು ಎರಡು ಕೈಯಿಂದ
ಬಿಡಿಸಿ ಹೇಳುವ ರೀತಿ ಹೆಗ್ಗಳಿಕೆ ಎನಿಸೀತು-
ಒಪ್ಪಿದರೆ ಹಿಗ್ಗಿ, ಪುಟ್ಟ ಹೆಜ್ಜೆಗು ದಿಟ್ಟನಡೆ
ತನ್ನದೆ ಠೀವಿ, ಬಡಿವಾರವಲ್ಲ, ನಿಜಕು ನಡೆವ
ಗಡಿಯಾರ. ಅಂಜಿಕೆ ತೊರೆದ ಆತ್ಮವಿಶ್ವಾಸ
ಹೊರ ಹೊಮ್ಮಿಸಿದ ಸ್ವಯಂಪ್ರಭೆಗೆ ಬಿಚ್ಚಿದ ಕೊಡೆ.
ವಿದ್ಯೆ ಬೆಳೆಯುವ ವೃಕ್ಷ; ಹತ್ತು ಕಡೆಗೂ ಕೊಂಬೆ,
ಮಿರುಗುವ ಚಿಗುರು, ಉಲಿವ ಗಿಳಿವಿಂಡು, ಶ್ರದ್ಧೆಯಲಿ
ಎಡೆಬಿಡದೆ ಸಾಧಿಸಿದ ಶಿಸ್ತು ಜೀವನ ಶೈಲಿ.
ಅಧ್ಯಯನ ಅಧ್ಯಾಪನಕೆ ಆತ್ಮೀಯ ಬೆಸುಗೆ.
'ಸ್ತ್ರೀವಾದಿ' ಎಂದು ಊದಬೇಕಿಲ್ಲ ಸನಾದಿ
ಎಪ್ಪತ್ತರೀಚೆ ಅವರಿಗೆ 'ಬಾಬಾ' ಉಮೇದಿ.

* ಡಾ. ಸರೋಜಿನಿ ಶಿಂತ್ರಿ ಅಭಿನಂದನ

# ಭಯೋತ್ಪಾದಕ

ತನ್ನಲ್ಲೆ ಹುಟ್ಟಿ ಬೆನ್ನೊಳಗೆ ಹೊರಬಿದ್ದಂತೆ
ಊರು ಕೇರಿಯ ಹೊಕ್ಕ ಹುಲಿಯ ಕೆಂಗಣ್ಣಿನಲಿ
ಅಭಯಾರಣ್ಯ! ಉಭಯಕುಶಲೋಪರಿಯ ಶೈಲಿ.
ಹುಲ್ಲು ಮೇಯುವ ಹುಲ್ಲೆ ತಬ್ಬಲಿಯಾದ ಮುಗ್ಧತೆ.
ಭೂಗೋಳ ತಿರುಗಿಸುತ ಎಲ್ಲಿ ಬೆರಳಿಟ್ಟರೂ
ಬೆಂಕಿ, ಹಲ್ಲು ಮಸೆಯುವ ಸೇಡು-ಹೊಗೆ, ಚೆಲ್ಲಿರುವ
ನೆತ್ತರಿಗಿಲ್ಲ ಇಲ್ಲಿ ಬೆಲೆ, ಸೆಲೆ ಬತ್ತಿದಂತರಂಗ.
ಹತ್ತಿರವಿದ್ದರೂ ದೂರ, ಜೀವ-ಕುತ್ತುಸಿರು
ಭಾವಕೋಶವ ಕುಕ್ಕಿ ಹೆಕ್ಕಿ ತಿನ್ನುವ ಹದ್ದು
ಸದ್ದಿರದೆ ಹೂಮರಿಗೆರಗಿ ಮುಕ್ಕಿಮೊಗೆಯುವ
ಸೊಕ್ಕು. ಪ್ರಕೃತಿಯಲಿ ಜೀವಿಸುವ ಹಕ್ಕು ಕಸಿಯುವ
ವಿಕೃತಿಗೂ ಎಡೆಯುಂಟೆ? ಯಾರರೆಯುವರು ಮದ್ದು?
"ರವಿ-ಶಶಿ-ತಾರಾ ನಿವಹಕಿರದ ಭಯ" ನಮಗಿರದೆ?
ಭೂಮಿಯ ಸ್ವಾಮಿತ್ವಕೆ ಹೇ-ರಾಮಾ ರಕುತವಿದೆ.

## ಕನಕದಾಸರಿಗೆ

ಸಂಪ್ರದಾಯದ ಜಾಡ್ಯ ಜಡತೆಯಡೆತಡೆ ದಾಟಿ-
ಕೆದಕಿದವಮಾನಕ್ಕೆ ನೋವುಂಡ ವೈರಾಗ್ಯ-
ನಸುಗೋಪ ಏಕ ಕಾಲಕ್ಕೆ ನಿನ್ನೊಳವಿಭಾಜ್ಯ
ಕುಲದ ನೆಲೆಯರಿತ ಕೀರ್ತನೆಗೆ ಗೆಲುವಿನ ಧಾಟಿ.

ಪ್ರೀತಿಗೆ ತ್ಯಾಗ-ಯೋಗ-ಷಟ್ಪದಿಯ ಸಾಂಗತ್ಯ
ಕಾಗಿನೆಲೆ-ಜೀವಕಲೆ, ವ್ಯಾಸ-ದಾಸ ಕೂಟದ
ಬದಿಗೆ ಬಾಡದ ಬಕುಳ, ನಿರಾಕುಳ ನಿರ್ಮಲದ
ನಮ್ಮ ದ್ಯಾವರ ನೋಡಿ: ಎಲ್ಲಿಹುದು ವಾಗತ್ಯ?

ತಲ್ಲಣದಲ್ಲು ತಾಳಿ, ಭವಹಿಂಗಿ ಬದುಕುಂಡ
ಕಲಿಯುಗದ ಮಹಿಮೆಯನು ಕಂಡಷ್ಟು ಕಾಣಿಸಿದ.
ಹೊಟ್ಟೆ ಬಟ್ಟೆಗೆ ದುಡಿವ ಗುಟ್ಟು ಹೊರಗೆಡಹಿದ.
ಆದಿಕೇಶವನೆದುರು ಆದ್ಯಂತ ತೋಡಿಕೊಂಡ.

ರಾಗಿ-ರಾಘವ ಪ್ರಜ್ಞೆ ಹಿಡಿದಿರಲು ಸಮತೂಕ
ಬಯಲು-ಆಲಯದಲ್ಲಿ ಕಿಂಡಿ ಬೇಕಿತ್ತೆ ಕನಕ?

# ಅಪ್ಪಣ್ಣಗೌಡರಿಗೆ*

ನಸುಗಪ್ಪು; ನಸುಕು ಹರಿದಂತೆ ತಿಳಿಮನದ ಬಗೆ,
ಗಾಂಧಿ ಮಾರ್ಗದಿ ಇಟ್ಟ ಹೆಜ್ಜೆ ತೆಗೆಯದ ದಿಟ್ಟ
ಧಾರಾಳಿ, ಪರಿಪರಿಯ ಕಷ್ಟಸೋಸುವ ರೈತ-
ಕಾರ್ಮಿಕರ ಸಂಗಾತಿ, ಶೋಷಿತರ ಜೊತೆಗೆ
ನಡುಕಟ್ಟಿ ನಿಂತು ಕಟ್ಟಿದ ಕನಸು ಸಾಕಾರ.
ಸಮುದಾಯಕ್ಕೆ ಸಹಕಾರ ದೀಕ್ಷೆ, ಸದಾಚಾರ,
ಸಂಸ್ಥೆಗೆ ಸ್ವಯಂಶಿಸ್ತು, ಚೊಕ್ಕ ವ್ಯವಹಾರ.
ಮಾಡಿದ್ದು ಮಾದರಿಯಾಗಿ ನಿಲ್ಲಿಸಿದ ಧೀರ.
ಕಲಿತವರಿಗಿಂತ ಮಿಗಿಲಾದ ವಿದ್ಯಾಸಕ್ತಿ
ಕಂಗೊಳಿಸಿದವು ಶಾಲೆ-ಕಾಲೇಜು ಮುಂದಾಗಿ
ಹಳ್ಳಿ-ಪಟ್ಟಣವೆನದೆ ಮುಂಬರಿವ ಹಂಬಲದಿ
ಹಿಂದುಳಿದ ಕೀಳರಿಮೆ ಕಿತ್ತ ಪ್ರೇರಕಶಕ್ತಿ.
ದೀನ ದುರ್ಬಲರಿಗಪ್ಪಣ್ಣ ಅಪ್ಪಟ 'ಸತ್ಯ'
ಹಿರಣ್ಯಕೇಶಿಯು ನಿತ್ಯ ಹರಿವಂತೆ ಕೃತಕೃತ್ಯ.

---

* ಸಂಕೇಶ್ವರದ ಸಹಕಾರಿ ಧುರೀಣ

# ಉಡುಪು*

ಕಡಲ ತೀರದಲೊಮ್ಮೆ ಭೆಟ್ಟಿಯಾದರು ಚೆಲುವ-
ಅಂದಗೇಡಿ; 'ಬಾ ಸ್ನಾನ ಮಾಡೋಣ' - ಬಟ್ಟೆಯ
ಕಳಚಿ ನೀರಿಗಿಳಿದರು ನಗುತ, ತಣ್ಣಗೆ ಮೈಯ-
ನೊಡ್ಡಿ, ಕೆಲಹೊತ್ತು ಈಜಿ ದಂಡೆಗೆ ಬಂದ ಕುರೂಪ
ಚೆಲುವನ ಬಟ್ಟೆ ತೊಟ್ಟು ನಡೆದು ಬಿಟ್ಟ. ನಂತರ
ಬಂದ ಸುರೂಪಿಗಚ್ಚರಿ, ಬತ್ತಲೆಗೆ ನಾಚಿದ
ಅನಿವಾರ್ಯ ಕುರೂಪನುಡುಪಿನಲಿ ಹೊರಟುಹೋದ.
ಸುಂದರತೆ ಬಗೆಗೆ ಜನಕೆ ಇಂದಿಗೂ ಗೊಂದಲ.
ಈ ಮೊದಲು ಚೆಲುವನ ಮುಖವ ಕಂಡ ಕೆಲವರಿಗೆ
ಗೊತ್ತು ಉಡುಪಿನ ಉಡಾಫೆ. ಕುರೂಪನ ಸ್ವರೂಪ
ಬಲ್ಲವರು ಇದ್ದಾರೆ ಇನ್ನೂ ಕೆಲವರು; ಪಾಪ
ತಮಗೇಕೆ ಒಣ ಉಪದ್ವ್ಯಾಪ ಎಂಬ ಹಿಂಜರಿಕೆ.
ಲೋಕದಲಿ ಉಳಿದುಕೊಂಡಿಹುದು ಈ ರೀತಿ ಭ್ರಮೆ
ಎರಡನೂ ಲೆಕ್ಕಿಸದೆ ಸಾಗಿದೆ ಹೃದಯದೊಲುಮೆ.

---

* ಖಲೀಲ ಗಿಬ್ರಾನ್‌ನ ದೃಷ್ಟಾಂತಕ್ಕೆ ಋಣಿ

# ದೂರದ ನೋಟ

ಎಷ್ಟು ದೂರದ ನೋಟ ಕಣ್ಣಿಗೆಟುಕಿಸಬಲ್ಲೆ?
ಅವರವರ ಕ್ಷಿತಿಜದಂಚಿಗೆ ಮಿಂಚುವಾದರ್ಶ -
ಸನಿಹ ಸುಳಿಯದ ಸ್ಪರ್ಶ, ಹನಿ ಹನಿಯ ಉತ್ಕರ್ಷ
ಹಳ್ಳ-ಹೊಳೆಗಳ ಗತಿಗೆ ಮಹಾಸಾಗರದೆಲ್ಲೆ.
ಹೆಜ್ಜೆಗೊಂದೊಂದು ಮಿತಿ, ನಡೆದು ಬಂದಿಹ ದಾರಿ-
ಎಡಬಲದ ಗಿಡಗಂಟಿ, ಹಸುರಾದ ಹೊಲ-ಗದ್ದೆ
ದಾಟಿ ಊರು ಸೇರಿದರು, ಅಗೊ ಇನ್ನೂ ಮುಂದೆ
ಕಾದಿದೆ ಜಗದ ವಿಸ್ತಾರ, ಗಿರಿಗಿರಿ ತಿರುಗಿಸಿ
ನೋಡಿ:ವಕ್ರತೆಯ ವಸ್ತುವಿಗು ಚಕ್ರಾಕಾರ.
ತನ್ನ ತಿಳಿವಿಗೆ ಎಲ್ಲ ಮೂಲೆಗಳು ಶಾಲೆಗಳೆ
ಈ ನಡುವೆ ಇದ್ದದ್ದೆ ಬುದ್ಧಿಗೇಡಿಯ ರಗಳೆ.
ಕಟ್ಟುನಿಟ್ಟಿನ ನಿಯಮಕ್ಕೂ ಉಂಟು ಆಪವಾದ.
ಬದುಕಿನಲಿ ಯಾವುದು ನಿರರ್ಥಕ? ಹೇಳಿ ಮೊದಲು-
ಸಾರ್ಥಕತೆ ಹೊಳೆಯುವದು ಇಳಿದಹಮ್ಮಿನ ಅಮಲು.

# ಪ್ರಶ್ನೋತ್ತರ

ಒಂದು ಪ್ರಶ್ನೆಗೆ ಹತ್ತು ಉತ್ತರಗಳಿರಬಹುದು
ಸರಿಯೊ, ತಪ್ಪೋ; ಒಂದೊಂದರೊಳು ಸುರುಳಿ ಸುತ್ತಿ-
ರುವ ಚಿತ್ರಗಳ ವಿವಿಧ ವಿನ್ಯಾಸಗಳ ಭಿತ್ತಿ-
ಒಂದು ಮನಸಿನ ನೂರು ಕನಸು ಚಿಗುರಿದುಮೇದು.

ನೆಲದ ಸತ್ವವ ಹೀರಿ ಹೊರಸೂಸುವ ನಿಸರ್ಗ
ಧಾತುವಿಗೆ ಉಪಸರ್ಗ, ಮಿರುಗುವಂತಃಕರಣ.
ಹುಟ್ಟು-ಸಾವಿನ ನಡುವೆ ಬದುಕು ಬೃಹದಾರಣ್ಯ.
ಸಹೃದಯರಿಗೆ ಜೀವ ಕಾರುಣ್ಯ ತೆರೆದ ಮಾರ್ಗ.

ಕಾಲ ಸಾಗಿದ ಹಾಗೆ ಮಾಗಿ, ವೈಶಾಖ-ಸಖ-
ಸುಖಿ-ವಸಂತ, ವರ್ಷಹರ್ಷೋನ್ಮಾದ ಘರ್ಷಣೆ.
ಅನುಭವದ ಒಟ್ಟಂದದಲಿ ಹುಟ್ಟುವಾಕರ್ಷಣೆ
ದಿನದಿನಗಳುರುಳಿ ಮರಳಿ ಮನ್ವಂತರ ಸಮ್ಮುಖ.

ಮತ್ತೆ ಮೊದಲಿನ ಪ್ರಶ್ನೆ; ಬದುಕು ಎಂಥ ವಿಲಕ್ಷಣ!
ಒಂದೇ ಉತ್ತರ : ಕಾರ್ಯತತ್ಪರತೆ ಪ್ರತಿಕ್ಷಣ.

# ತಿಳಿ

ಮಗ ಮಗಿಸುವ ಹೂವ ಸುತ್ತ ಧಗಧಗಿಸುವ ಉರಿ
ಶುಭ ನುಡಿಯುವ ಹಕ್ಕಿಗಳಿಗೆ ಬಂದೂಕಿನ ಗುರಿ.
ಬಾಂಬಿಗಿಂತ ಬಲವತ್ತರ ದ್ವೇಷದೊಂದು ಕಿಡಿ
ಒಳಗೊಳಗೇ ಹೊತ್ತಿ ಹೊಗೆದು ಬತ್ತಿ ಬಾಳ ಕುಡಿ.

ಕೊರೆ ಕೊರೆದರು ಭೂಮಿತಳಕೆ ಸಿಗದು ನೀರ ನೆಲೆ
ಸುರಿದುದನ್ನು ಹಿಡಿದು ಬಳಸಿಕೊಂಬುದೊಂದು ಕಲೆ.
ಹಸಿರು ಕೂಡ ಉಸಿರಾಡಲು ಬೇಕು ಗಾಳಿ, ಮಳೆ
ಬಸಿರಿನಲ್ಲಿ ಬೆಳೆವುದಕ್ಕು ಇಹುದು ಜೀವಕಳೆ.

ದೇಶವೆಂದರೊಂದು ಮನಸು, ನೂರು ಕನಸು-ಗುರಿ
ಭಾಷೆಯಲ್ಲಿ ಹಾಸು-ಹೊಕ್ಕು, ಬೀಸು ನವಿಲ ಗರಿ.
ರಸಾಯನದಿ ಹತ್ತು ಬಗೆಯ ಹಣ್ಣು-ಬಣ್ಣ ರುಚಿ
ಉಳಿಸಿಕೊಂಡುದೆಂತು ಅಂತೆ ಸಹಬಾಳ್ವೆಯ ಶುಚಿ.

ಈ ಸುನೀತ ನವನೀತವ ಕಾಸಿ ತುಪ್ಪ ತೆಗೆ
ತಳಕಿಳಿಯಲಿ, ಗಷ್ಟು ಮೇಲೆ ತಿಳಿಯಾಗಲಿ ಬಗೆ.

# ನಿಟ್ಟೂರು-ನಮನ

ನೀವು ಮೆಲ್ಲಗೆ ಬಂದು ಎದುರು ಕುಳಿತರೆ ಸಾಕು
ಸಭೆಗೊಂದು ಗಾಂಭೀರ್ಯ : ತಿಳಿನಗೆ ಸೂಸುವಾರ್ಯ.
ನೆನಪಿನ ಗಣಿಯ ಮಣಿಯ ಮಾಲೆಗೊಳಿಸುವ ಕಾರ್ಯ-
ಶತಮಾನದಿತಿಹಾಸ ಬಿಚ್ಚಿ ಕಟ್ಟುವ ಮೆಲುಕು.
ವೃತ್ತಿ-ಪ್ರವೃತ್ತಿ-ನ್ಯಾಯ ನಿಷ್ಠುರತೆ : ನಿಟ್ಟೂರು
ಬೋಧೆ-ಬರವಣಿಗೆ-ಪ್ರಕಾಶನ-ಸತ್ಯ ಶೋಧನೆ,
ಸಾಮಾನ್ಯರೊಡನೆ ಬೆರೆತು ನುರಿತ ಸವಿ ಚಿಂತನೆ.
ಶಾಂತಿ ಚಳುವಳಿಗೆ ಬಳುವಳಿ ಮಾನವ ಹಕ್ಕು.
ಕಿರಿಯರಿಂದಲು ಕಲಿಯಬಹುದೆಂಬ ಹಿರಿಯ ಗುಣ-
ಕಲೆ-ಸಾಹಿತ್ಯ-ಸಂಸ್ಕೃತಿ-ಸದಾ ಸಂವಾದಿ
ಎಲ್ಲ ಹದಗೆಟ್ಟಿಲ್ಲ ಎಂಬ ಆಶಾವಾದಿ :
'ಒಟ್ಟಾಗಿ ನಿಂತು ನೈತಿಕ ಮಟ್ಟ ಎತ್ತೋಣ.'
ಪ್ರಜಾಸತ್ತೆಗೆ ನೀಡಿ ಪರಿಶುದ್ಧತೆಯ ದೀಕ್ಷೆ-
ನೂರಕ್ಕೆ ನೂರು ನಿಮ್ಮದೇ ಚಾರಿತ್ರ್ಯ ನಕ್ಷೆ.

# ಶಿವನ ಸೊಮ್ಮು*

'ಬೋಲಬಗರಿ'ಗೆ ಬಾಲಭಾವ ಚಿಗುರಿಸಿ, 'ಮೊಗ್ಗೆ
ಮಾಲೆ' ಅರಳಿಸಿ, ನೀರೂರಿ 'ಸಕ್ಕರಿಗುಬ್ಬಿ'
ಅಕ್ಕರತೆಯಲ್ಲಿ ಹಳ್ಳಿ-ಶಾಲೆ-ಮಕ್ಕಳ ತಬ್ಬಿ
ಹಬ್ಬಿ ಹಂಬಲದ ಕುಡಿ ಸಂಗಮನಾಥನಡಿಗೆ.

ಶತಮಾನಗಳ ದಾಟಿ ಊಟೆ ಚಿಮ್ಮಿರೆ ಮತ್ತೆ
ವಚನರಚನೋತ್ಸಾಹ ಕನ್ನಡದ ಚೆನ್ನುಡಿಗೆ;
ಲೌಕಿಕವ ಬಿಡದ ಅಂತರ್ಮುಖದ ಸಾಧನೆಗೆ,
ಹೊಸ ಕಾಲದನುಭವದನನ್ಯ ಸಂವೇದನೆಗೆ.

ಬಿಸುಪಾರದಭಿವ್ಯಕ್ತಿಯಲಿ 'ಹೊಸಮನಿ' ಪ್ರವೇಶ
ಕಲ್ಲು ಮಣ್ಣಿಟ್ಟಿಗೆಗೆ ಅದೆ ರೂಪ ವಿನ್ಯಾಸ,
ಆಕಾಶದ ಪ್ರಕಾಶಕ್ಕು ತೆರೆದ ಬೆಳಕಿಂಡಿ.
ಹೊಸತಿಲಲಿ ಹುಲ್ಲಿರದ, ಹೂಬಿಟ್ಟ ರಂಗೋಲಿ.

'ತೀರ್ಥ'ವೋ, 'ಪ್ರಸಾದ'ವೋ ಶಿವನ ಸೊಮ್ಮಿನ ತಿರುಳು
ನೋವು-ನರಳಿಕೆಯಲ್ಲು ಹೃದಯ ಕನ್ನಡಿ ಹರಳು.

---

* ಹೊಸಮನಿ ಸಂಗಮೇಶ : ವ್ಯಕ್ತಿ-ಅಭಿವ್ಯಕ್ತಿ

# ಪ್ರಾಕೃತ ಪ್ರತಿಭೆ

ಬದುಕು ಬರೆಹಕ್ಕೆಲ್ಲ ಚಲನೆ ಉನ್ಮೀಲನವೆ
ಗೆಲುವು, ಬಂಡೆ-ಬೆಟ್ಟದ ಹೊಳೆಯ ಚೆಲುವು. ಕಟ್ಟಳೆ
ಮೀರಿ ಹರಿವ, ಒಡಮುರಿವ ತುಡಿತಕ್ಕೆ ಜೀವಕಳೆ
ಶಿಲ್ಪಿಗೆಟುಕದ ರೂಪ-ಅರೂಪದವತರಣವೆ.
ಆಕಾಶಕ್ಕೆ ಹೊಳೆದ ಕಾವ್ಯ ನಕ್ಷತ್ರ ಖಚಿತ.
ಬೀಸುಗಾಳಿಗೆ ಮಿಂಚಿ, ಗುಡುಗಿ ಸುರಿಯುವ ಮೋಡ-
ಮಹಾಛಂದಸ್ಸಿನ ಬಂಧುರಕೃತಿಗೆ ಶ್ರುತಿಗೊಂಡ
ಹೃದಯ ವೀಣೆಯ ತಂತಿ ನರನರದಿ ಜೀವಂತ.
ಕುದುರೆ-ಖುರಪುಟ ವೇಗದೋಟಕ್ಕೆ, ಬೇಟೆಗೆರ-
ಗುವ ಹುಲಿಗೆ ಹರಿತ ಪಂಜ; ಬಕದ ನೀಳ ಕಾಲಿಗೆ
ತಳದ ರಾಡಿ ಸಲೀಸು, ಹಿಮಾಲಯದ ಕರಡಿಗೆ
ಚಪ್ಪಟೆ ಪಾದ ಪಸಂದು: ಎಂದಿಗೂ ಅದಕದರ
ವಿವಿಧ ವಿನ್ಯಾಸ : ಪ್ರಾಕೃತ ಪ್ರತಿಭಾ ವಿಲಾಸ.
ವಿಕೃತಿಗೆಡೆಗೊಡದ ಸಂಸ್ಕೃತಿ ಅದರ ಮಂದಹಾಸ.

# ಲೇಖನಿ

ತಲೆಗೆ ತುಂಬಿದ್ದರೂ ಬರಹಕಿಳಿಯುವ ಪೂರ್ವ
ಗರ್ಭಧಾರಣೆ ಕಾಲ : ಹಡೆವ ಮುನ್ನಿನ ತಾಯ
ಬಸಿರೊಳಡಗಿದ ಭ್ರೂಣ. ದಿನವು ತುಂಬುವ ಮೊದಲೆ
ಅಚ್ಚಿಗವಸರಿಸೆ ಅತಿಸಾರ : ಬೇನೆ ಎಂದೇ
ತಿಳಿದ ತಪ್ಪು. ಮನಸ್ಸಾಕ್ಷಿಯ ಮಾರಿ, ತನ್ನ
ನಿಜ ನಂಬಿಕೆಗೆ ವ್ಯತಿರಿಕ್ತದಭಿವ್ಯಕ್ತಿ ಕೃತಕ
ಗರ್ಭಪಾತಃ ಭ್ರೂಣಹತ್ಯೆ; ತಲೆಯಲ್ಲಿ ಹೊಕ್ಕ
ಗುಂಗು-ಬಿರುಗಾಳಿ ಅಂಗಾಂಗದಲಿ ಸುತ್ತಿ ಸುಳಿ-
ಗೊಂಡು ಅಕ್ಷರದಿ ತಡೆಯುವ ಮೋಕ್ಷ ಪ್ರತ್ಯಕ್ಷ.
ತನ್ನ ಮಗುವಿಗೆ ತಾಯಿ ಕೊಡುವ ಮಮತೆಯ ಮುದ್ದು
ಸ್ವಂತದ್ದು, ಕರ್ತೃವಿಗೆ ಅಂತ್ಯಕಾಣದ ಜಿದ್ದು.
ಸೂರ್ಯನಿಗು ಆಗೀಗ ದಟ್ಟ ಮೋಡದ ಮುಸುಕು.

ಬರೆಬರೆದಂತೆ ಲೇಖನಿ ಹರಿತ: ಮೋಚಿಯ ಉಳಿ
ಆದೀತು ರೇಶಿಮೆ ಕಸೂತಿ ಹಾಕುವ ಸೂಜಿ.

# ಕವಿಮಿತ್ರ ನಿಸಾರ್ ಅಹಮದ್

ಸೂಟಿನಲಿ ನೀಟಾಗಿ ಹೊರಟಿದ್ದು ಸಾಹೇಬಕಿ
ಮೆರೆಯಲಿಕ್ಕಲ್ಲ; ತನ್ನ ಪದ್ಯದ ಛಂದ-ಧಾಟಿ
ಬದ್ಧತೆಗೆ. 'ಬಹಿರಂತರ'ದ ಗೀತಕ್ಕೆ ಸಾಟಿ-
ಗಾಳಿಯಾಡುವ ಸರಳ ಸೊಗಸಾದ ಬಿಳಿಯಂಗಿ.
ಭಾಷೆಯನು ಮಿದ್ದಿ ಹದಗೊಳಿಸಿ ಚಿಗುರಿದ ಮೀಸೆ.
ಪರಕೀಯನಾಗಿ ತಲೆಯೆತ್ತಿ ನಿಲ್ಲುವ ಕಷ್ಟ
ಹಗುರಗೊಳಿಸಿದ್ದು ಪರಸ್ಪರ ಬೆರೆವ ತುಡಿತ.
ಒರಟಾಗಿ ಕಂಡದ್ದು ಬರಿಯ ಮಾತಿನ ವರಸೆ.
ಗುಂಪಿನಿಂದೊಂದಿಷ್ಟು ದೂರ ಉಳಿದಿದ್ದರೂ
ಗಾಂಧೀಬಜಾರಿಗೆ ಮತ್ತೆ ಸುತ್ತು ಹೊಡೆಯುವುದು
ತಪ್ಪಿದ್ದಲ್ಲ. ಕಾಲಿಗೊತ್ತಿದ ಗಾಜಿನ ಚೂರು
ದೂರಕೆಸೆದು ಸಾಗಿದ ಮಾಸ್ತಿ ಸಂಸ್ಕೃತಿಗಿವರು
ಮಣಿದವರು. ಆಗು-ಹೋಗುಗಳ ಮಾಗಿಸಲೆಂದೆ
ಏಕಾಂತ. ಸಾಧನೆಗೆ ಮೂಲ ಅಂತರ್ಮುಖತೆ.

## 'ದಾಂಪತ್ಯ ಗೀತ'ಕ್ಕೆ

ಚಳಿಯಲ್ಲಿ ಬೆತ್ತಲೆ ನಿಂತ ಕವಿಯ ಮನಸಿನಲಿ
ಹುಳಿಯಿಲ್ಲ. ನಡೆದು ಹೋದದ್ದಕ್ಕೆ ಹಳಹಳಿಕೆ-
ಪಳೆಯುಳಿಕೆ ತೊಗಟೆಯಾಗದೆ, ಎಳೆಯ ಬಿಸಿಲಿಗೆ
ಮತ್ತೆ ನಳನಳಿಸಿ ಚಿಗುರಿದ ಪ್ರೀತಿ ಹೂವಾಗಿ,
ಹಣ್ಣಾಗಿ, ಕಣ್ಣು ಕೋರೈಸಿ ಹಾರೈಸಿಹುದು.
ಘರ್ಷಣೆ-ಆಕರ್ಷಣೆ ಶೀರ್ಷಿಕೆಯೆ ದಾಂಪತ್ಯ
ಈ ಪತ್ತಿಗನಗತ್ಯ ಹೆರವರ ಪಾರುಪತ್ಯ.
ತಾಯಿತನ-ತಂದೆತನ ತನನತೋಂ ಹಾಡುವದು:
ಮನನ-ಚಿಂತನ-ಕಥನ ಸಂಕೀರ್ತನದ ಸೊಗಸು.
ನುಡಿಯ ಬಂಧವ ಮೀರಿ ಸ್ವಚ್ಛಂದವೆನಿಸಿದರು
ಪ್ರಾಸಾನುಪ್ರಾಸ, ಲಯ, ನಾದ ಕಾವ್ಯದ ಕುಸುರು.
ಅದು ಸ್ವ-ರಹಸ್ಯ, ಉಪಹಾಸಕೆಡೆಯಿರದ ತಪಸು-
ಉಪಾಸ್ಯ. ಬೆಟ್ಟದ ನೆಲ್ಲಿ ಕಡಲಿನುಪ್ಪು ರುಚಿಗೆ
ಜೊತೆಗೆ ಮಾಗುವ ಭಾಗ್ಯ ಒದಗಿ ಬರಲೆಲ್ಲರಿಗೆ

---

* ಸಮತೀಂದ್ರ ನಾಡಿಗರ 'ದಾಂಪತ್ಯಗೀತ'

# ಹರಿವ ನೀರಿನ ಮರ್ಮ

ವಿಹಾರಕ್ಕೆ ಬರಲಿಲ್ಲ ಈ ನದೀ ತೀರಕ್ಕೆ :
ಬದುಕಿನೇರಿಳಿತಗಳ ದಾಟಿ, ನೆಲ-ಜಲದ ಮೈ-
ಗುಣವ ತುಂಬಿಕೊಂಡಿಹ ಮಡಿಲು ಪ್ರೀತಿಯಲಿ ಕೈ-
ಚಾಚಿ ಕರೆಯಿತು ಪಾರದರ್ಶಕ ಪ್ರವಾಹಕ್ಕೆ.
ಇಕ್ಕೆಲದ ಹಸಿರು ಮರಗಳ ತುಂಬ ಹಕ್ಕಿಗಳೆ
ರೆಕ್ಕೆ ಬಿಚ್ಚಿವೆ ಮತ್ತೆ ದೂರದನ್ವೇಷಣೆಗೆ.
ಹರಿವ ನೀರಿನ ಮರ್ಮ ಕಾವ್ಯಕರ್ಮದ ತೆರೆಗೆ.
ಹರೆಯ ತಿರುಗಿದ ಕವಿಯ ಕಣ್ತುಂಬ ಕವನಗಳೆ.
ಬೆದೆ ಬಿದ್ದ ಪ್ರತಿಭೆ ಬೆಂಬತ್ತಿ ಕೆತ್ತುವ ಹದನು.
ವ್ಯಂಗ್ಯ ಮೀರಿದ ನಿಸ್ಸಂಗನೆಲೆಗರ್ಥ ಸಾಂದ್ರ.
ಬತ್ತಿದರೆ ಪಾತ್ರಕ್ಕೆ ಕಪ್ಪೇಚಿಪ್ಪು ಚಂದ್ರ.
ಉಭಯ ನೀಳ್ದೋಳಿನಲಿ ಕನಸಿನ ಹೊಸ ಕಮಾನು.
ಛಂದೋಬದ್ಧ ನುಡಿಗು ಒಗುಮಿಗುವ ಸ್ವಚ್ಛಂದ
ಮೈ-ಮನಸು-ಬುದ್ಧಿ ಪಳಗಿಸುವ ಕುಶಲ ಬಂಧ.

---

* ಎಚ್.ಎಸ್. ವೆಂಕಟೇಶಮೂರ್ತಿಯವರ 'ನದೀ ತೀರದಲ್ಲಿ'

## 'ತಾರಣ' (ಸಂವತ್ಸರ)

ಬದುಕಿನ ಬಗ್ಗೆ ಒಮ್ಮೆ ದೃಷ್ಟಿ ಬದಲಿಸಿ ನೋಡು-
ನಿಡುಬೆಳಕ ಬಿಡು ಅಡಗಿರುವ ಮೃತ್ಯುವಿನ ಮೇಲೆ.
ಒಂದು ದಿನ ಮಾತ್ರ ಉಳಿದಿಹುದೆಂದು ತಿಳಿ; ಆಗ
ನೋಡಿದರೆ ಹೊರಳಿ ಹೊಳೆವುದು ಅದರ ಗಾಢ ಬೆಲೆ.
ಅದಕೆ ಕೊನೆಯಿದೆಯೆಂದೆ ಬಾಳಿನ ಹೊಲದ ತೆನೆಗೆ
ಕಾಳು; ಹಣ್ಣು ಗಿಡಮರಗಳಿಗೇ; ಬಣ್ಣ ಬಾನಿಗೆ,
ಮಣ್ಣಿನ ಹಸಿರಿನುಲ್ಲಾಸ, ತಣ್ಣಗಿನ ಗಾಳಿ.
ಗಿರಿಯ ತುದಿಯಿಂದಿಳಿದು ಹರಿವ ನೀರದೊ ನದಿಗೆ.
ಬೆಳಗು ಬರುವುದೆ ಭಾಗ್ಯ: ನೀನದಕೆ ಪರಮ ಋಣಿ.
ಬ್ಯಾಂಕಿನ ಖಾತೆ, ಕಾರು, ಬಂಗ್ಲೆಗಳ ಬದಿಗಿರಿಸು.
ಹಳಿಯ ಮೇಲಿದೆ ಗಾಡಿ, ಸಡಗರದ ಮರು ಪಯಣ-
ಆಪರಿಚಿತರೂ ಬಂಧುಬಳಗ: ಎಂತಹ ಸೊಗಸು!
ವಯಸ್ಸಿಗೆ ಮಾಗಲಿಕ್ಕಿಲ್ಲ ಎಲ್ಲ ಚೈತನ್ಯ
ಈ ಕ್ಷಣವನುಜ್ಜೀವಿಸಿದರದುವೇ ಅನನ್ಯ.

# ಯುಮ್ತಾಂಗ್ ಕಣಿವೆ

(ಹಿಮಾಲಯದ ಅಡಿಯಲ್ಲಿ)

ರೊಡೊಡೆಂಡ್ರಾನ್ : ರಕ್ತಗೆಂಪಿನ ಪುಷ್ಪಗುಚ್ಛ ಗೊನೆ
ದಾರಿಯುದ್ದಕ್ಕು. ಬಗೆಬಗೆಯ ಬಣ್ಣದಾರ್ಕಿಡ್
ನಡುವೆ ಕಂಡು ಕಾಣದ ಹಾಗೆ. ದೃಷ್ಟಿ ಬಿಡಬೇಡ-
ಮುಂದೆ ಕಾದಿಹುದಮೋಘ ಯುಮ್ತಾಂಗ್ ಕಣಿವೆ.
ಮುಗಿಲ ಮುತ್ತಿಡಲು ಹಾತೊರೆವ ಬೆಳ್ಳಿ ಕಿರೀಟ-
ನಗಾಧಿರಾಜನಾಸ್ಥಾನ, ಹಿಮದಗಾಧ ಸಿರಿ-
ಕರಗಿ ಮಿರುಗುತಿಹ ಲಾಚುಂಗ್ ನದಿಯ ವೈಖರಿ.
ನೆಲಕೆ ಪ್ರಿಮುಲ್ ಹೂ ಹಾಸಿ ಕಸೂತಿ ಹೆಣೆದ ಮಾಟ.
ಕೂದಲಿಳಿಬಿಟ್ಟು ಮೇಯುವ ಯಾಕ್. ನದಿಯಾಚೆ
ಚಳಿಗೆ ಕಚಗುಳಿಯಿಡುವ ಖಿಶಿ-ಬಿಸಿನೀರ ಬುಗ್ಗೆ!
ಮಂಜಿನೊಳಗೂ ಹಸನ್ಮುಖಿ, ಹಿಮಗಿರಿಯ ಹಿಗ್ಗೆ!
ದಿಗ್ದಿಗಂತಗಳ ತೆಕ್ಕೆಗೆ ಮೈಚಾಚಿದೋಜೆ.
ಪರ್ವತಾವಳಿ ಹೊತ್ತು ಹೊರೆವ ದೇವತಾ ಪೃಥಿವಿ
ನಮ್ಮನೆತ್ತಿ ಆಡಿಸುತ್ತಿಹಳು ಕೂಸುಮರಿ ಮಾಡಿ.

# ಓದುವದೆ ಇಲ್ಲವೆ?

೧

ಓದುವದೆ ಇಲ್ಲವೆ? ಇದ್ದ ಸ್ಥಳವೇ ನಿನಗೆ
ಜೈಲು : ದೇಶಕಾಲ ಸಂಬಂಧದಲು. ಮೂಲೆಗೆ
ಮುಖ ಮಾಡಿರುವ ಬದುಕು, ಕೆಲ ಪರಿಚಿತರ ಜೊತೆಗೆ
ಮಾತುಕತೆ; ನೆರೆಹೊರೆಯೊಳಗೆ ನಡೆದುದಷ್ಟನೆ
ಬಲ್ಲ ನಿನಗೆ ಬಿಡುಗಡೆಯಿಲ್ಲ. ಕೈಗೆ ಪುಸ್ತಕ
ಬಂತ? : ಹೊಸ ಜಗದೊಳಡಿಯಿಟ್ಟೆ ಲೋಕದುತ್ತಮ
ಮಾತುಗಾರನುಡಿಯೊಳು ಬಿದ್ದೆ : ಬೇರೊಂದು ದೇಶ-
ಕಾಲಕ್ಕೊಯ್ದು ನಿಲಿಸಿ ಇಳಿಸುವ ದುಃಖಭಾರ.
ನೀನರಿಯದಿಹ ಜೀವನದ ಮುಖವ ಬಿಂಬಿಸುವ.
ವಿಸ್ಮೃತಿ ಕಳಚಿ, ಪ್ರಾಚೀನ ಕವಿಯ ಚೇತನ-
ದೊಡನೆ ಸಂಧಿಸಿ ನಿಂದ ನಿಲವಿನಲಿ ರೋಮಾಂಚನ.
ಇರುವುದಾದರೆ ಎರಡು ಗಳಿಗೆ ಎರಡೂ ಜಗದ
ಮಡಿಲೊಳಗೆ, ಸದ್ಯತನದಿಂದಾಚೆಯ ವಿಚಾರ-
ವಿಹರಿಸಲು, ದೈಹಿಕ ಬಂದಿಗಿದುವೆ ಪರಿಹಾರ.

೨

ಧ್ಯಾನಪರ ಲಹರಿಗೊಯ್ಯುದೆ ಓದಿನ ಉಮೇದು:
ಗ್ರಂಥದ ಪುಟ ತಿರುವದಿದ್ದ ದಿನವೆ ಪಂಡಿತನ
ಮುಖ ಪೆದ್ದು, ಮಾತು ನಿಸ್ಸಾರ, ಊಟ ರುಚಿಹೀನ.
ಸೊಗಸು, ಲವಲವಿಕೆ ಓದಿನ ಕಲೆಯ ಹೆಗ್ಗುರುತು.
ಮನಸು ತಿದ್ದುವುದಲ್ಲ, ಇದರ ಸುಖವೇ ಬೇರೆ.
ಷೇಕ್ಸ್‌ಪಿಯರ್, ಪಂಪ, ರನ್ನ ಕುವೆಂಪುಗಳನೋದಿ
ಸುಶಿಕ್ಷಿತನೆನಿಸಲೆಬೇಕು ಎಂಬವಸರದ ತಿದಿ-
ಒತ್ತದಿರು, ಒಳಗೆ ಒಲವಿನ ಕಿಡಿಯು ಹೊತ್ತದೆಯೆ.
ಅಭಿರುಚಿಯೆ ಮೂಲ, ಆಯ್ಕೆ ವ್ಯಕ್ತಿಗತ, ಊಟದ
ರುಚಿಯ ಹಾಗೆ. ತನಗಿಷ್ಟವಾದುದು ಪಚನಕ್ಕೆ
ಕಷ್ಟವೆ? ಶಕ್ತಿ ಮೈಗೂಡುವದು ತನ್ನಷ್ಟಕೆ.
ಆಸಕ್ತಿ ಗಿಡದಂತೆ ಬೆಳೆದು, ಹೊಳೆಯಂತೆ ಹರಿವ
ಅನುರಕ್ತಿ. ರಸ ಹೇಗೊ ಗಿಡಕೆ, ಹೊಸ ನೀರು ನದಿಗೆ
ಮನಸಿನಾಡುಂಬೊಲದಿ ಓದು ಸಾಗಲಿ ಹಾಗೆ.

# ನಮ್ಮ ಇಬ್ರಾಹಿಂ ಸಾಹೇಬರು

ಮೊಗೆದಷ್ಟು ತೀರದ ಸಿಹಿನೀರ ಬುಗ್ಗೆಯೊಂದಿಗೆ
ಶಿವಮೊಗ್ಗೆಯಲಿ : ಬೊಗಸೆ ಬೊಗಸೆಯ ತುಂಬ
ಕುಡಿದು ತಣಿದವರ ಸಂಖ್ಯೆ ಅಪಾರ, ಈ ನಡುವೆ
ಸಾಕಷ್ಟು ಹರಿದು ಹೋಗಿದೆ ನೀರು ತುಂಗೆಯಲಿ.
ಬಂಡೆ ಬಂಡೆಗೆ ಬಡಿದು ಬದುಕಿನೆರಡೂ ದಂಡೆ
ಏರುಪೇರು. ಆದರೂ ಎಂದಿನೊಲು ತುಂಬು ಮೊಗ-
ದಲಿ ನಂಬುಗೆಯ ನಿಶ್ಚಿಂತ ಕಳೆ, ಅಂತಃಕರಣ -
ದಾಲಿಂಗನ. ಹಿರೇಹಾಳಿನ ಬೇರು ನೀರುಂಡ
ಕಲಾರಾಧನೆಯ ಮಾಧುರ್ಯ. ಸಕಲ ಧರ್ಮದ
ತೀರ್ಥಯಾತ್ರೆಯಲಿ ಹೃದಯ ತುಂಬಿದ ಪಾತ್ರೆ.
ಪ್ರಸಾದದ ರಸಾಯನಕೆ ಸಾಮರಸ್ಯವೆ ಧಾತು,
ನಯ-ವಿನಯ ಜೀವಾತು, ಶ್ರಮಸಂಸ್ಕೃತಿ ಸಮಂತು.

ರಾಜಕೀಯದ ಧೂಳು ಸೋಂಕದ ಬಿಳಿಯ ಬಟ್ಟೆ
ಮಾನವತೆ ರಾರಾಜಿಸಲು ಬೇರೆ ನೆಲೆಯುಂಟೆ?

# ಅನಿಸುವದು ಒಮ್ಮೊಮ್ಮೆ

ಅನಿಸುವದು ಒಮ್ಮೊಮ್ಮೆ : ಉದಾತ್ತತೆಯ ಉದ್ರೇಕ-
        ಕಿಂತಲೂ ಸಾಮಾನ್ಯ ಮನವೆ ಮೋಹಕವೆಂದು.
        ದೋಷ - ದೌರ್ಬಲ್ಯ, ತುಸು ಅಡ್ಡನಡೆ-ನುಡಿ-ಕುಂದು-
ಇದರೆದುರು ಘನತೆ ಗಾಂಭೀರ್ಯ ಹೇರಿದ ಲೋಕ
ನೀರಸವೆ ಸೈ. ಪಾಪಗೈದಿಲ್ಲವೆನುವ ಸಂತ-
        ನಲಿ ಆಸ್ಥೆ ಕೆರಳುವುದೆ? ನಮಗಿರುವ ಆಕರ್ಷ-
        ಸ್ವಲ್ಪ ಅಸಂಬದ್ಧತೆ, ಅಸಾಂಗತ್ಯದ ಹರ್ಷ.
ಪರಿಪೂರ್ಣ ಮೆದುಳು ಪ್ರತಿವರುಷದಾದಿಗೆ ಹೊಸತು
ಸಂಕಲ್ಪಿಸದು. ಹಿಡಿದ ಕಾರ್ಯ ಮುಗಿಸುವ ಛಲಕೆ-
        ಯೋಜನೆಯ ವಿವರ ಜಾಹೀರಾತಿನಲಿ ಬರಲು
        ಸ್ವಾರಸ್ಯ ಕಾಣಿಸದು. ಸೇನಾಪತಿಗೆ ಗೆಲವು
ಮೊದಲೆ ನಿಶ್ಚಿತವಿರಲು ಯುದ್ಧಾಸಕ್ತಿ ತೋರಿಕೆ.
        ಭವಿಷ್ಯಕೆ ನಿರ್ಲಕ್ಷ್ಯ, ಚಂಚಲತೆ, ಮೊಂಡುತನ-
        ಇತ್ಯಾದಿಯಲ್ಲೆ ಮಾನವ ಮನದ ಸಂಚಲನ.

## ನಾ. ಮೊಗಸಾಲೆ

ಹೌದು ನೀವೆ : ಪಾಂಡವರಿಗೂ ದೊರೆಯದ್ದೈದೂರು -
ಗಳ ಪಡೆದು, ಜನಮನವ ಗೆದ್ದು, ದಿನವೂ ಕನಸು
ಕಂಡರಿಸಿ, ಕಣ್ಣೆದುರು ನಿಲಿಸಿಬಿಟ್ಟರಿ ತೇರು!
ಎಳೆಯಿತುತ್ಸಾಹದಲಿ ಹಿರಿ-ಕಿರಿಯ ತಲೆಮಾರು.
ಯಾವ ಶಾಲೆಯಲಿ ಕಲಿಸಬಹುದಿದನೆಲ್ಲ ಮೊಗ-
ಸಾಲೆ? ಅಚ್ಚಮಲ್ಲಿಗೆ ನಗೆಯಿದಾವ ಮಣ್ಣಿನ
ಕಂಪು? 'ಇದಲ್ಲ, ಅಲ್ಲ, ಎನ್ನುತ್ತಲೆ ಕವಿತೆಯ
ಗಲ್ಲ ನೇವರಿಸಿ ತೋರಿದ ಸಹಜಾಂತರಂಗ.
ಇದ್ದದ್ದೊಂದು ಇಲ್ಲದ್ದೊಂದು ಹೇಳುವುದಲ್ಲ-
'ನನ್ನದಲ್ಲದ್ದ'ನ್ನು ಎಲ್ಲರದ್ದಾಗಿಸುವ ನೆಲೆ-
ಯೆ ಅಯಸ್ಕಾಂತಾವರದಿ ತೆರೆದ ಜೀವನಕಲೆ.
ಮುದ್ದಣನ ನೆನಪೆ ನಂದಾದೀಪ. ಉಳಿದೆಲ್ಲ
ಹಚ್ಚಹಸಿರು. ಬೆಚ್ಚಗಿನ ಸ್ನೇಹದಂತಃಕರಣ,
ಪದ್ಯ ಓದುತ್ತ ಗದ್ಗದಿತ : ಸಹಜ ಸುಮ್ಮಾನ.

# ಚೊಕ್ಕಾಡಿಯ ಹಕ್ಕಿಗಳು*

'ನನ್ನ ಕವಿತೆಗೆ ರೆಕ್ಕೆಗಳಿಲ್ಲ'ವೆಂದರೆ ಯಾರು
ನಂಬುವರು? ಇಲ್ಲದಿರೆ ಎಲ್ಲಿಂದ ಬಂತಿದರ
ಸ್ವಚ್ಛಂದ ಬೀಸು? ಹೊಸಹಾದಿಯಾವಿಷ್ಕಾರ?
ಕಲ್ಲೆಸೆದರೂ ನಿರ್ಭಯದಿಂದ ಹಾರಾಡುತಿರು-
ವಾತ್ಮವಿಶ್ವಾಸ? ಅನಾಮಿಕ ಹಕ್ಕಿ-ಹಾಡಿನ
ಸ್ವರದ ಮೂಲ ಹುಡುಕಾಟ; ಹಾಗೆ ಹಾಡುತ್ತಲೆ
ಗೂಡು ಕಟ್ಟುವ ಮಾಟ; ಕಣ್ಣಿನಲಿ ಚಿಕ್ಕೆಗಳೆ.
ಬಾಲ ಕುಣಿಸುತ್ತ ಭೂಮಿ ತೂಗುವ ಬದುಕಿನ
ಲಯ, ಪುರ್‍ರನೆ ಹಾರಿ ಬಂದು ಕುಳಿತಲಾಗಾಯ್ತು
ಸೃಷ್ಟಿಗೆ ಅದೃಷ್ಟ. ಅದೊ ಮಲಗಿ ಕನಸುವ ಬೆಟ್ಟ!
ಕಾದು ಸಾಕಾಗಿ ಮನೆಯೊಳಗೇ ಹೊಕ್ಕುಬಿಟ್ಟ
ಹಕ್ಕಿ ಕವಿಮನವ ಕುಕ್ಕಿ ಹಾರಿ ಕವಿತೆಯಾಯ್ತು.
ಮಾಗಿಯ ಕೋಗಿಲೆಗೆ ಹಾಡು-ಜೋಪಾನ-ಧ್ಯಾನ
ವಸಂತಕ್ಕೆ ಚಿಮ್ಮದೇ ಒಳಗಿನಶ್ರುತಗಾನ?

---

* ಸುಬ್ರಾಯ ಚೊಕ್ಕಾಡಿಯವರಿಗೆ ಅಭಿನಂದನ

# ಪಾಪು : ಪ್ರಸ್ಥಾನ

'ಪುಟ್ಟಪ್ಪ' ಇಟ್ಟ ಹೆಸರಲ್ಲ ಎಂಬುದನೆಷ್ಟು
ಜನ ಬಲ್ಲರು? ಇಷ್ಟು ಖರೆ : 'ದೊಡ್ಡಪ್ಪ'ನಾದರು
ಕೈಹಿಡಿದ ಕನ್ನಡಮ್ಮನಿಗಿಂದಿಗೂ 'ಪಾಪು' -
ಹಾಗೆಯೇ ಸಣ್ಣವರಿಂದ ದೊಡ್ಡವರವರೆಗು.
'ಬರ್ರಿ, ಬರ್ರಿ' ಎಂದೆಲ್ಲರನು ಹತ್ತಿರ ಕರೆದು
ನಕ್ಕು ತಿವಿಯುವ ಸಲಿಗೆ, ಮರುಚಣವೆ ಗಂಭೀರ-
ನೆನಪಿನ ಗಣಿಯಿಂದ ತೆಗೆವ ಮುತ್ತುಗಳಪಾರ.
ವಿಶ್ವಕೋಶದೊಳಗೆ ಕನ್ನಡ ನಕಾಶ ಬರೆದು,
ಪ್ರಪಂಚ ಸುತ್ತಿ, ಕರುನಾಡ ಕಥೆ-ವ್ಯಥೆ ಮಥಿಸಿ
ದಿಲ್ಲಿಯನು ಹಿಡಿದು ಅಲ್ಲಾಡಿಸುತ, ಕಿಡಿಗೆದರಿ
ಅನ್ಯಾಯಕ್ಕೆ ಬಾಗನೊಬ್ಬಂಟಿಯಾದರು ಸರಿ;
ಹೋರಾಟ ಗುರಿ : ಆರದೆಂದಿಗು ಲೇಖನಿ-ಮಸಿ
ಮಾತಿಗಿರಲಿಕ್ಕಿಲ್ಲ ನಯ, ರೇಶಿಮೆಯ ಮೆರುಗು
ಕೃತಿಯು ಅಪ್ಪಟ ಖಾದಿ, ಮತಿಯು ಗಂಧದ ಕೊರಡು.

## ಚಂಪಾ : ದೂರವಾಣಿ

ಮತ್ತೇನ್ನಡಿಸೀರಿ ಚಂಪಾ? ಬೆಂಗಳೂರಿನ ಹವ
ತಂಪ? ಕಾವು ಕೊಟ್ಟಕೋತ ಇರ್ರಿ ಇದ್ದಲ್ಲೆ-
ಸ್ವಾಭಿಮಾನಕ್ಕೆ ಒತ್ತರಿ ಧಾರವಾಡದ ಸಿಕ್ಕಾ.
ಕಾವೇರಿ ಗದ್ದಲದಾಗ ಮಲಪ್ರಭಾ ಸೊರಗಿದ್ದು
ನೆನಪದಲ್ಲ? ಕೃಷ್ಣಾಕಥಿ ಇನ್ನೂ ಮುಗಿದಿಲ್ಲ.
ನಿಮ್ಮ ಶಾಲ್ಮಲಾ ಹೃದಯದೊಳಗ ಗುಪ್ತ : ಕಲಮಲ.
ಯಾರೆದ್ಯಾಗು ನೀರಿಲ್ಲ, ಎಲ್ಲಾ ಕಡೆ ಬೋರು.
ಇದೇ ಹೊತ್ತಂತ ಅಯ್ಯೋ-ಧ್ಯಾಅಗದು ನೋಡವರು
ಪುರಾಣ-ಇತಿಹಾಸ ಕಲೆಸಿ, ಒಟ್ಟ ರಾಡಿ ಎಬಿಸವರು,
ತಿಳಿ ಆಗೋತನಕ ಅವರ್ನ್ಯಾರು ಹಿಡಿಯುವರು?
ಹೋಗಲಿ, ಹತ್ತಿಮತ್ತೂರ ಹೊಲ ಬಿತ್ತಿಗಾದವಲ್ಲ.
ನೀವು ಬರೆದಂಗ ಮೆಣಸಿನಕಾಯಿಗೆ ಬರ ಇಲ್ಲ.

ಸೂರ್ಯ ಹೊರಳು ಮೊದಲೇ ಸುಗ್ಗ್ಯಾಗಲಿ ಸಂಕ್ರಮಣ
ಭಟ್ಟಿ ಕೆಡಬಾರದು, ಯುಗಾದಿಗೆ ಮತ್ತೆ ಕೂಡೋಣ.

## ಜೀವನ ಕಲಾದರ್ಶಿ*

ಅಜ್ಜನ ಬೆರಳು ಹಿಡಿದು ಹೆಜ್ಜೆಹಾಕಿದ ಬಾಲ
ಅಪ್ಪನಿಚ್ಛೆಗೆ ಹಾಡಿನ ಜಾಡು ಹಿಡಿದು-ಬಿಟ್ಟು
ಮರಳಿದ ಸಿತಾರದ ಕರುಳ ಕರೆಗೆ ಓಗೊಟ್ಟು.
ಬಿಡಲಾರೆನಿನ್ನು ಬಿಟ್ಟಿರಲಾರೆನೆಂಬ ಛಲ
ತೊಟ್ಟು, ಕಣ್ಮುಚ್ಚಿ ಎದೆಗವಚಿ ಮೀಟಿ ಬಿಟ್ಟನು
ಏಳು ತಂತಿಯ ಎಂಟು ದಿಕ್ಕಿನಲಿ ಝೇಂಕರಿಸಿ.
ಶ್ರೇಣಿಯಲಿ ಸ್ವರದ ವಿನ್ಯಾಸ, ದಂತದ ಕುಸುರಿ.
ಯಾವ ಕಸರತ್ತಿರದೆ ಕಡಲಿನೊಡಲಿಗೀಜುವ ಮೀನು
ಝರಿಯ ಜುಳು ಜುಳು, ತೆರೆಯ ಲಯಬದ್ಧ, ಭೋರ್ಗರೆತ.
ತಡಸಲು ಕೊನೆಗೆ. ಮತ್ತೆ ಮೂಡಣಕರುಣ ರಾಗ.
ಹಾಡು-ನುಡಿತಕನ್ವಯ ಭಾವ, ಪುಷ್ಪರಾಗ.
ಪಡದೆಯಲಿ ಸರಸವಾಡುವ ಬೆರಳು, ಕುಕಿಲಿಡುವ
ತಂತಿ ಬಲಗೈ ತುದಿಗೆ; ಇಹ-ಪರವ ಸೆರೆಗೈದ
ಜೀವನ ಕಲಾದರ್ಶಿ : ಕಾಣಲಿ ನೂರು ಶರದ.

---

* ಉಸ್ತಾದ ಬಾಲೇಖಾನ್ ಅಭಿನಂದನ

# ಕಣ್ಮುಚ್ಚಿ ಕಂಡ ಕವಿತೆ*

ಜನ್ಮಜನ್ಮಾಂತರದ ಹಾಡು ಒಂದೆ ಹೂವಿನಲಿ
ಪರಿಮಳಿಸಿ, ಸಾವಿರದ ಮನಸಿನಂಗಳದಲ್ಲಿ
ತಿಂಗಳ ಬೆಳಕು ಹರಡಿ, ಚೆಲುವು ಒಲವಿಗೆ ಬಾಗಿ-
ಒಲುಮೆಯೇ ದೈವ ಬದುಕಿನ ದೀರ್ಘ ಪಯಣದಲಿ.
ದೂರದಲಿ ಕರೆವ ಸಂಧ್ಯಾರಾಗ ಕೈಮುಗಿದು
ಉದಯ ರಾಗದ ತೆರೆದ ಬಾಗಿಲಿನ ತೋರಣಕೆ
ಮಂಗಳ ವಾದ್ಯ ನುಡಿದು, ಹಕ್ಕಿಗೊರಲಿನ ಹರಕೆ
ಸಂದಿದೆ. ಮೌನದಲಿ ಮಾತ ಹುಡುಕುತ್ತ ಹೊರಟು
ಕಣ್ಮುಚ್ಚಿಕಂಡ ಕವಿತೆ : ನೆಲಕಿಳಿದ ನಕ್ಷತ್ರ.
ಆಕಾಶಗಂಗೆಯಲಿ ಮಿಂದು, ಕುಂಕುಮ ಭೂಮಿ-
ಚಿನ್ನದದಿರನು ತೆರೆದು, ಹಸುರಿನಲಿ ಹೊರಹೊಮ್ಮಿ
ಬೆಳಗಾದ ಮೇಲೆಯೂ ಬೆಳಗ ಕಂಡ ವಿಚಿತ್ರ.
ದಾರಿಯಲಿ ಹಂಚಿದ ಬುತ್ತಿ ಸಂಸಾರ ಸಾರ.
ನೆಲಕೆ ಭಾರವೆ ಸ್ವಾಮಿ? ಆ ಮುಗಿಲಿಗಾಧಾರ.

* ಕೆ.ಎಸ್.ನ. ಅವರ 'ಮೌನದಲಿ ಮಾತ ಹುಡುಕುತ್ತ'ಕ್ಕೆ ಮುನ್ನುಡಿ.

## ಸಿರಿಗೆರೆಯ ಹಿರಿಯ ಗುರು

ಮಡುಗಟ್ಟಿ ನಿಂತ ಮೂಢನಂಬಿಕೆಯ ಕೊಚ್ಚೆ, ಜಡ-
ಗೊಂಡ ಧರ್ಮದಡಿಯಲಿ ಬೆಳೆದ ಜಾತಿ-ವಿಷಬಳ್ಳಿ-
ಗಳ ಕಿತ್ತೆಸೆದು, ಶರಣರ ವಿಚಾರ ಧಾರೆಯಲಿ
ಹಾವಸೆ ತೊಳೆದು, ವಚನ-ಕುಡಿಮಿಂಚು-ದೀಪಗಳ
ಹಳ್ಳಿಹಳ್ಳಿಗೆ ಬೆಳಗಿ, ಸಮುದಾಯ ಮಧ್ಯದಲಿ
ನಿಂದು ಸಾರಿದರು ಸಮಾನತೆಯ ಸಮರ ತೂರ್ಯ!
ಮಂಜು ಕರಗಿಸಿ, ಧೈರ್ಯ ಮೂಡಿಸಿ ಬಂದ ಸೂರ್ಯ.
ಸುವಿಶಾಲ ಹಣೆ, ನಿರ್ಮಲ ನಗೆಯ ಹೊಂಬೆಳಕಲಿ.
ಅನ್ನ-ಜ್ಞಾನ-ದಾಸೋಹ, ಅಣ್ಣ-ಅಕ್ಕನ ಬಳಗ :
ಶಿವಾನುಭವ-ನಡಿಗೆಯಲಿ ಕಂಡ ಕದಳೀವನ.
ಜ್ಞಾನ-ಕ್ರಿಯೆ ಸಂಗಮದ ಉತ್ತುಂಗ ಚೇತನ.
ಸಮಯ ನಿಷ್ಠೆಯ ಬಾಳ ಬಟ್ಟೆಯ ಪರಮಾಗಮ.
ಕಾಯಕದಿಂದ ಸಕಲ ಜೀವಕೆ ಹಬ್ಬ-ಹರುಷ
ತರಳಬಾಳಿಗೆ ಬಸವ ಭಕ್ತಿ-ಶಕ್ತಿಯೆ ಪರುಷ

## ಹಳ್ಳಿಕೇರಿ ಗುದ್ಲೆಪ್ಪ : ಸ್ಮರಣೆ

(ಜನ್ಮ ಶತಮಾನೋತ್ಸವದ ಸಂದರ್ಭ)

ಗಾಂಧೀಜಿ ದರ್ಶನದ ರೋಮಾಂಚನವೆ ನಾಂದಿ :
ಹಳ್ಳಿ-ಕೇರಿಯ ಮೀರಿ ಹೃದಯದಲಿ ಪುಟಿದೆದ್ದ
ದೇಶಭಕ್ತಿಯ ಚಿಲುಮೆ! ಹೋರಾಟಕ್ಕೆ ಗುದ್ದ-
ಲಿ ಪೂಜೆ; ಸೆರೆಮನೆಯೆ ನೆರೆಮನೆ, ಖಾದಿಯೆ ಹಾದಿ.

ದೀನದಲಿತರಿಗೆ ಸಂವಾದಿ. ಹಗಲೂ ರಾತ್ರಿ
ದುಡಿಮೆ, ಯಾರು ಯಾರಿಗೆ ಕಡಿಮೆ ಎದೆಗಾರಿಕೆ?
ಕಟ್ಟುಮಸ್ತಾಗಿ ಕಡೆದ ಶಿಲ್ಪ : ಮುಂದಾಳ್ತನಕೆ.
ಕೈಕೊಂಡ ಕಾರ್ಯಸಿದ್ಧಿಗೆ ಬದ್ಧ, ಇದು ಖಾತ್ರಿ.

ದೇಶಕ್ಕೆ ಸ್ವಾತಂತ್ರ್ಯ, ನಾಡಿಗೇಕೀಕರಣ-
ಸುತ್ತಾಟ, ಸಂಘಟನೆ, ಜನದ ಪ್ರೀತಿಯೆ ಕೀರ್ತಿ.
ಅಧಿಕಾರವಿರಲಿ, ಬಿಡಲಿ ಸೇವೆಗೇತರ ಭೀತಿ?
ಸ್ನೇಹ-ವಿರೋಧ; ಏಳು-ಬೀಳು : ರಾಜಕಾರಣ!

ಗಾಂಧಿತತ್ವದ ಕನಸು ನನಸು ಹೊಸರಿತ್ತಿಯಲಿ
'ಗುರುಕುಲ'ದ ದೀಪ ಕರುನಾಡ ನಡುನೆತ್ತಿಯಲಿ.

# ಸಿದ್ಧಾರೂಢ ಭಾರತಿ

೧

ಏಳುವರ್ಷಕ್ಕೆ - 'ಏಳಯ್ಯ ಬೆಳಗಾಯಿತೆಂ'ಬ
ಒಳದನಿ ಮೊಳಗೆ, ಸದಾ ಅದೇ ಧ್ಯಾನದಲ್ಲಿದ್ದ
ಸ್ವಯಂ ಸಿದ್ಧ, ಅರಿವೆಯನೆಲ್ಲ ಕಳಚಿ ಹೊರಬಿದ್ದ-
ಅದ್ವೈತದರಿವು ಅಂಕುರಿಸಿರಲು ಮೈತುಂಬ.
'ಆಕಾಶಕಳಿವಿಲ್ಲ'ವೆಂಬ ಮಿಂಚಿನುದ್ಗಾರ!
ಗುರುಕರುಣೆಗವರ್ಣನೀಯ 'ಸಿದ್ಧಾರೂಢ
ಭಾರತಿ' ಗಗನದಲಿ ಹಾರಾಡಿದಂತೆ ಗರುಡ
ಹಾಸು-ಬೀಸಾಗಿ ದೇಶದುದ್ದಗಲ ಸಂಚಾರ.
ದಾರಿಗೊಡ್ಡಿರುವಗ್ನಿ ಕುಂಡ ತಣ್ಣಗೆ ದಾಟಿ
ವಿಷಕಂಠನಾಗಿ...., ನಿರ್ವಿಷಯಿ; ಸರ್ವಸಮತಾ-
ಭಾವದುತ್ಕರ್ಷ, ಸಹಜತೆಗೆ ಸದ್ಯೋಜಾತ.
ಮಾನವತೆಯೆತ್ತರಕೆ ಬಿಗಿದಿರುವ ಲಂಗೋಟಿ.
ಕ್ಷುದ್ರ-ಸಿದ್ಧಿ-ಪ್ರದರ್ಶನಕ್ಕಿಲ್ಲಿ ಇಲ್ಲ ತಾಣ.
ಅಲೌಕಿಕ ಶಕ್ತಿಯ ಬಳಕೆ; ಲೋಕಹಿತ ಕಲ್ಯಾಣ.

೨

ಬಹಿರಂಗದಲಿ ಧಿಕ್ಕರಿಸಿದರೂ ಅಂತರಂಗ-
ದಲಿ ಆತ್ಮಚೈತನ್ಯ ಲಿಂಗದವಿರತ ಬೆಳಕು.
ಅಂಥವರು ಇಂಥವರು ಎಂತೆಂಥವರೊ ಬಂದು
ಬಾಗಿದರು ಜಾತಿ-ಮತ-ಪಂಥ ಹೇಳಹೆಸರಿಲ್ಲ-
ದಾಗಿ. ಉರಿಸಿದವರಿಗೂ ಉದ್ಬಾಹುಗಳ ಚಾಚಿ
ಹರಸಿದರು; ಕಾಸು ಮುಟ್ಟದೆಯೆ 'ಕೈಲಾಸ ಮಂಟಪ' -
ದಲ್ಲಿ ಕುಳ್ಳಿರಿಸಿ, ನಿಜಗುಣರ ಶಾಸ್ತ್ರ ಸಲ್ಲಾಪ.
ಎಲ್ಲರ ಜೊತೆಗೆ ದಾಸೋಹ; ಅಮಟಿ-ಅಮೃತರುಚಿ
ಹಿಂಗದ ಭಕ್ತಿ-ಪ್ರೀತಿ ಸಿಂಗರಿಸಿರುವ ತೇರು.
ಪಲ್ಲಕ್ಕಿ-ಪೀತಾಂಬರ-ಸಂಭ್ರಮ-ಜನಜಾತ್ರಿ.
ನಿಚ್ಚಶಿವರಾತ್ರಿ; ಸ್ವಚ್ಛಮನದಚ್ಚ ಹೂ ಪತ್ರಿ
'ಓಂ ನಮಶ್ಶಿವಾಯ'; ಅನುರಣನ ಹಗಲೂ-ಇರುಳು.
ಸಾಕ್ಷಿಪುರಾವೆಗೆ ಸಿಲುಕದಾಸ್ತಿಗೆಲ್ಲಿಯ ಬೆಲೆ?
ತರ್ಕಕ್ಕೆ ದಕ್ಕದಾರೂಢರಧ್ಯಾತ್ಮ ಲೀಲೆ.

# ನೀವೇ ಪ್ರಮಾಣು

೧

ಜೀವನ-ಭಾವನೆಯ ಸ್ವಂತ ಅನುಭವಕ್ಕೆ ಇದು
ಪ್ರಮಾಣ. ಉದ್ದಿಷ್ಟವಸ್ತುನಿಷ್ಠತೆಯಲ್ಲ.
ಶಾಶ್ವತ ಸತ್ಯ ಸ್ಥಾಪಿಸುವ ಜಂಜಾಟವಿಲ್ಲ.
ತತ್ವಜಿಜ್ಞಾಸೆ : ಜ್ಞೇಯ ಪ್ರಾಧಾನ್ಯ ಕೂಡದು.
ದೃಷ್ಟಿಕೋನವೆ ಮುಖ್ಯ. ಅದನು ಹೀಗೆನಬಹುದು :
'ಭಾವಗೀತಾರ್ಥ ದರ್ಶನ', ತೀರ ವ್ಯಕ್ತಿಗತ
ನೋಟವೆಂಬರ್ಥದಲಿ; ಉಳಿದೆಲ್ಲ ರಕ್ತಗತ.
ಎತ್ತರದ ಗುರಿಗೆ ಹಿಂಜರಿಕೆ. ಓದುಗರ ಮಿದು-
ವೆದೆಗೆ ಮೀರಿದ ನಿರೀಕ್ಷೆ. ಯೋಚನೆ-ಸತ್ತ್ವ
ಇದ್ದಂತೆ ಹೇಳುವ ಗದ್ಯ. ಒಂದು ರೀತಿಯಲಿ
ಸಾಹಜಿಕ. ನೆಲದಡಿಯ ಮಣ್ಣಿಗಂಟಿಕೊಳ್ಳಲಿ
ಬದುಕು. ಆ ತೃಪ್ತಿ ಹುಲ್ಲು ಮೊಳೆಯಿಸುವ ತತ್ವ.
ಇಂಥ ಸಂಬಂಧದಲಿ ಆತ್ಮಮಿಲಿಗುಟ್ಟುವದು
ಕಾಣದ ಕೈಯ ಕೂಸು ಮುಗ್ಧನಗೆ ಸೂಸುವದು.

೨

ಯಾರೇ ಇರಲಿ, ಈ ನೆಲವ ಹೀರಿಕೊಂಡಿರಲು
ಚೇತನವೆಷ್ಟು ಹಗುರ, ಮೈತುಂಬ ಚಿಗುರು!
ಮಣ್ಣನು ಕೊಡವಿ ಮೇಲೇಳಬೇಕಲ್ಲ ಮೊದಲು.
ಅಕ್ಷರದೊಳಗೆ ಲಕ್ಷೋಪಲಕ್ಷ ನಕ್ಷತ್ರಗಳು-
ನನ್ನ ಅಸ್ತಿತ್ವದೊಳಗಿನ ಹೊಳಪು ತನ್ನತನ-
ಕಿದೆ ಸಾಕ್ಷಿ. ಮೂಲ ಪ್ರವೃತ್ತಿಗಳ ಸಂಘರ್ಷ
ಓದು-ಬರಹಕೆ ಕಾಲುದಾರಿ ಪಯಣದ ಹರ್ಷ.
ಅಪರಿಚಿತ ಪ್ರತಿಭೆಗಳ ಆಕಸ್ಮಿಕದ ಸಂಚಲನ.
ಪ್ರಾಚೀನದಗ್ಗದಾವೃತ್ತಿಗಳ ಪುಟವ ತೆರೆ-
ದಂತೆ 'ಅಘಟಿತ ಘಟನಾ ನೂತನಬ್ರಹ್ಮ'ರಿಗೆ
ಅಪರಿಮಿತ ಸಂತೋಷ. ತತ್ತ್ವಶಾಸ್ತ್ರದ ಒಳಗೆ
ಹೊಕ್ಕು ಹೊರಬರಲಾರೆ. ನೇರ ಬದುಕನ್ನರಿವೆ.
ಹೊರಗಣವ-ಒಳಗಣವನೆಂಬ ತರ್ಕದ ತೀಟೆ-
ಬಸವಳಿದು ಬೆಂಡಾಗಲೆ? ರಸದಾಳಿ ಕಬ್ಬಾಗಲೆ?

# ಇಲ್ಲಿ

ಇಲ್ಲಿ
ಸತ್ಯವನ್ನು ಬಲಿಗೊಡಬೇಕು
ತಾಂತ್ರಿಕ ವಾಸ್ತವಿಕತೆಗಾಗಿ,
ಸತೀತ್ವವನ್ನು ರಕ್ಷಿಸಿಕೊಳ್ಳಲು
ಸೂಳೆಗಾರಿಕೆಗಿಳಿಯಬೇಕು.

ಜಿಂಕೆಯಂಥ ಹೃದಯ ಕಾಪಾಡಲು
ನರಿಯಂಥ ಮನಸ್ಸನ್ನು
ಕಾವಲುಗಾರನಾಗಿ ನೇಮಿಸಬೇಕು.
ಶಾಂತಿಗಾಗಿ
ಪ್ರಕ್ಷುಬ್ಧತೆಯನ್ನು ತಾಳಿಕೊಳ್ಳಬೇಕು.

ಮುಗುಳು ನಗೆಗಾಗಿ
ಕಂಬನಿಗಳನ್ನು ಹರಿಸಬೇಕು.
ಭಾವಾನಾತ್ಮಕತೆ ಉಳಿಸಿಕೊಳ್ಳಲು
ಕಲ್ಲಾಗಿ ಮಾರ್ಪಡಬೇಕು.

ಹೆರಿಗೆ ಸುಲಭವಾಗಿದ್ದರೂ
ಸಿಝೇರಿಯನ್ ಮಾಡಿಸಿಕೊಳ್ಳಬೇಕು.
ಗೌರವ ಸಂಭಾವನೆಗೂ
ಸೆರಗೊಡ್ಡಿ ಬೇಡಿಕೊಳ್ಳಬೇಕು.

ಸ್ಪಷ್ಟತೆಗಾಗಿ
ನೂರೆಂಟು ಗೊಂದಲಕ್ಕೀಡಾಗಬೇಕು.
ಕಾವ್ಯಕ್ಕಾಗಿ
ಕೋಗಿಲೆಯನ್ನು ಬಂಧಿಸಿ
'ಕಾ' 'ಕಾ' ಎನ್ನಬೇಕು.

# ಹೀಗೊಬ್ಬ ದೇಶಭಕ್ತ

ಮುಪ್ಪಡರಿ ಸೋತಿರುವ ನಮ್ಮ
ದೇಶಭಕ್ತನನು ಕಂಡಾಗ-
ರದ್ದಿಗೆ ಹಾಕಲು ಮನಸಾಗದ
ಹಳೆಯ ವಿಶೇಷ ಸಂಚಿಕೆಯೊಂದರ
ಪುಟ ತೆರೆದಂತಾಗುತ್ತದೆ.

ಗಾಂಧೀ ಪ್ರತಿಮೆಗೆ
ಅಸ್ತಿಭಾರ ಹಾಕಲು ತಡವರಿಸುತ್ತಿರುವ
ಶಿಲ್ಪಿಯಂತೆ ಅವನನ್ನು
ಕಲ್ಪಿಸುತ್ತೇನೆ.

ವಂದೇಮಾತರಂ
ಜಪಮಾಲೆ ಎಣಿಸುತ್ತ
ನಮ್ಮ ಒಬ್ಬೊಬ್ಬರಲ್ಲಿಯೂ
ಅಪರಾಧಿ ಭಾವ ಹಬ್ಬಿಸುತ್ತಾನೆ.

ಹಿಂದೆ ಎಂದೋ ಹಚ್ಚಿದ ದೀಪಗಳು
ಒಂದೊಂದಾಗಿ ಎಣ್ಣೆ ತೀರಿ
ಆರುತ್ತ, ಹೊಗೆ ಕಾರುತ್ತ
ಕಣ್ಣು ಮಂಜಾದಾಗ
ಖಾದಿ ಧೋತರದ ಚುಂಗಿನಿಂದ
ಒರೆಸಿಕೊಳ್ಳುತ್ತಾನೆ

ಮನೆಯಲ್ಲಿ ಹಸಿದು ಕೂತ
ಹೊಟ್ಟೆಗಳಿಗಾಗಿ
ಈ ತ್ಯಾಗಿ, ಹೋಗಿ
ಒಂದೊಂದೇ ಬಾಗಿಲು ತಟ್ಟುತ್ತಾನೆ.
ಇಂದಿನ ಮಾರುಕಟ್ಟೆಯಲ್ಲಿ

ಹಿಂದಿನ ಸಾಹಸ, ಹೋರಾಟಗಳಿಗೆ
ಎಳ್ಳಷ್ಟೂ ಬೇಡಿಕೆಯಿಲ್ಲ.

ಹೋರಾಡಿ ಹೈರಾಣಾದ
ಈ ಪ್ರಾಣಿಯ ಭಾಷಣಕ್ಕೆ
ಚಪ್ಪಾಳೆ ತಟ್ಟುವರಾರೂ ಇಲ್ಲ.
ವೇದನೆಯ ಕಂಬನಿಗಳಲ್ಲಿ.
ಕಾಮನಬಿಲ್ಲಿಗೆ ಸ್ಥಾನವಿಲ್ಲ.

ಎಂದೂ ಜೇಲನ್ನೇ ನೋಡದ
ಮಂತ್ರಿ ಮಹಾಶಯ
ಜೇಲುವಾಸದ ಸರ್ಟಿಫಿಕೇಟ್ ತರಲು
ಈ ಮುದುಕನನ್ನು ಸತಾಯಿಸುತ್ತಾನೆ.
ಬೀದಿಯ ಜನ ಧ್ವಜ ಹಾರಿಸುವಾಗ
ಕಾಣದಂತೆ ನಿಂತು
ಕಂಬನಿ ಮಿಡಿಯುತ್ತಾನೆ.

ಪ್ರತಿನಿತ್ಯವೂ ಇವನು
ಕಣ್ಣಿಗೆ ಬಿದ್ದೇ ಬೀಳುತ್ತಾನೆ.
ತಪ್ಪಿಸಿಕೊಳ್ಳಲು
ನಾವು ಬೇರೆ ಹಾದಿ ಹುಡುಕುತ್ತೇವೆ.

# ಚೊಕ್ಕ ಚೆನ್ನವೆ ಬೇಕು

ಐವತ್ತು ದೀವಳಿಗೆ ಮುಡಿದ ಹೊಂಬೆಳಕಿನಲಿ
ಸಿಂಗಾರಗೊಂಡ ಸಿರಿಗನ್ನಡದ ತೇರು
ಯಾವತ್ತು ಮುಗ್ಗರಿಸದಂತೆ ಮುನ್ನಡೆದಿಹುದು
ಎಲ್ಲ ಹಿರಿಯರ ಪುಣ್ಯ : ನಾವೆಷ್ಟರವರು?

ದಾರಿಯಲಿ ನೂರೆಂಟು ತಗ್ಗು-ದಿನ್ನೆಗೆ ಹಾಯ್ದು
ಅಸಮತೋಲನದಲ್ಲು ತೂಕ ಹಿಡಿದು
ಸಾಗಿ ಬಂದುದೆ ಹೆಚ್ಚು, ಆಗೀಗ ಎಚ್ಚರಿಸಿ
ಕೈಹಿಡಿದು ನಡೆಸಿದರು ಇಂಥ ಪಾಡು!

ಹೂವು-ಹಣ್ಣೇ ಸಾಕು, ಮದ್ದು ಹಾರಿಸಬೇಕೆ?
ಸಾಧನೆಗೆ ತಕ್ಕಷ್ಟೆ ವಾದ್ಯವೃಂದ
ಅಖಂಡ ಕರ್ನಾಟಕದ ಶಂಖದೋಂಕಾರವೇ
ಮೊಳಗಲೆಂದಿಗು ನಮ್ಮ ಕಿವಿಯ ತುಂಬ.

ನಮ್ಮ ನುಡಿ, ನಮ್ಮ ಜನ, ನಮ್ಮತನವನ್ನುಳಿಸಿ
ಹಬ್ಬಿ ಬೆಳೆಯಿರಿ ಜಗದ ಉದ್ದಗಲಕು
ಎಂಥ ಮಹಡಿಗು ಬೇರೆ ಬೇರೆ ಹಂತಗಳುಂಟು
ಪಂಥ ಕಟ್ಟಿದರಿಲ್ಲ; ಹೆಜ್ಜೆ ಹಾಕು.

ಎದುರು ವಿದ್ಯುನ್ಮಾನ ಮಾಧ್ಯಮ ಸವಾಲುಗಳೆ?
ಸಿದ್ಧಗೊಳಿಸಿರಿ ಭಾಷೆ ಬೆಸುಗೆ ಹಾಕಿ,
ಜಾಗತೀಕರಣಕ್ಕು ಏಕೀಕರಣ ದೀಕ್ಷೆ
ರೈತ, ಕಾರ್ಮಿಕ, ಕೂಲಿಗಗ್ರ ಪೂಜೆ.

ನಮ್ಮೊಲುಮೆ ಸಂಸ್ಕೃತಿಯ ಬೇರು ಆಳಕ್ಕಿಳಿಯೆ
ಹತ್ತು ದಿಕ್ಕಿಗು ಕೊಂಬೆ ಚಾಚಬಹುದು,
ಭೋಗಲಾಲಸೆಯ ನವನಾಗರಿಕತೆಯ ಬಲೆಗೆ
ಬಿದ್ದ ಮೀನುಗಳೆದ್ದು ಬರಲಾರವು.

ನಮ್ಮ ಬದುಕಿನ ಭಾಷೆ, ತಿಳಿಸಿ ತಿದ್ದುವ ಮೂಸೆ
ಜನ ಬದುಕಲೆಂದು ಕವಿ ಬರೆದ ಭಾಷೆ,
'ವಚನ'ಕ್ಕೆ ವಚನಕೊಡು, ಗಿಲೀಟಿನ ಮಾತು ಬಿಡು
ಚೊಕ್ಕ ಚಿನ್ನವೆ ಬೇಕು ತಾಯ ಮುಡಿಗೆ.

# ದುಃಖದ ಕಡಲು

೧

ನೀನೆ ಹಾಸಿದ ಮರಳು, ಉದ್‌ಘೋಷಿಸುವ ಕೊರಳು
ತೆರೆಯು ತಲೆದೂಗಿಸುವ ಬಾಳದೋಣಿ;
ದ್ವೀಪ-ದೀಪಸ್ತಂಭ ತಿರುಗಿ ಹಗಲೂ ಇರುಳು
ನೀ ಸಾಕಿ ಸಲಹಿರುವ ಜೀವರಾಶಿ.
ಏಕೆ ಏಕಾಏಕಿ ಬೀಸಾಕಿ ಹೋದೆ?
ರೋಷದಲಿ ಜನುಮವೇ ಸಾಕಾದ ಹಾಗೆ!

೨

ಹೇಳು ಕಡಲೇ, ನಿನ್ನ ಒಡಲೊಳೆಂಥಾ ಉರಿಯು
ಏಕೆ ಈ ಪರಿ ಸಿಡಿದು ನಡುಗುತಿರುವೆ?
ಭೂಮಿಗೂ ಮೂರು ಪಟ್ಟಟ್ಟಹಾಸದಿ ಮೆರೆದು
ಈ ದುರಂತದ ಗುಟ್ಟನೊಡೆಯದಿರುವೆ.
ದೂರವಿದ್ದರು ಬಾನು ಕಣ್ಣರಳಿಸುವದು
ಮಿಂಚಿದರು, ಗುಡುಗಿದರು ನೆಲವ ತಣಿಸುವದು.

೩

ಮಾನವನಹಂಕಾರ ಕೋಟೆ-ಗೋಡೆಗಳ ಭ್ರಮೆ
ಒಂದೆ ಹೊಡೆತಕೆ ಎಲ್ಲ ನುಚ್ಚುನೂರು;
ಅಳಿದವರ, ಉಳಿದವರ ದೈವರೇಷೆಗಳೆಲ್ಲಿ?
ಪಾಪ-ಪುಣ್ಯದ ಮಾತಿಗಿಲ್ಲ ನೆಲೆಯು.
ಯಾರು ಅರಿಯದೆ ನಡೆದ ಸಮುದ್ರ ಮಥನ
ಬರಿಯ ಹಾಲಾಪಲವೆ, ರೌದ್ರ ಕಥನ.

೪

ವಿಜ್ಞಾನಿಗಳ ಕಣ್ಣಿನೊಳಗು ಉಸುಕಿನ ಕಣವೆ?
ಮುನ್ ಸೂಚನೆಯ ದಾರಿ ಮಸಕು, ಮಸಕು;
ಪ್ರಕೃತಿ ತನ್ನಷ್ಟಕ್ಕೆ ತನ್ನ ಲೀಲೆಯೊಳಿಹುದು-
ಅರ್ಥವಿರಬಹುದು, ಇರದಿರಬಹುದು ಅದಕು.
ಸ್ವಾರ್ಥ ಮೂಲದ ಬದುಕಿನೊಂದು ಅಲೆಗೆ
ನಿಸ್ವಾರ್ಥ ನೆರವಿರಲಿ ಜೀವ ಸೆಲೆಗೆ.

೫

ಮೀನುಗಾರರು ಮತ್ತೆ ಹುಟ್ಟುಹಾಕಲೆಬೇಕು,
ಮಳಲ ತೂರುತ ಮಕ್ಕಳಾಡಬೇಕು;
ಬಿದ್ದ ಮನೆಗಳು ಎದ್ದು ದೀಪ ಹೊತ್ತಿಸುವಂತೆ
ಕರುಣೆ-ಕರ್ತವ್ಯದಲಿ ಕರಗಬೇಕು.
ಕಂಪನಕೆ ಅನುಕಂಪ ಮಿಡಿಯುತಿರಲಿ
ನೆಲದ ಬಾಳಿಗೆ ಕಡಲು ಶ್ರುತಿ ಹಿಡಿಯಲಿ.

## ಕವಿತೆಗೆ

ಹೋಗಬೇಡ ಕವಿತೆ ನೀನು, ಬಾಗಬೇಡ ಯಾರಿಗೂ
ತೂಗಿ ನೋಡಿ ಬೆಲೆಯ ಕಟ್ಟು ಹೂವಿನಂತೆ ನಾರಿಗೂ.
ನಿನ್ನ ರೂಪ ಲಾವಣ್ಯಕೆ ಬೀಗಬೇಡ ಎಂದಿಗೂ
ಬತ್ತದಿಹುದು ಚೆಲುವಿನೂಟೆ ನೆಲದ ಒಡಲೊಳಿಂದಿಗೂ.
ಒಡೆದುಹೋದ ಮನಸುಗಳಲಿ ಹಗೆಯ ಕಿಡಿಯ ನಂದಿಸು
ಸಿಡಿದು ನಿಂತ ಹೃದಯಗಳನು ಪ್ರೀತಿಯಲ್ಲಿ ಬಂಧಿಸು.
ದುಡಿವ ಕೈಗೆ ಶಕ್ತಿ ಬರಲಿ; ಮಳೆಯ ಸುರಿಸು ಧರಣಿಗೆ
ಹಳೆಯ ಕೊಳೆಯ ಕೊಚ್ಚಿ ತೊಳೆಯೆ ಹಚ್ಚಹಸಿರು ಹಾಡಿಗೆ.
ಹಾಡಿಗೆದೆಯು ಮಿಡಿಯುವಾಗ ಬೇಡ ವಾದ್ಯದಬ್ಬರ
ಗಾಢ ಮೌನದಲ್ಲಿ ತಾನೆ ಮೂಡಿ ಬಹನು ಚಂದಿರ.
ಎಂದಾದರು ಕಂಡಿದ್ದೆವೆ ಇಂಥ ಹನಿಯ ತಂಪನು?
ನೇಗಿಲ ಗೆರೆ ಹೊಮ್ಮಿಸಿಹುದು ಕಸ್ತೂರಿಯ ಕಂಪನು.
ಇಡಿಯ ಬದುಕ ಹಿಡಿಯಲೆಂದು ತಡವರಿಸುವ ಪ್ರೀತಿಯೆ
ಹೊಡೆ ಹಾಯಲಿ ಹೊಲವು, ತೆನೆಯ ಕಾಳೆಲ್ಲವು ಕವಿತೆಯೆ.

# ಹನಿಗವನಗಳು

ಬತ್ತಿಹೋದ ಕೆರೆಯಲ್ಲಿ
ಬಂಗಲೆಗಳು ಎದ್ದು ಬಿಟ್ಟಿವೆ;
ಜಲದೇವತೆಗೆ
ಎಷ್ಟೊಂದು ಗೋರಿಗಳು!

* * *

ಸೂರ್ಯನ ಬೆಂಕಿಯಿಂದ
ಅವನು ಚುಟ್ಟ ಹಚ್ಚಿಕೊಳ್ಳುತ್ತಾನೆ;
ಕಾರ್ಮಿಕನಿಗೆ
ಅದೇನೂ ಅಸಾಧ್ಯವಲ್ಲ.

* * *

ಅವನನ್ನು ಚೆನ್ನಾಗಿ ಬಯ್ಯಬೇಕೆಂದು ಹೋದೆ
ಅವನು 'ಹೊಡಿದು ಬಿಡು ನನ್ನ' ಎಂದ.
ಗೆದ್ದವರು ಯಾರು?

* * *

ಮಡಕೆ ಒಡೆಯಿತೇ
ಚಿಂತೆ ಬೇಡ,
ಮತ್ತೊಂದು ಆಕಾರ ಕೊಡಲು
ಮಣ್ಣು ಸಿದ್ಧವಾಗಿರುತ್ತದೆ.

* * *

ಕದ್ದು ಮುಚ್ಚಿ ಟಿ.ವಿ. ನೋಡುವ
ಮಕ್ಕಳಂತೆ
ಉಳಿದವರು ಮಲಗಿದಾಗ
ನಾನು ಕವಿತೆ ಬರೆಯುತ್ತೇನೆ.

* * *

ತೆರೆಯ ಮೇಲೆ ತೆರೆದು ತೋರಿಸುವ
ಸಿನಿಮಾ ನಟಿಯರ ಹೊಕ್ಕುಳ ಕಂಡು
ಕಸಿವಿಸಿಗೊಂಡ ಉದಯೋನ್ಮುಖ ಕವಿ-
'ಹೊಕ್ಕುಳಲ್ಲಿ ಹೂವಿಲ್ಲ' ಎಂದ ಎ.ಕೆ.
ರಾಮಾನುಜನ್ನರ ದೂರ ದೃಷ್ಟಿಗೆ ನಮೋ ಎಂದ.

ನಗರಗಳಲ್ಲಿ ಜನಿಸಿದ್ದು
ದೋಷವಲ್ಲ,
ಹಳ್ಳಿಗಳನ್ನು ಮರೆಯುವದು
ಲೋಪ.

* * *

ನೀನು ನಡೆಸಿದ ರ್‍ಯಾಲಿ
ಅದ್ಭುತವಾಗಿತ್ತು;
ಮನೆಗೆ ಬಂದು ಅಂಗಿ ಕಳೆದಾಗ-
ನನ್ನ ಮೈ ತುಂಬ ಗಾಯ.

* * *

ನೀನು ಚಪ್ಪಲಿಗಳನ್ನು ಮೆಟ್ಟಿಕೊಂಡು
ನಡೆದು ಹೋಗುತ್ತೀ
ಚಪ್ಪಲಿಗಳು ಹೇಳುತ್ತವೆ;
ಅವೇ ನಿನ್ನನ್ನು ಹೊತ್ತು ಕೊಂಡಿದ್ದೇವೆಂದು.

* * *

ನಾನು ನೀರಿನಲ್ಲಿ ಮುಳುಗಿ
ಚಿಪ್ಪುಗಳನ್ನು ಹೊರತಂದೆ;
ಕೆಲವು ಮುತ್ತುಗಳು
ಉಳಿದವೆಲ್ಲ ಕಂಬನಿಗಳು.

* * *

ಇರುವೆಗಳು
ಮೀನುಗಳಿಗಿಂತ ಮೇಲು
ಯಾಕೆಂದರೆ,
ಒಂದು ಇರುವೆ ಮತ್ತೊಂದನ್ನು
ನುಂಗಿ ಹಾಕುವುದಿಲ್ಲ.

# ಆಗು

೧

ಎಲ್ಲ ದಳಗಳೂ ಒಂದೆ ದೇಟಿನಲಿ
ಮಾಟಗೊಂಡ ಮೃದು ಹೂವಾಗು,
ಎಲ್ಲ ಹೂವುಗಳ ಪರಿಮಳ ಹೀರುತ
ಒಂದೆ ಹುಟ್ಟಿನಲಿ ಜೇನಾಗು.

೨

ಹಲವು ಹಕ್ಕಿಗಳ ಗೂಡಿಗೆ ಕರೆಯುವ
ಹಣ್ಣನೀವ ಹೆಮ್ಮರವಾಗು,
ಹಾರಿದನಿತು ವಿಸ್ತಾರಕೇರುವಾ
ಹಾಡ ಬಿಡುಗಡೆಯ ಬಾನಾಗು.

೩

ಎಲ್ಲೊ ಹುಟ್ಟಿ ಮತ್ತೆಲ್ಲಿಗೊ ಹರಿದರು
ಎಲ್ಲ ಜೀವಿಗಳ ಸೆಲೆಯಾಗು,
ಬೆಟ್ಟ-ಕಡಲುಗಳ ತೊಟ್ಟಿಲು ತೂಗುವ
ಅಂತಃಕರಣದ ನೆಲೆಯಾಗು.

೪

ಆಗು-ಹೋಗುಗಳ ಮೇಲೂ ಕೆಳಗೂ
ಒಟ್ಟಿಗೆ ಸಾಗುವ ಗುರಿಯಾಗು,
ಮಾಗಿದ ಭಾವದ ಜೀವದ ತಂತಿಗೆ
ಝೀಂಕಾರದ ಸುಸ್ವರವಾಗು.

# ಗೆರೆಗಳೆ

ಗೆರೆಗಳೆ, ಓ ಗೆರೆಗಳೆ!
ಬಾನಿಗೇರಿದ ಗರಿಗಳೆ,
ಕನಸುಗೂಡಿನ ತತ್ತಿ-ಭಾವದ
ಕಾವಿಗೊಡೆದಿಹ ಮರಿಗಳೆ.

ಬೆಟ್ಟದೆಡೆ ಚಿಮ್ಮಿರುವ ಝರಿಗಳೆ
ಗುಪ್ತಾಗಾಮಿನಿ ತೊರೆಗಳೆ,
ಸುಪ್ತಮಾನಸದಂಚು ಜುಮ್ಮೆನೆ
ಬಂದು ತಾಗುವ ತೆರೆಗಳೆ.

ಜೀವನದ ಅರೆ-ಕೊರೆಗಳೆ
ಯೌವ್ವನದ ಹೆಗ್ಗುರಿಗಳೆ,
ಮೂಕವೇದನೆ ಬರೆಗಳೆ
ಆಜನ್ಮ ಸಾಲದ ಹೊರೆಗಳೆ.

ಬೆರಳು ಚಾಚಿದ ಮರಗಳೆ
ಮೈತುಂಬ ಹರಿಯುವ ನರಗಳೆ,
ಮಿಡಿವ ಜೀವಸ್ವರಗಳೆ
ಗೆರೆಗಳೆ, ಓ ಗೆರೆಗಳೆ!

## ತುಂಬಿರಲೀ ಮನೆ

ತುಂಬಿರಲೀ ಮನೆ, ತುಂಬಿರಲಿ
ಬಂಧುಬಳಗಕೆಲ್ಲಿಂಬಿರಲಿ,
ಒಂದೆ ಮರದ ಹಲ ಕೊಂಬೆಗಳಂದದಿ
ಏಕ ಜೀವರಸ ಹೊಂದಿರಲಿ.

ಉನ್ನತ ಭಾವದ ಬಾಗಿಲು ತೆರೆದು
ಸ್ನೇಹ ಸುಗಂಧವು ಹರಡಿರಲಿ,
ಕಿಡಕಿಯ ಕಣ್ಣಿಗೆ ದೂರ ದಿಗಂತದ
ವಿಶಾಲ ಕಲ್ಪನೆ ಮೂಡಿರಲಿ.

ಬೆಳಗು-ಬೈಗು ಹೊಂಬಿಸಿಲಿನ ಕಾಂತಿಯು
ಮಕ್ಕಳ ಮೊಗವನು ಚುಂಬಿಸಲಿ,
ಹಿರಿ-ಕಿರಿಯರ ಸುಖ-ದುಃಖ ಸಮಾಗಮ
ಸಾಮರಸ್ಯ ಪ್ರತಿಬಿಂಬಿಸಲಿ.

ಮಾವು, ತೆಂಗು, ದಾಳಿಂಬದ ರೆಂಬೆಗೆ
ಹಕ್ಕಿ-ಹಾಡುಗಳು ತೂಗಿರಲಿ,
ಈ ಮನೆಯಂಗಳ ಹೂವರಳುವ ತೆರ
ನೀರೆರೆಯುವ ಸುಖ ನನಗಿರಲಿ.

# ನನ್ನ ದೇಶ, ನನ್ನ ಜನ

ನನ್ನ ದೇಶ, ನನ್ನ ಜನ
ನನ್ನ ಮಾನ, ಪ್ರಾಣ, ಘನ
ತೀರಿಸುವೆನೆ ಅದರ ಋಣ
ಈ ಒಂದೇ ಜನ್ಮದಿ?

ಕೆಂಪು ನೆಲದ ಹಸಿರು ಬೆಳೆ
ಕಪ್ಪು ಮಣ್ಣ ಮೊಗದ ಕಳೆ
ಸೂರ್ಯ ಚಂದ್ರ ಚಿಕ್ಕೆಗಳೆ
ನಮ್ಮ ಹಿರಿಯ ಒಕ್ಕಲು.

ನೂರು ಭಾವ, ಭಾಷೆ, ನೆಲೆ
ನೂರು ಬಣ್ಣ, ವೇಷ, ಕಲೆ
ಸ್ವಚ್ಛಂದದ ಹಕ್ಕಿಗಳೆ
ನಮ್ಮ ಹಾಡು ಬದುಕಲು.

ಪ್ರಾಚೀನವ ತಿಕ್ಕತೊಳೆ
ವರ್ತಮಾನ ಜೀವಕಳೆ
ಉಕ್ಕೇರಲಿ ಬಾಳ ಹೊಳೆ
ಆ ಭವಿಷ್ಯದೊಡಲಿಗೆ.

ಮೈಕೊಡವಿದೆ ಮೂಕ ಜನ
ಕೈ ಹಿಡಿಯಿರಿ ನಾಕು ಚಣ
ಎದ್ದೇಳಲಿ ಎಲ್ಲ ಗುಣ
ಆ ಸಮೃದ್ಧ ಬಾಳಿಗೆ.

# ನಾಡಿನ ಉದಯ

೧

ನಾಡಿನ ಉದಯದ ಹಬ್ಬದ ಹರುಷಕೆ
ಹಾಡಿನ ತೋರಣ ಕಟ್ಟೋಣ,
ಸೋದರ ಭಾವದ ಸಾಲು ದೀಪಗಳ
ಮೂಲೆಮೂಲೆಯಲಿ ಬೆಳಗೋಣ.

೨

ಕಲಾಕುಸುಮಗಳ ಚೆಲುವಿನ ಸೃಷ್ಟಿಯ
ಮಲಿನವಾಗದೊಲು ಕಾಯೋಣ,
ನಿಚ್ಚ ಹರಿದು ನೆಲ ಹಚ್ಚಗೆ ತಣಿಸುವ
ಜೀವ ನದಿಗಳಲಿ ಮೀಯೋಣ.

೩

ನಾಡು–ನುಡಿಗೆ ಹೋರಾಡಿದ ಹಿರಿಯರು
ಕಂಡ ಕನಸುಗಳ ಮುಡಿಯೋಣ,
ಹಿಂದಣ ವೈಭವದಲಿ ಮೈಮರೆಯದೆ
ಸ್ವಂತ ಶಕ್ತಿಯಲಿ ದುಡಿಯೋಣ.

೪

ಸಣ್ಣತನದ ಸೋಂಕಿಲ್ಲದೆ ಬೆಳೆಯುವ
ಚಿಣ್ಣರ ಲೋಕವ ತೆರೆಯೋಣ,
ಕನ್ನಡ ಬಾನೊಳು ನವ ಅರುಣೋದಯ-
ಹೊಸ ಇತಿಹಾಸವ ಬರೆಯೋಣ.

# ಜಯ ಭಾರತ ವಂದೇ

೧

ನುಡಿ ಮಿಡಿದಿವೆ ನೂರು ತಂತಿ
ಸ್ವಾತಂತ್ರ್ಯದ ವರ್ಧಂತಿ
'ವಂದೇ, ಜಯ ಭಾರತ ವಂದೇ'
ಪ್ರೇಮಾಯತ ಶಾಂತಿದೂತ
ಕರುಣಿಸು ಓ ತಂದೆ.
ನಿನ್ನಡಿಯಲಿ, ನಿನ್ನುಡಿಯಲಿ
ನಾವೆಲ್ಲರು ಒಂದೇ
ಜಯಭಾರತ ವಂದೇ.

೨

ಹಿಮಗಿರಿಗಳ ಧವಳ ಕೀರ್ತಿ
ಸಹ್ಯಾದ್ರಿಗು ಸ್ಫೂರ್ತಿ;
ಮೂರು ಬದಿಗು ಮೊರೆವ ಕಡಲು
ನಡುವೆ ಈ ಧರಿತ್ರಿ.
ನೂರು ನದಿಯ ಹೃದಯ ತುಂಬಿ
ಹರಿವ ಜೇನು-ವಾಹಿನಿ,
ಸರ್ವಧರ್ಮ ಸಮದರ್ಶಿನಿ
ಜಯ ಭಾರತಿ ವಂದೇ.

೩

ಉತ್ತರದಲಿ, ದಕ್ಷಿಣದಲಿ
ಪೂರ್ವದಲ್ಲಿ ಪಶ್ಚಿಮದಲಿ
ಹೃದಯತುಂಬಿ ಪುಷ್ಪಾಂಜಲಿ:
ಸರ್ವಕಲಾ ಸೌಂದರ್ಯದ
ಔದಾರ್ಯದ ಗಣಿಯೇ
ವಿಶ್ವದ ಕಣ್ಮಣಿಯೇ
ಜಯ ಭಾರತ, ಜಯ ಭಾರತ

ಜಯ ಭಾರತ ವಂದೇ
ಈ ತ್ರಿವರ್ಣ ಧ್ವಜದ ಕೆಳಗೆ
ನಾವೆಲ್ಲರು ಒಂದೇ.

೪

ಪುರಾತನವು ಚಿರನೂತನ
ಸಹಜೀವನ ಚೇತನ,
ವಿವಿಧ ವೇಷ, ವಿವಿಧ ಭಾಷೆ
ಸರಸ್ವತಿ ನಿಕೇತನ,
ಸೌಹಾರ್ದದ ಸ್ವರ್ಣದೀಪ್ತಿಯೊಳಗೆ ದಿವ್ಯ ಮೂರುತಿ
ನಮೋ ತಾಯಿ ಭಾರತಿ.
ಸ್ವಾತಂತ್ರ್ಯದ ಸಂಗ್ರಾಮದಿ
ಸ್ವರ್ಣೋತ್ಸವ ಸಂಭ್ರಮದಲಿ
ಎಲ್ಲಿದ್ದರು, ಹೇಗಿದ್ದರು
ನಾವೆಲ್ಲರು ಒಂದೇ
ಜಯ ಭಾರತ, ಜಯ ಭಾರತ
ಜಯಭಾರತ ವಂದೇ.

# ಮಕ್ಕಳು : ಮಾನವತೆ

ಮಿಡಿಮಾವಿಗೆ, ಹಿಡಿ ಹೂವಿಗೆ
ನುಡಿ-ಗೊಂಚಲ ಕೊಡುಗೆ;
ಚಿಣ್ಣರ ಪಡೆ, ಚಿಮ್ಮುವ ನಡೆ
ತಳಿರಿನ ಹೊಂದೊಡುಗೆ.

ಗಿಳಿವಿಂಡಿನ ಕಿಲಿ ಕಿಲಿ ರವ
ಕೋಗಿಲೆಗಳ ಕಹಳೆ;
ಮರಿದುಂಬಿಯ ಝೇಂಕಾರಕೆ
ಮಲ್ಲಿಗೆ ಬಿರಿಮುಗುಳೆ.

ಬಿರುಬಿಸಿಲಿಗೆ, ಮಳೆಗಾಳಿಗೆ
ತೂಗಾಡಲಿ ರೆಂಬೆ,
ಹೊಯ್ದಾಡಲಿ, ಬೈದಾಡಲಿ
ಮುದ್ದಿನ ಮಾತೆಂಬೆ.

ಕಸುಗಾಯಿಗೆ, ಹೊಸಬಾಯಿಗೆ
ರಸದುಂಬಲಿ ಕಾಲ,
ಪಾಡಾಗಲಿ ಹಾಡಿನ ಜೊತೆ
ಹೊಸ ಹೆಜ್ಜೆಯ ಮೇಳ.

ಗುದ್ದಾಡಲಿ, ಮುದ್ದಾಡಲಿ
ಬಿದ್ದೇಳಲಿ ತುಂಟ;
ಗೆಳೆತನದಲಿ ತಲೆದೂಗಲಿ
ಇವ ನಾಡಿಗೆ ಬಂಟ.

ಈ ಹೊಳೆಯುವ ಕಣ್ಣಂಚಿಗೆ
ಬಾನಂಚಿನ ಮಿಂಚು
ಈ ಸೃಷ್ಟಿಯ ಹೊಸ ದೃಷ್ಟಿಯ
ಬೆಳೆದವರಿಗೆ ಹಂಚು.

ಕನ್ನ ನುಡಿ, ಭಾರತ ಗುಡಿ
ವಿಶ್ವದ ಹೊಂಬೆಳಕು;
ಮಕ್ಕಳ ಬಗೆ ಉಕ್ಕೇರಲಿ
ಮಾನವತೆಯೆ ಬದುಕು.

# ಹರುಷವೆಲ್ಲಿದೆ?

ಹಗಲು ಇರುಳು ಜಾರುತಿವೆ
ದಿನ ದಿನಗಳು ಉರುಳುತಿವೆ
ವರುಷ ವರುಷ ತೆರಳುತಿವೆ
ಹರುಷವೆಲ್ಲಿದೆ?

ಮಾಡುವ ಪ್ರತಿ ಮಾಟದಲ್ಲಿ
ಮೈಮನಗಳ ತೊಡಗಿಸಿ,
ಸುತ್ತು ಹರಿವ ನೋಟದಲ್ಲಿ
ಸ್ನೇಹಭಾವ ಚಿಗುರಿಸಿ,
ಹಳತಿನಿಂದ ಹೊಸತಿನಿಂದ
ಒಳಿತನೆಲ್ಲ ಅರಗಿಸಿ
ಬೆಳೆವ ತುಂಬು ಬದುಕಿನಲ್ಲಿ
ಹರುಷವಿಲ್ಲಿದೆ!

ಮಾತಿನಲ್ಲಿ ಕೃತಿಯ ಹೊಳಪು
ಮರೆಯಲಾರದುಪಕೃತಿ;
ವಿನಯಕಿಲ್ಲ ಬೇರೆ ಒನಪು
ಸಹಜ ಭಾವ ಸಂಸ್ಕೃತಿ.
ಅಂತರಂಗದಪ್ಪುಗೆಯಲಿ
ಪ್ರೀತಿ ಸೆಲೆಯನುಕ್ಕಿಸಿ
ದಯೆಯ ದಿವ್ಯ ಅನುಭವದಲಿ
ಹರುಷವಿಲ್ಲಿದೆ.

## ಹಲವು ಬಣ್ಣಗಳ.....

ಹಲವು ಬಣ್ಣಗಳ ಕಣ್ಣಿಗೆ ಕಾಣಿಸಿ
ಹಗಲಿಗೆ ಬೆಳ್ಳಗೆ ಹೊಳೆದವನೇ,
ಇಳೆಯ ಹಸಿರಿನಲಿ ಹೂಗಳ ಪೋಣಿಸಿ
ಬಾಳಿನುದ್ದಕೂ ಬೆಳೆದವನೇ.

ಮೂಡಣ ದಿಕ್ಕಿನ ಹಾಡುವ ಹಕ್ಕಿಗೆ
ಜೋಡಿ ರೆಕ್ಕೆಗಳ ಕೊಟ್ಟವನೇ,
ಮುಳುಗುವ ನೆವದಲಿ ಬೆಟ್ಟದ ಮೌನಕೆ
ಚಿನ್ನ-ಕಿರೀಟವನಿಟ್ಟವನೇ.

ಒಳಗೂ ಹೊರಗೂ ಉರಿಯುವ ದ್ವೇಷಕೆ
ಗುಡುಗಿ ಮಿಂಚಿ ಮಳೆಗರೆದವನೇ,
ಬರಿದಾಗಿಹ ಕೆರೆ-ತೊರೆಗಳ ತುಂಬಿಸಿ
ಎದೆಯೊಳು ಜುಳು ಜುಳು ಹರಿದವನೇ.

ದುಡಿದು ದಣಿದ ಮೈ-ಕೈಗಳ ತೀಡುತ
ಇರುಳು ಕತ್ತಲೆಯ ಕಳೆದವನೇ,
ನಿದ್ದೆಯಾಚೆಗಿನ ಕನಸಿನ ದಂಡೆಗೆ
ದೋಣಿಯಾಗಿ ಜೊತೆಗುಳಿದವನೇ.

# ಅನುವಾದಿತ ಕವಿತೆಗಳು

ತಮಿಳು ಕಾವ್ಯ

## ಅಮ್ಮ ಹೇಳಿದ ಸುಳ್ಳುಗಳು*

ಹೆಣ್ಣಿನ ಕೂಡ ಸಲಿಗೆ ಬೆಳೆಸಿದರೆ
ಕಿವಿ ಕಡಿದು ಹೋಗುತ್ತದೆ ಎಂದೆ.

ತಪ್ಪು ಮಾಡಿದರೆ, ಸ್ವಾಮಿ
ಕಣ್ಣು ಕುಕ್ಕುತ್ತಾನೆ ಎಂದೆ.

ಒಂದು ಮೊರ ತೌಡಿಗೆ
ನನ್ನ ಕೊಂಡುಕೊಂಡೆ ಎಂದೆ.

ಎಷ್ಟು ಸುಳ್ಳುಗಳ ಹೇಳಿದೆಯಮ್ಮ
ನನ್ನ ಹತ್ತಿರ ಈ ಮುಂಚೆ.

ಅಷ್ಟು ಸುಳ್ಳುಗಳ ಆಗ
ಹೇಳಿದ ನೀನು ಈಗ
ಏಕೆ ನಿಲ್ಲಿಸಿಬಿಟ್ಟೆ?

ತಪ್ಪುಗಳ ಮೇಲೆ ತಪ್ಪು ಮಾಡುವ
ಶಕ್ತಿ ಹೋಗಿಬಿಟ್ಟಿದೆಯೆಂದೆ?

ನನಗಿನ್ನು ಸುಳ್ಳುಗಳ ಅಗತ್ಯವಿಲ್ಲ
ಎಂದು ತಿಳಿದುಕೊಂಡೆಯ?
ಅಥವಾ ವಯಸ್ಸಿಗೆ ಬಂದವರಿಗೆ
ತಕ್ಕ ಸುಳ್ಳು ಹೇಳುವ ಹೊಣೆ
ಸರಕಾರದ್ದು ಎಂದು ಭಾವಿಸಿದೆಯ?

ತಾಯಿ ತನ್ನ ಹಾಲು ನಿಲ್ಲಿಸುವ ಹಾಗೆ
ತನ್ನ ಸುಳ್ಳುಗಳನ್ನೂ ನಿಲ್ಲಿಸಿ ಬಿಡಬಹುದೆ?
ನಿನ್ನ ಮಗುವಿಗೆ ನಿನ್ನ ಬಿಟ್ಟರೆ
(ಇಂಥ) ಸುಳ್ಳುಗಳು ಬೇರೆಲ್ಲಿ ಸಿಗುತ್ತವೆ?

---

* ಜ್ಞಾನಕೂತ್ತನ್

# ಕಾಗೆ*

ಕಾಗೆಯನ್ನು ನಾನು ಬಲ್ಲೆ
ಯಾರಿಗೆ ಗೊತ್ತಿಲ್ಲ?
ಆದರೆ ಈ ಕಾಗೆ ನನಗೆ ಅಪರಿಚಿತ.

ನನ್ನ ಜೊತೆ ಏನೋ ಮಾತಾಡುವಾತುರ-
ನನ್ನೆದುರು ಕುಳಿತಿದೆ.

ನಮ್ಮ ಊರಿನ ನಮ್ಮ ಕುಟುಂಬದವರಿಗೆ
ಪರಿಚಿತವಿರುವ ಕಾಗೆಯೊಂದು
ನಮ್ಮ ಮನೆಯ ಸಣ್ಣ ಚಮಚೆಯನ್ನೊಯ್ದು
ಬದಲಿಗೆ ದೊಡ್ಡ ಸೌಟೊಂದನ್ನು ತಂದು
ಒಂದು ದಿನ ಅಂಗಳದಲ್ಲಿ ಹಾಕಿತಂತೆ.

ಈ ಕಾಗೆ ಏನು ಮಾಡುವದೊ
ಈ ಕಾಲು, ಈ ಮೈ, ಈ ಕತ್ತಿನ ಬಣ್ಣ.....
ಇದಕ್ಕೆ ಆಧುನಿಕ ಜಗತ್ತು ರೂಢಿಯಾಗಿದೆ.

ಕಾಗೆಯ ಚುಂಚಿನಲ್ಲಿ ತಂತಿಯ
ಸಣ್ಣ ತುಂಡುಗಳ ನಾನು ಕಂಡೆ.

ನಾಲ್ವತ್ತು ವಯಸ್ಸಿನ ಅವಧಿಯಲ್ಲಿ-
ಮೂರು ಸಲ
ರೆಕ್ಕೆಯಿಂದ ಬಡಿದ ಆ ಕಾಗೆಗಳನ್ನು ಕೂಡ
ನಾನು ಗುರುತಿಸಲಾರೆ.

ತಿರುಗಿ ಇನ್ನೊಂದು ಸಲ ಈ ಕಾಗೆ
ನನ್ನೆದುರೇ ಬಂದು ಕುಳಿತರೆ
ನನಗದರ ಗುರುತು ಸಿಗಬಹುದೆ?
ಯಾಕೆಂದರೆ ಕಾಗೆಯನ್ನು ಯಾರೂ
ಸಂಪೂರ್ಣ ನೋಡಲು ಸಾಧ್ಯವಿಲ್ಲ.

---

* ಜ್ಞಾನಕೂತ್ತನ್

# ಮಳೆಗಾಲದ ದಾರಿ*

ಮಳೆಗಾಲದ ಒಂದು ಶ್ರಾದ್ಧ
ತಾತನಿಗೆ ತಂದೆ ಮಾಡಿದ್ದು.

ಮನೆಯೊಳಗೆ
ತಗಡಿನ ದೊಡ್ಡ ಖಾಲಿ ಡಬ್ಬಿಯೊಳಗೆ
ಗಾಳಿ-ಮಾತು.

ಕಣ್ಣು ಮುಚ್ಚಿಕೊಂಡು ನಡೆಯುವ
ಅಭ್ಯಾಸವಿದ್ದ ನಾನು
ಅಚಾರಕ್ಕೆ ಹೆದರಿ
ಹಿತ್ತಲ ಕಡೆಗೆ ಬಂದೆ.

ಹಿತ್ತಲ ಗೋಡೆಯ
ಪುರಾತನ ಒದ್ದೆಯಲ್ಲಿ
ಮಿನುಗುವ ಹೆಜ್ಜೆ ಗುರುತಿಟ್ಟು
ಮೆಲ್ಲಗೆ ಮೇಲೇರುತ್ತಿರುವ ಒಂದು ಬಸವನ ಹುಳು.

ಗೊತ್ತಿಲ್ಲವೆ ಬಸವನ ಹುಳಕ್ಕೆ
ಆ ಗೋಡೆ ಕಡಿದಾಗಿದೆಯೆಂದು?
ಪುನಃ ಮೇಲೇರುವದು
ಮತ್ತೆ ಕೆಳಗೆ ಬೀಳುವುದು.

ಶ್ರಾದ್ಧಪಿಂಡಕ್ಕೆ
ಕಾದಿರುವ ದೇವತೆಗಳು
ಬಸವನ ಹುಳವ ಕೆಳಗೆ ದಬ್ಬಿ
ಆಟವಾಡುತ್ತಾರೆ ಹೊತ್ತುಗಳೆಯಲಿಕ್ಕೆ.

ಇದು ಶ್ರಾದ್ಧದ ದಿನ
ಮಳೆ ದಿನ.

ಸಾಲ ಕೊಂಡದ್ದಕ್ಕೆ ಉಪವಾಸ ಬಿದ್ದದ್ದಕ್ಕೆ
ಮಾನಭಂಗವಾದದ್ದಕ್ಕೆ ಕಣ್ಣೀರು
ಹಾಕದ ತಂದೆ.

ಮೈನಡುಗಿ, ಅತ್ತು ಸಮಾಧಾನ ತಂದುಕೊಂಡು
ಇಂದ್ರಿಯಗಳುಡುಗಿ ಮಡಿದ ದಿನ.

ಬೆಂಕಿಯ ಮುಂದೆ ಕುಳಿತೆ
ತಾತನ ಹೆಸರಿನೊಡನೆ ತಂದೆಯ ಹೆಸರು
ಸೇರಿಸಿದರು ಪುರೋಹಿತರು.

ಒಂದು ಪಾತ್ರೆಯಲ್ಲಿದ್ದ ನೀರನ್ನು
ಇನ್ನೊಂದು ಪಾತ್ರೆಗೆ
ಉದ್ಧರಣೆಯಿಂದ ಸುರಿದೆ.

ಆಗ
ಅಂಗಳದ ಗೋಡೆಯಲ್ಲಿ
ಬೆರಳೇ ಮೈಯಾಗಿ
ಅದುವೇ ಕಾಲಾಗಿ ತೆವಳುತ್ತದೆ
ಒಂದು ಬಸವನ ಹುಳು.

---

* ಜ್ಞಾನಕೂತ್ತನ್

# ಮತ್ತೆ ಅವರು*

ಕಾರ್ಮೋಡ ಮಳೆಗರೆಯಬೇಕೆಂದಿಲ್ಲ; ಆದರೂ
ಸುಂದರವಾಗಿವೆ ಬೆಳಗಿನ ಮೋಡಗಳು.

ಹಾರೋಣ ಎಂದುಕೊಂಡು
ಮೇಲೆದ್ದೆ ಆಕಾಶಕ್ಕೆ
ರೆಕ್ಕೆಗೆದರಿ.

ಹಾರುವ ನನ್ನ ಕಾಲುಗಳ ನಡುವೆ
ಪವಿತ್ರ ಗೋಪುರದ ಕಳಸಗಳು ಕೆಲವು
ಭೂಮಿಯ ಮೇಲೆ.

ನಿಶ್ಚಲ ಮರಗಳ
ದುಂಡು ತಲೆಗಳ ನಡುವೆ
ಅಡಗಿಕೊಂಡು

ಅವರು ಗುಂಡು ಹಾರಿಸಿದರು:
ಎಲ್ಲಿಯೂ ತಂಗದ ಆ ಹಕ್ಕಿ ಅಗೊ ಅಲ್ಲಿ ಎಂದು.

ಆಗಸದಲ್ಲಿ ಹೊಗೆಯ ರಂಗೋಲಿ ಹಾಕಿ
ನಾನು ಕೆಳಕ್ಕೆ ಬೀಳುವಾಗ
ಅವರು ಹೋಗಿಬಿಟ್ಟರು
ಆ ದಿನದ ಕೆಲಸ ಮುಗಿದಿತ್ತು.

ಎಲ್ಲಿಯೂ ತಂಗದ ಹಕ್ಕಿಗೆ ನಿಮ್ಮ ತಂದೆ
ಇಂದು ಗುಂಡು ಹಾಕಿದರೆಂದು
ತಾಯಂದಿರು ಮಕ್ಕಳಿಗೆ ಕತೆ ಹೇಳಿದರು.

ಮಣ್ಣಿನೊಡನೆ ಬೆರೆತು, ನೀರ ಜೊತೆ ಕಲೆತು
ಮರುದಿನ ದೊಡ್ಡ ಸಾಗರವ ಸೇರಿದೆ.
ತೆರೆಗಳಡಗಿದ ಸಮುದ್ರ ಮಧ್ಯದಲ್ಲೆಲ್ಲ ಅವರು
ನನ್ನ ಹುಡುಕುತ್ತ ಕಾಲ ಕಳೆದರು.
ಕಡಲ ಕುದಿಸಲಾರದ ಸೂರ್ಯನ

ಆಕಾಶ ಮಧ್ಯದಲಿ ನೋಡಲೋಸುಗ ನಾನು
ಅಂದು ದಂಡೆಗೆ ಬಂದೆ.

ಆಳವಾದ ಸಮುದ್ರದಲ್ಲೀಜಿ ಬಂದೆ. ಅವರು
ನಾ ದಂಡೆಗೆ ಹತ್ತುವಾಗ ಗುಂಪು ಗೂಡಿ
ಗುಂಡಿಕ್ಕಿದರು ಒಂದೇ ಸಮನೆ, ನನ್ನ ನೆತ್ತರವ
ತೊಳೆದವು ಸಮುದ್ರದಂಡೆಯ ತೆರೆಗಳು.

ಬಂದೂಕುಗಳ ಹೆಗಲ ಮೇಲಿಟ್ಟು
"ಯಾವ ದಿಸೆಯಿಂದ ನೋಡಿದರೂ
ಬಂದೂಕಿನ ಸೌಂದರ್ಯ ಬಂದೂಕಿಗೆ" ಎಂದು
ಹೊರಳಿ ನೋಡಿದವನೊಬ್ಬ ಹೇಳಿಹೋದ.

ಆಕಾಶದಲ್ಲಿ ನಗುವ ಮಧ್ಯಾಹ್ನ ದೇವನು
ಕಂಡೆ ನೆಗ್ಗಲಿಯ ಹೂವಿನಂತೆ.
ಬಂದೂಕಿನ ಗುಂಡಿನಿಂದ ಛಿದ್ರಗೊಂಡ ಮೈಯನ್ನು
ಸಮಿತ್ತಿನಂತೆ ಶೇಖರಿಸಿ ಮತ್ತೆ
ಆಕಾಶಕ್ಕೆ ಹೋದೆ.

ಅಂದು ರಾತ್ರಿ ಅವರ ನಲ್ಲೆಯರು
ಮಿಗಿಲಾಗಿ ಲಲ್ಲೆಯಾಡಿ ಕೂಡಿರಬಹುದು. ನಾನು
ಎಲ್ಲಿಯೂ ತಂಗದೆ, ಎಲ್ಲಿಗೂ ಹಾರುವೆ.
ಹಳ್ಳದಲ್ಲೂ ದಿನ್ನೆಯಲ್ಲೂ.
ಮರಣ ಬಂದರೂ ಮರಣದ ನಡುವೆ
ಹಾರುವದು ಸುಖ.

ಆ ಬಂದೂಕುಗಳ ಗೋಡೆಗಾನಿಸಿಟ್ಟು
ಪ್ರೇಮಿಗಳನಾಲಿಂಗಿಸಿ
ಆ ಹಕ್ಕಿಯ ಕೊಂದ ದೊಡ್ಡಕತೆ ಹೇಳಿ
ಸಂತೋಷಪಡುವ ಅವರನಾಶೀರ್ವದಿಸಿ
ಹಾರಿದೆ ಮೇಲೆ ಮೇಲೆ.

---

* ಜ್ಞಾನಕೂತ್ತನ್

## ನನ್ನ ಬಸ್ಸು*

ನನ್ನ ಬಸ್ಸು ಯಾವಾಗಲೂ
ನನ್ನ ಕಣ್ಣು ತಪ್ಪಿಸಿ ಹೋಗುತ್ತದೆ.
ಬೇಡವಾದ ಬಸ್ಸುಗಳು
ಒಂದರ ಹಿಂದೊಂದು ಬಂದು
ನಾನು ಹತ್ತುವುದಕ್ಕೆ ಕಾದು
ಕೆರಳಿ ಹೋಗಿ ಬಿಡುತ್ತವೆ
ನನ್ನ ಮಂಕಾಗಿಸಿ.

ಎಂದೋ ಒಮ್ಮೆ
ಕರುಣೆ ತೋರಿ ನನ್ನ ಬಸ್ಸು
ಬೇಡವಾದ ಬಸ್ಸಿನ ಹಿಂದೆ
ಮುಖ ಮರೆಸಿಕೊಂಡು ಬರುತ್ತದೆ.

ಮುಂದೆ ನಿಂತ ಬಸ್ಸನ್ನು ದಬ್ಬಿ
ಹಿಂದಿರುವ ನನ್ನ ಬಸ್ಸು ಹಿಡಿಯಬೇಕೆಂದಾಗ
ಗಕ್ಕನೆ ಬಲಕ್ಕೆ ಹೊರಳಿ ತೆರಳಿಬಿಡುತ್ತದೆ
ನನ್ನಲ್ಲೇ ಬಿಟ್ಟು.

ಕೆಲವೊಂದು ಸಲ ತಾಳ್ಮೆಗೆಟ್ಟು
ಬೇಡವಾದ ಬಸ್ಸನ್ನು ಏರಿ
ಬೆನ್ನಟ್ಟಿ
ಯಾವುದೋ ಒಂದು ಸ್ಟಾಪಿನಲ್ಲಿ
ನನ್ನ ಬಸ್ಸು ನಿಂತಿರುವುದನ್ನು ಕಂಡು
ಇಳಿದು ಹಿಡಿಯುವಷ್ಟರಲ್ಲಿ
ನಿರ್ದಯದಿಂದ ಚಲಿಸಿ ಬಿಟ್ಟಿರುತ್ತದೆ.
ನನಗೂ ಅದಕೂ
ಎಂದೂ ಹೊಂದಿ ಬಂದಿಲ್ಲ.

ಆದರೆ ನನ್ನ ಬಸ್ಸು
ಅದೇಕೆ ಇನ್ನೂ ಇದೆ ಎಂಬುದೇ
ನನಗಿನ್ನೂ ತಿಳಿದಿಲ್ಲ.

---

* ಪೂವಿಯರಸು

# ಪರಿಹಾರ*

"ಏನು ಮಾಡುವುದು ಈ ಕೈಗಳನ್ನು"
ಎಂದೆ, "ಏನು ಮಾಡುವುದು ಎಂದರೆ"
ಸಾಮಿ ಸುಮ್ಮನಾದ.
"ಕೈಗೆ ಕೆಲಸವೊಂದು ಇದ್ದರೆ ಪ್ರಶ್ನೆಯಿಲ್ಲ
ಉಳಿದ ಹೊತ್ತಿನಲ್ಲಿ ನಡೆಯುವಾಗ
ನಿಲ್ಲುವಾಗ ಈ ಕೈಗಳು
ಹೆಗಲ ಜೋಕಾಲಿಗಳು. ಸಹಿಸಲಾರದ
ತೊಡಕು, ರೂಪಕ್ಕೆ ಕುಂದು" ಎಂದೆ ನಾನು.
"ಕೈಗಳನು ಕಾಲು ಮಾಡು" ಎಂದ ಸಾಮಿ.

---

* ಸಿ. ಮಣಿ

# ಮನುಷ್ಯ*

ಜೀವನ ಹೋರಾಟದಲ್ಲಿ
ಗುರಿಗಳನ್ನು ಆಶೆಗಳನ್ನು ಎಲ್ಲ ಬಲಿಗೊಟ್ಟು
ಮೌಲ್ಯಗಳನ್ನು ಯಶಸ್ಸಿನ ಅಳತೆಗೋಲಿನಿಂದ
ಲೆಕ್ಕ ಹಾಕುವ ರೂಢಿಯಾಗಿ
ಸಂಪತ್ತು, ಪದವಿ, ಪ್ರಭಾವ ಇವುಗಳ ಮುಂದೆ
ಸೊರಗಿ, ಸಣ್ಣಾಗಿ
ಸಾದಾ ರಣಜೀವನ ಬಾಳುವ
ಸರಾಸರಿ ಮನುಷ್ಯ ಇವನು.

---

* ಸಿ. ಮಣಿ

# ಕಣ್ಣಿ *

ಗಾಳಿಗೆ ಹಗ್ಗ ಹಾಕಿ
ಎಳೆ ತಂದು, ಗೂಟ ಬಡಿದು
ಗಂಡು ಹಾಕಿ ಕಟ್ಟಿದರು.

ಬಹಳ ಒಳ್ಳೇದು, ಬಾಧಕವಿಲ್ಲ
ದಾರಿ ತಪ್ಪಿಹೋಗದು
ಸುತ್ತಿಕೊಂಡು ಬರಬಹುದು.
ಸ್ಥಿರವಾದ
ಸ್ವತಂತ್ರ ಜೀವನ ಎಂದರು.

ಗಾಳಿ ಮೈ ಮರೆತು, ತಲೆಯಾಡಿಸಿ
ಸರಿ ಎಂದಿತು.
ಕಣ್ಣಿ ವರ್ತುಲಾಕಾರ ತಿರುಗಿ
ವಾಸ್ತವ ಎಂದಿತು.

ಒಮ್ಮೆ ವರ್ತುಲ ದಾಟಿ
ಹೋಗಲು ಹವಣಿಸಿತು
ನಡುವಣ ಗೂಟ ಅಲುಗಾಡಲಿಲ್ಲ -
ಏನು ಹೇಳುವರು ಕೆಲವರು ಎಂದಿತು.

ಕಣ್ಣಿಯೊ ಸುರುಟಿ ಜಗ್ಗಿ
ಮತ್ತಿಷ್ಟು ಬಿಗಿಯಿತು.

---

* ಸಿ. ಮಣಿ

# ಕೋಣೆ-ಬಯಲು*

ತಪ್ಪಿಸಿಕೊಂಡೆ ಎಂದು
ಕಣ್ಣು ಪಿಳುಕಿಸಿ ಸುತ್ತೆಲ್ಲ ನೋಡಿದೆ.
ಮೇಲೆ ಆಕಾಶ, ನಾಲ್ಕು ದಿಕ್ಕಿನಲು
ಭೂಮಿಯ ನೆರಳು
ಮಾಡ, ಗೋಡೆಗಳೊಂದೂ ಇಲ್ಲ.
ಎಲ್ಲ ದಿಕ್ಕಿನಲ್ಲು ಕಣ್ಣು ಕಂಡಿದ್ದು.

ಬಟ್ಟ ಬಯಲು ತಾನೆ, ಇದು ಕೋಣೆಯಲ್ಲ
ಎಂದು ಕೆಲಹೊತ್ತು
ಕುಣಿದಾಡಿತ್ತು ಮನಸು
ಪಶ್ಚಿಮಕೆ ನಡೆದೆ; ಬಡಿಯಿತೊಂದು ಗೋಡೆ.
ದಕ್ಷಿಣಕೆ ನಡೆದೆ; ಬಡಿಯಿತೊಂದು ಗೋಡೆ.
ಉತ್ತರಕೆ ನಡೆದೆ; ಬಡಿಯಿತೊಂದು ಗೋಡೆ.
ಪೂರ್ವಕೆ ನಡೆದೆ; ಬಡಿಯಿತೊಂದು ಗೋಡೆ.
ಎದ್ದು ನೆಗೆದೆ-
ತಲೆಗೆ ಬಡಿಯಿತು ಮಾಡ.

---

* ಸಿ. ಮಣಿ

# ಚಂದ್ರ ಉದಯಿಸಿದಾಗ*

ಚಂದ್ರ ಉದಯಿಸಿದಾಗ-
ಬಿಳಿ ರೆಕ್ಕೆಯ ದೇವದೂತರು
ಕಂಬನಿಗಳ ಮೂಲಕ
ಕೆಳಗಿಳಿದು
ಹೂವುಗಳ ಮೇಲೆ ಬರೆದ ದೂಷಣೆಗಳನ್ನು
ಒರೆಸಿಹಾಕುತ್ತಾರೆ;
ತಮ್ಮ ಕಣ್ಣೆವೆಗಳಿಂದ.

ಚಂದ್ರ ಉದಯಿಸಿದಾಗ-
ತೊಟ್ಟಿಲಲ್ಲಿ ಮಲಗಿರುವ
ಶಬ್ದ
ಒಮ್ಮೆಲೆ ಎಚ್ಚರಗೊಂಡು
ಅಳತೊಡಗುತ್ತದೆ ಹಾಲಿಗಾಗಿ.

ಚಂದ್ರ ಉದಯಿಸಿದಾಗ-
ಪ್ರವಾಸ ಮಾಡಿ
ಆಯಾಸಗೊಂಡ ಪ್ರಶ್ನೆಗಳು
ತಮ್ಮ ಹಸಿವೆಯಲ್ಲಿಯೇ
ವಿಶ್ರಾಂತಿ ಪಡೆಯುತ್ತವೆ.

ಚಂದ್ರ ಉದಯಿಸಿದಾಗ-
ಹೂವುಗಳು ಅರಳುತ್ತವೆ;
ಸತ್ತುಹೋದ ಭಯೋತ್ಪಾದಕನ
ಬಂದೂಕಿನಿಂದ.
ಅವನ ಆಯ್‌ಡಿ ಕಾರ್ಡು
ಜೋಗುಳವಾಗುತ್ತದೆ.

ಚಂದ್ರ ಉದಯಿಸಿದಾಗ-
ವಲಸೆ ಹೊರಟ ಹಕ್ಕಿಯ

ಉದುರಿ ಗರಿ ಬೀಳುತ್ತದೆ
ಕಾವ್ಯದ ಭಿಕ್ಷಾಪಾತ್ರೆಯಲ್ಲಿ.

ಚಂದ್ರ ಉದಯಿಸಿದಾಗ-
ಆತ್ಮ
ಬಲೆಯೊಂದನ್ನು ನೇಯುತ್ತದೆ:
ಹಿಡಿದು ತಿನ್ನಲು
ದೇವರನ್ನು.

ಚಂದ್ರ ಉದಯಿಸಿದಾಗ-
ನನ್ನ ಕಂಪ್ಯೂಟರಿನಲ್ಲಿ
ನೀನು ಪ್ರವೇಶ ಮಾಡುತ್ತೀ
ವೈರಸ್ಸಿನಂತೆ.

---

* ಅಬ್ದುಲ್ ರೆಹಮಾನ್

# ದೇವರಿಲ್ಲದ ಜಾಗ*

ನಾನು ದೇವರನ್ನು ಕೇಳಿದೆ:
ನೀನು ಸರ್ವಾಂತರ್ಯಾಮಿ ಎನ್ನುತ್ತಾರೆ ಸಂತರು.
ಹಾಗಾದರೆ ನೀನು ಇರದೆ ಇರುವ ಜಾಗ
ಯಾವುದಾದರೂ ಇದೆಯ?

ಅವನು ಹೇಳಿದ : 'ಇದೆ'.
ಅಚ್ಚರಿಗೊಂಡು ನಾನು ಕೇಳಿದೆ:
'ಎಲ್ಲಿ?'

ಅವನು ತಟ್ಟನೆ ಹೇಳಿದ,
'ಪೂಜಾ ಸ್ಥಳಗಳು'
ಅಘಾತಗೊಂಡು ಮತ್ತೆ ನಾನು ಕೇಳಿದೆ;
'ಯಾಕೆ?'
ನಿಶ್ಚಿತವಾದ ದನಿಯಲ್ಲಿ ಅವನು ನುಡಿದ:

'ನಾನು ಅಲ್ಲಿ ವಾಸಿಸಲಾರೆ,
ನನ್ನ ಭಕ್ತರು ಸರದಿಯ ಪ್ರಕಾರ
ಅವುಗಳನ್ನು ಆಗಾಗ ಒಡೆದು ಹಾಕುತ್ತಾರೆ.'

---

* ಅಬ್ದುಲ್ ರೆಹಮಾನ್

# ಪತ್ರ*

ಟೆಲಿಫೋನುಗಳಲ್ಲೇನಿದೆ
ಹೃದಯದ ಮೌನದ ಹೊರತು?
ಆದರೆ ಪತ್ರ
ಓದಿದಷ್ಟು ತೃಪ್ತಿ ನೀಡದ
ನಾಶದ ಹಾದಿಯಲ್ಲಿರುವ ತಾಡವೋಲೆಯಂತಿದೆ.

ಅಂಚೆಕಚೇರಿಗೆ
ಸುಮಾರು ಒಂದು ಮೈಲು ನಡೆದಾಗ
ಪೋಸ್ಟಕಾರ್ಡ್ ಸಿಗುತ್ತದೆ.
ಪತ್ರಗಳು ಹೊಲದಲ್ಲಿ ಚೆಲ್ಲಾಡಿದಂತಿರುವುದಿಲ್ಲ.
ಮಿತವಾದ ಜಾಗದಲ್ಲಿ ಅಕ್ಷರಗಳು
ಜೋಳದ ಕಾಳಾಗುತ್ತವೆ.

ಬೆರಳುಗಳು ಕನಸಿನ ದೀಪಗಳೊಂದಿಗೆ
ಉರಿಯತೊಡಗುತ್ತವೆ.
ಈ ಭೂಮಿಯ ಮೇಲೆ ಅಂಚೆಯಾಳಿನಂಥ
ಸುಂದರ ವ್ಯಕ್ತಿ ಯಾರೂ ಇಲ್ಲ.

ಪ್ರಿಯೆ, ಭಾವದುಂಬಿದ ದಾರಿಯಲ್ಲಿ
ನಿಲ್ಲುವಂತೆ ಮಾಡಿದ
ಈ ಮುತ್ತಿನ ಸೇತುವೆಯನ್ನು ಮುರಿದವರಾರು?
ತಾಯಿಗೆ ಮನಿಯಾರ್ಡರಿಗಿಂತ
ಪತ್ರವೇ ಪ್ರಾಣವಾಯು.
ಮೋಡಗಳು ತಾರೆಗಳು ಮತ್ತು ಚಂದ್ರ
ಆಕಾಶವನ್ನೊಳಗೊಂಡೇ
ಒಂದು ಸುಂದರ ಪತ್ರವನ್ನು ರೂಪಿಸುತ್ತವೆ.

ನಮಗೇನಾಗಿದೆ?
ನಮ್ಮ ಖಾಲಿ ಮನಸ್ಸುಗಳಿಗೆ

ವಿಚಾರಗಳ ಬಡತನವೇ?
ಯಶಸ್ಸಿನ ರುಚಿಹತ್ತಿ
ಬಾಲ್ಯ ಬಾಡಿ ಹೋಗಿದೆಯೆ?

ಮಸಿ ತೊಳೆದು ಹಾಕಬಹುದು,
ರಕ್ತದಲ್ಲಿ ಲೆಕ್ಕಣಿಕೆಯನ್ನದ್ದಿ
ಬರೆದ ಪತ್ರಗಳು
ಅವಿನಾಶಿಯಾಗುಳಿಯುತ್ತವೆ.
ಸುದ್ದಿ ಸಮಾಚಾರಗಳ ಕರ್ಕಶ ಧ್ವನಿ ಕೇಳಿ
ಪಾರಿವಾಳಗಳು ಹಾರಿಹೋಗುತ್ತವೆ.
ಅವುಗಳನ್ನು ತಡೆದು ನಿಲ್ಲಿಸಿ-
ಜೀವನದ ಸುಂದರ ಸಂಪುಟವನ್ನು
ದಯವಿಟ್ಟು ಒಂದು 'ಹಲೋ'ದಿಂದ
ಮುಗಿಸಿ ಬಿಡಬೇಡಿ.

---

* ಮೂಲ ತೆಲುಗು : ಎನ್. ಗೋಪಿ

# ತಾರೆಗಳಿಲ್ಲದ ನಗರ*

ರಸ್ತೆಗಳು ಯಾವಾಗಲೂ
ಮಾನವ ಜೀವಿಗಳನ್ನು ಅರಳಿಸುತ್ತವೆ.
ಕಣ್ಣುಗಳನ್ನು ಕನಸುಗಳನ್ನುತುಂಬಿಕೊಂಡು
ಬಸ್ಸು ದೊಡ್ಡದೊಂದು ಕನಸಿನಂತೆ
ಮುಂದೆ ಚಲಿಸುತ್ತದೆ.

ಮಟಮಟ ಮಧ್ಯಾಹ್ನದಲ್ಲಿ
ಸಿನೇಮಾ ಥೇಟರುಗಳು
ಸಿಮ್ಲಾದ ತಂಪನ್ನು ತಂದು ಕೊಡುತ್ತವೆ.

ಸಂಜೆಯ ಮುಂದೆ ಸೂರ್ಯ
ಹುಸೇನಸಾಗರದ ದಂಡೆಯ ಬಯಲಲ್ಲಿ
ಕೆಂಪು ಛಾಯೆಯ ಸೀರೆಗಳನ್ನು ಒಣಗಿಸುತ್ತಾನೆ.

ಹೊಕ್ಕುಳು ಕಾಣುವಂತೆ ಉಡುಗೆಯುಟ್ಟ
ಪ್ರತಿಯೊಂದು ಹುಡುಗಿ
ನಿಮ್ಮ ಕಡೆಗೇ ಮುಗುಳುನಗುತ್ತಿರುವಂತೆ
ನಿಮಗನಿಸುತ್ತದೆ.
ನಿಯಾನ್ ದೀಪಗಳ ಅಮಲಿನಲ್ಲಿ
ವಾಹನಗಳು ನಿಧಾನ ಸಾಗುತ್ತಿವೆ.
ಆದರೆ ಸ್ವಾಮಿ
ನಿಮ್ಮ ಕಿಸೆಯಲ್ಲಿ ತಾರೆಗಳಿಲ್ಲದಿದ್ದರೆ
ಈ ನಗರ ನಿಮ್ಮ ಕಡೆಗೆ
ಹೊರಳಿ ನೋಡಲೂ ಸಿದ್ಧವಿಲ್ಲ.
ರಸ್ತೆ ಕೂಟುಗಳಲ್ಲಿ ನಿಲ್ಲಿಸಿರುವ
ಕಲ್ಲಿನ ಪ್ರತಿಮೆಗಳು ಕೂಡ
ತಮ್ಮ ತೋರು ಬೆರಳಿನಿಂದ
ನಿಮ್ಮನ್ನು ಹೊರದೂಡುತ್ತವೆ

---

* ಮೂಲ ತೆಲುಗು : ಎನ್. ಗೋಪಿ

## ಆರು ಕರ್ಝುಕ್ ಕವಿತೆಗಳು

### (ಮೂಲ : ಕರ್ಝುಕಸ್ಥಾನದ ಮಹಾಕವಿ ಅಬಾಯಿ ಕುನನ್ ಬಾಯೇವ್ ೧೮೪೫-೧೯೦೪)

## ಗಡಿಯಾರ

ಗಡಿಯಾರದ 'ಟಿಕ್ ಟಿಕ್'
ಸೋಮಾರಿತನದ ಶಬ್ದವಲ್ಲ;
ಜೀವನ ಪಕ್ಕದಲ್ಲಿಯೇ ಹರಿಯುತ್ತಿದೆ, ಗೆಳೆಯಾ
ಮರಮರಳಿ ಕೇಳಿಸುವದು ಅದರ ಬಡಿತವೇ.
ಒಂದು ನಿಮಿಷ
ಮನುಷ್ಯನಿಗೆ ಒಂದು ಯುಗವಿದ್ದಂತೆ.
ಅದು ಸಾಗಿ ಹೋಗುತ್ತದೆ, ಸಾಯುತ್ತದೆ
ಜೀವನದ ಒಂದು ಸುತ್ತು ಮುಗಿದು ಬಿಡುತ್ತದೆ.

ಗಡಿಯಾರ ಟಿಕ್‌ಟಿಕಿಸುವ ಕಳ್ಳ-
ಜೀವನವನ್ನು ದಿನವೂ ಕದಿಯುವದು
ಅರಿವಾಗದಂತೆ ಅಪಹರಿಸುವದು-
ಹೀಗೆ ಪ್ರೀತಿ, ಸ್ಥಿರತೆ ಯಾವುದೂ ಇರದಂತೆ
ಜೀವನ ವೇಗವಾಗಿ ಸಾಗುವ ವಂಚನೆಯ ಜಾಲ.

ಗಡಿಯಾರದ ಸರಸರ ಸದ್ದಿನಲ್ಲಿ
ಕಳೆದು ಹೋದ ಜೀವನವಿದೆ. ಅದು
ಹೃದಯವನ್ನು ನೀರಸಗೊಳಿಸಿದರೂ
ಅಥವಾ ಸಮಾಧಾನಗೊಳಿಸಿದರೂ
ವಿವೇಕ ಮಾತ್ರ ಬಲ್ಲುದು ಕಾಲ ವಿಶ್ವಾಸಘಾತಕವೆಂದು
ಅದರ 'ಟಿಕ್' ಅಪಾಯದ್ದಲ್ಲವೆನ್ನುವಂತೆ
ಅದು ಭೂತವನ್ನು ಸೇರುತ್ತದೆ.

ಒಂದು ದಿನ, ಒಂದು ತಿಂಗಳು, ಒಂದು ವರುಷ ಹೀಗೇ
ಬೂದಿಯಾಗಿ ಹೋಗುತ್ತವೆ, ಯಥಾಪ್ರಕಾರ
ಮುಪ್ಪು ಬರುತ್ತದೆ, ಕಾಲ ಜಾರಿ ಹೋಗುತ್ತದೆ....
ಅಂದಿನಿಂದಲೂ ನಶ್ವರ ಕಾಲ ನಿಷ್ಕರುಣೆಯಿಂದ
ಸನ್ನೆಗೈಯುತ್ತಲೇ ಇತ್ತು

ಓ ಅಮರನಾದ ಸೃಷ್ಟಿಕರ್ತನೆ
ನಮ್ಮ ಮೇಲೆ ಕರುಣೆಯಿರಲಿ.

## ಓ ಕರ್ಝುಕ್ ಜನವೆ!

ಓ ಕರ್ಝುಕ್ ಜನವೆ, ನನ್ನ ಬಡ ಬಂಧುಗಳೆ
ನಿಮ್ಮ ಮೀಸೆಗಳನ್ನು ಬೇಕಾದಷ್ಟು ಬೆಳೆಯಲು ಬಿಡುತ್ತೀರಿ
ಒಳಿತು ಕೆಡುಕಿನ ಭೇದ ನೀವರಿಯದ್ದರಿಂದ
ಒಂದು ಕಪಾಳದ ಮೇಲೆ ರಕ್ತ, ಇನ್ನೊಂದರ ಮೇಲೆ ಚರಬಿ ಇದೆ.

ನೀವು ದಯಾಪರರು, ಆತಿಥ್ಯಪ್ರಿಯರು ಎಂಬುದನ್ನು ಒಪ್ಪುತ್ತೇನೆ.
ಆದರೆ ನಿಮ್ಮದು ಕೂಲಿಯ ಮನೋಧರ್ಮ, ನೀವು ಮುಖ ಬದಲಾಯಿಸುವಿರಿ
ಉಳಿದವರ ಬಗ್ಗೆ ನಿರ್ಲಕ್ಷ್ಯ, ನಿಮ್ಮ ಸ್ವಂತ ಸಾಮಗ್ರಿಯಲ್ಲಿಯೇ ನಿಮಗೆ ಸೌಖ್ಯ,
ನಿಮ್ಮ ನಾಲಗೆಗೆ ಹರಟೆಹೊಡೆಯುವದೇ ಒಂದು ಉದ್ಯೋಗ.
ಸ್ವಂತ ಒಳಿತಿನ ಬಗ್ಗೆ ನಿಮ್ಮ ಶಕ್ತಿ ತೋರಿಸಲಾರಿರಿ;
ರಾತ್ರಿಯಲಿ ನಿಮಗೆ ನಿದ್ರಾಭಂಗ, ಹಗಲು ಹೊತ್ತಿನ ನಗೆಯ ಮರೆತು ಬಿಟ್ಟಿಹಿರಿ.
ಬಲಿಷ್ಠರಲ್ಲದವನು ಹೊಟ್ಟೆಕಿಚ್ಚು ಕಡಿದು ಹಾಕುವದು,
ನಾಳೆ ಇಂದಿಗಿಂತ ಬೇರೆಯಾಗಿರುತ್ತದೆ.
ಹಳೆಯ ದೊಂಬಿಜನ ನಿಮ್ಮನಂಕೆಯಲಿಡಲು ಹೆಣಗುವರು.
ಜನತೆಯ ಮುಖವನ್ನೇ ಅವರಂದಗೆಡಿಸಿ ಬಿಟ್ಟಿಹರು.
ನಿಮ್ಮ ಸಂಕಲ್ಪಶಕ್ತಿ ನಿಮ್ಮಿಂದ ತೊಲಗಿ ಹೋಗಿದ್ದರೆ-
ನಿಮ್ಮನ್ನು ನೀವು ತಿದ್ದಿಕೊಂಡಿಹ ಬಗೆಗೆ ನನಗಿನ್ನೂ ಸಂಶಯವೆ.
ನಿಮಗೆ ಹತ್ತಿರವಾದವರು ತೀರ ಕ್ಷುಲ್ಲಕ ಸಂಗತಿಗಳ ಬಗೆಗೂ
ಅಸಂತೋಷಗೊಂಡರೆ, ಅವರ ನ್ಯಾಯವಾದ ತೀರ್ಪನ್ನು
ದೇವರು ಒಯ್ದುಬಿಟ್ಟಿದ್ದಾನೆಂದೇ ತಿಳಿಯವದು.
ಐಕ್ಯವಿಲ್ಲ, ಬಡಂಬಡಿಕೆಯಿಲ್ಲ, ಹೃದಯದಲಿ ಸತ್ಯವಿಲ್ಲ.
ಇದರಿಂದ ನಿಮ್ಮ ಜನಜಂಗುಳಿ ಹಿಮದಂತೆ ಕರಗಿ ಹೋಗುವದು.
ನಿಮ್ಮ ಬುದ್ಧಿಶಕ್ತಿಯನ್ನು ಒಳ್ಳೆಯತನವನಳೆದು ನೋಡಿ
ನಿಮ್ಮ ಶಕ್ತಿಯನೆ ಹ್ರಾಸಗೊಳಿಸಿದೆ ಪ್ರತಿಸ್ಪರ್ಧೆ.
ನಿಮ್ಮ ದೋಷವನು ಹೊರಹಾಕದೆ ಒಳಗೇ ಉಳಿಸಿಕೊಂಡರೆ
ಎಲ್ಲದರಲೂ ನಿಮ್ಮ ತುಚ್ಛತನವೇ ಒಡೆದು ಕಾಣುವದು.
ನಿಮ್ಮೊಳಗೆ ನಾಲ್ವತ್ತು ಜನಕಾದರೂ ಬಂಡಿಯನು ಬೆಟ್ಟದ ಮೇಲೆ
ಒಯ್ಯುವದು ಸಾಧ್ಯವಾಗದೆ ಹೋದರೆ

ಎಲ್ಲಿ ಸಮಾಧಾನ ಕಂಡುಕೊಳ್ಳುವದು? ಯಾವುದರಲ್ಲಿ ನಂಬಿಗೆಯನಿಡುವದು?
ಸಮರ್ಥ ಚೈತನ್ಯವಿಲ್ಲದೆ ಶ್ರದ್ಧೆಯಿಲ್ಲದ ಅರ್ಥ ಹೀನ ಚಂಚಲತೆಯಿಂದ
ನಿಮಗುಳಿಯುವದು ಬರಿ ತಮಾಷೆಯಲ್ಲದೆ ಮತ್ತೇನು?
ಯಾರಿಗಾದರೂ ಬುದ್ಧಿ ಹೇಳುವ ಪಾಳೆ ಬಂದರೆ
ಗೌಪ್ಯವಾಗಿ ಕಿವಿಮಾತು ಹೇಳುವದರ ಹೊರತು
ಅವರಿಗೂ ಬೇರೆ ದಾರಿಯಿಲ್ಲ.

# ನನ್ನ ಕವಿತೆ

ವಿನೋದಕ್ಕಾಗಿ ನಾನು ಕವಿತೆ ಬರೆಯುವುದಿಲ್ಲ,
ಕಥೆಗಳನ್ನು, ಕಟ್ಟು ಕಥೆಗಳನ್ನು ಒಟ್ಟುಗೂಡಿಸಲೂ ಅಲ್ಲ.
ಸಂವೇದನ ಶೀಲ ಹೃದಯದ ದಾಕ್ಷಿಣ್ಯಪರ ನಾಲಿಗೆಯ
ಯುವಕರಿಗೆ ಉದಾಹರಣೆಗಾಗಿ ಬರೆಯುತ್ತೇನೆ.
ಈ ನುಡಿಗಳ ಕೊಡುಗೆ ಮಡ್ಡ ತಲೆಯವರಿಗಲ್ಲ
ವಿವೇಕಿಗಳಿಗೆ, ಸ್ವಚ್ಛ ಮನಸ್ಸಿನ ಅನ್ವೇಷಕರಿಗೆ.

ನೇರವಾಗಿ ಬನ್ನಿ, ದಾರಿ ತಪ್ಪಿಸಬೇಡಿ, ಅಡ್ಡದಾರಿಗಳನ್ನು ಹುಡುಕಬೇಡಿ.
ಹೊರಗಿನಿಂದ ತಿರುಳನ್ನು ಗುರುತಿಸಲಾರಿರಿ.
ಮೊದ ಮೊದಲು ನನ್ನ ಮಾತು ವಿಚಿತ್ರವೆನಿಸಬಹುದು.
ಯಾಕೆಂದರೆ ನೀವು ಬೆಳೆಯುವಾಗ ಇಂಥ ನುಡಿ
ನಿಮ್ಮ ಕಿವಿಯ ಮೇಲೆ ಬಿದ್ದಿಲ್ಲ
ಹೇಳಿದ್ದನ್ನು ಸರಿಯಾಗಿ ಗ್ರಹಿಸದ ಜನರನ್ನು ನೋಡಿ
ನನಗೆ ಆಶ್ಚರ್ಯವಾಗುತ್ತದೆ.
ಕೇವಲ ಹೊಸ ಶಬ್ದಗಳಿಗಾಗಿ ಅವರು ಒತ್ತಾಯ ಪಡಿಸುತ್ತಾರೆ.

ಹಜರತ್ ಅಲಿ* ಮತ್ತು ಡ್ರೇಗನ್‌ದ ಪುರಾಣಕಥೆಯನ್ನು ಬಿಟ್ಟು
ನಾನು ನನ್ನ ಕತೆಯನ್ನು ಹೇಳಿದ್ದೇನೆ.
ಬಂಗಾರದ ಗದ್ದವಿದ್ದರೂ ಅದರಲ್ಲಿ ಸೌಂದರ್ಯವಿಲ್ಲ.
ಸಾವನ್ನು ಸಮೀಪಿಸುತ್ತಿರುವ ಮುಪ್ಪನ್ನು ನಾನು ಹೀಯಾಳಿಸುವುದಿಲ್ಲ.
ನನ್ನ ಶಬ್ದಗಳು ನೀವು ಬಯಸಿದಷ್ಟು ವರ್ಣರಂಜಕವಿಲ್ಲವೆಂದು
ಮುಖ ತಿರುಗಿಸಬೇಡಿ.
ಹೇಗಾದರೂ ಮಾಡಿ ನೀವೇ ಮನವರಿಕೆ ಮಾಡಿಕೊಳ್ಳಿ.
ಯಾವ ಮಾತು ಹೆಚ್ಚು ಬೆಲೆಬಾಳುವಂಥದೋ
ಅದು ಹೆಚ್ಚು ಆಳವೂ ಆಗಿರುತ್ತದೆ.

---

* ಮುಸ್ಲಿಂ ಪುರೋಹಿತ

# ಮನುಷ್ಯ

ಮನುಷ್ಯ, ಮಲ ತುಂಬಿದ ಗೋಣಿ ಚೀಲ.
ನೀನು ಸತ್ತಾಗ ಅದಕ್ಕಿಂತಲೂ ಹೊಲಸು ನಾರುತ್ತೀ
ನೀನು ದುರಹಂಕಾರಿ, ನನಗಿಂತಲೂ
ನೀನು ಮೇಲೆಂದು ಭಾವಿಸಿರುವಿ.
ನಿನ್ನ ಅಜ್ಞಾನಾಂಧಕಾರದ ಸ್ಪಷ್ಟಸೂಚನೆಯಿದು.
ನಿನ್ನೆ ನೀನೊಂದು ಮಗು, ಈಗ ಇಳಿವಯದ ಮುದುಕ.
ಒಂದೇ ಸ್ಥಿತಿಯಲ್ಲಿ ನೀನಿರುವುದು ಸಾಧ್ಯವಿಲ್ಲ-
ಎಂಬುದರ ಅರಿವು ನಿನಗೀಗ ಆಗಿದೆ.
ಮಾನವ ಜೀವಿಗಳನ್ನು ಪ್ರೀತಿಸು
ಅಲ್ಲಾನ ರಹಸ್ಯವನ್ನು ಅನುಭವಿಸು.
ಇದಕ್ಕಿಂತ ಮೋಹಕವಾದದ್ದು ಜೀವನದಲ್ಲಿ
ಏನಿರಬಹುದು?

# ಮಾಗಿ

ಬಿಳಿಬಟ್ಟೆ ಶಕ್ತಿಶಾಲಿ, ನರೆತ ಗಡ್ಡ
ಮೂಕನಂತೆ, ಕುರುಡನಂತೆ ಭಿಡೆಯಿಲ್ಲದೆ
ನಡೆದು ಹೋಗುತ್ತಾನೆ.
ಗಂಟುಮೋರೆ, ಅದಕ್ಕೆ ಹಿಮಧೂಳಿಯ ಹೊದಿಕೆ
ಕಿರುಗುಡುವ ಹೆಜ್ಜೆಯಿಟ್ಟು ಮುನ್ನಡೆದು
ಇಷ್ಟರಲ್ಲೆ ಅವನು ಒಳಗೆ ಬರುತ್ತಾನೆ.
ಉಸಿರಾಡಿದರೆ ಹಿಮದ ಮೋಡದ ಮುಸುಕು.
ಬಹಳ ಹಿಂದೆಯೇ ಆಗಲಿ ಹೋದ ಬಂಧುವಿನಂತೆ
ಒಮ್ಮೆಲೆ ಆಗಮಿಸಿ ಗಾಬರಿಗೊಳಿಸಿದ.
ಅಲೆಮಾರಿ ಮೋಡವನ್ನು ಬಿಗಿ ಹಿಡಿದು ಹ್ಯಾಟ್ ಮಾಡಿಕೊಂಡಿದ್ದ.
ಕೆಂಚನೆಯ ಮುಖದಲ್ಲಿ ಆರೋಗ್ಯದ ಕಾಂತಿಯಿತ್ತು.
ಕಪ್ಪು ಮೋಡದಂತಿದ್ದ ಹುಬ್ಬುಗಳ ಕೆಳಗೆ
ಕಣ್ಣುಗಳು ತೀಕ್ಷ್ಣವಾಗಿದ್ದವು.
ತಲೆ ಕೊಡವಿದರೆ ಹಿಮ ದೂರ ಸಿಡಿದು ಬೀಳುತ್ತಿತ್ತು.
ರಭಸದ ಹಿಮಗಾಳಿಯಂತೆ ಅವನು ಕೋಪದಿಂದ ಕೂಗಿದ
ಡೇರೆಗಳ ಆರು ಗೋಡೆಗಳೂ ನಡುಗಿದವು.
ಕಿಡಿಗೇಡಿ ಯುವಕರು ಮಾತ್ರ ಅವನೊಡನೆ
ಹುಡುಗಾಟದ ಸಾಹಸ ಮಾಡಬಹುದಾಗಿದ್ದಿತು.
ಅವರೂ ಬೇಗ ಹಿಂದಿರುಗಿದರು
ಮುಖವೆಲ್ಲ ಹಿಮದಿಂದ ಸೆಡೆತು.

ಎಲುವಿನವರೆಗೂ ಚಳಿನುಗ್ಗಿ
ಕುರಿಚರ್ಮದುಣ್ಣೆಯ ಕೋಟು ಹೊದ್ದು ಕುರುಬರೂ ಕೂಡ
ಚಳಿಗಾಳಿಗೆ ಕಾಲರಿನಿಂದ ಮುಖ ಮುಚ್ಚಿಕೊಂಡು ಮರಳಿದರು.
ಹಿಮದ ಬಿರುಗಾಳಿಯಲಿ ಕುದುರೆಹಿಂಡು ಬೆಂಗಾಡಿನಲಿ
ತಿರುಗಾಡಿದವು. ಹೇಗೊ ಮಂಜುಗಡ್ಡೆಯನೊಡೆದು
ಗೊರಸುಗಳು ಹೊರಬರುತ್ತಿದ್ದವು.
ಅರಚುತ್ತಿದ್ದುದು ಮಾಗಿಯ ಹಿಮಗಾಳಿಯೊ ಅಥವಾ ತೋಳವೊ?

ಕುರಿಗಾರರು ಕುರಿಹಿಂಡುಗಳ ಹೊಸ ಹುಲ್ಲುಗಾವಲಿಗೆ
ಹೊಡೆದುಕೊಂಡು ಹೋಗುತ್ತಿದ್ದರು ತಿರುತಿರುಗಿ ನೋಡುತ್ತ.
ನಿದ್ದೆಗೇಡಾಗಿ ನೀನೇನೂ ಸಾಯುವುದಿಲ್ಲ, ಶಕ್ತಿತಂದುಕೊ
ಭರ್ಪದ ಗಟ್ಟಿಪದರನ್ನೂ ಒಡೆದುಹಾಕು.
ಹೊಸ ಹುಲ್ಲುಗಾವಲು ಸಿಗುವಂತೆ ದೇವರು ದಯ ತೋರುತ್ತಾನೆ.
ಕುದುರೆಗಳನ್ನು ತೋಳಗಳ ಬಾಯಿಗೀಡು ಮಾಡುವದಕಿಂತ
ಬಡವರಿಗೆ ಕೊಡುವುದೊಳ್ಳೆಯದು.
ಅಪಾಯಕಾರಿ, ಕೇಡಿ ಈ ಮುದಿಯನನ್ನು
ಬರಿಗೈಯಿಂದ ಆಚೆಗೆ ಕಳಿಸಿ.

# ಅಲ್ಲಾಹ್

'ಅಲ್ಲಾಹ್' ಪದ ಹೇಳಲು ಹಗುರಾಗಿದೆ
ಆದರೆ ಅವನನ್ನು ಮುಟ್ಟುವ ದಾರಿ ನಾಲಗೆಯ ಮೂಲಕವಲ್ಲ.
ಹೃದಯದ ಹೋರಾಟ, ಆತ್ಮದ ಪ್ರಾಮಾಣಿಕತೆ:
ಸತ್ಯಕ್ಕಾಗಿ ತೀರ ಕೆಲಸಕ್ಕೆ ಬಾರದ್ದು ಯಾವುದೂ ಇಲ್ಲ.

ದೈಹಿಕ ಪ್ರಯತ್ನಗಳು ಜ್ಞಾನಾರ್ಜನೆಯ ಮೇಲೆಯೇ
ಕೇಂದ್ರೀಕರಿಸಿರುತ್ತವೆ.
ಹೃದಯದ ವಿವೇಕ ಮತ್ತು ತಿಳುವಳಿಕೆ ಸೃಷ್ಟಿಕರ್ತನ ಮೇಲಿನ
ನಮ್ಮ ಪ್ರೇಮಕ್ಕೆ ಪ್ರಮಾಣಗಳು.

ಅಲ್ಲಾಹ್‌ನನ್ನು ನೀನು ತರ್ಕದಿಂದ ತಲುಪಲಾರೆ
ಬುದ್ಧಿವಂತಿಕೆಯಿಂದ ಅವನ ಬಗ್ಗೆ ಮಾತಾಡುವ ಭಾಷೆ ನನ್ನೊಳಿಲ್ಲ
ಅವನ ಅಸ್ತಿತ್ವದ ಬಗ್ಗೆ ಸಂದೇಹವೇ ಇಲ್ಲ.
ಈಗ ಅಸ್ತಿತ್ವದಲ್ಲಿರುವುದೆಲ್ಲವೂ ಅದಕೆ ಸಾಕ್ಷಿ.
ಹೃದಯಕ್ಕೆ ಗೊತ್ತಿರದಿದ್ದರೂ ಅದು ಅನುಭವಿಸಿ ತಿಳಿಯಬಲ್ಲುದು
ಅದಕ್ಕಿದೆ ನಿಜಸ್ಥಿತಿಯ ಉದ್ದೇಶ.
ಜಾಣ ಧರ್ಮೋಪದೇಶಕರು ಶಬ್ದಗಳ ಮೇಲೆ ತಮ್ಮ ಬೆರಳುಗಳನ್ನು
ವ್ಯರ್ಥ ಓಡಿಸುವರು.

# ಬೆಂಕಿ ಬೆಂಕಿಯೆ*

ಆ ದಿನ ಏನಾಯಿತು ಅಂದರೆ
ಒಲೆಯೊಳಗೆ ಕುಳ್ಳು ಕಟ್ಟಿಗೆ ಇಟ್ಟು
ಬಿದಿರಿನ ಬೀಸಣಿಕೆಯಿಂದ ಮೇಲೆ, ಕೆಳಗೆ
ಒಂದೇ ಸವನೆ ಗಾಳಿ ಹಾಕಿ ಬೆಂಕಿ ಹೊತ್ತಿಸುವ ಭರದಲ್ಲಿ
ನೀನು ಧಾವತಿಗೊಂಡು ಬಿಟ್ಟೆ.

ಕಳವಳಗೊಂಡು ಹೊರಬಿದ್ದು ಅಂಗಳವನ್ನು ದಾಟಿ
ಅತ್ತಿತ್ತ ಇಡೀ ಊರನ್ನೇ ಸುತ್ತಾಡಿದೆ.
ಆದರೆ ಒಂದು ಮಾತು ಹೇಳುತ್ತೇನೆ :
ಕುಳ್ಳು ಕಟ್ಟಿಗೆ ಕೆಳಗೆ ಬೂದಿಯೊಳಗೆ
ಕೆಂಡಗಳಿದ್ದಿರಬಹುದು
ಹುಡುಕಿದೆಯಾ? ಒಲೆಯಲ್ಲಿ ತುಂಬಿದ
ಬೂದಿಯನ್ನು ಕೆದರಿ ನೋಡಿದೆಯಾ?

ಎಷ್ಟೋ ಸಲ ಹೀಗಾಗುವದುಂಟು:
ಮಂದಿಯ ಮನೆಯಿಂದ ಬೆಂಕಿಯನ್ನು ತಂದು
ನಿನ್ನ ಮನೆಯ ಒಲೆಯಲ್ಲಿಡುವಷ್ಟರಲ್ಲಿ
ಅದು ಆರಿ ಹೋಗುತ್ತದೆ.
ಆಮೇಲೆ
ಬಹಳಷ್ಟು ವೇದನೆ, ಕೋಪ ತಾಪ.
ನಿಜ ಹೇಳಬೇಕೆಂದರೆ
ಬೆಂಕಿ ಬೆಂಕಿಯೆ.
ಅದರ ಅವಶ್ಯಕತೆಯನ್ನು ಪೂರೈಸಲು
ಬೇರೆ ಮಾರ್ಗವೇ ಇಲ್ಲ.

---

* ಮೂಲ ಮೈಥಿಲಿ : ಸುಕಾಂತ ಸೋಮ್

## ಗಜಲ್*

ಬೀಸಿ ಬರುತಲಿವೆ ಕಲ್ಲು ನೇರ ತಲೆಗಳಿಗೆ ಗುರಿಯನಿಟ್ಟು
ನೋಡುತಿಹರು ಜನರುಸಿರು ಕಟ್ಟಿ ಭಯದಿಂದ ದಿಕ್ಕುಗೆಟ್ಟು

ಏನು ಬಂತು ಬರಿ ಮಾತಿನಲ್ಲಿ ಗೀತಾ ಕುರಾನ ಪಠಣ
ಧರ್ಮವೀಗ ಇಳಿದಿಹುದು ಎಲುವು ಮಾಂಸಗಳ ಮಧ್ಯ ತಾಣ.

ಚಾಕು ಚೂರಿ, ಮಿರುಗುವ ತ್ರಿಶೂಲ ಕತ್ತಿಗಳನೆತ್ತಿ ಹಿಡಿದು
ಮೃತ್ಯು ದಾಳಿಗಿಳಿದಿಹುದು ವಿವಿಧ ರೂಪದಲಿ ಹುಚ್ಚು ಹಿಡಿದು.

ಯಾವುದೋ ಮಂದಿರದ ರಾಮ, ಮತ್ತಾವುದೊ ಮಸೀದೆಯ ಖುದಾ
ವ್ಯರ್ಥ ಹುಡುಕುತ್ತಿಹೆನು ಅಮವಾಸೆ ರಾತ್ರಿಯಲಿ ಚಂದ್ರನ ಮುಖಾ.

ಕರೆದು ಹೇಳಲಿಕೆ, ತೋಡಿಕೊಳ್ಳಲಿಕೆ ಯಾರೊಬ್ಬರಾದರಿಹರೆ?
ನಮ್ಮವರು ಆಸುಪಾಸಿನಲಿ ಯಾರು ಉಳಿದಿಲ್ಲ, ಓ ದೇವರೆ!

ಒಂದು ದುಃಖ ಹತ್ತಿಕ್ಕಿಕೊಳ್ಳಲಿನ್ನೊಂದು ಉಕ್ಕಿ ಹೊರಗೆ
ಎಷ್ಟೊಂದು ಹುದುಗಿಸಿಡಬಹುದು ಹೇಳಿ ಈ ಖಿನ್ನ ಮೊಗದ ಒಳಗೆ.

ಯಾವ ಆಶೆಯಾ ಕಿರಣ ಕಾಣದಿದೆ ಯಾರಲ್ಲು ಇಲ್ಲುಮೇದು
ದೇವದೂತನ ಬರವ ಕಾಯುವಂತಿಹರಿಲ್ಲಿ ಪ್ರತಿಯೊಬ್ಬರು.

---

* ಮೂಲ ಸಿಂಧಿ : ಕೃಷ್ಣಾರಾಹಿ

# ಗಾಂಧಿ ಮತ್ತು ಕಾವ್ಯ*

ಹೀಗೊಂದು ದಿನ, ಸಣಕಲಾದ ಕವಿತೆಯೊಂದು
ಒಂದೇ ಒಂದು ಕ್ಷಣ ಗಾಂಧೀದರ್ಶನ ಪಡೆಯಲು
ಅವನ ಆಶ್ರಮಕ್ಕೆ ಹೋಯಿತು.
ಚರಕದಿಂದ ನೂಲು ತೆಗೆಯುತ್ತ
ರಾಮನ ಧ್ಯಾನದಲ್ಲಿದ್ದ ಗಾಂಧಿ
ಕವಿತೆ ಬಂದ ಕಡೆಗೆ ಲಕ್ಷ್ಯಗೂಡಲಿಲ್ಲ.
ಭಜನೆಯ ಪದವಾಗದ್ದಕ್ಕೆ ನಾಚಿಕೆಪಟ್ಟ ಕವಿತೆ
ಬಾಗಿಲಲ್ಲಿಯೇ ಕಾದು ನಿಂತಿತು.
ಕವಿತೆ ಈಗ ತನ್ನ ಗಂಟಲನ್ನು ಸರಿಪಡಿಸಿಕೊಂಡಿತು.
ಬಾಳಿನ ಬವಣೆಯನ್ನು ಕಂಡ ತನ್ನ ಕನ್ನಡಕದಿಂದ
ಗಾಂಧಿ ಓರೆಗಣ್ಣಿನಿಂದ ಅದರತ್ತ ನೋಡಿ ಕೇಳಿದ :

"ಭಂಗಿಯ ಬಂಡಿಯನ್ನು ಎಂದಾದರು ಎಳೆದಿರುವೆಯಾ?
ನಸುಕಿನಲ್ಲಿ ಅಡಿಗೆಯ ಮನೆಯಿಂದೇಳುವ
ಹೊಗೆಯನೆಂದಾದರೂ ಅನುಭವಿಸಿರುವೆಯಾ?
ಎಂದಾದರೂ ಉಪವಾಸ ಬಿದ್ದಿರುವೆಯಾ?"

ಕವಿತೆ ಹೇಳಿತು : "ನಾನು ಕಾಡಿನಲ್ಲಿ
ಬೇಡನ ಬಾಯಲ್ಲಿ ಹುಟ್ಟಿದೆ.
ಮೀನುಗಾರನೊಬ್ಬ ತನ್ನ ಗುಡಿಸಲಲ್ಲಿ
ನನ್ನನ್ನು ಬೆಳೆಸಿದ. ಈಗಲೂ
ನನಗೆ ಕೆಲಸವೆಂದರೇ ಗೊತ್ತಿಲ್ಲ.
ನಾನು ಕೇವಲ ಹಾಡುತ್ತೇನೆ.
ಮೊದಲು ಅರಸರ ಆಸ್ಥಾನದಲ್ಲಿ ಹಾಡಿದೆ.
ಆಗ ನಾನು ದುಂಡಗೆ ಸುಂದರವಾಗಿದ್ದೆ.
ಆದರೆ ಈಗ ಅರೆ ಹೊಟ್ಟೆಯಿಂದ
ಬೀದಿ ಪಾಲಾಗಿದ್ದೇನೆ."

ತುಟಿಯನ್ನು ಕೊಂಕಿಸಿ, "ಒಳ್ಳೆಯದೇ ಆಯಿತು" ಎಂದರು ಗಾಂಧಿ.
"ಆದರೆ ನೀನು ಆಗಾಗ ಸಂಸ್ಕೃತದಲ್ಲಿ
ಮಾತಾಡುವ ಚಟವನ್ನು ಬಿಡಬೇಕು.
ಹೊಲಗದ್ದೆಗಳಿಗೆ ಹೋಗು ಕಿವಿಗೊಟ್ಟು ಕೇಳು
ಒಕ್ಕಲಿಗರಾಡುವ ಮಾತು."

ಕವಿತೆ ಒಂದು ಧಾನ್ಯದ ಬೀಜವಾಗಿ
ಹೊಲದಲ್ಲಿ ಹೂತು ಕಾಯತೊಡಗಿತು -
ಹೊಸಮಳೆಗೆ ತೊಯ್ದು ಇನ್ನೂ ಉತ್ತಿಲ್ಲದ ಭೂಮಿಯಲ್ಲಿ
ನೇಗಿಲು ಹೊಡೆಯುವ ರೈತನಿಗಾಗಿ.

---

* ಮೂಲ ಮಲಯಾಳಂ : ಕೆ. ಸಚ್ಚಿದಾನಂದನ್

# ಸ್ವಾತಂತ್ರ್ಯ*

ಸಿಂಪಿಗನನ್ನು ಅವನ ಕೆಲಸದ ಸಹಾಯಕ ಕೇಳಿದ:
"ಯಜಮಾನರೆ, ಸ್ವಾತಂತ್ರ್ಯ ಎನ್ನುತ್ತಾರಲ್ಲ
ಏನು ಹಾಗಂದರೆ?
ಹೊಲಗದ್ದೆಗಳಲ್ಲಿ ಜಿಗಿದಾಡುವ ಕರುವೆ?
ಸೂರ್ಯನಲ್ಲಿ ಗೂಡುಕಟ್ಟಲು
ಮೇಲೆ ಹಾರುವ ಹಕ್ಕಿಯೆ?
ಸಿಳ್ಳು ಹಾಕುತ್ತ ಉತ್ತರದಿಕ್ಕಿಗೋಡುವ ರೈಲು ಗಾಡಿಯೆ?
ಕತ್ತಲೆಯಲ್ಲಿ ಹಾದಿ ಹೋಕರು ಬಯಸುವ ಬೀದಿ ದೀಪವೆ?
ನಿಶ್ಚಿಂತ ನಿದ್ದೆಯೆ?
ಅಥವಾ ಉದ್ದಾನುದ್ದ ಬಟ್ಟೆಯಿಂದ ನಿರಂತರ ತಿರುಗುವ ರಾಟೆಯಿಂದ
ನಿರ್ದಯ ಸೂಜಿಯಿಂದ ನನ್ನ ಬಿಡುಗಡೆಯೆ?"

ಸಿಂಪಿಗ ಉತ್ತರಿಸಿದ:
"ಸ್ವಾತಂತ್ರ್ಯ ಹಸಿದವರಿಗೆ ಅನ್ನ
ಬಾಯಾರಿದವರಿಗೆ ನೀರು
ಚಳಿಯಲ್ಲಿ ಬಿದ್ದುಕೊಂಡವನಿಗೆ ಅಂಗಿ,
ಹಾಸಿಗೆ ದಣಿದವನಿಗೆ"

"ಅದು ಕವಿಗೆ ಶಬ್ದ, ಬೇಟೆಗಾರನಿಗೆ ಬಾಣ,
ಒಬ್ಬಂಟಿಯಾದವನಿಗೆ ಸಂಘ-ಸಮಾಜ,
ಬೆದರಿ ಬೆಚ್ಚಿದವನಿಗೆ ಧೈರ್ಯ,
ಷಂಡನಿಗೆ ಸಾವು.
ಮದುವೆಯಾದವನಿಗೆ ಕುಟುಂಬವನ್ನು
ನೆಲೆಗೊಳಿಸುವ ಮಗ.
ವಾಸ್ತವವಾಗಿ ಇವೆಲ್ಲ ಸ್ವಾತಂತ್ರ್ಯ"

"ಅರಿವಿಲ್ಲದವನಿಗೆ ಜ್ಞಾನ, ಜಾಣನಿಗೆ ಕ್ರಿಯೆ
ಕ್ರಿಯಾಜೀವಿಗೆ ಸ್ವಾರ್ಥತ್ಯಾಗ.
ಹುತಾತ್ಮನಿಗೆ ಅವನ ಪ್ರಾಣ
ಇವೆಲ್ಲವೂ ಸ್ವಾತಂತ್ರ್ಯ".

"ಆದರೆ ಹೊಲಿಗೆಯ ಕೆಲಸ ಬಿಟ್ಟವನು
ತನ್ನ ಕನಸು ಕಳೆದುಕೊಳ್ಳುತ್ತಾನೆ.
ಹೊಲಿಯುವ ಸೂಜಿಯ ಹೊಳೆಯುವ
ಮೊನೆಯಲ್ಲಿದೆ ಸ್ವಾತಂತ್ರ್ಯ
ಅದು ಬಿತ್ತಿದವನ ಸುಗ್ಗಿಯ ಧಾನ್ಯ
ಬೆವರು ಹರಿಸಿದವನಿಗೆ ರೊಟ್ಟಿ
ಹೊಲಿದವನಿಗೆ ತಯಾರಾದ ಅಂಗಿ."

ನಂತರ ಯಜಮಾನ ತನ್ನ ಹೊಲಿಗೆಯ ಯಂತ್ರವನ್ನು
ಪುನಃ ಸುರು ಮಾಡಿದ.
ತನ್ನ ಸಂದೇಹಗಳನ್ನು ನಿವಾರಿಸಿಕೊಂಡ ಶಿಷ್ಯ
ಸೂಜಿಯಲ್ಲಿ ದಾರ ಪೋಣಿಸತೊಡಗಿದ.

---

* ಮಲಯಾಳಂ ಮೂಲ : ಬಾಲಚಂದ್ರನ್ ಚುಲ್ಲಿಕ್ಕಾಡ್

# ಹುಚ್ಚಿ*

ಮೋಡದ ಜೊತೆಗೆ ಆಕೆ ಮಲಗಿದ್ದಳು:
ನಂತರ ಸಹಜವಾಗಿಯೇ ಬಸುರಾದಳು;
ಉಳಿದಂತೆ ಎಲ್ಲ ನಿರಾತಂಕ.
ಮನೆಯೊಳಗಿನ ಮಣ್ಣ ಬಿಂದಿಗೆಯನಾಕೆ
ಖುಷಿಯಿಂದಲೇ ಒಡೆದುಹಾಕಿ
ಹೊರಟುಬಿಟ್ಟಳು ದೇಹಾಂತ್ಯದ ಯಾತ್ರೆಗೆಂದು.
ದಾರಿಯಲ್ಲಿ ಎದುರಾದ ಕತ್ತೆಗೆ
ವಿಧಿವತ್ತಾಗಿ ಪೂಜೆ ಮಾಡಿದಳು.
ಧೂಪದ ಕುಡಿಕೆಯಲ್ಲುಳಿದದ್ದನ್ನು ಆಶೆಯಿಂದ
ಸ್ವಾಧೀನಪಡಿಸಿಕೊಂಡು ಹೇಳಿದಳು :
"ಇದೂ ಬೂದಿಯಾಗಿಬಿಟ್ಟಿದ್ದರೆ ಜಗತ್ತಿಗೆ ನಾನು
ಏನು ಹೇಳಬಹುದಾಗಿತ್ತು? ಆದರೆ ಅದೃಷ್ಟ
ಮಿತಿಮೀರುತ್ತ ಮುಂದಾಗಿ ಸಾಗಿದೆ ನಾಯಿಯಂತೆ".
ಆಮೇಲೆ ಆಕೆ ಆಲದ ಎಲೆಗಳನ್ನಷ್ಟು ಹರಿದು
ಅರಳಿ ಮರಕ್ಕೆ ಹಚ್ಚಿ ಬಡಿದು ಹೇಳಿದಳು :
"ಈಗ ನಾನು ಯಾರ ಋಣದಲ್ಲಿಯೂ ಇಲ್ಲ,
ಪೂರ್ಣಚಂದ್ರನಷ್ಟು ಕೂಡ ಅಲ್ಲ."
ಉಳಿದದ್ದು ಎಲ್ಲ ನಿರಾತಂಕ (ಈ ಮಾತು ಮೊದಲೇ ಹೇಳಿದ್ದೇನೆ)
ಸಿಡಿಲಿಗೆ ಜನ್ಮವಿತ್ತಳು ಹುಚ್ಚಿ;
ಅದಕ್ಕೆ ಮೊಲೆಯೂಡುತ್ತ ಮುಂದೆ ನಡೆದಂತೆ
ಭೆಟ್ಟಿಯಾದನು ಅರಮನೆಯ ವಿದೂಷಕ;
ಆಮೇಲೆ ರಾಜ, ನಂತರ ರಾಣಿ, ಹಾಗೇ ಅವರು, ಇವರು.
ಆದರೆ ಹುಚ್ಚಿ ಸಾಕಷ್ಟು ಬುದ್ಧಿವಂತೆ-
ಯಾರನ್ನೂ ಆಕೆ ಗುರುತಿಸಲಿಲ್ಲ.

* ಮೂಲ ಮರಾಠಿ : ವಿಂದಾ ಕರಂದೀಕರ

# ಚಕ್ರ*

ಯಾರೊ ಒಬ್ಬರು ಬರುವವರಿದ್ದರು, ಆದರೆ ಬಂದಿಲ್ಲ.
ಸದ್ಯವೇ ಮೆಟ್ಟಿಲಿಳಿದು ಬರಬೇಕು ಬಂದಿಲ್ಲ.
ಅಗಸ ಕೊಟ್ಟ ಅಂಗಿಯಲ್ಲಿ ಹಳೆಯ ಕಲೆಗಳು ಉಳಿದುಕೊಂಡಿವೆ
ತೊಟ್ಟುಕೊಂಡು ಗುಂಡಿ ಹಾಕಿಕೊಳ್ಳುತ್ತೇನೆ.
ನನ್ನ ವಿಚಿತ್ರ ಹಣೆಬರೆಹದಂತೆ.

ಕದಹಾಕಿ ಸ್ವಸ್ಥಕೂಡುತ್ತೇನೆ.
ಪಂಖಾ ತಿರುಗತೊಡಗುತ್ತದೆ, ಗಾಳಿಯನ್ನು
ಬೆಂಕಿಯ ತಿರುಗಣಿ ಮಡುವಾಗಿಸಿ,
ಮನೆಗಿಂತ ಅದರದೇ ಭಾರೀ ಸಪ್ಪಳ.
ಯಾರೊ ಒಬ್ಬರು ಬರುವವರಿದ್ದರು, ಬಂದಿಲ್ಲ.
ಅದೇನೂ ಅಂಥ ದೊಡ್ಡ ವಿಷಯವಲ್ಲ.
ಹಗುರಾಗಿ ಹೀಗೆ ಗೋಡೆಗಾತುಕೊಳ್ಳುತ್ತೇನೆ,
ಗೋಡೆಯೇ ಆಗುತ್ತೇನೆ.
ನನ್ನ ಭುಜದ ಮೇಲಿರುವ ಗಾಯಗೊಂಡ ಹಕ್ಕಿ
ಕರ್ಕಶವಾಗಿ ನಗುತ್ತದೆ,
ತಾನು ಕುಳಿತುಕೊಂಡ ಭುಜ ನೋಡಿಯೇ ನಗುತ್ತದೆ!

ನನ್ನ ದೇಹದ ಆತ್ಮಸೂಜಿಯ ಕಣ್ಣಲ್ಲಿ ಉದ್ದವಾದ ದಾರವನ್ನು ಪೋಣಿಸುತ್ತದೆ.
ನನ್ನ ಮಗನ ಕೊಡೆಗೆ ತೇಪೆ ಹಚ್ಚುತ್ತೇನೆ.
ಅವನ ಮೂಗು ಜಗ್ಗಿ ಅದಕ್ಕೆ ಹೆಸರಿಡುತ್ತೇನೆ.
ಒಂದಕ್ಕೆ 'ಆನೆ' ಎಂದು, ಇನ್ನೊಂದು 'ಸಿಂಹ' ಎಂದು.
ಯಾರೋ ಒಬ್ಬರು ಬರುವವರಿದ್ದರು, ಬಂದಿಲ್ಲ. ಸದ್ಯವೇ
ಮೆಟ್ಟಿಲಿಳಿದು ಬರಬೇಕಿತ್ತು, ಬಂದಿಲ್ಲ.
ಚಿಕ್ಕ ಮಕ್ಕಳನ್ನು ಹಿಡಿದು ಕಟ್ಟಾಡಿಸುತ್ತೇನೆ.
ಅವರೂ ನನಗೆ ಹಾಗೇ ಮಾಡುತ್ತಾರೆ. ನಾನು ನಗುತ್ತೇನೆ-
ಬೇಕಂತಲೇ, ಯಾಕೆಂದರೆ ನನಗೇನೂ ಕಟ್ಟಾಡಿಸಿದಂತನಿಸಲಿಲ್ಲ.
ಹೋಗಲಿ, ಅದೇನೂ ಅಂಥ ದೊಡ್ಡ ವಿಷಯವಲ್ಲ.
ಅವರ ಅಂಗೈ ಹಿಡಿದು ಬೆರಳ ತುದಿಯ ಚಿಹ್ನೆಗಳನ್ನು ಪರೀಕ್ಷಿಸುತ್ತೇನೆ
ಒಂಬತ್ತು ಶಂಖ, ಒಂದೇ ಒಂದು ಚಕ್ರ.

---

* ಮೂಲ ಮರಾಠಿ : ವಿಂದಾ ಕರಂದೀಕರ

# ಮುಕ್ತಿಕಾಮಿ*

೧

ರಣರಂಗವನ್ನು ಸಿಂಹಾಸನವನ್ನು
ಆತ್ಮವನ್ನೂ ನಡುಗಿಸಬಲ್ಲ
ನೇರ ಧ್ವನಿ ನನ್ನದು.
ನಿಮ್ಮ ಹಿತೋಪದೇಶಕ್ಕೆ ಕಿವಿಗೊಡದ
ಅನಾಥ ವೇದನೆಗಳು ನನ್ನ ಆಶ್ರಯದಲ್ಲಿವೆ.

ಗಾಯಗೊಂಡು ನರಳುತ್ತಿರುವ
ಈ ಭೂಮಿಯ ಮೈಯನ್ನು ಮುಚ್ಚುವ ಬಟ್ಟೆ
ನಿಮ್ಮಲ್ಲಿರದಿದ್ದರೆ, ನಾನೇ ಹೊದಿಸಬಲ್ಲೆ.

ದ್ವೇಷವನ್ನು ಸ್ಫೂರ್ತಿಯನ್ನು ಸುಂದರ ಭಾವಗೀತವಾಗಿ,
ಅವಮಾನವನ್ನು ಒಂದು ಅನುಭವವಾಗಿ
ರೂಪಾಂತರಗೊಳಿಸಬಲ್ಲೆ.
ಉಕ್ಕಿನಂಥ ಕಠಿಣ ಹೃದಯಗಳನ್ನು ಕರಗಿಸುವ
ಬೆಳೆದ ಹುತ್ತುಗಳನ್ನು ಪುಡಿಗೊಳಿಸುವ
ಪ್ರತಿಜ್ಞೆ ಕೈಗೊಳ್ಳಬಹುದು ನಾನು.

ಇಂಥದೇ ನಗರ, ಇಂಥದೇ ಜಾತಿ
ಅಥವಾ ಯಾವುದೊ ಸ್ಮಾರಕಸ್ತಂಭ
ಯಾವುದೂ ಇಲ್ಲ ನನಗೆ.
ನರಳುತ್ತಿರುವ ಮನುಕುಲದ
ಹಸಿ ಮಣ್ಣಿನಿಂದ ಅಂಕುರಿಸುವ
ಬದುಕಿನ ಯಾತನೆಯ ಅವಮಾನ ನಾನು.

ಬದುಕಿನ ಭ್ರಮೆಗಳಿಗೆ ಈಡಾಗುವಲ್ಲಿ
ಹಸಿವು ಮತ್ತು ಅನ್ಯಾಯದಿಂದ ಕೆರಳಿದ
ರೋಷಕ್ಕೆ ನಾನು ಸಿದ್ಧೌಷಧಿ.

೨

ನನ್ನ ಕಣ್ಣುಗಳು -
ತೆಗೆದುಕೊ ನನ್ನ ಕಣ್ಣುಗಳ
ಇನ್ನೊರ್ವ ಶಿವನನ್ನಾಗಿ ಬದಲಿಸು.
ಚಳಿರಾತ್ರಿಯಲ್ಲಿ ನೆಲೆ ಕಳೆದುಕೊಂಡವರ
ಕಂಬನಿಗಳಲ್ಲಿ ಪ್ರತಿಬಿಂಬಿಸಿದ
ಅನಿಶ್ಚಿತ ಹಗಲಿನೆಡೆ
ಹೊರಳಿ ನೋಡು.

ನನ್ನ ನಾಲಗೆ.
ಕತ್ತರಿಸು ನನ್ನ ನಾಲಗೆಯ
ನೀನೆ ಕಾಳಿ ದೇವತೆಯಾಗು.
ಹೆಸರಿಲ್ಲದ ನೋವನ್ನು, ಶಾಪಗ್ರಸ್ತ ನಗುವನ್ನು
ಆತ್ಮಶೋಧಕ ಕೀರ್ತನೆಗಳನ್ನು
ತುಳಿದುಬಿಡು.

ನನ್ನ ತೋಳುಗಳು-
ದಶದಿಕ್ಕುಗಳ ಫಲವತ್ತಾದ ಹೊಲಗಳಲ್ಲಿ
ದುಃಖದ ಬೀಜ ಬಿತ್ತಿ
ಜನ ಸುಗ್ಗಿಗಾಗಿ ಕಾಯುತ್ತಿದ್ದಾರೆ
ತೆಗೆದು ಕೋ ನನ್ನ ತೋಳುಗಳ
ಆತ್ಮಹತ್ಯೆಯಿಂದವರ ಪಾರು ಮಾಡು.

ನನ್ನ ಕಿವಿಗಳು -
ಕಳಚಿಕೊ ನನ್ನ ಕಿವಿಗಳನು
ಅವರ ದುರ್ವಿಚಾರಗಳ ಒಳಸಂಚುಗಳ
ಗೂಢ ಲಿಪಿ ತಿಳಿದುಕೊ.
ನಿಶ್ಶಬ್ದ ಇಂದಿನೀ ಸ್ವಸ್ಥ ಸಮಯದಲ್ಲಿ
ಸ್ಫೋಟಗಳಂತೆ ಚೂರು ಚೂರಾಗಿಸು.

ನನ್ನ ಕೋಮಲ ಹೃದಯ-
ಕಿತ್ತುಕೊ ನನ್ನ ಹೃದಯವನು
ಲೋಕದ ಜನ ಅದರ ರಕ್ತದಿಂದ
ಬರೆದುಕೊಂಡಿದ್ದಾರೆ ವಿಜಯದ ಚಿಹ್ನೆಗಳನ್ನು
ತಮ್ಮ ಹಣೆಯ ಮೇಲೆ.
ರಹಸ್ಯದ ಹಾದಿಗಳಿಂದ ತಳಕ್ಕೆ ಮುಳುಗಿದ್ದಾರೆ.
ಬಹು ಕಾಲದಿಂದ ಬೆನ್ನ ಮೇಲೆ ಪಾಪದ ಭಾರ ಹೊತ್ತು
ಹೃದಯ ಕಲ್ಲಾಗಿದ್ದಾರೆ.

ಇಡೀ ಪೃಥ್ವಿಯ ಮೇಲೆ
ರಣಹದ್ದುಗಳಂತೆ ವ್ಯಾಪಿಸಿರುವ ಅವರನ್ನು
ಮನುಷ್ಯರನ್ನಾಗಿ ಮಾಡು.

ನನ್ನ ಮುರಿದ ಎಲುಬುಗಳು
ತುಂಡುಗಳನ್ನಾಯ್ದು ಆಯುಧ ತಯಾರಿಸು,
ಮಾನವತೆಯ ಆಯುಧಗಳನ್ನು,
ಗವಿಗಳಲ್ಲಿ ಅವಿತಿರುವ
ಪರಾಧೀನತೆಯ ಹೊಡೆದು ಹಾಕು.

ಸೂರ್ಯಪ್ರಕಾಶದಂತೆ ಹೊಳೆವ
ಮಣಿಯದ ನನ್ನ ನಂಬಿಕೆಯ ತೆಗೆದುಕೊ.
ನಿಸ್ಸಹಾಯಕತೆಯಿಂದ ವಿನಾಶದಿಂದ
ಈ ಭೂಮಿಯನ್ನು ರಕ್ಷಿಸು.

ನನ್ನನ್ನು ಹಂಚಿಕೊಳ್ಳಲು ನಾನು ಸಿದ್ಧ.
ಉನ್ಮಾದವೆಂದೊ, ಬುದ್ಧಿಭ್ರಮಣವೆಂದೊ
ನನ್ನ ಕೇಳದಿರಿ.

---

* ಮೂಲ ಉಡಿಯಾ : ಸುಚೇತಾ ಮಿಶ್ರ

# ಭೂಮಿ-ಬದುಕು

೨೦೧೨

## ಅನಿಸುವದು ಒಮ್ಮೊಮ್ಮೆ

ಅನಿಸುವದು ಒಮ್ಮೊಮ್ಮೆ : ಉದಾತ್ತತೆಯ ಉದ್ರೇಕ-
ಕಿಂತಲೂ ಸಾಮಾನ್ಯ ಮನವೆ ಮೋಹಕವೆಂದು.
ದೋಷ-ದೌರ್ಬಲ್ಯ, ತುಸು ಅಡ್ಡ ನಡೆ-ನುಡಿ, ಕುಂದು-
ಇದರೆದುರು ಘನತೆ ಗಾಂಭೀರ್ಯ ಹೇರಿದ ಲೋಕ
ಶುದ್ಧ ನೀರಸ. ಪಾಪಗೈದಿಲ್ಲವೆನುವ ಸಂತ-
ನಲ್ಲಿ ಆಸ್ಥೆ ಕೆರಳುವುದೆ? ನಮಗಿರುವ ಆಕರ್ಷಃ
ಸ್ವಲ್ಪ ಅಸಂಬದ್ಧತೆ, ಅಸಾಂಗತ್ಯದ ಹರ್ಷ.
ಪರಿಪೂರ್ಣ ಮೆದುಳು ಪ್ರತಿವರುಷ ಹಾದಿಗೆ ಹೊಸತ
ಸಂಕಲ್ಪಿಸದು. ಹಿಡಿದ ಕಾರ್ಯ ಮುಗಿಸುವ ಛಲಕೆ
ಯೋಜನೆಯ ವಿವರ ಜಾಹೀರಾತಿನಲಿ ಬರಲು
ಸ್ವಾರಸ್ಯ ಕಾಣಿಸದು. ಸೇನಾಪತಿಗೆ ಗೆಲವು
ಮೊದಲೆ ನಿಶ್ಚಿತವೆನಿಸೆ ಯುದ್ಧಾಸಕ್ತಿ ತೋರಿಕೆ.
ಭವಿಷ್ಯಕೆ ನಿರ್ಲಕ್ಷ್ಯ, ಚಂಚಲತೆ, ಮೊಂಡುತನ-
ಇತ್ಯಾದಿಯಲ್ಲೆ ಮಾನವ ಮನದ ಸಂಚಲನ.

# ಹೊಂದೊಡಿಗೆ

ಅಡ್ಡಮಳೆಗೆ ಹರಗಿ ಹಸನಾದ ಹೊಲದ ಒಡ್ಡು
ಒಡೆಯದ ಹಾಗೆ, ಹೊಳಗಟ್ಟೆಯಲಿ ರಾಡಿ ನೀರಿಗೆ
ದಾರಿ ಬಿಟ್ಟು, ಉಳಿದದ್ದು ತಿಳಿಗೊಳ್ಳುವವರೆಗೆ
ತಳಮಳವೆ. ತಾಳ್ಮೆಯೇ ಇರುಳ ಹಗಲಾಗಿಸಿತು.
ಆಚೆ ನೋವಿನ ಬಂಡೆ, ಈಚೆ ಪ್ರೀತಿಯ ದಂಡೆ
ನಡುವೆ ತಿಳಿಗೊಳದಲ್ಲಿ ಜೋಡು ತಾವರೆ ಮೊಗ್ಗೆ
ಮೆಲ್ಲಗರಳುತ ಕರುಳ ಕಾಪಾಡಿತ್ತು ಕವಿತೆ.
ಅಂತರಂಗದ ಮಹಾಮನೆಯ ಬಾಗಿಲಿನಾಚೆ
ಕೋಗಿಲೆಯ ಕೂಗು, ಅಂಗಳದಲ್ಲಿ ಶ್ರೀಗಂಧ
ಹಗಲು ಇರುಳೂ ಮಾತೃ ವಾತ್ಸಲ್ಯಧಾರೆ-
ಪೊರೆವಂತೆ ಒಂದೇ ಒಂದು ಸಲ ದೇವರಿಗೆ ಮೊರೆ.
ಹಾಡು ಮರೆಯದ, ತನ್ನ ಜಾಡು ತೊರೆಯದ ಬಂಧ.
ಭೂತ ಚೇಷ್ಟೆಗೆ ಬೆನ್ನು ತಿರುಗಿಸಿದನನ್ಯತೆಗೆ
ವರ್ತಮಾನದಲಿ ಸದ್ವರ್ತನೆಯ ಹೊಂದೊಡಿಗೆ.

---

* ಕವಯಿತ್ರಿ ಮಾಲತಿ ಪಟ್ಟಣಶೆಟ್ಟಿ ಅಭಿನಂದನ : ೨೦೦೭

# ಕೃಷ್ಣ ದೇಶಪಾಂಡೆಯವರಿಗೆ

ಕೈ ಕುಲುಕಿ, ಮೈದಡವಿ, ನಗುಮೊಗದ ಮಾರ್ದವತೆ
ಅಂತರಂಗವ ಹೊಕ್ಕು ಹೊರಬಂದನಂತರವೆ
ಉಳಿದೆಲ್ಲ ಮಾತುಕತೆ. ವರ್ತಮಾನಕೆ ಬರವೆ?
ಈ ನಿಮ್ಮ ನಡತೆಯೇ ಒಂದು ಸುಂದರ ಕವಿತೆ;
ಗೆಳೆತನಕೆ ಚಿರಂತನ ಒರತೆ. ಬಗಲ ಚೀಲಕೆ
ಸೊಗಸು : ಸರಳ ನಡೆ, ದೇಸಿಯಲಿ ಚಿಂತನಶೀಲ
ಮನಸು. ಹೊತ್ತ ಹೊಣೆಗಳ ಮೊತ್ತ ಮೊದಲು ಚೊಕ್ಕಟ-
ಗೊಳಿಸಿ ಈಡೇರಿಸುವ ಕನಸು. ಬಂದವರ ಕೈಗೆ
ಹೊಸತೊಂದು ಪುಸ್ತಕ ನೀಡಿ ಹಸಿವು, ನೀರಡಿಕೆ
ಹಿಂಗಿಸುವ ಸಂಗಾತಿ. ಗ್ರಂಥಾಲಯಕ್ಕೊಂದು
ಮಂತ್ರಾಲಯದ ಮೋಡಿ. ಗಾಂಧಿ ತತ್ವದಿ ಮಿಂದು
ಸೇವೆಗೆ ಸ್ವಯಂಸಿದ್ಧ; ಪೊರಕೆ ನೀಡಿದ ಹರಕೆ.
ರಾ. ಹ. ದೇ. ಅಜ್ಜನುಜ್ವಲ ದೀಪ : ಕನ್ನಡ ಗುಡಿ
ಮೊಮ್ಮಗನ ಹಣತೆಗೂ ಅದೇ ಬೆಳಕಿನ ಕುಡಿ.

---

* ಪ್ರೊ. ಕೆ.ಎಸ್. ದೇಶಪಾಂಡೆ; ೭೫ರ ಅಭಿನಂದನ (೨೦೦೮)

# ಕವಿಮಿತ್ರ ಜಿನದತ್ತರಿಗೆ

ನುಡಿಗೆ 'ನೀಲಾಂಜನ'ವ ಮುಡಿಸಿ ಅಡಗಿದ ಕವಿತೆ-
ನ್ಯಾಯ-ಅನ್ಯಾಯಗಳ ಹಳ್ಳಕೊಳ್ಳವ ಹಾಯ್ದು
ತಳ್ಳಂಕಗೊಳ್ಳದೆಯೆ ಗಂಧ ಬರುವೊಲು ತೆಯ್ದು
ತಲೆಯೆತ್ತಿ ಮತ್ತೆ ಮರಳಿ ಅರಳಿದ್ದು ಚರಿತೆ.
'ಮಾಗಿ' ಮುಗಿ 'ದೊಳ ಮಳೆ'ಗೆ ಬೇರು ತಣಿಸಿದ ಚೈತ್ರ
ಹೊಸ ಹೂವ 'ಬೊಗಸೆಯಲಿ ಬೆಳಕು' ಹಿಡಿಯುವ ತವಕ
'ಹೆಜ್ಜೆ ಸಾಲಿ' ನಲಿ ಕಿರುಗೆಜ್ಜೆ ಕಟ್ಟುವ ಗಮಕ-
ಅನುಭವವ ಹಿಂಜಿ ಹೊಸಬತ್ತಿ ಹೊಸೆಯುವ ತಂತ್ರ;
ಮಂತ್ರಕ್ಕೆ ಉದುರದು ಮಾವು : ಅದು ಮರದ ಸೊತ್ತು.
ಅದಕೆಂದೆ ಪಾಡಿಗೆ ಬರಲು ಅಡಿಗೆ ಹಾಕುವದು
ಹಣ್ಣಾಗಿ ಬಣ್ಣ ಬಂದಂತೆ ರುಚಿ ನೋಡುವದು.
ಸಮಗ್ರವೆಂದರೂ ಸವಿಯುವದು ಒಂದೊಂದೆ ತುತ್ತು.
'ನಿಚ್ಚವೂ ಹೊಸತೆಂಬ' ಮಾತು ಮರೆಯಲುಬಹುದೆ?
'ಕವಿತಾ ಗುಣಾರ್ಣವ'ನ ಸಂತತಿಗೆ ಕೊನೆಯಿಹುದೆ?

* ಶ್ರೀ ಜಿನದತ್ತ ದೇಸಾಯಿ : ೭೫ರ ಅಭಿನಂದನ (೨೦೦೮)

# ಬಾನು ತುಂಬಿದ ಚಿಕ್ಕೆ

(ಕವಿಮಿತ್ರ ಸಿ.ಪಿ.ಕೆ.)

ಲೇಖನಿಗೆ ವಿಶ್ರಾಂತಿ ಕೊಡದೆ, ಜೀವನ-ಕೊಡುಗೆ;
ಶತಕದ ಮೇಲೆ ಶತಕ ಬಾರಿಸುತ ಮೈದಾನ-
ದೆಲ್ಲ ಕಡೆ ಪ್ರತಿಭೆ-ಪಾಂಡಿತ್ಯ ತಾನ-ವಿತಾನ.
ಚೆಂಡು ಗಡಿದಾಟಿದಾಗೆಲ್ಲ ಕೊಂಡ ಮೆಚ್ಚುಗೆ
ಸಾಟಿ. ಇಲ್ಲ ದಾಖಲೆ ನಿರ್ಮಿಸುವ ಹಟ; ಆಟ-
ದಾನಂದದಲಿ ತೃಪ್ತ, ಮರೆಯುವಂತಿಲ್ಲ ಪರಿ-
ಶ್ರಮದ ಫಲ, ನಿರಂತರವು ಶಿಸ್ತಿನಭಿವ್ಯಕ್ತಿ.
ಹಾಸ್ಯಪ್ರಜ್ಞೆಗು ವಿದಗ್ಧ ಮುಗ್ಧತೆಯ ಮಾಟ.
ಪರಂಪರೆಗೆ ಪ್ರಗತಿಯ ಕೊಂಬು; ಪ್ರಾಚೀನಕ್ಕೆ
ಅರ್ವಾಚೀನದಿಂಬು; ಸಮನ್ವಯವು ಕ್ಲೀಷೆ-
ಯಾಗದು ಎಂದಿಗೂ. ಚಿಂತನೆಗೆ ಕೊಟ್ಟ ಭಾಷೆ
ಈಡೇರಿಸುವ ತವಕ : ಬಾನು ತುಂಬಿದ ಚಿಕ್ಕೆ :
ಬದುಕು - ಬರಹದ ಬೆಳಕು ಅಲ್ಲಿಂದ ಸೂಸುವದು
ಮಾಗಿ ಬಾಗಿದ ಕವಿಗೆ ತಂಗಾಳಿ ಬೀಸುವದು.

# ಸದಾನಂದ ಸಂಸ್ಕೃತಿ

ಕನವರಿಕೆಯಿಲ್ಲ, ತನಗೆ ಮನವರಿಕೆಯಾದುದ
ಪಟ್ಟು ಹಿಡಿದು, ಲಕ್ಷಣವಾಗಿ ನಿಮ್ಮ ಕೈಗಿಡುವ
ತವಕ, ವೈಯಕ್ತಿಕ-ಸಾರ್ವಜನಿಕ ಎಂದೆನುವ
ಭೇದವೆಣಿಸದ ಭಾವ. 'ಸಂಸ್ಕೃತಿ ಪರಿಚಾರಕ' -
ಔಪಚಾರಿಕವಾಯ್ತು, ಟಂಕಿಸಿರಿ ಹೊಸತೊಂದು
ತಕ್ಕ ಚಿನ್ನದ ಪದಕ. ಸಾಹಿತ್ಯ-ಸಂಗೀತ
ಕಲಾ-ಕ್ರೀಡೆ-ಪರಿಸರವೆಂದು ಉಸಿರಾಡಿಸುತ
ಬಂದು, ಶಕ್ತಿಗುಂದಿದರೂ ಎಲ್ಲರಾಪತ್ಬಂಧು.
ಕಣ್ಣಿಗಂಜನ ಹಚ್ಚಿ ಪ್ರತಿಭೆಗಳ ಶೋಧಿಸುತ
ಸಾಧನೆಯ ಮಾರ್ಗದಲಿ ನಡೆಸುವ ಸದಾನಂದ
ಗುಣಕೆ ಮತ್ಸರವಿರದೆ ಮಾತಾಡುವದೆ ಚಂದ.
ಹಿರಿಕಿರಿಯರೊಡಗೂಡಿ ಸಡಗರಿಸಿದ್ದು ಚರಿತ.
ಕಕಾ ಬಳ್ಳಿಯ ಗೆಳೆಯರೆಂದು ಕರೆಯುವದುಂಟು
ಹೆಮ್ಮೆಯಲ್ಲವೆ ನಮಗೆ ಧಾರವಾಡದ ನಂಟು?

---

* ಪ್ರೊ. ಸದಾನಂದ ಕನವಳ್ಳಿ : ೭೫ರ ಅಭಿನಂದನ (೨೦೦೯)

ಎಂಬ ಕಲ್ಪನೆ, ಕಾಂತೆಯನ್ನು 'ನಗೆಯ ಹೊಂಗೇದಗೆಯ ಮುಗುದೆ'ಯೆನ್ನುವ ಪರಿ, 'ಮಂಜಿನರಳೆಯ ಹಿಂಜಿ ತೂರುತಿಹ ನೇಸರ', 'ನಿರೀಕ್ಷೆ'ಯಲ್ಲಿ -

ತುಂಬುಗ್ಗೆ ಬಾಗಿಲಿಗೆ ಇಂಬುಗೊಟ್ಟಿದೆ, ಕಾಲ
ತುದಿಬೆರಳು ಹೊಸತಿಲಕೆ ಹೂವಾಗಿದೆ.....
ಜಡೆಯುದ್ದಕ್ಕೂ ಚಿಂತೆ ಹೊಯ್ದಾಡಿದೆ.

ಎಂಬ ರಮಣೀಯ ಕಲ್ಪನಾವಿಲಾಸಗಳು, ನವ್ಯತಂತ್ರವನ್ನು ನಿದರ್ಶಿಸುವ 'ಪಯಣ'ದ

ಕಿಟಕಿಯಲಿ ಕರವಸ್ತ್ರ ಒಲುಮೆ ಬಾವುಟದಂತೆ
ಎದೆಯ ತಡಬಡದೊಡನೆ ಮಿಡುಕುತ್ತಿತ್ತು.

ಮುಂತಾದ ಸಾಲುಗಳನ್ನು ಸಾಲುಸಾಲಾಗಿ ಇನ್ನು ಬರೆಯುವುದೇಕೆ? ಕವಿಯ ಸಹಜ ಪ್ರತಿಭೆಯ ವಿಕಾಸವನ್ನೂ ವಿಲಾಸವನ್ನೂ ಸಹೃದಯರು ಸುಲಭವಾಗಿ ಗುರುತಿಸಬಹುದಾಗಿದೆ.

೧೧

ಪ್ರೇಮದ ವಿವಿಧ ಚಿತ್ತವೃತ್ತಿಗಳ ಈ ಚಿತ್ರಶಾಲೆಯಲ್ಲಿ ವಾತ್ಸಲ್ಯಕ್ಕೂ ಎಡೆ ಸಿಕ್ಕಿದೆ. ಮಗುವಿನ -

ಗಾಳಿಗಡಲಿನಲ್ಲಿ ಹುಟ್ಟು ಕಡೆಯುತಿರುವ ಕೈಗಳು
ಮಲಗಿದಲ್ಲೆ ಬೈಸಿಕಲ್ಲು ತುಳಿವ ಪುಟ್ಟ ಕಾಲ್ಗಳು.

ಯಾರನ್ನು ತಾನೇ ಪರವಶಗೊಳಿಸವು? ಈ 'ಮುಟ್ಟಿಗೆಯ ಬಿಗಿಹಿಡಿದು ಕುಟ್ಟಿ ಗಾಳಿಯ ಒಂಟಿಕುಸ್ತಿ ಯಾಡುವ ಜಟ್ಟಿ'ಯನ್ನು ಯಾರು ಮರೆತಾರು?

೧೨

ಈ ಸಂಗ್ರಹದಲ್ಲಿ ಹೊಸದಾಗಿ ಸೇರಿರುವ ರವೀಂದ್ರರ ಕವಿತಾನುವಾದಗಳನ್ನು ಕುರಿತು ಒಂದು ಮಾತು. ಸಾಮಾನ್ಯವಾಗಿ ಅನುವಾದ ಕಾರ್ಯ ಸ್ವಯಂಪ್ರಭರಿಗೆ ಸಲ್ಲದ, ಪಂಡಿತವರ್ಗದವರ ದುಡಿಮೆಯೆಂಬ ತಪ್ಪು ಅಭಿಪ್ರಾಯದಿಂದಾಗಿ ಕನ್ನಡದಲ್ಲಿ ಇಂದು ಓದಿ ಆನಂದಿಸುವಂತಹ ಅನುವಾದಿತ ಕೃತಿರತ್ನಗಳ ಸಂಖ್ಯೆ ಸಣ್ಣನಾಗಿಯೇ ಇದೆ. ಅನುವಾದಕರು ಅಪವಾದಕರೆಂಬ ಅಪಪ್ರಥೆ ಹಿಂದಿನಿಂದಲೂ ಉಂಟು. ಇದು ತಪ್ಪಬೇಕಾದರೆ ಸಹಜಕವಿಗಳು ಈ ಕಾರ್ಯಕ್ಕೆ ತಾವಾಗಿಯೇ ಮುಂದಾಗಬೇಕು. ಕಣವಿಯವರ ಕಾವ್ಯಾಕ್ಷಿಯಲ್ಲಿ ಹಾಯ್ದುಬಂದ ರವೀಂದ್ರರ ಸುಭಾಷಿತಗಳು ಕನ್ನಡದಲ್ಲಿಯೇ ಹುಟ್ಟಿಬಂದಂತೆ ಭಾಸವಾಗುತ್ತದೆ. ಇವು ಭಾಷಾಂತರವಲ್ಲವೆನಿಸುವಷ್ಟು ಸಹಜವಾಗಿ ಬಂದಿವೆ; ಅಕ್ಷರಶಃ ಪರಿವರ್ತನಕ್ಕೆ ಹೊರಡದೆ, ಭಾವದೀಪ್ತಿಯನ್ನೂ ಶಬ್ದಗೀತಿಯನ್ನೂ ಹೊಸದಾಗಿ ಮೂಡಿಸುವ ಇವರ ಅನುವಾದದ ಕಲೆಯನ್ನು ಪುನಸ್ಸೃಷ್ಟಿಯೆಂದರೆ ಅತಿಶಯೋಕ್ತಿಯಾಗಲಾರದು.

ಉದಾಹರಣೆ :-

೧. ನುಗ್ಗಿ ಬಂದಿತು ಎಲ್ಲ ಲೋಕದಾನಂದವದು
ನನ್ನ ದೇಹದ ಗೇಹರಚನೆಗೆಂದು;
ಮುದ್ದನಿಟ್ಟವು ಬಾನ ಬೆಳಕು ಬಿಟ್ಟೂಬಿಡದೆ
ಅವಳು ಎಚ್ಚರಗೊಂಡು ಏಳುವರೆಗು
('ನುಗ್ಗಿ ಬಂದಿತು ಎಲ್ಲ ಲೋಕದಾನಂದವದು')

೨. ನಮ್ಮ ತೋಪಿನ ನೆಳಲ ಹಸುರು ಮೇಯಲು ಬಹವು
ಅವಳ ಮುದ್ದಿನವೆರಡು ಕುರಿಮರಿಗಳು;
ಹಾದಿ ತಪ್ಪುತ ನಮ್ಮ ಗೋದಿ ಹೊಲಕೈತರಲು
ಅಕ್ಕರತೆ ತೋಳಿನಲಿ ತೆಗೆದಪ್ಪಲು!
('ನಾವಿಬ್ಬರು')

ನೀರಸ ಅನುವಾದಗಳಿಂದ ಬೇಸತ್ತ ಜನ ಇಂತಹ ಸುರುಚಿರ ಅನುವಾದಗಳನ್ನು ಕಂಡಾಗ ಹಿಗ್ಗುವುದೂ, ಇಂತಹವನ್ನು ಮತ್ತೆ ಮತ್ತೆ ಬಯಸುವುದೂ ಹೆಚ್ಚಲ್ಲ.

೧೩

ಕಣವಿಯವರ ಈ ಕವಿತಾಸಂಗ್ರಹ ಹತ್ತುವರ್ಷಕ್ಕೆ ಹಿಂದೆ ಬರೆದುದು. ಅವರ ಅಂದಿನ ಮನೋಗತಿಯ ಒಂದು ಸುಂದರ ಪ್ರತಿಬಿಂಬವಾದ ಇದರಲ್ಲಿ ಜೀವನದ ದುಷ್ಕರ ಸಮಸ್ಯೆಗಳ ಜಂಜಾಟವಿಲ್ಲ, ನವ್ಯಧ್ವನಿಯ ಘಂಟಾಘೋಷವಿಲ್ಲ. ಆದರೂ ಸಹಜ ಕವಿತಾ ಗುಣಗಳ ಆವಿಷ್ಕಾರವಿದೆ; ಜಾಗೃತ ಕವಿಚೈತನ್ಯದ ಪರಿಷ್ಕಾರವೂ ಇದೆ;

ಆವುದೋ ಮೂಲೆಯಲಿ ಕುಳಿತು ಭೂರಂಗದಲಿ
ನಡೆವ ಅಕಟೋವಿಕಟ ನಾಟಕದ ಹಿನ್ನೆಲೆಯ
ಬಗಿದು ನೋಡುವ ಬಯಕೆ ಬಗೆಯೊಳಿದೆ.

ಎಂಬ ಧ್ಯೇಯದ ಪ್ರಕಟನೆಯೂ ಇದೆ. ಮನ್ನಣೆಯು ಅವರನ್ನು ಸುತ್ತಿನಿಂದಲೂ ಮುತ್ತುತ್ತಿರುವಾಗಲೂ ಆ ಧ್ಯೇಯ ಬೇಗ ಫಲಿಸಲಿ, ನಾಡಿನ ಕಾವ್ಯಕುಂಜ ಹುಲುಸಾಗಲಿ, ಎಂದಿಷ್ಟೇ ಈ ಗೆಳೆಯನ ಹಾರೈಕೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ, ೧೫-೯-೧೯೬೨

**ಡಾ|| ಕೆ. ಕೃಷ್ಣಮೂರ್ತಿ**

# 'ದೀಪಧಾರಿ'

## ಕಾವ್ಯವಾಚನಕ್ಕೆ ಮೊದಲು

ಈ ನನ್ನ ಐದನೆಯ ಕವನಸಂಗ್ರಹವನ್ನು ಇಷ್ಟು ಬೇಗ ಓದುಗರ ಕೈಯಲ್ಲಿ ಇಡಲು ಸಾಧ್ಯವಾದುದಕ್ಕೆ ಸಂತೋಷವೆನಿಸುತ್ತಿದೆ. ಇದರಲ್ಲಿಯ ಮೊದಲಿನ ಮೂರು ನಾಲ್ಕು ಕವಿತೆಗಳನ್ನು ಬಿಟ್ಟರೆ ಉಳಿದವು ಈಚೆಗೆ ರಚಿತವಾದವುಗಳು.

ಕನ್ನಡ ಕವಿತೆ ಈಚೆಗೆ ಒಂದು ಹೊಸ ಆಕೃತಿಯಲ್ಲಿ ನೂತನ ರಚನಾ ವಿಧಾನದೊಂದಿಗೆ ರೂಪುಗೊಳ್ಳುತ್ತಿದೆ. 'ನವ್ಯಕಾವ್ಯ'ದ ಹೆಸರಿನಲ್ಲಿ ಅದು ಮತ್ತೊಂದು ಮಜಲು ಮುಂದುವರಿಯುತ್ತಿದೆ. ಒಂದೇ ಗಿಡದ ಕೊಂಬೆಗಳಾದರೂ ಅವುಗಳ ಆಕಾರ, ಮಣಿತ, ಭಂಗಿ, ರಸಪುಷ್ಟಿ ಬೇರೆಬೇರೆಯಾಗಿರುವಂತೆ ಇತ್ತೀಚಿನ ಕವಿತೆಗಳಲ್ಲೂ-ಶೈಲಿ, ಛಂದ, ಪದಗಳ ಬಳಕೆ, ಒಟ್ಟಂದದ ಪರಿಣಾಮ ಇತ್ಯಾದಿಗಳಲ್ಲಿ - ಹಿಂದಿನ ಕವಿತೆಗಳಿಗಿಂತ ವಿಭಿನ್ನವಾದ ಹಾಗೂ ತೀಕ್ಷ್ಣವಾದ ಒಂದು ಹೊಸ ರುಚಿ ಕಂಡುಬರುತ್ತಿದೆ. ಇಂಥದೇ ಒಂದು ನಿರ್ದಿಷ್ಟ ಸ್ವರೂಪವನ್ನು ಅದು ತಳೆದಿದೆಯೆಂದು ಈಗಲೇ ಹೇಳಬರುವಂತಿಲ್ಲವಾದರೂ ತನ್ನದೇ ಆದ ಸ್ವತಂತ್ರ ರೀತಿಯಲ್ಲಿ ಅದು ಬೆಳೆದುಬರಬೇಕಾದದ್ದು; ಅದನ್ನು ಹಾಗೆ ಬೆಳೆಯಗೊಟ್ಟು ನೋಡಬೇಕಾದುದು ನಿಜವಾದ ಕಾವ್ಯಪ್ರೇಮಿಗಳ ಕರ್ತವ್ಯ.

ಈ ಸಂಗ್ರಹದ ಕೆಲ ಕವಿತೆಗಳಲ್ಲಿ ನವ್ಯ ಕಾವ್ಯಮಾರ್ಗದ ಹಲವು ಅಂಶಗಳನ್ನು ಓದುಗರು ಕಾಣಬಹುದು. ಆ ಮಾರ್ಗದಲ್ಲಿ ನಡೆದ ಯಶಸ್ವಿ ಪ್ರಯೋಗಗಳೆಂದು ನಾನಿವನ್ನು ಕರೆಯುತ್ತಿಲ್ಲವಾದರೂ ಆಧುನಿಕ ಭಾವಗೀತೆ ಹಾಗೂ ನವ್ಯಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ಇದು ಸೇತುವೆಯಾದೀತೆಂಬ ನಮ್ರಭಾವನೆ ನನಗಿದೆ.

ಧಾರವಾಡ ಆಕಾಶವಾಣಿಯ ಯುಗಾದಿ ಕವಿಸಮ್ಮೇಲನದಲ್ಲಿ ನಾನು ಓದಿದ 'ದೀಪಧಾರಿ' ಕವಿತೆಯನ್ನು ಈ ಸಂಗ್ರಹದಲ್ಲಿ ಸೇರಿಸಲು ಅನುಮತಿಯಿತ್ತ ಆಕಾಶವಾಣಿಯ ಅಧಿಕಾರಿಗಳಿಗೆ ನಾನು ಋಣಿಯಾಗಿದ್ದೇನೆ. ಜೀವನ, ಜಯಂತಿ, ಪ್ರಬುದ್ಧಕರ್ಣಾಟಕ, ಜಯಕರ್ನಾಟಕ ಈ ಪತ್ರಿಕೆಗಳಲ್ಲಲ್ಲದೆ ಪ್ರಜಾವಾಣಿ, ಪ್ರಪಂಚ, ಚಿತ್ರಗುಪ್ತ, ಕರ್ಮವೀರ ಪತ್ರಿಕೆಗಳ ವಿಶೇಷ ಸಂಚಿಕೆಗಳಲ್ಲಿ ಈ ಸಂಗ್ರಹದೊಳಗಿನ ಕೆಲವು ಕವನಗಳನ್ನು ಈ ಮೊದಲು ಪ್ರಕಾಶಪಡಿಸಿದ ಸಂಪಾದಕರ ನೆರವನ್ನು ಕೃತಜ್ಞತೆಯಿಂದ ನೆನೆಯುತ್ತಿದ್ದೇನೆ. ಗೆಳೆಯ ಸಿಂಧುವಳ್ಳಿ ಅನಂತಮೂರ್ತಿಯವರು ಹೊಸದಾಗಿ ಪ್ರಾರಂಭಿಸಿರುವ ತಮ್ಮ ಸುರುಚಿ ಪ್ರಕಾಶನದಲ್ಲಿ ಈ ಸಂಗ್ರಹವನ್ನು ಪ್ರಕಟಿಸುವ ಸಾಹಸಮಾಡಿ ಎಲ್ಲರಂತೆ ನನ್ನನ್ನೂ ಅಚ್ಚರಿಗೊಳಿಸಿದ್ದಾರೆ. ಇವರೀರ್ವರಿಗೂ ನನ್ನ ಕೃತಜ್ಞತೆಗಳು ಅವಶ್ಯವಾಗಿ ಸಲ್ಲಬೇಕು.


೨೮, ಸಾರಸತ್ವಪುರ — ಚೆನ್ನವೀರ ಕಣವಿ

ಧಾರವಾಡ

೩೦-೫-೧೯೫೬

# ಮೆರವಣಿಗೆಯ ಮುಂದೆ ಮಶಾಲು

## ('ಮಣ್ಣಿನ ಮೆರವಣಿಗೆ'ಯ ಮುನ್ನುಡಿ)

ಆಧುನಿಕ ಕನ್ನಡ ಕವಿಗಳ ಮೂಲ್ಯಮಾಪನ ಮಾಡುತ್ತ ಶ್ರೀ ಕೀರ್ತಿನಾಥ ಕುರ್ತಕೋಟಿಯವರು "ನಡೆದು ಬಂದ ದಾರಿ"ಯಲ್ಲಿ ಶ್ರೀ ಚೆನ್ನವೀರ ಕಣವಿಯವರ ಕುರಿತು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ : "....... (ಇವರ) ಕಾವ್ಯ ಮಾರ್ಗ ಯಾವುದೆಂಬುದು ಇನ್ನೂ ನಿರ್ದಿಷ್ಟವಾಗಿಲ್ಲ ..... ಹಳೆ-ಹೊಸ ಸಂಪ್ರದಾಯಗಳ ನಡುವೆ ಅವರು ಹೊಯ್ದಾಡುತ್ತಿದ್ದಾರೆ..... ಇತ್ತೀಚಿನ ಅವರ ಕವಿತೆಗಳಲ್ಲಿ ಮಾತ್ರ ಅವರ ಪ್ರಯತ್ನ ನವ್ಯತೆಯ ಕಡೆಗೆ ಸಾಗಿದೆ. ಆದರೆ ನವ್ಯತೆಯ ಕಡೆಗೆ ಸಾಗುವಾಗ ಕಣವಿಯವರು ಎಚ್ಚರ ವಹಿಸಿದ್ದು ಬಹಳ ಸಂತೋಷದ ಸಂಗತಿಯಾಗಿದೆ. ಮುಖ್ಯವಾಗಿ ಅವರ ಕಾವ್ಯದೃಷ್ಟಿ ನಿಸರ್ಗದ, ಜೀವನದ ಚೆಲುವಿಗೆ ಆಕರ್ಷಿತವಾದ 'ರೋಮ್ಯಾಂಟಿಕ್' ದೃಷ್ಟಿಯಾಗಿದೆ. ಈ ದೃಷ್ಟಿ ನವ್ಯವೂ ಆಗಬಹುದು. ಆದರೆ ಈ ರೂಪಾಂತರಕ್ಕೆ ಬುದ್ಧಿವಾದದ ಸರ್ವಗ್ರಾಹಿಯಾದ ಹಿಡಿತ ಅವಶ್ಯವಾಗಿದೆ. ಕಣವಿಯವರು ಮುಖ್ಯವಾಗಿ ಭಾವನಾ ಪ್ರಧಾನ ಕವಿಗಳಾಗಿದ್ದಾರೆ."

ಆಧುನಿಕ ಕನ್ನಡ ಸಾಹಿತ್ಯದ ಒಂದು ಸಮಗ್ರವೂ ಸಂಗ್ರಹವೂ ಆದ ಸಮಾಲೋಚನೆ ಬಂದದ್ದೇ ತಕ್ಕ ಮಟ್ಟಿಗೆ ಶ್ರೀ ಕುರ್ತಕೋಟಿಯವರ ಲೆಕ್ಕಣಿಕೆಯಿಂದ. ಆದ್ದರಿಂದ ಅದಕ್ಕೆ ಒಂದು ಬಗೆಯ ಪ್ರಮಾಣತ್ವ ಬರುವದು ಸಹಜ. ಅಂತೆಯೇ ಅವರ ಅಂಬೋಣವನ್ನು ಮೇಲೆ ಉದ್ಧರಿಸಿದ್ದು. ಆದರೆ ಈ ಉದ್ಧರಣದ ಉತ್ತರಾರ್ಧ ಒಪ್ಪಿಕೊಂಡರೂ ಪೂರ್ವಾರ್ಧವನ್ನು ಅಲ್ಲಗಳೆಯದಿದ್ದರೆ ಆ ಕವಿಯ ಕುರಿತು ಸಮೀಕ್ಷಕನು ಅಷ್ಟು ಪ್ರಾಮಾಣಿಕವಾಗಿ ನಡೆದುಕೊಂಡಂತೆ ಅಲ್ಲ. ಕವಿ ಕಣವಿಯವರು ಸಂಪ್ರದಾಯಸಂದಿಗ್ಧರಾಗಿ ನಿರ್ದಿಷ್ಟ ನಿರ್ಣಯವಿಲ್ಲದೆ ಹೊಯ್ದಾಡುತಿದ್ದಾರೆಯೇ? ಅಂಥ ತೂಗುಯ್ಯಾಲೆಯ ತಾಕಲಾಟ ಅವರ "ಆಕಾಶ ಬುಟ್ಟಿ"ಯಿಂದೀಚಿಗಿನ ಕಾವ್ಯ ರಚನೆಯಲ್ಲಿ ಕಂಡು ಬರುತ್ತದೆಯೇ? ಕಾವ್ಯದಲ್ಲಿ ನವ್ಯತೆಯನ್ನು ಅವರು ಹೇಗೆ ಕಂಡುಕೊಂಡಿದ್ದಾರೆ? ಬರೆ ಆ ಕಡೆಗೆ ಪ್ರಯತ್ನ ಸಾಗಿದೆಯೇ? ಈ ಬಗ್ಗೆ ಕಣವಿಯವರದೇ ಮತವೇನು?

"ಕನ್ನಡ ಕವಿತೆ ಈಚೆಗೆ ಒಂದು ಹೊಸ ಆಕೃತಿಯಲ್ಲಿ ನೂತನ ರಚನಾ ವಿಧಾನದೊಂದಿಗೆ ರೂಪಗೊಳ್ಳುತ್ತಿದೆ..... ಇಂಥದೇ ಒಂದು ನಿರ್ದಿಷ್ಟ ಸ್ವರೂಪವನ್ನು ಅದು ತಳೆದಿದೆಯೆಂದೆ ಈಗಲೇ ಹೇಳ ಬರುವಂತಿಲ್ಲವಾದರೂ, ತನ್ನದೇ ಆದ ಸ್ವತಂತ್ರ ರೀತಿಯಲ್ಲಿ ಅದು ಬೆಳೆದು

ಬರಬೇಕಾದದ್ದು.... ಈ ಸಂಗ್ರಹದ ಕೆಲ ಕವಿತೆಗಳಲ್ಲಿ ನವ್ಯ ಕಾವ್ಯ ಮಾರ್ಗದ ಹಲವು ಅಂಶಗಳನ್ನು ಕಾಣಬಹುದು. ಆಧುನಿಕ ಭಾವಗೀತೆ ಹಾಗೂ ನವ್ಯಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ಇದು ಸೇತುವೆಯಾದೀತೆಂಬ ನಮ್ರ ಭಾವನೆ ನನಗಿದೆ." ನಾಲ್ಕು ವರ್ಷಗಳಾಚೆ "ದೀಪಧಾರಿ"ಯ ಪ್ರಸ್ತಾವನೆಯಲ್ಲಿ ಬಂದ ಕವಿಯೆ ಕೈಫಿಯತ್ತು ಇದು.

ಅಂದರೆ, ಈ ಕವಿಗೆ ನವ್ಯ ಕಾವ್ಯ ಮಾರ್ಗ ಮುಖ್ಯವಾಗಿ ಒಂದು ರಚನಾ ವಿಧಾನ. ಸ್ವತಂತ್ರ ರೀತಿಯಲ್ಲಿ, ಹೆಚ್ಚು ಕಡಿಮೆ ಅಂಶದಲ್ಲಿ ಪಳಗಿಸಿಕೊಳ್ಳಬಹುದಾದ ಅದೊಂದು ಹೊಸ ತಂತ್ರ. ವಿಶಿಷ್ಟ ಅನುಭೂತಿಗೆ ನಿಯತವಾದ ಅಭಿವ್ಯಕ್ತಿಯ ಸ್ವರೂಪವಲ್ಲ. ನಿರ್ದಿಷ್ಟ ಸ್ವರೂಪವನ್ನು ಅದು ಇನ್ನೂ ತಾಳಬೇಕಾಗಿದೆ. ಈ ಕವಿಯ ಮಟ್ಟಿಗೆ ಖಚಿತವಾದ ತನ್ನದೇ ಆದ ಈ ರೂಪ ಭಾವಗೀತೆ ಮತ್ತು ನವ್ಯಕಾವ್ಯ ಮಾರ್ಗಗಳ ಒಂದು ಸಮನ್ವಯ. ಶ್ರೀ ಕುರ್ತಕೋಟಿಯವರು ನಿಷ್ಕರ್ಷವಾಗಿ ನುಡಿದಂತೆ ಇದು ಹಳೆ-ಹೊಸ ಸಂಪ್ರದಾಯಗಳ ನಡುವಿನ ಹೊಯ್ದಾಟವಲ್ಲ. ಅವೆರಡರ ನಡುವಿನ ಸೇತುವೆ. ಮತ್ತು ಆ ದೃಷ್ಟಿಯಿಂದ ಕಣವಿಯವರ ನವ ನಿರ್ಮಿತಿಯ ಮಾರ್ಗ ನಿರ್ದಿಷ್ಟವೇ ಆಗಿದೆ.

ಕಾವ್ಯವೂ ಒಂದು ಕಲೆ. ಅದು ನಾಟ್ಯಾಭಿನಯದಂಥ ಐಂದ್ರಿಯಿಕ ಕಲೆಯಲ್ಲ. ಚಿತ್ರಶಿಲ್ಪದಂಥ ಮಾಧ್ಯಮಿಕ ಕಲೆ. ಈ ಕಲೆಯ ಆವಿಷ್ಕಾರಕ್ಕೆ ತಕ್ಕ ಮಾಧ್ಯಮ, ತಂತ್ರ, ಮತ್ತು ರೂಪಣಕ್ರಿಯೆ ಬೇಕು. ಆಯಾ ಕೃತಿಯ ವಸ್ತು ತನ್ನ ವಿಕಾಸಕ್ಕೆ ಅರ್ಥ ವ್ಯಂಜನೆಗೆ ಅನುಕೂಲವಾದ, ಅನುರೂಪವಾದ ಮಾಧ್ಯಮ-ತಂತ್ರ-ಶೈಲಿ-ಪ್ರಕ್ರಿಯೆಗಳನ್ನು ತಾನೇ ಗೊತ್ತುಪಡಿಸುತ್ತದೆ. ಉತ್ತಮ ಚಿತ್ರಕಾರ ಒಮ್ಮೆ ತೈಲ ವರ್ಣ, ಇನ್ನೊಮ್ಮೆ ನೀರ ಬಣ್ಣ, ಮಗುದೊಮ್ಮೆ ಖಡುವಿನ ಪುಡಿ, ಮತ್ತೊಮ್ಮೆ ಇದ್ದಲಿಪುಡಿ ಯಾವುದನ್ನೂ ಆಯ್ದುಕೊಳ್ಳಬಹುದು. ಗೆರೆಗಳಲ್ಲಿಯೊ, ಲೇಪಗಳಲ್ಲಿಯೊ, ಕ್ಯೂಬಿಸ್ಟ್, ಅಜಂತಾ, ಸಾಂಪ್ರದಾಯಿಕ-ಬೇಕಾದ ಶೈಲಿಯಲ್ಲಿ ಚಿತ್ರ ಬಿಡಿಸಬಹುದು. ಅದೇ ರೀತಿ ಉತ್ತಮ ಶಿಲ್ಪಿಯದು. ಕಂಚೋ, ಕಲ್ಲೋ, ಕಟ್ಟಿಗೆಯೋ, ಪ್ಲಾಸ್ಟರೋ, ಮಣ್ಣೋ ಯಾವುದೇ ಮಾಧ್ಯಮದಲ್ಲಿ ತನ್ನ ರೂಹುಗಾರಿಕೆಯನ್ನು ಆಧುನಿಕ, ಅತ್ಯಾಧುನಿಕ ಯಾವುದೇ ತಂತ್ರದಿಂದ ಪ್ರಕಟಿಸುತ್ತಾನೆ. ತನ್ನ ಆಶಯಕ್ಕೆ ಒಗ್ಗುವ, ಒಪ್ಪುವ ರೀತಿ-ರೂಪ-ರಚನೆಯನ್ನು ಕಲಾವಿದ ಸ್ವೇಚ್ಛೆಯಿಂದ ನಿರ್ಣಯಿಸುತ್ತಾನೆ. ಇಂಥ ಸ್ವಚ್ಛಂದತೆ ಸಾಂಪ್ರದಾಯಿಕ ಹೊಯ್ದಾಟವಲ್ಲ. ತನ್ನ ಕಲೆಯ ಹಳೆ-ಹೊಸ ಸಂಪ್ರದಾಯಗಳನ್ನೆಲ್ಲ ಬಲ್ಲ ಕಲಾವಿದನಿಗೆ ಸಾಮರ್ಥ್ಯವಿದ್ದಷ್ಟೂ ಸ್ವಾತಂತ್ರ್ಯವಿದೆ. ವಿಶಿಷ್ಟ ಕೃತಿಯ ಸಂದರ್ಭ ಸಂದೇಶಗಳೇ ಆತನಿಗೆ ಸಾಧನ-ಸಂಪ್ರದಾಯಗಳ ಆಯ್ಕೆಯನ್ನು ಸೂಚಿಸುತ್ತವೆ. ಹೀಗೆಂದ ಮಾತ್ರಕ್ಕೆ ಆ ಕಲಾವಿದನ ಮಾರ್ಗ ನಿರ್ದಿಷ್ಟವಾಗಿಲ್ಲವೆನ್ನುವದು ವಿವೇಕವಲ್ಲ. ಯಾವ ಮಾರ್ಗವೇ ಇರಲಿ, ಯಾವ ಮಾಧ್ಯಮವೇ ಇರಲಿ ಕಲಾವಿದನಿಗೆ ಬೇಕಾದದ್ದು ಅದರ ಅರಿವು ಮತ್ತು ಎಚ್ಚರ. ಅಂಥ ಎಚ್ಚರ ಕಣವಿಯವರ ಕಾವ್ಯಕ್ಕೆ ಪಟುತ್ವದ ಪುಟವೇರಿಸಿದೆ.

"ಕಾವ್ಯ ಮೀಮಾಂಸೆ"ಯ ಹಾಗೂ ಹಳೆ-ಹೊಸ ವಿಮರ್ಶೆಯ ಮರ್ಮಜ್ಞರಾದ ಪ್ರೊ.

ತೀ.ನಂ. ಶ್ರೀಕಂಠಯ್ಯನವರು ಒಂದು ಪ್ರಸಂಗದಲ್ಲಿ ನನ್ನೊಡನೆ ಅಂದಿದ್ದರು : "ಕನ್ನಡದ ಭಾಗ್ಯ ದೊಡ್ಡದು. ಅಡಿಗರಂಥ ಕನ್ನಡದ ಸತ್ವ, ಮರ್ಮ ಬಲ್ಲ ಕವಿ ನವ್ಯ ಮಾರ್ಗ ಹಿಡಿದಿದ್ದಾರೆ. ಇಲ್ಲವಾದರೆ, ಭಾಷೆಯ ಹದವೇ ಅರಿಯದ ಕವಿಗಳು ಈ ದಾರಿಗೆ ಬಿದ್ದರೆ ಕನ್ನಡಕ್ಕೆ ಅನರ್ಥವಾಗುತ್ತಿತ್ತು!" ಇದೇ ಮಾತು, ಅಷ್ಟೇ ಅರ್ಥವತ್ತಾಗಿ ಶ್ರೀ ಕಣವಿಯವರ ಕುರಿತೂ ಅನ್ನಬಹುದು. ಚಿನ್ನಗನ್ನಡದ ಅಕ್ಕಸಾಲಿಗರು ಅವರು. ಕನ್ನಡವನ್ನೂ ಕವಿತ್ವವನ್ನೂ ಕೂಡಿಯೇ ಪ್ರಭುತ್ವದಿಂದ ಪ್ರಯೋಗಿಸಬಲ್ಲ ಪ್ರಾಜ್ಞರಿಗೆ "ಹಾಯ್ದತ್ತ ಹದನ"ವೇ ಹೊರತು ಹೊಯ್ದಾಟವಿಲ್ಲ.

ಆದರೆ ಇಷ್ಟೊಂದು ನಿಜ. ಕವಿ ಅಡಿಗರ ನವ್ಯಕಾವ್ಯದ ಪ್ರಪಾತಕ್ಕೆ ಪ್ರೇರಣೆಕೊಡುವ ಶಕ್ತಿಮಯ ಗತಿಮಯ ಹತಾಶೆಯನ್ನು (dynamic despair), ಅದರಂತೆ ಜೀವನದ ಹಿನ್ನೆಲೆ ಪಡೆಯ, ಭಿನ್ನ ಪ್ರಕೃತಿಯ, ಹೆಚ್ಚು ಪ್ರಸನ್ನ ಮತ್ತು ಸೌಮ್ಯ ವ್ಯಕ್ತಿತ್ವದ ಈ ಕವಿಯಲ್ಲಿ ಅಪೇಕ್ಷಿಸುವಂತಿಲ್ಲ. ಕಣವಿಯವರ ಕಾವ್ಯ ಪ್ರತಿಭೆ ಆ ಎರಕಕ್ಕೆ ಹೊಯ್ದ ಧಾತುವಲ್ಲ. ಅಂಥ ನಿಷ್ಠುರವಾದ ಪ್ರತಿಭೆ ಇವರದಲ್ಲ ಎಂದ ಮಾತ್ರಕ್ಕೆ ಇದೊಂದು ಕುಂದು ಎಂದಲ್ಲ. ಇವರ ಕಾವ್ಯದ ಕಂದವೇ ಬೇರೆ ಕೆಚ್ಚಿನದು. ಆವಿದ್ದಕ್ಕಿಂತ ಸುಕುಮಾರ ಪ್ರಯೋಗ ಇವರ ಸಿದ್ಧಿ. ಅಡಿಗರ ರೊಚ್ಚು, ರಭಸ ಇಲ್ಲಿ ಬಯಸಬಾರದು. [ರಾಜಾ, ರೋರರ್, ರಾಕೆಟ್‌ಗಳ ಉಲ್ಲೇಖ ಬಂದರೂ ಅದು ಇಲ್ಲಿ ನಗರಸಭೆಯ ಧ್ವನಿವಾಹಕದಲ್ಲಿಯೇ!] ಈ ಕವಿಗೆ ಪರಿಶುದ್ಧ ಕಾವ್ಯ ಲೇಖನದ ರಹಸ್ಯ ಸಾಧಿಸಿದೆ. ಆದರೂ ಅಂಥ ಕಾವ್ಯದ ಅರೆ ಪಾಲಾದ ಪ್ರತೀಕಾತ್ಮಕ ವಿಚಾರಸರಣಿ (Symbolic mode of thought] ಇವರ ಕಾವ್ಯಧಾರೆಯ ಪಾತ್ರವಲ್ಲ. ವಾಚ್ಯವನ್ನು ಪೂರ್ತಿ ಅಲ್ಲಗಳೆದು, ಸೂಚ್ಯಕ್ಕೇ ಹಾಯುವ "ಭಣಿತ ಭಂಗಿಯೇ" ಇವರ ನವ್ಯ ತಂತ್ರದ ಪರಿಯಲ್ಲ. ಇಲ್ಲಿ ವಾಚ್ಯ ಸೂಚ್ಯಗಳೆರಡೂ ಪದ ಮೈತ್ರಿಯಲ್ಲಿ ಸಪ್ತಪದಿ ಹಾಕುತ್ತವೆ. ಕಣವಿಯವರ ಪ್ರತಿಮಾ ಸೃಷ್ಟಿ, ರೂಪಕ ಪ್ರಪಂಚ ನುಣ್ಣಗಿನ ನಯಗೊಳಿಸಿದ ಚೆಲುವಿನದಾಗಿದೆ. (The world is of subdued beauty.) ಇವರಿಗೆ ನವ್ಯತೆ ಒಂದು ಪ್ರತಿಜ್ಞೆಯಲ್ಲ. ಏಕ ನಿಷ್ಠವಾದ; ವ್ರತದೀಕ್ಷೆಯಲ್ಲ. ರಸ ಸಂಪ್ರದಾಯದ ಕವಿ ಹೊಸ ತಂತ್ರದಲ್ಲಿಯೂ ಮನೋಜ್ಞವಾಗಿ ಬರೆಯಬಲ್ಲನೆಂಬುದಕ್ಕೆ ಕಣವಿಯವರ ಸಂಕಲನ ಒಂದು ಧನ್ಯ ಸಾಕ್ಷಿ. ಅವರ ಈ ಹಳೆ ಹೊಸತರ ನವಪಾಕ *"ದೀಪಧಾರಿ"*ಗಿಂತಲೂ ಹಿಂದೆ, *"ಆಕಾಶಬುಟ್ಟಿ"*ಯೊಳಗಿನ *"ಅಂಚೆಯಾಳ"*ನಂಥ ಕವನಗಳೊಳಗಿಂದಲೂ ಛಾಯೆಗೊಂಡು ಸ್ಫುಟವಾಗುತ್ತ ಬಂದಿದೆ. ಆರಂಭದಲ್ಲಿ ಇವರ ನವ್ಯತೆ ಕವಿ ವಿನಾಯಕ (ಪ್ರೊ. ಗೋಕಾಕ)ರದಂತೆ ಹೊಚ್ಚ ಹೊಸ ಉಪಮಾನಗಳ ಆಯ್ಕೆ ನೆಯ್ಗೆಗಳಲ್ಲಿ ಪ್ರಕಟವಾಯಿತು. ಆಧುನಿಕ ಜೀವನದ ಮೌಲ್ಯ ರಂಗಗಳಿಂದ ಇವರ "ಅಪ್ರಸ್ತುತ" ವಿಧಾನಗಳು ಆಯ್ದು ಬಂದವು. ಆದರೆ ಈ ಆಯ್ಕೆಗೂ ಆಳವಾದ ಒಂದು ಮಾರ್ಮಿಕತೆ ಇತ್ತು. ಅದೇ "ದೀಪಧಾರಿ"ಯ ಕವನಗಳಲ್ಲಿ ಇನ್ನಿಷ್ಟು ಸಾಂದ್ರವಾದ ಹದ-ಹುರುಳು ತುಂಬಿಕೊಂಡು ಒಡಮೂಡತೊಡಗಿತು. ಆದರೂ ಇದರ ಒಟ್ಟು ಆವರಣ ಮತ್ತು ಆವೇಶ (ಈ ವಿಶೇಷಣ ಕಣವಿಯವರ ಕಾವ್ಯಪ್ರಕೃತಿಗೆ

ಅನ್ವಯಿಸುವದೇ ಆದರೆ!) ರಸ ಸಂಪ್ರದಾಯದ್ದೇ ಉಳಿಯಿತು. ಆದ್ದರಿಂದ ನವ್ಯಕಾವ್ಯ ಮಾರ್ಗದ ಕೆಲವು ಅತಿಮಹತ್ವದ ಲಕ್ಷಣಗಳಿಂದ ಇವರ ಕಾವ್ಯ ಇನ್ನೂ ದೂರವಿದೆ. ಆ ಲಕ್ಷಣಗಳು ಯಾವುವು?

ಕಾವ್ಯದಲ್ಲಿ ಲಯಗಾರಿಕೆ (Rhythm) ಭಾವನಾಮಯವಾದ ಅಂತರ್ಮುಖತೆಯನ್ನು ಸಾಧಿಸುತ್ತದೆ. ಹೊರ ಪ್ರಕೃತಿಯಲ್ಲಿಯೂ ಪ್ರಾಣಿ ಜೀವನದ ಅನೈಚ್ಛಿಕ ಶಾರೀರಿಕ ವ್ಯಾಪಾರಗಳಲ್ಲಿಯೂ ಅಡಕವಾಗಿದ್ದ ಲಯಬದ್ಧತೆಗೆ ಸಂವಾದಿಯಾಗಿ ಕವನದ ವೃತ್ತ ಬಂಧ ಇಲ್ಲವೆ ಛಂದೋಗತಿ ಓದುಗನಲ್ಲಿ ನಿಸರ್ಗದೊಡನೆ ಪ್ರಾಣಮಯ ಹಾಗೂ ಮನೋಮಯ ಪಾತಳಿಯ ಮೇಲೆ ಗಾಢವಾದ ತಾದಾತ್ಮ್ಯ ತುಂಬುತ್ತದೆ. ಇದರಿಂದ ಹೊರ ಪರಿಸ್ಥಿತಿಯಿಂದ ಬುದ್ಧಿಗೆ ಒಳಪಡುವ ಸಾಮಾಜಿಕ ಲೌಕಿಕ ಪರಿಸರದಿಂದ ಚಿತ್ತವು ಬಿಡುಗಡೆ ಹೊಂದುತ್ತದೆ. "ನಿಯತಿಕೃತ ನಿಯಮ ರಹಿತಾ" ಎಂದು ಲಾಕ್ಷಣಿಕರು ಕಾವ್ಯದ ಲಕ್ಷಣವನ್ನು ಹೇಳಿದ್ದು ಅವರು ಭಾವಿಸಿದ್ದಕ್ಕಿಂತ ಹೆಚ್ಚು ಆಳವಾಗಿ ಸತ್ಯ. ಅದೇ ರೀತಿ ಕಾವ್ಯದ ಒಂದು ಪ್ರಯೋಜನವೆಂದು ಅವರು ಹೇಳಿದ "ಸದ್ಯಃಪರ ನಿರ್ವೃತಿ"ಯೂ ಅವರು ಊಹಿಸಿದ್ದಕ್ಕಿಂತ ಗಂಭೀರವಾಗಿ ಯಥಾರ್ಥ. ಸಹೃದಯನ ಮನಸ್ಸು ಒಟ್ಟು ಸಾಮಾಜಿಕ, ಸಾಂಸಾರಿಕ ಪರಿಸರದಿಂದ ಹಿಂದೆಗೆದು, ಒಳಸರಿದು ಅಖಿಲ ಮಾನವತೆಯ ಒಂದು ಭಾವನಾಮಯ ಸಾಮೂಹಿಕತೆಯಲ್ಲಿ ಪ್ರಾಚೀನ ಪ್ರಾಥಮಿಕ ಪ್ರವೃತ್ತಿಗಳ ಪ್ರಜ್ಞೆಯಲ್ಲಿ (ಅದಕ್ಕೆ "ಪ್ರಜ್ಞೆ" ಎನ್ನುವುದೂ ಸರಿಯಲ್ಲ!) ಲೀನವಾಗುತ್ತದೆ.

"ಕವಿಯ ಏಕತಾನ ಕವನದಂತೆ ನಾದಲೀನ"

"ಬರಿಯ ಭಾವಗೀತ"ದ "ಸಹಜಪ್ರಾಸ" ಮಾಯಾಲೀಲೆಯಿದು. ಈ ಏಕತಾನದ ಪ್ರತಿಕ್ರಿಯೆಯೇ ನವ್ಯ ಕಾವ್ಯದ ಧಾತುವಿಗೆ ವಿರೋಧಿ. ನವ್ಯ ಮಾರ್ಗದ ವೃತ್ತಿ ಸಮತಾನತೆ (Equivalence) ರಸಸಂಪ್ರದಾಯದಲ್ಲಿ ಮಿಂದೆದ್ದ ಕವಿಪ್ರಜ್ಞೆಗೆ ತನ್ನ ಮೈಯುಂಡ ಏಕತಾನತೆಯಿಂದ ಈ ಸಮತಾನತೆಗೆ-ಬರುವದು, ಅದರ ಹದ-ಹತೋಟಿ ತಪ್ಪದಂತೆ ಕಾದುಕೊಳ್ಳುವುದೂ ಸುಲಭವಲ್ಲ. ತಾನು ಮನಸೋತು ಸೊಗಸು ಕಂಡಂಥ ಛಂಗದೋಗತಿಯ ಗುಂಗಿನಿಂದ ಬಿಡುಗಡೆಯಾಗಲು ಹೊರಟ ಕವಿಗೆ ಅದರ ಕಷ್ಟ ಹೆಚ್ಚು. ಇಷ್ಟವೂ ಕಡಿಮೆ. ಪ್ರಾಸದ ಹಿಡಿತ ಸಡಿಲಿಸಿದರೂ ಲಯದ ಮಿಡಿತ ಬಿಡುವದಿಲ್ಲ. ಪಾದಗಳ ಉದ್ದಳತೆ ಹೆಚ್ಚು ಕಡಿಮೆಯಾದರೂ ಗಣಗಳ ಗತ್ತು ತಳದಲ್ಲಿ ತಾಳ ಹಾಕುತ್ತದೆ. ಶುದ್ಧ ಸ್ವಚ್ಛಂದ ಅರ್ಥಗತಿಯ ಲಯಕ್ಕೆ ಇದು ಅಪಾಯಕಾರಿ. ಇದನ್ನು ತಪ್ಪಿಸಲಿಕ್ಕೆ ಬರಿ ಬಳಕೆಯ ಮಾತಿನಲ್ಲಿ ಬರೆದರೆ ಸಾಲದು. ಬಳಕೆ ಮಾತಿನದೇ ಆದ ನಾದಲಯ ಸಾಧಿಸಬೇಕು.

ಈ ಲಯಬದ್ಧತೆಯ ಬಗೆಗೆ ಇನ್ನೂ ಒಂದು ಮಾತು ಗಮನಿಸಬೇಕು. ಲಯದ ಛಂದೋಗತಿ ಕಾವ್ಯದಲ್ಲಿ ಎರಡು ವಿಧ. ಒಂದು ರೇಖಾವಿನ್ಯಾಸ Iinear scansion).ತನ್ನ ಏಕಾಂತದ ಬೇಸರ ಕಳೆದುಕೊಳ್ಳಲೋ, ಭಾವನೆ ಹೆಚ್ಚಿಸಿಕೊಳ್ಳಲೋ ತನ್ನಷ್ಟಕ್ಕೆ ಹಾಡಿಕೊಳ್ಳುತ್ತ ಒಂಟಿದಾರಿ ಹಿಡಿದು ಸಾಗಿದಂತೆ. ಇಂಥ ಪದ-ಪ್ರಸ್ತಾರದಲ್ಲಿ ಲಯ ಶಿಥಿಲವಿರುತ್ತದೆ.

ಅರೆಮರವಿಂದ ಹೆಜ್ಜೆ ತಪ್ಪಿ ಮತ್ತೆ ತಾಳಗತಿ ತ್ವರೆಯಿಂದ ತಿದ್ದಿಕೊಂಡಂತೆ. ಅರೆಮರವಿಲ್ಲದಿದ್ದರೂ ಕಣವಿಯವರ ನವ್ಯಕವನಗಳ ಲಯ ಈ ಮಾದರಿಯದು. ಅಂದರೆ ನವ್ಯದ ನೆನಪಾದಾಗ ಫಕ್ಕನೆ ಲಯಗಾರಿಕೆಗೆ ವ್ಯತ್ಯಸ ತಂದಂತೆ ಅನಿಸುತ್ತದೆ. ಉದಾಹರಣೆಗೆ "ಅಪರಾವತಾರ"ದಲ್ಲಿ "ಅಲ್ಲಿದ್ದ-ಇಲ್ಲಿದ್ದ" ಇವು ಬೇಕೆಂತ ಮೊಟಕು ಮಾಡಿದ ಪಂಕ್ತಿಗಳು. ಆದರೂ ಈ ಕವನದ ಒಂದು ಗತ್ತು-೫ ಮಾತ್ರೆಗಳ ಒಂದು ಗಣದ ತಾಲ-ಮೊದಲಿನ ೧೦ ಸಾಲುಗಳಿಗೂ ಅವ್ಯಾಹತವಾಗಿ ಸಾಗಿ ೧೧ನೆಯ ಸಾಲಿಗೆ ನವ್ಯಕ್ಕೆ ಈ ಪ್ರಮಾಣ ಬದ್ಧತೆ ಸಾಲದೆಂಬಂತೆ ಒಮ್ಮೆಲೇ ಛಂದೋಭಂಗದ "ಹುಸಿಗೊಂಡು ಹಾರಿಸಿ"ದ್ದಾಗಿದೆ. ಹೀಗೆ ಅನಿಯಮಿತ ಲೆಕ್ಕದಲ್ಲಿ ಮಾತ್ರಾಗಣಗಳ ಗತಿಲಯಗಳ ಭಂಗ ತಂದು ನವ್ಯದ ಸ್ವಚ್ಛಂದಗತಿಯನ್ನು ಹರಿಸಲಾಗಿದೆ. ಇರಲಿ. ಇನ್ನೊಂದು ವಿಧ, ವಾಸ್ತು ವಿನ್ಯಾಸ-ಅಂದರೆ ಒಂದು ವಾಸ್ತುಶಿಲ್ಪ ಕಟ್ಟಿ ನಿಲ್ಲಿಸಿದಂತೆ. ಅದರ ಅಂಗಾಂಗ ಅಂತಸ್ತುಗಳ ಒಟ್ಟು ಪರಿಣಾಮ ಸುಸಂವಾದಿ, ಸುಸಂವೇದ್ಯ. ಕವನದ ಬೇರೆ ಬೇರೆ ಪರಿಚ್ಛೇದಗಳು ಒಟ್ಟಾಗಿ, ಒಂದು ಒಳಕಟ್ಟು ಸಾಧಿಸಿ ಇಡಿತನದ ಸಮತೋಲ ಕಾದುಕೊಳ್ಳುವ ಮಾದರಿ ಇದು. ನವ್ಯಕಾವ್ಯದ ನಿಜವಾದ ಲಯ ಈ ರೀತಿಯದು. ಇಲ್ಲಿ ಲಯ ಗಣಗುಣಿತವಲ್ಲ. ಸಮಗ್ರ ಕವನದ ಗತಿಧರ್ಮ. ಒಂದು ರಾಗದ ಆಲಾಪ ವಿಸ್ತಾರದಂತೆ, ವೃಂದವಾದನದ ಸಂಘಟಿತ ಸಂಗೀತದಂತೆ (orchestral symphony) ಇದರ ತೋರಿಕೆಯ ಸಂಕೀರ್ಣತೆಯು ಕಾಂತಿಯುಕ್ತವಾಗುತ್ತದೆ. ಇಂಥ ಅವಯವ ಸಂಸ್ಥಾನ "ನಾಳಿನ ನವೋದಯ"ದಲ್ಲಿ ಕೆಲಮಟ್ಟಿಗೆ ಕಂಡು ಬರುವಂತಿದೆ. "ಬೆಳಗಾಯಿತು" ಈ ಪದ ಎರಡು ಸಲ ತಂದು ನಡುವೆ ಹನ್ನೆರಡು ಸಾಲುಗಳ ಸಂಪುಟೀಕರಣ ಮಾಡಿ ಒಟ್ಟು ಪರಿಣಾಮದ ಏಕಸೂತ್ರತೆ ಇಡಲಾಗಿದೆ. ಮೊದಲನೆಯ ಪರಿಚ್ಛೇದದ ಇದೊಂದೇ ಉದಾಹರಣೆ ಇಲ್ಲಿ ಸಾಕು.

ನವ್ಯಕಾವ್ಯದ ಇನ್ನೊಂದು ವ್ಯವಚ್ಛೇದಕ ಲಕ್ಷಣ ಇತಿಹಾಸ ಪ್ರಜ್ಞೆ-ಮಾನವ ವಿಕಾಸದ ಐತಿಹಾಸಿಕ ಇಂಗಿತಜ್ಞತೆ. ಮಾನವನ ನಿಯತಿಯ ರಂಗಭೂಮಿಯೆಂಬ ತಿಳಿವಳಿಕೆಯಿಂದ ಇತಿಹಾಸವನ್ನು ಓದಿದುದರ ಸಂಸ್ಕಾರ ಕವಿಯ ಮನಸ್ಸಿನ ಮೇಲೆ ಆಶಾವಾದವಾಗಿಯೂ ನಿಲ್ಲಬಹುದು. ನಿರಾಶಾವಾದವಾಗಿಯೂ ನಿಲ್ಲಬಹುದು. ಹೇಗೆ ನಿಂತರೂ ಆ ನಿಲುಮೆಗೆ ಆ ಮನಸ್ಸು ಸಮಾಜದ ಇಲ್ಲದೆ ಧರ್ಮದ ಒತ್ತಾಯದಿಂದ ಒಂದೇ ವಸ್ತುವನ್ನು ಸಾಮ್ಯ ವಿರೋಧ ತಾರತಮ್ಯಗಳ ನೆಳಲು ಬೆಳಕುಗಳ ಛಾಯೆಯಲ್ಲಿ ಚಿತ್ರಿಸಬಹುದು. ಇಂಥ ಕವಿ ಇತಿಹಾಸವನ್ನು ಪುನಃ ಪರಿಶೋಧಿಸಿಕೊಂಡಂತೆ. ರೊಮ್ಯಾಂಟಿಕ್ ಸಂಪ್ರದಾಯ ಇತಿಹಾಸವನ್ನು ಮಾನವ ವಿಕಾಸದ ಕಾಲಕ್ರಮಾಗತ ಸಾಮಾಜಿಕ ಪ್ರಜ್ಞೆಯನ್ನು ಮರೆಯುತ್ತದೆ.

"ಇದ್ದದ್ದು ಮರೆಯೋಣ
ಇಲ್ಲದ್ದು ತೆರೆಯೋಣ
ಹಾಲ್ಜೇನು ಸುರಿಯೋಣ
ಕುಣಿಯೋಣು ಬಾ"

ಎಂದು ಅದರ ರಸದಾಮಂತ್ರಣ. ಆದರೆ ಐತಿಹಾಸಿಕ ಮನೋಧರ್ಮದ ವಿಶಿಷ್ಟವೂ ಆದ ಅಭಿವ್ಯಂಜನೆ ನವ್ಯ ಕಾವ್ಯದ ಒಂದು ಮುಖ್ಯ ಅಂಗ. ಈ ಅಂಗದಲ್ಲಿ ಕಣವಿಯವರ ನವೀನ ಕಾವ್ಯ ಅಲ್ಲಲ್ಲಿ ಯಶಸ್ವಿಯಾಗಿದೆ.

ಈ ದೃಷ್ಟಿಯಿಂದ ಕಣವಿಯವರ ಕವನದಲ್ಲಿ Communication ಇರುವಷ್ಟು Communion ಇರುವದಿಲ್ಲ. "ಹೆಣದ ಹಿಂದೆ" ಹೋಗುವ ಹೆಣ್ಣನ್ನು ಕಂಡಾಗ ಬೇಂದ್ರೆಯವರ ಬಾಯಿಯಿಂದ "ಆನಂದ ಸ್ಪಂದದಿಂದ ಹುಟ್ಟಿ ಬಂದ ಸೃಷ್ಟಿಯಿಂದ" ಇಂಥ ದೃಶ್ಯ ಹುಟ್ಟಬೇಕೆ? - ಎಂಬ ಆರ್ತನಾದ ಹೊಮ್ಮುತ್ತದೆ. ಸೃಷ್ಟಿ ಹುಟ್ಟಿದ್ದು ಹೇಗೊ! ಅದು ಆನಂದ ಸ್ಪಂದದಿಂದಲೋ ಅಲ್ಲವೋ! ಏನೇ ಇದ್ದರೂ ಕವಿಯ ಪ್ರತಿಭಾಚಕ್ಷು-ಜ್ಞಾನ ದೃಷ್ಟಿ-ಒಮ್ಮೆ ಅನಿಮಿತ್ತ ಆಬ್ರಹ್ಮಸ್ತಂಬ ಪರ್ಯಂತವೂ ಹಾಯ್ದು ಬರುತ್ತದೆ. ಇಂಥ ದೃಷ್ಟಿ ರೊಮ್ಯಾಂಟಿಕ್ ಪ್ರತಿಭೆಗೂ ಇರಬಹುದು. ಅನೇಕ ಪಾಶ್ಚಾತ್ಯ ನವ್ಯ ಕವಿಗಳಿಗೆ ಇಂಥ ಐತಿಹಾಸಿಕ ಅಂತಃಕರಣದೊಂದಿಗೆ ತಾದಾತ್ಮ್ಯದ ಉತ್ಕಟತೆ ಬಂದಿರುತ್ತದೆ. ಈ ಉತ್ಕಟತೆ ಈ ಕವಿಯ ಮನೋಧರ್ಮವಲ್ಲ. ಆರ್ಜವ ಮಾರ್ದವಗಳ ಲಾಲಿತ್ಯಪೂರ್ಣತೆ ಆ ಧರ್ಮದ ಅಂಶಗಳು. ಫ್ರೆಂಚ್‌ಕವಿ ಫ್ರೆನಾಂ ಹಾಗೂ ಆಂಗ್ಲ ಕವಿ ಡಾಯಲನ್ ಥಾಮಸ್ ಇವರನ್ನು ಹೋಲಿಸಿ ಒಬ್ಬ ಜರ್ಮನ್ ವಿಮರ್ಶಕ ಹೇಳಿದ್ದ : The French poet is more civilised, but the English poet is more artistic"

ಇಲ್ಲಿ ಫ್ರೆಂಚನ ಬದಲು ಕಣವಿ, ಆಂಗ್ಲನ ಬದಲು ಅಡಿಗರನ್ನು ಇಟ್ಟುಕೊಂಡರೆ ಅಲ್ಲಿ ಸಲ್ಲುವ ನಿರ್ಣಯ ಇಲ್ಲಿಯೂ ಸಲ್ಲುತ್ತದೆ!

ನವ್ಯ ಮಾರ್ಗದ ಇನ್ನೊಂದು ಲಕ್ಷಣ ದುರೂಹತೆ. ಅಭಿಜಾತ ನವ್ಯ ಕಾವ್ಯಕ್ಕೆ ದುರೂಹತೆ ಅಂಟಿಬಂದ ಬ್ರಹ್ಮಗಂಟು. ಬಾಳಿನ ಜಟಿಲ ಕುಟಿಲ ಸಂಕೀರ್ಣತೆಯನ್ನು ಏಕಾಗ್ರವಾಗಿ, ಸಮಗ್ರವಾಗಿ ಬಿಂಬಿಸುವ ಕಾವ್ಯಕ್ಕೆ ದುರೂಹತೆ ಅನಿವಾರ್ಯ. ಸಾಮಾನ್ಯವಾಗಿಯೇ ವಿಶ್ವದ ಪದಾರ್ಥಕೋಶಕ್ಕಿಂತ ಶಬ್ದಾರ್ಥಕೋಶ ಎಷ್ಟೋ ಪಾಲು ಚಿಕ್ಕದು. ಈ ಪರಿಮಿತಿಯಿಂದಾಗಿ ಯಾವ ಭಾಷೆಯಲ್ಲಿರಲಿ, ಶಬ್ದಗಳಿಗೆ ಅನೇಕಾರ್ಥಗಳ ವ್ಯಂಜನೆ ಒದಗಿ ಬಂದಿದೆ. ಇಂಥ ಕ್ಲಿಷ್ಟ ಸಾಧನದಿಂದ ಅದಕ್ಕೂ ಕ್ಲಿಷ್ಟ ಸಾಧ್ಯವನ್ನು ಸಾಧಿಸ ಹೊರಟ ನವ್ಯ ಕವಿ ತನ್ನ ವಾಗರ್ಥಪ್ರತಿಪತ್ತಿಯಲ್ಲಿ ವಿವಿಧ ಸ್ತರಗಳನ್ನು ರಚಿಸುವುದು ಸ್ವಾಭಾವಿಕ. ಆಸ್ಕರ ವಾಯಿಲ್ಡ್ ಎಂದಂತೆ "Truth is never pure and seldom simple." [ಸತ್ಯ ಶುದ್ಧವೆಂದೂ ಇರುವದಿಲ್ಲ; ಸರಳವಿರುವದೂ ಅಪರೂಪ!] ಅಂಥ ಸತ್ಯವನ್ನು ಶಬ್ದಗಳಲ್ಲಿ ಸೆರೆಹಿಡಿದಾಗ ದುರೂಹತೆಯಲ್ಲದೆ ಬೇರೆ ಯಾವ ಶ್ರೇಯಸ್ಸು? ಆದ್ದರಿಂದಲೇ ಏನೋ ವಿಲಿಯಂ ಎಂಪ್ಸನ್ ಅಂದದ್ದು : "Ambiguity is the essence of poetry" (ದುರೂಹತೆ ಕಾವ್ಯದ ತಿರುಳು.) ಆದರೆ ಈ ಅತಿವಾದವೇ ಅಳತೆಗೋಲಾದರೆ ಕಣವಿಯವರ ನವ್ಯ ಕವನ ಕಾವ್ಯವೇ ಅನಿಸಲಿಕ್ಕಿಲ್ಲ. ಏಕೆಂದರೆ ಸಹೃದಯರ ಸುದೈವಕ್ಕೆ ಇವರ ಕವನಗಳು ಅರ್ಥದ ಅರ್ಕವನ್ನು ಅಡಗಿಸಿಟ್ಟು ಒಗಟಾಗಿ ನಿಲ್ಲುವದಿಲ್ಲ. ಈ ಕವಿ ಕೇವಲ ತನಗಾಗಿ ತಾನು ಹಾಡುವವನಲ್ಲ.

ತನ್ನ ಹಾಡಿಗೆ ಮಂದಿ ಕಿವಿ ಕೊಡುತ್ತಾರೆ. ಮೆಚ್ಚಿ ತಲೆದೂಗಲೂಬಹುದು - ಎಂಬುದನ್ನು ಈತ ಚೆನ್ನಾಗಿಯೇ ಬಲ್ಲ. ಆದ್ದರಿಂದ ಶೈಲಿಯ ಸುಭಗತೆ, ಅರ್ಥದ ಸುಗಮತೆ, ಸಹಸಾ ಕವಿಯ ಕೈ ಬಿಟ್ಟಿಲ್ಲ. ರಸ ಸಂಪ್ರದಾಯದ ಉತ್ತಮ ಪಾಕಸಿದ್ಧಿಯುಳ್ಳ ಈ ಕವಿ ಆಧುನಿಕ ಪದ ಪ್ರಯೋಗದ ಹವ್ಯಾಸದಲ್ಲಿ ಓದುಗರ ಮಿದುಳಿಗೆ ಮಿಂಚಿನ ಆಘಾತ ಕೊಡುವ ಹೊಂಚು ಹಾಕಿಲ್ಲ.

ಇದಕ್ಕೆ ಇನ್ನೂ ಒಂದು ಉಪಪತ್ತಿ ಹೇಳಬಹುದು. ಆಧುನಿಕ ಕಾವ್ಯದ ಭಾಷೆಗೆ (Modern idiom) ನವ್ಯದ ಲಾಕ್ಷಣಿಕರು ಎರಡು ಉಗಮಗಳನ್ನು ಕಾಣಿಸುತ್ತಾರೆ - ಒಂದು ಆಂಗ್ಲ ಕವಿ ಡನ್‌ನಿಂದ ಬಂದ ಪರಮಾರ್ಥವಾದಿ (metaphysical) ಸಂಪ್ರದಾಯ; ಇನ್ನೊಂದು, ಫ್ರೆಂಚ್ ಕವಿ ಮೆಲಾರ್ಮೆಯಿಂದ ಬಂದ ಪ್ರತೀಕನಿಷ್ಠ (symbolist) ಪ್ರಘಾತ. ಇವೆರಡರ ಬಲವಾಗಿ ಬಂದ ಕಾವ್ಯಮಾರ್ಗದಲ್ಲಿ ಭಾಷೆಯ "ಕ್ಲಿಷ್ಟತೆ"ಗಿಂತ ಕ್ಲಿಷ್ಟ ಅರ್ಕದ ಏಕಾಗ್ರತೆ ಮತ್ತು ಬಹುಲಾರ್ಥ ಪಾತಳಿಗಳ ಶಕ್ಯತೆ ವಿಶೇಷ ಲಕ್ಷಣಗಳಾಗಿವೆ. ಆದರೆ ಈ ಸಿದ್ಧಾಂತವನ್ನು ಅಮೇರಿಕನ್ ಕವಿಯೂ ನಿಬಂಧಕಾರನೂ ಆದ ರೀಡ ವ್ಹಿ ಟೆಮೋರ್ ಹೀಗೆ ಆಪೇಕ್ಷಿಸುತ್ತಾನೆ : "Modern idiom is not so much the product of the metaphysical and symbolist traditions as it is a reaction against the verbal practices of our own day...... It is a denial of new vices erupting up in the imagery of popular literature." ಆದರೆ ಇಂಥ ಅಪಚಾರ ದುರಭ್ಯಾಸಗಳು ಕನ್ನಡ ಭಾಷೆಯ ಸಾಹಿತ್ಯಿಕ ಬಳಕೆಯಲ್ಲಿ ತೀವ್ರ ಪ್ರತಿಕ್ರಿಯೆ ಎಬ್ಬಿಸುವಷ್ಟು ಅತಿರೇಕವಾಗಿ ಇನ್ನೂ ಹಬ್ಬಿಲ್ಲ. ಎಷ್ಟೋ ಕವಿಗಳ ಭಾಷೆಗಿಂತ ನಮ್ಮ ಗದ್ಯವೇ ಚೆಂದವಾಗಿದೆ! ಆದ್ದರಿಂದ ಬಂಡೆಬ್ಬಿಸಿ ವಿಚಿತ್ರ ವಿಕ್ಷಿಪ್ತ ಭಾಷಾ ಪ್ರಯೋಗ ಹೂಡುವ ಪ್ರಚೋದನೆ ಕಣವಿಯಂಥ ತೀವ್ರ ಸಂವೇದನೆಯ ಕವಿಗೂ ಇರುವದಿಲ್ಲ. ಇದರಿಂದಲೂ ಅವರಲ್ಲಿ ದುರೂಹತೆ ಅಷ್ಟಿಲ್ಲ. ಅಗಮ್ಯ ರಮ್ಯತೆಯ ಇಂದ್ರಜಾಲ ಬೀಸುವ ಗಾರುಡಿಗತನಕ್ಕೂ ಈ ಸಾತ್ವಿಕ ಕವಿ ಬೀಳುವದಿಲ್ಲ.

ಕೊನೆಯದಾಗಿ ನವ್ಯಕಾವ್ಯದ ಮಾಧ್ಯಮ ವಾಚಾರ್ಥ್ಯವಲ್ಲ. ಬಿಡಿ ಶಬ್ದಗಳೂ ಅಲ್ಲ. ಉಪಮಾರೂಪಕಗಳ ಹಚ್ಚಡವೂ ಅಲ್ಲ. ಪ್ರತೀಕಗಳೇ ನವ್ಯ ಮಾಧ್ಯಮ. ಇನ್ನು ಉಪಮಾನಗಳ ಪ್ರತಿಮಾಸೃಷ್ಟಿಯ ಉದ್ದೇಶ ಎರಡು : ಒಂದು ಅರಿವಿಗೆ, ಆಸ್ವಾದ್ಯತೆಗೆ ನೆರವಾಗುವದು; ಇನ್ನೊಂದು, ಪರಿಣಾಮವನ್ನು ಇನ್ನಿಷ್ಟು ಉತ್ಕಟಗೊಳಿಸುವುದು. ಆಡುವ ಮಾತಿನಲ್ಲಿ ಆವೇಶ ಉತ್ಕಟತೆ ತುಂಬುವ ಕಸಬೆಲ್ಲವೂ ಉತ್ತಮ ಶೈಲಿಯೆಂದೂ, ಅರ್ಥ ಆಶಯವನ್ನು ಪೂರ್ಣವಾಗಿ ಸಮರ್ಪಕವಾಗಿ ಪ್ರಕಟಿಸುವ ಕಸಬನ್ನು ಶೈಲಿಯ ದೌರ್ಬಲ್ಯವೆಂದೂ ಭಾವಿಸುವ ಒಂದು ವಿಕೃತ ರುಚಿ ರೂಢವಾಗಿದೆ. ಈ ರೂಢಿಮೂಢರಿಗೆ ಜಾಣತನದ ಮಾತಿಗಿಂತ ಮಾತಿನ ಜಾಣತನವೇ ರಸೋಲ್ಲಾಸವಾಗಿ ಕಾಣುತ್ತದೆ. ಇಂಥ ರುಚಿವ್ಯಭಿಚಾರಕ್ಕೆ ನವ್ಯ ಕಾವ್ಯ ಮಾರ್ಗ ತೀವ್ರವಾದ ಪ್ರತಿಕ್ರಿಯೆ. ಇದು ನಿಜವಿದ್ದರೆ ಕಣವಿಯವರ ಶೈಲಿ ಈ ಕಸಬನ್ನು ತುಂಬ ಕೈಗೂಡಿಸಿಕೊಂಡಿದೆ. ಇದರ "ದೀಪಧಾರಿ" ಸಂಗ್ರಹದಿಂದಲೇ ಈ ಕೆಳಗಿನ ಪ್ರತಿಮಾಸೃಷ್ಟಿಯನ್ನು ಎತ್ತಿಕೊಳ್ಳಲಾಗಿದೆ.

ಇಲ್ಲಿ ಮೇಲೆ ಹೇಳಿದ ಎರಡನೆಯ ಉದ್ದೇಶವಿದ್ದೂ ಮೊದಲನೆಯ ಉದ್ದೇಶಕ್ಕೆ ಪ್ರತಿಮೆಗಳನ್ನು ಅಪೂರ್ವ ಶಕ್ತಿಯಿಂದ ಪಳಗಿಸಿಕೊಳ್ಳಲಾಗಿದೆ.:

ದೇಹ ಮೋಂಬತ್ತಿಯೊಲು ಮುಡಿದ ಬೆಳಕಿನ ಕುಡಿಗೆ
ಕರಗಿ ಮಿದುವಾಗಿತ್ತು ಅಂತರಂಗ.

(ಎಂಥ ಮಾರ್ಮಿಕ ಸೊಗಸು ತುಂಬಿದೆ ಮೇಣಬತ್ತಿಯ ಪ್ರತಿಮೆಯಲ್ಲಿ!)

ಬಾನ ಬೀದಿಗೆ ಜೋಲಿ ಹೊಡೆದು ಉರುಳಿವೆ ಮೋಡ
ಪಡುವಣದ ಪಡಖಾನೆಯಿಂದ ತೂರಿ.

(ಕಾಮರೂಪ ಮೋಡಗಳ ಸ್ವೈರಗತಿಗೆ ಎಂಥ ಸಮರ್ಪಕ ಛಾಯಾಭಾವದ ರೂಪಕವಿದು!)

ಹಸುರು ಜೊಂಡಿನ ಹೊಂಡದಲ್ಲಿ ಬಡಕಲು ಎಮ್ಮೆ
"ಈಸಬೇಕೋ ಇದ್ದು ಜೈಸಬೇಕೋ."

(ದಾಸರ ಬೋಧ ವಚನಕ್ಕೆ ಎಂಥ ಅಕಲ್ಪಿಕ ಪ್ರೇಕ್ಷಣೀಯತೆಯ ಪ್ರಯೋಗ ವೈಚಿತ್ರ್ಯವಿದು! ಆದರೂ ಎಂಥ ಔಚಿತ್ಯ!)

ಎದುರು ಗೋಡೆಗೆ ಶಿಲುಬೆಗೇರಿಸಿದ ಗಡಿಯಾರ

(ಎಂಥ ಪ್ರಭಾವಿಯಾದ ಪ್ರತೀಕವಿದು!)

ಸೇದಿ ಬೀಸಾಡಿರುವ ಸಿಗರೇಟು ತುಂಡಿನೊಲು
ದೂರದಲಿ ಕಾಣಿಸಿತು ಮಂಕು ಚಿಕ್ಕೆ.

* * *

ಮಾವು ಹೂವಿನ ಕೊಡವಿಮಾನದಿಂದಿಳಿತಂದು
ಬಂದ ಪ್ರೀತಿಯ ಕಂದ.....

* * *

ತೊಗಲ ಬಾವಲಿಯಂತೆ ಜೋತಿರುವ ಜೋಪಡಿಯ ನೆರಳು.
(ಎಂಥ ಚಿತ್ರಮಯ ಉಪಮಾನಗಳು ಇವು!)

ನಟ್ಟಿರುಳು ಕೊರಳ ಹಿಸುಕಿದ ತೆರದಿ ನರಿಯ ಕೂಗು.

* * *

ನೆರಳಿನದೊಂದು ಪರಿವಾರವೇ ನಿಂದು
ಕೈ ಚಾಚುತಿದೆ ನರಗೆ 'ನಾರಾಯಣ.'

* * *

ಔಷಧಿಯ ಚಮಚ ಎಣಿ ಎಣಿಸಿತ್ತು
ಒಂದೊಂದೆ ಕೊನೆಯ ಗಳಿಗೆ.

(ಈಲಿಯಟ್‌ನ ಬಾಳನ್ನು "ಕಾಫಿಸ್ಪೂನು"ಗಳಿಂದ ಅಳೆಯುವ ಪ್ರತಿಮೆ ಪ್ರಸಿದ್ಧವಿದೆ. ಕಣವಿಯವರ ಈ ಪ್ರತಿಮೆಯ ಧ್ವನಿ ಇನ್ನೂ ಸಾಂದ್ರವಲ್ಲವೇ?)

ಕಣ್ದೆರೆಯುತಿದೆ ನಸುಕು
ಬಾನ ಬಸುರಿಂದೊಗೆದ ಕೂಸು.
ಉಷೆಯ ತಾವರೆಗೈಗಳಲ್ಲಿ ಮಿಸುಕಾಡುತಿದೆ.

(ಇದಕ್ಕೂ ಹೃದ್ಯವಾದ ಪಂಕ್ತಿಗಳು ಆಧುನಿಕ ಕಾವ್ಯದಲ್ಲಿ ಎಷ್ಟಿವೆ?)

ಉಸಿರ್ಗಟ್ಟಿ ದ್ವೀಪ ಮೇಲಕೆದ್ದಿವೆ
ನೀಲನಿದ್ದೆಗೈದಿವೆ.

* * *

ನೆತ್ತಿಯಲಿ ಸುರುಳಿ ಸುತ್ತಿ ಮಲಗಿದ ಮೆದುಳು.

ಅದೇ ಮೆದುಳು ಈ ಸಂಕಲನದ "ಜೀರ್ಣೋದ್ಧಾರ" ಕವನದಲ್ಲಿ ಹೀಗೆ ವರ್ಣಿತವಾಗಿದೆ:

ಮೆದುಳಿನ ಮೇಲೆ ನಾಯಿಕೊಡೆ ಬೆಳೆಯಿಸಿಕೊಂಡ ಶುದ್ಧ ಹುಂಬ!

(ಆ 'ನಾಯಿಕೊಡೆ'ಯ ಹಿಂದೆ "ಎದ್ದು ನಿಂತಿದೆ ಮುಗಿಲವರೆಗೆ ವಿಷಧೂಮ ವಿಜಯಸ್ತಂಬ." ಅಣುಬಾಂಬಿನ ಉತ್ಪಾತಕ್ಕೆ ಎದ್ದ ನಾಯಿ ಕೊಡೆಯಂತಹ ಪ್ರಳಯ ಮೇಘದ ಚಿತ್ರ ಮರೆಯದಿದ್ದವರಿಗೆ ಮಾನವನ ಮಿದುಳಿನ ಈ ವಿಕಾರಗೆಟ್ಟ ಸ್ವರೂಪ ಹೆಚ್ಚು ಹೇಯವಾಗಿ ಮನದಟ್ಟಾಗುವದು. ನಿಃಸತ್ವ, ಕ್ಷಣಿಕ, ನಿರುಪಯೋಗಿ ಬಾಳಿನಿಂದ ಅಣುಬಾಂಬಿನ ಅಗ್ನಿ ಪ್ರಳಯ-ದನಕವೂ "ನಾಯಿಕೊಡೆ" ಪ್ರತೀಕ. ಅದೂ "ಸುರುಳಿ ಸುತ್ತಿ" - ಹೆಬ್ಬಾವಿನಂತೆ! - ಬಿದ್ದ ಮಿದುಳಿನ ಹುತ್ತದಿಂದೆದ್ದದ್ದು!)

ಬಯಕೆ ಊದಿನ ಕಡ್ಡಿ ಬರೆದು ಹಾಕಿತು ದಿನವು ಬಿನ್ನಹದ ಓಲೆ:

[ತನ್ನನ್ನೆ ತಾನು ಉರಿಯಿಸಿ ಕಂಪು ಚೆಲ್ಲುವ ಊದಿನ ಕಡ್ಡಿಯ ಪ್ರತಿಮೆ, ಅದರಿಂದ ಸುಳಿಸುಳಿಯಾಗಿ ಎದ್ದು ವರ್ಣಮಾಲೆಯಂತೆ ಹಬ್ಬುವ ಹೊಗೆಯ ಬರೆಹ ಜಿನುಗಾದಷ್ಟೇ ನವುರಾಗಿಯೂ ಇದೆ.]

ಥಳಥಳಿಸುವೆರಡು ಬಂಗಾರ ಪಾದುಕೆ ಮೇಲೆ
ಆಡುತಿವೆ ಪೂಜಾರಿ ಕೈಯ ಬೆರಳು.

[ಇಲ್ಲಿಯ ಅರ್ಥ ನಿಬಿಡತೆ ಮೆಲುಕು ಹಾಕಿದಷ್ಟೂ ಮೆಚ್ಚಿಗೆ]

ಮುಗಿಲು ಝುಗ ಝುಗ ಮಿಂಚಿ
ಹೊಡೆದು ಕೊಂಡಿತು ಸ್ನ್ಯಾಪು
(ಸಿಗಲಾರದಿನ್ನಿಂಥ ಜಗದ ಭಂಗಿ!)

* * *

ಎಲ್ಲಿ ಬಿರುಗಾಳಿಯಲಿ ಮಗುಚಿ ಮೋಡದ ದೋಣಿ
ಚಿಕ್ಕೆ ತಳಕಂಡವೋ!

* * *

ಕತ್ತಲೆಯ ಅಚ್ಚಿನಲಿ ಬೆಳಕನೆರಕುವ ಹೊಯ್ದು
ತೆಗೆದಿರುವ ಅಪ್ರತಿಮ ಪ್ರತಿಮೆ ನೂರು

* * *

"Proper study of mankind is man" ಅಂದ ಕವಿ ಪೋಪ. ಇದನ್ನೇ ಕಾವ್ಯಾಭ್ಯಾಸಕ್ಕೂ ಅನ್ವಯಿಸಬಹುದು. ಕಾವ್ಯದ ಸಮ್ಯಗವಲೋಕನೆಯೆಂದರೆ ಕವಿಯ ಇಂಥ ಪ್ರತಿಮಾಸೃಷ್ಟಿಯ ಪರಿಶೀಲನೆ. ಮೇಲಿನ ಪಂಕ್ತಿಗಳಲ್ಲಿ ನವ್ಯಗಂಧಿಯಾದ ಉತ್ಪ್ರೇಕ್ಷೆಯ ದೀಪ್ತಿಯಿದೆ. ಈ ಕವಿಯ 'ಅಪ್ರಸ್ತುತ' ವಿಧಾನಗಳು 'ಪ್ರಸ್ತುತ'ದ ಅರ್ಥ ಪರಿಪೋಷಗೊಳಿಸುವವಲ್ಲದೆ ಅವುಗಳಿಗೆ ಹೆಚ್ಚಿನ ವ್ಯಂಜನೆಯ ಪ್ರಭೆಯ ಪರಿವೇಷಗಳನ್ನೂ ಕಟ್ಟುತ್ತವೆ. ಕಾವ್ಯದೃಷ್ಟಿಯ ಕೃತಕೃತ್ಯತೆ ಇದಕ್ಕೂ ಹೆಚ್ಚಿನದೇನಿದೆ?

೨

"ಮಣ್ಣಿನ ಮೆರವಣಿಗೆ"ಯಲ್ಲಿ ಭಾವಗೀತೆಯ ಸರಾಗ ಭಾವಪೂರ್ಣತೆ, ಅದರೊಂದಿಗೆ ಅನುಸ್ಯೂತವಾದ ಭಾಷೆಯ ಅನುರಣನ (resonance), ಅದರಲ್ಲಿಯೂ ನವ್ಯ ತಂತ್ರದ ಅಂಶಗಳನ್ನು ಅಳವಡಿಸಿಕೊಂಡು ಅರಳಿದ ವಸ್ತು ವಿನ್ಯಾಸ - ಈ ತ್ರಿಗುಣಾತ್ಮಕ ತಥ್ಯವು "ನವೀನ ಕವಿತಾ ವಿಧಾನ"ದ ಒಂದು ಆಕೃತಿಯನ್ನು ನಮ್ಮ ಮುಂದೆ ಇರಿಸಿದೆ.

ನವ್ಯಧ್ವನಿಗೆ ನಿರ್ವೇದವೇ ವೇದವಲ್ಲ. ವಿಷಾದವೇ ಯೋಗವಲ್ಲ. ವ್ಯಂಗ್ಯ ವಿಡಂಬನೆಯೊಂದೇ ವೈಖರಿಯಲ್ಲ. ವಿನೋದ, ವಾತ್ಸಲ್ಯ, ಕೌತುಕ, ಕಾರುಣ್ಯ, ಆಶೆ, ಆದರ್ಶಗಳ ರಸೋಲ್ಲಾಸವೂ ಈ ಹೊಸ ಪಾತ್ರದಲ್ಲಿ ತುಳುಕಾಡಬಲ್ಲದು - ಎಂಬುದನ್ನು ಕಣವಿಯವರು ಕಾಣಿಸಿಕೊಟ್ಟಿದ್ದಾರೆ. ಈ ಯುಗದ ಧರ್ಮಸಂಕರದ ನರಕವನ್ನು ತೆರೆದು ತೋರಿಸುವದರೊಂದಿಗೆ "All this and heaven too" ಎಂಬ ಶ್ರದ್ಧೆಯೊಂದು ನಿರಾಮಯ ಚಿತ್ತಕ್ಕೆ ಸ್ಥಾಯಿಯಾಗಿ ನಿಂತಿದೆ. ಅದರ ಅವಿಷ್ಕಾರವೂ-ಅವಶ್ಯ. ಮುಸುಕಿದ ಮೋಡಗಳ ಒಳಮೈಗೆ ಬೆಳಕಿನ ಸಂಪರ್ಕ ಇರಲಿ ಇಲ್ಲದಿರಲಿ, ಅದರ ಆಚೆಯ ಬಾನು ನೀಲಿಯೇ ಇದೆ - ಎಂಬ ನೆನಪು ನಮಗೆ ಈ ದುರ್ದಿನದಲ್ಲಿಯೂ ಅಡಿಗಡಿಗೆ ಬೇಕು. "ನಾ ಬಲ್ಲೆ ನನಗೆ ಗೊತ್ತಿಲ್ಲವಾದರೂ ಎಲ್ಲಿ ಆಚೆಯಾದಂಡಿ" - ಎಂಬ ನಂಬಿಕೆಯೇ ಮಾನವ ಕೋಟಿಯನ್ನು ಕಣಿಯಲ್ಲಿ, ಗಿರಣಿಯಲ್ಲಿ, ಕಚೇರಿಯಲ್ಲಿ ಗಿರಿಶಿಖರವೇರುವದರಲ್ಲಿ, ರೈಲು ಅಟ್ಟುವಾಗ, ಸರಕು ಮಾರುವಾಗ, ಸರಸವಾಡುವಾಗ, ಬೇನೆಯಲ್ಲಿ ನರಳುವಾಗ, ನಿದ್ದೆಯಲ್ಲಿ ಹೊರಳುವಾಗ - ಬದುಕಿನ ಯಾವ ಮಟ್ಟದಲ್ಲಿಯೂ ಮಗ್ಗಲಲ್ಲಿಯೂ ಮುಂದೊಯ್ಯುತ್ತದೆ. ಜಗತ್ತಿನಲ್ಲಿ ಆಶ್ಚರ್ಯವೇನು?.....

ಎಂದ ಯಕ್ಷ ಯುಧಿಷ್ಟರನಿಗೆ. ಯಧಿಷ್ಠಿರನ ಉತ್ತರ ಜೀವನದ ಅಪಾರ ಶ್ರದ್ಧೆಯ ಸಾಕ್ಷಿ :

"ಅಹನ್ಯಹನಿ ಭೂತಾನಿ ವಿಶಂತಿ ಯಮ ಸಾದನಂ
ಶೇಷಾಃ ಜೀವಿತುಮಿಚ್ಛಂತಿ - ಕಿಮಾಶ್ಚರ್ಯಮತಃ ಪರಂ?"

ದಿನದಿನವೂ ಜೀವಕೋಟಿ ಯಮನೂರ ಜಾತ್ರೆಗೆ ಸಾಗುತ್ತದೆ. ಆದರೂ ಹಿಂದೆ ಉಳಿದವರು ಇನ್ನೂ ಬದುಕಬೇಕೆಂದೇ ಬಯಸುತ್ತಾರೆ! ಇದಕ್ಕೂ ದೊಡ್ಡ ಆಶ್ಚರ್ಯವೇನು? "ಮಣ್ಣಿನ ಮೆರವಣಿಗೆ"ಯೂ ಇದೇ ಬಗೆಯ ಅಂತಃಶ್ರದ್ಧೆ ಹಿಡಿದು ಹೊರಟಿದೆ.

ಯಾವ ವಸ್ತುವನ್ನೂ ಹೆಸರೆತ್ತಿದ ಮಾಯಾಸ್ಪರ್ಶ ಇವರದಲ್ಲ. ಭಾಷೆ-ಭಾವಗಳ ಅನ್ಯೋನ್ಯ ಪ್ರತಿಬಿಂಬಗಳ ಚಿತ್ರಶಾಲೆಯನ್ನು ಅನಂತವಾಗಿ ತೆರೆದು ತೋರಿಸುವ ಊಹೆಯ ನಿರ್ಭರತೆ ತನ್ನದಲ್ಲವೆಂಬ ಆತ್ಮಜ್ಞಾನ ಈ ಕವಿಗೆ ಇದೆ. ಈ ಕವಿಯ ಶಕ್ತಿ ಸರ್ವಸ್ವವೇ ಈ ಜ್ಞಾನದಲ್ಲಿದೆ. ತನ್ನ ಅಂತಃಶಕ್ತಿಯನ್ನು ಪೂರ್ತಿ ಅಳವಡಿಸಿಕೊಳ್ಳಬಲ್ಲ ಕಲಾಜಾಗೃತ ಕರ್ಮಕೌಶಲ್ಯ ಕಣವಿಯವರಷ್ಟು ಬೇರೆ ಯಾವ ಕವಿಯೂ ಇತ್ತೀಚೆಗೆ ಕಾಣಿಸಿಲ್ಲ. ಔದಾರ್ಯ ಔಚಿತ್ಯಗಳ ನಳಪಾಕ ಇವರ ಕವಿತಾ ವಿಧಾನದ ತೀರದ ಸೊಗಸು. ಇವರನ್ನು ಓದಿದಾಗ ೧೫-೨೦ ವರ್ಷಗಳ ಹಿಂದೆ ಆಂಗ್ಲ ಕಾವ್ಯಾಕಾಶದಲ್ಲಿ ಮೂಡಿದ ಆಕ್ಸಫರ್ಡ ಗುಂಪಿನ ನವ್ಯ ನಕ್ಷತ್ರಪುಂಜ ಕಣ್ಣು ಕಟ್ಟುತ್ತದೆ. ಅವರಂತೆಯೇ ಈ ಕವಿಗೂ ಒಂದು ಸಾಮಾಜಿಕ ಆದರ್ಶ (Social idealism) ಇದೆ. ಕೇವಲ ಮೂರ್ತಿಭಂಜಕ ವೃತ್ತಿಯಲ್ಲ. ಆದರೆ, ಅಂಥ ಉತ್ಕಟವೂ ನಿಕಟವೂ ಆದ ವೈಚಾರಿಕ ವಿಪ್ಲವದ ಕೆಂಡಗಳೊಳಗಿಂದ ಈ ಕವಿ ಹಾಯ್ದಿಲ್ಲ. ಆಡೆನ್, ಸ್ಪೆಂಡರ್, ಮೆಕ್‌ನೀಸ ಮುಂತಾದವರ ರಾಜಕೀಯ ಪ್ರಜ್ಞೆಯೂ ತೀವ್ರವಾಗಿತ್ತು, ತೀರ ಎಡ ಪಕ್ಷದ್ದಿತ್ತು. ಆ ಮಟ್ಟಿಗೆ ಈ ಕವಿಯು ಸ್ಥಗಿತ; ಸ್ಥಿಮಿತ. ಆದರೂ ಕಣವಿಯವರಲ್ಲಿ (ಮೆಕ್‌ನೀಸನಂತೆ?) ಲಘುವಾದ ಸುಟಿಯಾದ ಒಂದು ಶೈಲಿಯೂ ಇದೆ. ಪರಿಹಾಸ ರೂಪದಲ್ಲಿ ಸಾಮಾಜಿಕ ಡೊಂಕುಗಳ, ಸಾಮಾಜಿಕ ಮನುಷ್ಯನ ವಿಕೃತ ಮಾದರಿಗಳ ಉಪಹಾಸ ಮಾಡುವ ಉತ್ತಮ ಶಕ್ತಿಯಿದೆ. ಇದಕ್ಕೆ "ಅಪರಾವತಾರ" ಮತ್ತು "ಲಾಗ" ಕವನಗಳೇ ಸಾಕ್ಷಿ. "ಅಪರಾವತಾರ" ಓದುವಾಗ ಅಡಿಗರ "ನನ್ನ ಅವತಾರ"ದ ನೆನಪು ಬರುತ್ತದೆ. ಅಲ್ಲಿ "ನನ್ನ" ತನದಿಂದ ಬಂದ ನಾಟಕೀಯ ವಕ್ರತೆ ಇಲ್ಲಿ ಇಲ್ಲ. ಅಲ್ಲಿಯ ಅನುಪಾತ ದೃಷ್ಟಿ (Perspective) ಐತಿಹಾಸಿಕ, ಇಲ್ಲಿ ಅದು ಸಮಕಾಲಿಕ. "ಲಾಗ" ಯಾರಿಗೂ ಮೆಚ್ಚಿಗೆ ಆಗಬೇಕಾದ ಉಪರೋಧ ಕವನ. "ಕುತ್ತಿಗೆಯ ಹಗ್ಗವನ್ನು" ಜಗ್ಗಿದಂತೆ ಕುಣಿದು ಲಾಗ ಹಾಕಿ ಶರಣು ಹೊಡೆದು ಕಾಣಿಸುವ "ಬಡೇಮಿಯಾ" ಕೋತಿ ಇಂದಿನ ಆತ್ಮವಿಕ್ರಯಶೀಲ ಮನುಷ್ಯನ ಪ್ರತೀಕ. ಆದರೆ ಇದು ಪ್ರತೀಕಮಾತ್ರವಾಗುವಷ್ಟು ಸೂಕ್ಷ್ಮ ಸೂಚ್ಯತೆಯಿಂದ ರೂಪುಗೊಂಡಿಲ್ಲ. "ಸೇತು ಬಂಧವ ಬಿಟ್ಟು ಹಡಗಹತ್ತು" - ಎಂಥ ಧ್ವನಿಪೂರ್ಣವಾದ ಮಾರ್ಮಿಕ ಮಾತು! ಆದರೆ ಒಂದು ಮಾತು. ಲೋಕಪ್ರಿಯವಾದ ಎಲ್ಲ ಮಂಗಾಟಿಕೆಯ ಕತೆಗಳನ್ನೂ ಬಳಸಿಕೊಳ್ಳುವ ಹಟ ಇಲ್ಲಿ ಕವಿ ಇಟ್ಟುಕೊಂಡಂತೆ ಕಾಣುತ್ತದೆ. ಅವೆಲ್ಲ ನಿದರ್ಶನಗಳಲ್ಲಿ ಒಂದು ಒಳ ಹೊಂದಿಕೆಯ

ಅರ್ಥವಿಕಾಸದ ಕ್ರಮ ಮೂಡಿಲ್ಲ.

ವ್ಯಂಗ್ಯವೋ, ವಿನೋದವೋ ವೈಚಾರಿಕತೆಯೋ, ವರ್ಣನಾವಿಶೇಷವೊ - ಯಾವ ವಸ್ತು ವಿನ್ಯಾಸವೇ ಆಗಿರಲಿ ಯಾವ ಕವನದಲ್ಲಿಯೂ ಕವಿ ಸಹೃದಯನಿಗೆ ವಂಚನೆ ಮಾಡುವದಿಲ್ಲ. ತೃಪ್ತಿ ಪಡಿಸುವರೇ ಹೊರತು ಚಕಿತ, ಸ್ತಂಭಿತ ಮಾಡುವದಿಲ್ಲ. ತೀರ ಪಾರದರ್ಶಕವಲ್ಲವಾದರೂ ಇವರ ಕವನಬಿಂಬ ಅಷ್ಟು ಅಪಾರದರ್ಶಕವೂ ಅಲ್ಲ. ತುಸು ಚಿನ್ನಾಟವಾಡಿದ ಮೇಲೆ ಮರಿಗೆ ಉಣಿಸುವ ತಾಯಿಯಂತೆ ಇವರ ಕಾವ್ಯದ ಶಕ್ತಿ ಮತ್ತು ಶೈಲಿ.

ಈ ಸಂಗ್ರಹದ ತೀರ ಸಾಮಾಜಿಕ ಸಂದರ್ಭವುಳ್ಳ ಕವನಗಳೆಂದರೆ ಗುಣ ಕ್ರಮದಲ್ಲಿ **''ನಾಳಿನ ನವೋದಯ''** ಮತ್ತು **''ಜೀರ್ಣೋದ್ಧಾರ''**. ಮಾನವ್ಯದ ಸಂದರ್ಭವಿದ್ದವು **''ಯುಗಾದಿ'', ''ವಿಕಾರಿ'', ''ವಕ್ರರೇಖೆ''** ಮತ್ತು **''ಮಣ್ಣಿನ ಮೆರವಣಿಗೆ''. ''ಶಿಶುಕಂಡ ಕನಸು''** 'ಮಣ್ಣಿನ ಮೆರವಣಿಗೆ'ಗೆ ಒಂದು ರೀತಿ ಪೂರಕ.

"ಕೊನೆಯ ನಿಲ್ದಾಣ" ಉಭಯಾನ್ವಯಿ, ವ್ಯಕ್ತಿ-ಸಮಾಜ ಎರಡೂ ತುದಿಗೆ ಅದು ಸಮ್ಮುಖ. "ಅಪರಾವತಾರ" ಮತ್ತು "ಲಾಗ" ವಿಕೃತಿಯೇ ಪ್ರಕೃತಿಯಾದ ಇಂದಿನ ವಿಶಿಷ್ಟ ಸಾಮಾಜಿಕ ಮಾನವನ ಮಾದರಿಗಳನ್ನು ಪ್ರತಿನಿಧಿಸುತ್ತವೆ. ಚಂದ್ರ ತಾರೆಗಳಲ್ಲಿಯೂ ರೂಪಾಯಿ ನಾಲ್ಕಾಣೆಗಳನ್ನೇ ಕಾಣುವ, ಅಲ್ಲಿದ್ದ-ಇಲ್ಲಿದ್ದ ಸುಪ್ರಸಿದ್ಧ, ರೋಜಕಿರ್ದಿಯನ್ನು ವೇದದಷ್ಟೇ ಪೂಜ್ಯವೆಂದು "ಕೊಬ್ಬರಿಯ ಜತೆಗೆ ಅದರ ಕರಟವನ್ನೂ ತಿಂದುಬಿಡುವ" ವ್ಯವಹಾರಜ್ಞ, ಅರಸಿಕ ಸ್ವಾರ್ಥಶಿಖಾಮಣಿ, ಧೂರ್ತಶಿರೋಮಣಿ, ಗೋಮುಖವ್ಯಾಘ್ರ "ಅಪರಾವತಾರ" ದಲ್ಲಿ ಪೂರ್ಣಾವತಾರ ತಾಳಿದ್ದಾನೆ. ಮೂರನೆಯ ಮಹಾಯುದ್ಧ ಇವನ ಅಂತರಂಗದಲ್ಲಿಯೇ ಹೊಗೆಯಾಡುತ್ತಿದೆ ಎಂದು ಕವಿ ಸಾರುತ್ತಾನೆ. ಈ ಕವನದ ಕೊನೆಯನ್ನು ವಿರಾಡ್ರೂಪದ ಸ್ತೋತ್ರದ ಪಂಕ್ತಿಗಳಿಂದ ಮಾಡಿ ಕವಿ ವಕ್ರೋಕ್ತಿಯ ಅಲೌಕಿಕ ವೈಖರಿಯನ್ನು ಕಾಣಿಸಿದ್ದಾನೆ. ಈ ನಮ್ರ ವೃತ್ತಿಯ ನರ್ಮವಚನದ ಕವಿ ಇದಕ್ಕೂ ತೀಕ್ಷ್ಣ ವಾಗ್ಬಾಣಗಳನ್ನು ಕಾವ್ಯದ ಕಮಾನಿಗೆ ಹೂಡಲಾರ! ಇನ್ನು "ಇಸ್ತ್ರಿ ಮಾಡಿದ ಪ್ಯಾಂಟು ಕ್ರಾಪು ತಲೆ, ಬುಶ್ ಕೋಟು" ತೊಟ್ಟವ, "ಕಂಡ ಕಂಡವರೆದುರು ಹಲ್ಲು ಕಿರಿಯುವ". "ಕೆಲಸ ತೀರುವವರೆಗು ಮುಜುರೆ ಮಾಡುವ". "ಲಾಗ ಹೊಡೆದರೆ ಬೇರೆ ತ್ಯಾಗ ಬೇಡ"ವೆಂಬ ತತ್ವ ನಂಬಿದವ, ತನ್ನ ಡೋಲು ಬಡಿಸುವದಕ್ಕೆ ಮರೆಯದವ ಬೇರೆ ಕೋತಿಯಲ್ಲ. ಆಧುನಿಕ ಹರಿಶ್ಚಂದ್ರ-ಅಸತ್ಯಕ್ಕಾಗಿ ಹೆಂಡತಿಯನ್ನೂ ತನ್ನನ್ನೂ ಮಾರಿಕೊಳ್ಳಲು ಮಾರ್ಕೆಟ್ಟಿನಲ್ಲಿ ನಿಂತು ಸವಾಲು ಕರೆಯುವ ಸಾಮಾಜಿಕ ಮನುಷ್ಯ!

ಇವೆಲ್ಲ ಕವನ ಕೃತಿಗಳಲ್ಲಿ ತಾರತಮ್ಯದ ವಿವೇಕ ಒಂದು ದುಡುಕು. ಏಕೆಂದರೆ, ರಸಪ್ರಪಂಚದಲ್ಲಿ ಅಭಿರುಚಿ, ಅದರ ಹಿಂದಿನ ಅಭ್ಯಾಸ ಬಲ ಇವೇ ಅಳತೆಗೋಲು; ಆಯ್ಕೆಯ ಒರೆಗಲ್ಲು. ಸಂಮಿಶ್ರ ಪ್ರತಿಮೆಗಳ ಬುದ್ಧಿಪೂರ್ವಕವಾದ ಕಲಬೆರಕೆ ಮಾಡಿ, ಕಟ್ಟಿದ ಸಂಕೀರ್ಣ ಪ್ರಭಾವಪುಂಜ ಒಂದೊಂದು ನವ್ಯ ಕವನ. ಆ ತಂತ್ರ ಅನುಸರಿಸಿದ ಮಟ್ಟಿಗೆ ಈ ಕವನಗಳಲ್ಲಿ ಕವಿಯ ಹೃದ್ಗತದ ಅಭಿವ್ಯಕ್ತಿಯ ಪರೆ ಪದರುಗಳು ಓದುಗನ ನೋಟದ ನಿಟ್ಟು ನಿಲುಮೆ ನೇರ ಬೇರೆ ಬೇರೆಯಾದಷ್ಟೂ ಬೆರಗಿನದಾಗಿ ಕಾಣಿಸಬಹುದು. ಆದರೂ ಹಾಗೆ ವಿಂಗಡವಾಗಿ

ಆಸ್ವಾದಿಸುವ ಮೊದಲು ಸಾಕಲ್ಯವಾಗಿ ಕೆಲವು ಸಂಗತಿಗಳನ್ನು ಗಮನಿಸಬೇಕು.

"ನಾಳಿನ ನವೋದಯ" "ಜೀರ್ಣೋದ್ಧಾರ" "ಮಣ್ಣಿನ ಮೆರವಣಿಗೆ" ಈ ಕವನಗಳ ಸಾಮಾಜಿಕ ಇಲ್ಲವೆ ಐತಿಹಾಸಿಕ ಸಂದರ್ಭ ಓದುಗನ ಸತ್ತ್ವ ಪರೀಕ್ಷೆ ಮಾಡುವಷ್ಟು ಭಾರವಾಗಿಲ್ಲ. ಇಲ್ಲಿಯ ಆಶಯದ ಮೇಲೆ ಬೆಳಕು ಬೀರಲು ಪ್ರೊ. ಟಾಯನಬಿಯನ್ನು ಮೆಲಕು ಹಾಕಬೇಕಾಗಿಲ್ಲ. ನವ್ಯ ಕಾವ್ಯ 'ರೋಮ್ಯಾಂಟಿಕ್' ಮಾದರಿಯಂತೆ 'ಹ್ಲಾದೈಕಮಯ' ವಾಗಿರದಿದ್ದರೂ "ಅನನ್ಯಪರತಂತ್ರ"ವಾಗಿರಬೇಕು. ಹೊರಗಿನ ಉಪಾಧಿಗಳನ್ನು ಅವಲಂಬಿಸಿ ಅದರ ಅರ್ಥವ್ಯಾಪ್ತಿ ಇಲ್ಲವೇ ಸಮಸ್ಯಾ ಪೂರ್ತಿ ಇರಬಾರದು. ಅದು ಆಸ್ವಾದನೆಯ ಮಟ್ಟಿಗೆ ಸ್ವಯಂಪೂರ್ಣವಿರಬೇಕು. ಏನೆಲ್ಲ ಓದಿಕೊಂಡೇ ತಜ್ಞತೆಯ ತರಬೇತಿ ಪಡೆದೇ ನವ್ಯಕಾವ್ಯ ಕೈಗೆತ್ತಿಕೊಳ್ಳಬೇಕಾದರೆ, ಅದಕ್ಕೆ ಓದುಗರೇ ಸಿಗಲಿಕ್ಕಿಲ್ಲ. ಅಂಥ ಕವಿಗೆ ಸಮಾನಧರ್ಮ ಅಂಥ ಇನ್ನೊಬ್ಬ ಕವಿಯೇ. ಆದ್ದರಿಂದಲೇ ಏನೋ, ಉತ್ತಮ ತರಗತಿಯ ನವ್ಯಕವನ ಕೇವಲ ವಿದ್ವತ್ಪರಿತೋಷಕ್ಕೇ ಮೀಸಲಾದಂತೆ ಇದೆ. ಆದರೆ ಕಣವಿಯವರು ನವ್ಯವನ್ನು ನುಣ್ಣಗೆ ಮಾಡಿ ಪಚನಕ್ಕೆ ಹಗುರಾಗಿರಿಸಿ ಓದುಗರಿಗೆ ಉಪಕಾರ ಮಾಡಿದ್ದಾರೆನ್ನಬೇಕು.

ಈ ಕವನಗಳಲ್ಲಿ ಧರ್ಮಪ್ರವರ್ತಕನ ಕಾವಿಲ್ಲ. ತನ್ನ ಮತ ಮಾರುವ ವರ್ತಕನ ಕಸಬೂ ಇಲ್ಲ. ಹೊಸ ಧರ್ಮಾಂತರದ (Conversion) ಕೆಚ್ಚೂ ಇಲ್ಲ. ಇಲ್ಲಿ ದಯೆಗಿಂತ ದೂರದ ಧರ್ಮವಿಲ್ಲ. ಇಲ್ಲಿಯ ಚಿಂತನಶೀಲತೆಯು ಅಚಿಂತ್ಯದ ಚಿತ್ಸ್ವರೂಪವನ್ನು ಧ್ಯಾನಿಸುವದಿಲ್ಲ. ರೂಢ ಧರ್ಮದ ಸಾಂಸ್ಕೃತಿಕ ಸೌಂದರ್ಯವೂ ಅದರಲ್ಲಿ ಉಳಿದಿರುವ ಅಜಾಗ್ರತ ಕಾವ್ಯವೂ ಕವಿಯ ಪ್ರತಿಮಾಸೃಷ್ಟಿಯ ಸಾಮಾಗ್ರಿ ಆಗಿದೆ. ಇಲ್ಲಿ ಅನುಭೂತಿಗಿಂತ ಸಹಾನುಭೂತಿಯೇ ಕವಿಯ ಚಿತ್ತಕ್ಕೆ ಉದ್ದೀಪನೆಯಾಗಿದೆ :

"ಗುಂಪಿನಲ್ಲೂ ನೀನು ಮಾತ್ರ ಏಕಾಕಿ"

* * *

"ಇದ್ದುದನ್ನು ಹೇಳಿದರೆ ನಂಬಬಹುದೆ?"

* * *

"ಬದಿಯಲ್ಲಿ ಬೆಳೆದು ನಿಂತಿದೆ ಸ್ವಾಮಿ, ಸನಾತನ ಅಶ್ವತ್ಥ ವೃಕ್ಷ;
ಸುತ್ತು ಮುತ್ತೂ ಹಸಿರು ಪೈರು ಬೆಳೆದಂತಿಲ್ಲ -
ಅಷ್ಟು ವರ್ತುಲ ಜಾಗ ಇಂದಿಗೂ ರೂಕ್ಷ."

- "ವಿಕಾರಿ"ಯಲ್ಲಿ ಕಪ್ಪೆ ವಟಗುಟ್ಟಿದ ಸಂದೇಶವೂ ಆಧುನಿಕ "ಮಂಡೂಕೋಪನಿಷತ್ತು!"

- "ಮಣ್ಣಿನ ಮೆರವಣಿಗೆ"ಯಲ್ಲಿ ಇರುವ ೨ನೇ ಪರಿಚ್ಛೇದದೊಳಗಿನ ಶಿಶು ಮನಸ್ಸಿನ ವಿಕಾಸ, ೩ನೇ ಪರಿಚ್ಛೇದದಲ್ಲಿ ಪ್ರತೀಕಾತ್ಮಕವಾಗಿ ಬಂದ ಯುದ್ಧ ಕಾಲದ "ಬ್ಲಾಕ್‌ಔಟ" 'ಎಲರ್ಟ'ಗಳ ಚಿತ್ರ ಜೀವನದ ಸಂಭ್ರಮವನ್ನು ಚೆನ್ನಾಗಿ ಧ್ವನಿಸುತ್ತದೆ.

- "ಜೀರ್ಣೋದ್ಧಾರ"ದ ೨ನೇ ಪರಿಚ್ಛೇದದಲ್ಲಿ ಬಣ್ಣಿಸಿದ, ಮಹಾಸಾಗರದಲ್ಲಿ

ಇದ್ದಕ್ಕಿದ್ದಂತೆ ಹೊಯ್ದಾಡಹತ್ತಿದ, ಹಡಗದ ಲಂಗರು ಕಿತ್ತು ನೀರಿನ ಆಳಕ್ಕೆ ಇಳಿಯುವ ಆತ್ಮಘಾತಕ ಆಸೆ ಆಧುನಿಕ ವಿಶ್ವದ ವೈಜ್ಞಾನಿಕ ಪ್ರಳಯಬುದ್ಧಿಯ ಚಿತ್ರವನ್ನು ಮಾರ್ಮಿಕವಾಗಿ ರೂಪಿಸಿದೆ. (ಸ್ಪುಟ್ನಿಕ್ ಯುಗದಲ್ಲಿ ಪ್ರಕಟವಾಗುತ್ತಿದ್ದರೂ ಈ ಕವನ ತುಸು ಹಿಂದಿನದು?)

- "ನಾಳಿನ ನವೋದಯ"ದಲ್ಲಿ ಆಂಡಯ್ಯ ಕವಿಯ ಮತ್ತು ಆದಿಕವಿ ಪಂಪನ ಅಮರ ಪಂಕ್ತಿಗಳನ್ನು ಉಪಯೋಗಿಸಿದ ಔಚಿತ್ಯ ವಿವೇಕ; "ಅಜ್ಜಯ್ಯನ ಅಭ್ಯಂಜನ" ಎಂಬ ಕೆ.ವಿ. ಪುಟ್ಟಪ್ಪನವರ ಒಂದು ಪ್ರಬಂಧದ ಶೀರ್ಷಿಕೆ ಇಲ್ಲಿ ಬಾಪೂಜಿಯ ಉಲ್ಲೇಖನಕ್ಕೆ ಉಪಾಧಿಯಾಗಿ ಧನ್ಯವಾಗಿದೆ.

-ಬಾಳಿನ ಆಳವಾದ ತಿಳಿವಿನ ಇನ್ನಿಷ್ಟು ಪಂಕ್ತಿಗಳನ್ನು ನೋಡಿರಿ.

"ಬಾನ ಹರುಷಕೆ ನೆಲವೆ ತಾಯಿ ಬೇರು."

* * *

"ವರುಷಕೊಂದಾದರೂ ಬೇಕು ನಮಗೆ ಹೊಸ ಮಾದರಿ."

* * *

"ಕತ್ತಲೆಯ ಹುತ್ತ ಬೆಳೆದಿದೆ ಎತ್ತ ಸರಿದರೂ
ಬೆಳಕಿನಿಂದಲೆ ಅದರ ಉಪಜೀವನ."

* * *

"ನುಶಿ ಮುಟ್ಟಿದರೆ ಅದರ ಗತಿಯೇನು?-
ಮೊದಲೆ ರೇಶಿಮೆಯ ಬಟ್ಟೆ!"

* * *

"ತಾಳ್ಮೆಯ ಮೇಲೆ ಕರಹೇರಿ ಕರಕರೆ
ಪಡುವ ರೇಡಿಯೋ ಹಾಡು."

ಇವೆಲ್ಲ ಕವನಗಳ ಇನ್ನೊಂದು ಸಾಮಾನ್ಯ ವಿಶೇಷವೇನೆಂದರೆ, ಹೆಚ್ಚು ಕಡಿಮೆಯಾಗದ, ತಪ್ಪು ತಡೆಯಿಲ್ಲದ ಪದಪವಣಿಕೆಯ ಶಕ್ತಿ. (unvarying energy of diction) ಶುಷ್ಕ ಶಬ್ದ ಸಂಭಾರವೇ ಇಲ್ಲ. ತೀರ ಕಡಿಮೆ ಮಾತಿನ ಕಾರ್ಪಣ್ಯವೂ ಇಲ್ಲ. ಪ್ರಾಸಗಳ ಹಿತಮಿತವಾದ ಪೋಣಿಕೆಯು ಶಬ್ದಾರ್ಥದ ಔಚಿತ್ಯದ ಸಮರ್ಪಕ ಅಲಂಕಾರವಾಗಿದೆ. ಈ ಕವಿ ಕೇವಲ ನಾದಲೋಲನಲ್ಲ. "ಮಣ್ಣಿನ ಮೆರವಣಿಗೆ"ಯೊಳಗಿನ ಮೊದಲ ಭಾಗದ ಎರಡು ಪಂಕ್ತಿಗಳಲ್ಲಿ ಬಂದ 'ತಣ್ಣನೆ-ನುಣ್ಣನೆ' ಇವುಗಳ ಸಾಮಂಜಸ್ಯ, "ಶಿಶುಕಂಡ ಕನಸಿ"ನೊಳಗೆ 'ಕಣ್ಣಗೊಂಬೆಗೆ ಮೂಡಿ, ಮನಸಿನಲಿ ಅಚ್ಚಾಗಿ, ಕನಸಿನಲಿ ಬಿಚ್ಚುವವು ರೀಲು ರೀಲು' - ಎಂಬಲ್ಲಿ ಅಚ್ಚು-ಬಿಚ್ಚುಗಳ ಸಾರ್ಥಕತೆಗೆ ರೀಲು ರೀಲಿನ ನಾದದ ಆವರ್ತ ಸಾಧಿಸಿದ ಸಂವಾದ; ಅದೇ ರೀತಿ "ಅಪರಾವತಾರ"ದಲ್ಲಿಯ 'ಮುದ್ದು-ಹದ್ದು' 'ನಾದ ಪ್ರಮಾದ'; ಜೀರ್ಣೋದ್ಧಾರ"ದಲ್ಲಿಯ

'ವಿಜಯ ಸ್ತಂಭ-ಶುದ್ಧ ಹುಂಬ!' 'ತೆಂಗು-ಹಂಗು', "ವಿಕಾರಿ"ಯಲ್ಲಿ 'ಕೀಲ-ಚೀಲ' ಹೀಗೆ ಅದೆಷ್ಟೊ ಉದಾಹರಣೆ ಕೊಡಬಹುದು. ಇಲ್ಲಿ ಅರ್ಥಕ್ಕೆ ನಾದ, ಆಶಯಕ್ಕೆ ಅಲಂಕಾರ ವಿಧೇಯವಾಗಿ ವರ್ತಿಸಿದೆ, ನರ್ತಿಸಿದೆ. ಒಂದೊಂದು ಕವನವೂ ಇಂಥ ಪ್ರಾಸಾನುಪ್ರಾಸ ಕುಶಲ ಸಂಯೋಜನೆಯ ಪ್ರಾಸಾದ.

೩

ಹೀಗೆ ಧ್ವನಿತವಾಗುವ ಪ್ರತಿ ಕವನದ ಆಶಯವೇನು? ಸ್ವಲ್ಪದರಲ್ಲಿ ಪರಾಮರ್ಶಿಸೋಣವೇ?

"ಮಣ್ಣಿನ ಮೆರವಣಿಗೆ" ಬ್ರಹ್ಮಾಂಡದ ಒಡಲಲ್ಲಿ, ಭೂಮಿತಾಯ ಮಡಿಲಲ್ಲಿ ವಿಕಾಸಗೊಂಡ ಮಾನವ ಮನಸ್ಸಿನ ಟೆಲಿಸ್ಕೋಪಿಕ್ ದರ್ಶನ ಕೊಡುತ್ತದೆ. ೧ನೇ ಪರಿಚ್ಛೇದ ಹೊರವಿಶ್ವದ ಚಿತ್ರ. ೨ನೇ ಪರಿಚ್ಛೇದದಿಂದ ಭೂಮಿಯಲ್ಲಿ ಪ್ರಾಣಮಯ ಮನೋಮಯ ಕೋಶಗಳು ಆನಂದಮಯವಾಗಿ ಕಣ್ಣು ಬಿಡುತ್ತವೆ. ಶೈಶವದ ಮುಗ್ಧ ಅವಸ್ಥೆಯ ಕೌತುಕ ಇಲ್ಲಿ ರೂಪುಗೊಂಡಿದೆ. 'ಮಣ್ಣಿನೆದೆಯೊಳು ಸ್ನೇಹವಂಕುರಿಸಿ ಬೆಳೆದ' ಪರಿ ಇಲ್ಲಿ ಹೃದ್ಯವಾಗಿ ಬಂದಿದೆ. ಸಾಲೆ ಕೋಣೆಯಲ್ಲಿ ಮಗ್ಗಿ ಒಪ್ಪಿಸುವಾಗ ಕಿಟಕಿಯಾಚೆಯ ಪಾರಿವಾಳ ಭಾವ ಮೇಳ ಕರೆಯುತ್ತದೆ, 'ಮೇಜ ಮೇಲೆಯೆ ಇತ್ತು ಪೃಥ್ವಿಗೋಳ'. ಆದರೆ ದೂರದ ಬೆಟ್ಟಬಯಲುಗಳಲ್ಲಿ ಕಣ್ಣೆದುರು ಸಾಗಿತ್ತು ಮಣ್ಣಿನ ಮೆರವಣಿಗೆ! ೩ನೇ ಪರಿಚ್ಛೇದದಲ್ಲಿ ಬಾಳಿನ ಪೌಗಂಡ ಯೌವನಗಳ ಹೊಂಗನಸು ಹೊರ ಬದುಕಿನ ಕರ್ಕಶಕ್ಕೆ ಕ್ರಮಶಃ ಹುಡಿಯಾಗುತ್ತದೆ. 'ಒಟ್ಟಿನ ಮೇಲೆ ಪರಿಸ್ಥಿತಿ ತುಂಬ ಶೋಚನೀಯ' ಆದರೂ ಕವನದ ಕೊನೆ ಉನ್ಮತ್ತ ಆಶಾವಾದದಲ್ಲಿ : 'ಜನನದಲಿ ಮರಣದಲಿ ತುಂಬಿ ಜಯಗಾನ', 'ಸಾಗಲಿ ಮುಂದೆ ದುಂದು ಮೆರವಣಿಗೆ', ಕವಿ ಜೀವನವನ್ನು ನಿರಾಕರಿಸುವ ನಿವೃತ್ತ ಜೀವಿಯಲ್ಲ.

"ಯುಗಾದಿ" "ವಿಕಾರಿ" ಇವು ನೈಮಿತ್ತಿಕವಾಗಿ ಮೂಡಿ ಬಂದರೂ ನಿತ್ಯ ತಥ್ಯಗಳನ್ನು ಬಿಟ್ಟಿಲ್ಲ. "ಯುಗಾದಿ"ಗಿಂತಲೂ "ವಿಕಾರಿ" ಹೆಚ್ಚು ಪ್ರಭಾವಶಾಲಿ. "ಯುಗಾದಿ" ಹೊಸವರ್ಷವೆಂಬ ಅನಾದಿ ವೃದ್ಧ ಪುರುಷನ ಸ್ವಾಗತದಿಂದ ಆರಂಭವಾಗುತ್ತದೆ. ಹೋದವರ್ಷ ಕೊಂಡದ್ದು ಬಾಳದ ಬೇರ ಬೀಸಣಿಗೆ. ಆ ಬೇರು ಬಾಳಲೇ ಇಲ್ಲ. ರಸವಾರಿದ ಬದುಕಿನ ಶುಷ್ಕಸ್ಮೃತಿಗಳಷ್ಟೇ ಮನಸ್ಸಿನಲ್ಲಿ ಗಾಳಿ ಎಬ್ಬಿಸುವವು. ಗತಗೋಷ್ಠಿಗಳ ಗಂಧ ಒಂದೇ ಬಾಳದ ಬೇರಿನಂತೆ ವಾತಾವರಣವನ್ನು ತುಂಬಿ ನಿಲ್ಲುವದು. ಮುಂದಿನ ಪರಿಚ್ಛೇದದಲ್ಲಿ ಸುಂದರವಾದ ಋತುರಾಜನ ರಂಗ ಪ್ರವೇಶವನ್ನು ಕೊಂಡಾಡಲಾಗಿದೆ. ಗಿಡ, ಮರಗಳನ್ನು ಮನಸಾರೆ ಪ್ರೀತಿಸುವ ಈ ಕವಿ ಹೊಸ ಋತುವಿನೊಡನೆ ಮೊದಲ ಕೂಟದ ಬೇಟವನ್ನು ಮನೋಜ್ಞವಾಗಿ ಚಿತ್ರಿಸಿದ್ದಾನೆ. ಬರುವ ವರ್ಷಕ್ಕೆಲ್ಲ ಬಲು ಹುಷಾರಿ. ಅವು ಬರುವ ದಾರಿಯಲ್ಲಿ ಸದಾ 'ರಿಪೇರಿ' ನಡೆಯುತ್ತಿದೆ. ಏಕೆಂದರೆ, ಕನಿಷ್ಠ ವರ್ಷಕ್ಕೊಂದಾದರೂ ನಮಗೆ ಹೊಸ ಮಾದರಿ ಬೇಕು!

ಕೊನೆಯ ಪರಿಚ್ಛೇದ ಹಲವು ವಿಸಂವಾದಿ ಕಲ್ಪನೆ ಭಾವನೆಗಳ ಮೇಳ ಗೀತದಂತೆ ಇದೆ. ಅಲ್ಲಿ ಬಂದ ಪ್ರತಿಮೆಗಳ ವಿಸಂಗತಿಯೇ ಇದಕ್ಕೆ ನಿದರ್ಶನ. ಬೋಧಿವೃಕ್ಷ, ಪ್ರಣತಿ, ಸನ್ನದ್ಧವಾದ

ರಥ-ಕರುಣೆ, ಶಾಂತಿ, ಕಲ್ಯಾಣ, ಯುದ್ಧರಂಗ! ಇನ್ನು ಬಾಳ ಕುರುಕ್ಷೇತ್ರದಲ್ಲಿ ಅರ್ಜುನನೇ ಕೃಷ್ಣನಾಗಬೇಕು. ರಥಿಯೇ ಸಾರಥಿ. ಪ್ರತಿಯೊಬ್ಬನದೂ ಸರತಿ!

"ವಿಕಾರಿ"ಯೂ ಒಂದು ಯುಗಾದಿಯದೇ ಹಾಡು. ಕವನದ ಆರಂಭ ತುಂಬ ಕಲಾತ್ಮಕವಿದೆ. ವಿಕಾರಿಯ ಹೊಸ ಆಗಸ ಬಿಕೋ ಎನ್ನುತ್ತಿದೆ. ಹಾಳು ನೀಲಿ ಸುರಿಯುತ್ತ, ಬದುಕಿನ ಅಸಹ್ಯತೆ, ಅಸಹಾಯಕತೆ, ನೀರಸತೆ ಬಲು ಬಲಿಷ್ಠವಾಗಿ ರೂಪಿತವಾಗಿದೆ. ಬದುಕು ವಕ್ರಹಳಿಗುಂಟ ಹೊಟ್ಟೆ ಹೊಸೆಯುತ್ತ ಹೊರಟುನಿಂತಿದ್ದ (!) - ರೈಲು-ಪ್ರಗತಿ ಇಲ್ಲದ ಗತಿ, ಮೇಲೆ ಚಕ್ರಾಕಾರ ಸುತ್ತುವ ರಣಹದ್ದು. ದಸ ದಸ ತೇಕುವ ನಾಯಿ-ಬಡಕಲು ಗಿಡದ ಬುಡದಲ್ಲಿ. ವಟಗುಟ್ಟುವ ಕಪ್ಪೆ ಅದು ವಟಗುಡುವ ವಾರ್ತೆಯೇನು? ಬಾಳಿನ ಗಾಣಕ್ಕೆ ಪ್ರಾಣಹೂಡಿದೆ. ಕೀಲಿ ಜಡಿದ ಗುದಾಮುಗಳಲ್ಲಿ ಖಾಲಿಚೀಲ! ಜನದ ನೀತಿ ಮತ್ತೆ ಎಂತಹದು? 'ತುಂಬಿ ಬೆಳೆದ ಹೊಲ ನೋಡಿಕೊಂಡು ದನ ತುಡುಗಿಗೆ ಬಿಟ್ಟಹರು!' ಕಟ್ಟಡದ ಕಲ್ಲೂ ತಾವು ಇಟ್ಟಲ್ಲಿ ಇರಲಾರೆವೆಂದು ಸಿಡಿದುನಿಂತಿವೆ! ಹೀಗಿದೆ ನಮ್ಮ ಸಮಾಜದ ಸಂಘಟನೆಯ ಅಣುವಿಸರಣ! ಸೊಟ್ಟ ನಾಣ್ಯವೂ ನಮ್ಮನ್ನು ದಿಟ್ಟಿಸಿ ನೋಡುತ್ತಿದೆ? - ದುಡ್ಡಿನ ದೊಡ್ಡಸ್ತಿಕೆ. ಬಿಳಿಯ ಬಟ್ಟೆಯ ಒಳಗೇ ತೊನ್ನು ಬೆಳೆಯುತ್ತಿದೆ-ಡಂಭಾಚಾರದ ನಾಗರಿಕತೆ. ಆದರೆ ವಿಕಾರಿ ವಿಳಂಬಿಯ ಬೆನ್ನಿಗೆ ಒಂದು ಮನ್ವಂತರ ತರಲೆಂದು ಕವಿಯ ಹಾರೈಕೆ. 'ವಿಕಾರಿ' ಎಂಬ ಹೆಸರು ನಮಗೇ ಸರಿ. ಇಲ್ಲಿಯ ಬೋಧ-ಸಂದೇಶ ಸರಳವಾಗಿದೆ, ಸುಗಮವಾಗಿದೆ. ಆ ಮಟ್ಟಿಗೆ ನವ್ಯತಂತ್ರದ ಹೆಡಸುಗಟ್ಟಿಲ್ಲ.

**"ಶಿಶುಕಂಡ ಕನಸು"** ಆತ್ಮವೃತ್ತಪರ. "ಮಣ್ಣಿನ ಮೆರವಣಿಗೆ"ಗೆ ಇದು ಪರಿಪೂರಕ. ಅದರ ನಂತರವೇ ಇದು ಅಚ್ಚಾಗಬೇಕಾಗಿತ್ತು. ಕವಿ ಇನ್ನೂ "ಬೆಳೆದ ಮಗು." ಇದೇ ಈ ಕವನದ ಸೂತ್ರ ವಾಕ್ಯ. ಚೆನ್ನವೀರರ ರಸಪಾಕ ಸಿದ್ಧಿಯ ಕೈ ಗುಣ ಕಂಡು ಬರುವ ಪಂಕ್ತಿಗಳು ಇಲ್ಲಿ ಸಿಗುತ್ತವೆ :

ಹೂವಿಗೆರಗಿದ ತುಂಬಿ, ಸಿಂಪಿಗೊರಗಿದ ಮುತ್ತು
ತಂಪುಗಾಳಿಗೆ ಬಿರಿದ ಸಂಪಿಗೆಯ ಮೊಗ್ಗು,
ತೆಂಗಿನೊಳಗಿನ ತಿಳಲು, ಗಾನದಿಂಪಿನ ಹೊಳಲು
ಮನಸಿನೊಳಗಿನ ಕನಸು ಹೀಗೆ ಬೆಳೆದು.

* * *

ನೆರಳ ನೇವರಿಸುತ್ತ ಬೆಳಕು ಬೆರಳಾಡಿಸಿತು
ಬೆಳುದಿಂಗಳಿನ ಹಾಲು ಖೀರು ಕುಡಿಸಿ.

* * *

ಚಂದ್ರ ದೋಣಿಯನೇರಿ ಹುಟ್ಟು ಹಾಕು.

ರಸ ಸಂಪ್ರದಾಯದ ರಿಂಗಣದಿಂದ ನವ್ಯಮಾರ್ಗದ ಕಾಲ್ನಡಿಗೆ ಬಂದ ಕವಿಯ ಮನೋವಿಕಾಸಕ್ಕೆ ಅನುಗುಣವಾಗಿ ಈ ಕವನ ಆರಂಭದಲ್ಲಿ ತುಂಬ ನಾದಲೀಲೆಯ ಲಾಲಿತ್ಯದಿಂದ ಮುಂದೆ ನವ್ಯ ತಂತ್ರದ ವಸ್ತುವಿನ್ಯಾಸಕ್ಕೆ ಮಾರ್ಪಟ್ಟಿದೆ.

ಶೈಶವದ ಲಾಲಿಯೊಳನಿಂತ ಬಯಲೆಲ್ಲವೂ ಒಂದೆ ಬೆಟ್ಟವಾಗುತ್ತ ನಿಂತು ಪ್ರಪಂಚ ಬೆಳೆಯಿತು. ಬಾಲ್ಯವೆಲ್ಲ ಕೌತುಕ ರಸದ ಕಾರಂಜಿಯಾಗಿ ಪುಟಿಯಿತು. ಆ ಕಣ್ಣಿಗೆ ಇರುವೆಗಳ ಸಾಲು ಸಾಲುದುರ್ಗವಲ್ಲ; 'ಸಕ್ಕರೆಯವಾಗೀನು ಸಾಗಿಸುವ ನುಣ್ಣಗಿನ ಸಣ್ಣ ಲೈನುದಾರಿ!' ಬಾಲ್ಯಕ್ಕೂ, ಸಕ್ಕರೆಯ ಕಣವೇ ಹಿಗ್ಗಿನ ಹೊರೆಯಾಗಿ ಭಾವಿಸಿದ ಇರುವೆಗೂ ಎಂಥ ಸಾಮ್ಯ! ೩ನೇ ಪರಿಚ್ಛೇದದಲ್ಲಿ ಕವಿ ಬೆಳೆದು ಪ್ರೌಢನಾದ. ಆದರೂ ತನ್ನ ಮಕ್ಕಳಲ್ಲಿ, ತಾನು ಕಳಕೊಂಡ ಬಾಲ್ಯದ ಚಂದ್ರಲೋಕವನ್ನು ಮತ್ತೆ ಪಡೆದ. ಇಂದಿನ ಇರುಳು ಎಳೆಯ ಕನಸುಗಳನ್ನೆ ಮತ್ತೆ ಪಡೆದಂತೆ. ಪ್ರೌಢ ನಾಗರಿಕ ಜೀವನ ಬೆಳಕನ್ನೆ ಬಿಗಿದು ಹಿಡಿದಂತೆ. ತಾಳ್ಮೆಯ ಮೇಲೆ ಕರ ಹೇರಿದ ಕರಕರೆ. ಮನೆಗೊಂದು ಹೂದೋಟ, ಎಲ್ಲಿ? ನಗರ ಸಭೆಯ ಉಪವನದ ಬೆಂಚಿನ ಮೇಲೆ ಹುರಿಗಡಲೆ, ಸೇಂಗಾ, ಪೆಪ್ಪರಮೆಂಟು (ಆಣೆಗೆ ಎಂಟು!). ಬದುಕಿನ ವಿಷಯ 'ನಾಳೆನೋಡಿದರಾಯ್ತು ಪತ್ರಿಕೆಯಲ್ಲಿ ಯಾಕ್ರಿ?' ನೇರವಾದ ಬಾಳಿನ ಸಂಪರ್ಕ ಯಾರಿಗಿದೆ? ಯಾಕೆ ಬೇಕಾಗಿದೆ? 'ರಾಜ ಮಾರ್ಗದ ರಿಪೇರಿ'ಯ ಪ್ರತಿಮೆ ಮತ್ತೆ ಬಂದಿದೆ.....

ಮತ್ತದೇss ಬೆಳಗು. ಇದು ಸೃಷ್ಟಿಯ ಔದಾರ್ಯ ಸೌಂದರ್ಯಗಳ ದಿವ್ಯ ಸಂದರ್ಭದಲ್ಲಿಯೂ ನಾಗರಿಕನಾಗಿ ಮಾನವ್ಯವನ್ನು ಕಳೆದುಕೊಂಡ ಆಧುನಿಕ ವ್ಯಕ್ತಿಯ ವರ್ತಮಾನ ಜೀವನದ ಮೇಲೆ ಕವಿ ಬರೆದ ವಾರ್ತಿಕೆ.

''ವಕ್ರರೇಖೆ''ಯ ಕಲ್ಪನಾಚಾತುರ್ಯ ತುಂಬ ಪ್ರಶಂಸನೀಯ. ಬಾಳ ಬದುಕೆಲ್ಲ ಒಂದಲ್ಲ ಒಂದು ರೀತಿ ಸೊಟ್ಟ, ಡೊಂಕು. ನಿಯತಿಯ ಈ ತಿರುಪು, ಈ ತಿರುವು-ಮುರುವು ಗಾಳಿಪಟದಂತೆ ಕೊಸರಿಕೊಂಡು ಏಳುವ ಬಾಳಸೂತ್ರದ ಈ ರೇಖಾಗತಿ ಇಲ್ಲಿ ಅಪೂರ್ವ ಪರಿಣಾಮಕಾರಿಯಾಗಿದೆ. ಇಂಥ ಕವನದ ಪ್ರೇರಣೆ ಭಾವೋದ್ರೇಕವಲ್ಲ, ಜೀವನವನ್ನು ನೇರವಾಗಿ, ಇಡಿಯಾಗಿ ನೋಡಬಲ್ಲ ತಟಸ್ಥ ವೃತ್ತಿ. ಪ್ರತಿಪದ್ಯದ ಪ್ರತಿಮಾ ಮಾಲೆ ಒಟ್ಟು ಕವನವನ್ನು ಒಂದು ಚಿತ್ರಶಾಲೆಯಾಗಿಸಿದೆ. ನಗರಮಧ್ಯದಿಂದ ಶೂನ್ಯಮಂಡಲಕ್ಕೇರಿ ಮತ್ತೆ ಮನೆಯ ಬಾಗಿಲಿನಲ್ಲಿ ಈ ಚಿತ್ರಮಾಲೆ ಮುಗಿಯುತ್ತದೆ. ಇಲ್ಲಿಯ ಈ ವಾಕ್ಯಗಳನ್ನು ಮೆಲುಕು ಹಾಕಿರಿ :

"ಓಣಿ ಓಣಿಯ ಸುತ್ತಿ ಸಂದಿಗೊಂದಿಗೆ ಹಾಯ್ದು
ಇದ್ದಲ್ಲಿಯೇ ಇಹುದು ಬೀದಿನಾಯಿ."

* * *

"ಮಳೆಗಾಲ ಬೇಸಿಗೆಯ ಹರೆಯ ಮುಪ್ಪಿನ ತಿರುವು-
ತಳದ ಒರತೆಗೆ ನೂರು ಸೆಲೆಯ ಸ್ನೆಹ."

* * *

"ನಿಂತ ನೀರೆಲ್ಲವೂ ತಿಳಿದು ತಳ ಕಂಡಾಗ
ದುಷ್ಯಂತನಿಗೆ ಬೇರೆ ಅರಿವು ಮರೆವು."

* * *

"ಜೀರ್ಣೋದ್ಧಾರ" "ನಾಳಿನ ನವೋದಯ"ಗಳು ಸಾಮಾಜಿಕ ಉತ್ಥಾಪನೆಯ ಪ್ರತಿಬಿಂಬಗಳು. ಅವೆರಡರಲ್ಲಿ "ಜೀರ್ಣೋದ್ಧಾರ" ಹೆಚ್ಚು ವ್ಯಾಪಕ. ಅದು ಬರಿ ಭಾರತದ ಭಾಗ್ಯೋದಯದ ನಕ್ಷೆಯಲ್ಲ. ಅದಕ್ಕೆ ಜಾಗತಿಕ ಚೌಕಟ್ಟು ಇದೆ. ಆದರೆ, "ನಾಳಿನ ನವೋದಯ" ಅತ್ಯಂತ ಪರಿಣಾಮಕಾರಿಯಾಗಿ ಕಟ್ಟಿದ ನಮ್ಮ ನವ ನಿರ್ಮಿತಿಯ "ಪುರುಷ ಸೂಕ್ತ". ಭಾರತದ ರಾಷ್ಟ್ರೀಯ ಉತ್ಥಾಪನೆಯ ಇಂಗಿತ ಈ ಭವ್ಯ ಕವನದಲ್ಲಿ ಒಳ್ಳೆ ರಂಜಕವಾಗಿ ಭಾವವ್ಯಂಜಕವಾಗಿ ಬಂದಿದೆ. ಅದಮ್ಯವಾದ ಆಶಾವಾದ ಈ ಕವನವನ್ನು ಎತ್ತಿ ತೇಲಿಸಿಕೊಂಡು ನಡೆದಿದೆ. ಈ ಆಶಾವಾದ ಕುರುಡು ನಂಬಿಗೆಯಲ್ಲ, ಹುಂಬ ಹುಮ್ಮಸಲ್ಲ.

ಐದ್ಯೆದು ವರುಷಗಳ ಸೋಪಾನವನ್ನೇರಿ ಆಪಾದ
ಮಸ್ತಕವ ನೋಡಿಕೊಂಡು,
ನವಯುಗಾರಂಭದಲಿ ಅಂಬೆಗಾಲಿಟ್ಟ ಶಿಶು ಆಗಲೇ
ಬೆಳೆದು ನಿಂತು-
ಹಾಲಿನ ಬಾಟ್ಲಿ ಬಿಟ್ಟು, ಬಟ್ಟಲನ್ನವ ತೊರೆದು
ತನ್ನಿಚ್ಛೆಯಲಿ ತಾನೆ
ಉಣ್ಣುತಿದೆ ಐದ್ಯೆದು ಬೆರಳ ತುತ್ತು.....

ಪಾಂಚವಾರ್ಷಿಕ ಯೋಜನೆಗಳ ಅಭಿವೃದ್ಧಿ ವಿಕಾಸದ ಇಷ್ಟು ವಾತ್ಸಲ್ಯಪೂರ್ಣ ಚಿತ್ರ ಕನ್ನಡದಲ್ಲಿ ಇನ್ನೂ ಅರಳಿಬಂದಿಲ್ಲ. ಆದರೂ ಈ ನವಜಾತ ಶಿಶುವಿನ ಸದ್ಯಸ್ಥಿತಿಯ ಬಗೆಗೆ ಸುಳ್ಳು ಸಂಭಾವನೆ ಇಲ್ಲ. ಮಗುವಿಗೆ ನೆಗಡಿ ಕೆಮ್ಮು, ಜ್ವರ. (ಜ್ವರದಲ್ಲಿ ಬಡಬಡಿಸುವದೂ ಉಂಟು!) ಆದರೂ ಈ ಪೋರನ ಬೆಳವಣಿಗೆ ನೆರೆಹೊರೆಯು ಬೆರಗುಬಡುವಂತಿಹುದು. ಆದರೂ 'ಮುಂದಿನದು ಬರೆದಂತೆ ಹಿಂದಿನದು ಮರೆಯುತ್ತ ಹೊರಟರೇ ಸ್ವಲ್ಪ ಕಷ್ಟ.' ಅಪೂರ್ವ ಸಾಧಿಸ ಹೊರಟು ಪೂರ್ವ ಮರೆಯದಂತೆ ಬಾಪೂಜಿಯವರ ಸ್ಮರಣ ಕವಿ ಮಾಡಿ ಕೊಡುತ್ತಾರೆ. 'ಅವನ ಮನದಲಿ ಮೂಡಿ ಹೆಗಲೇರಿ ಬೆಳೆದಂಥ ದಿವ್ಯಕನಸು.' ಹೆಜ್ಜೆ ಹೆಜ್ಜೆಗೆ ಮನಸ್ಸಿನಲ್ಲಿ ಕಟೆಯುತ್ತಿಹುದು. ಆದರೇನು? ಗಾಂಧೀಜಿ ಅಸ್ತಂಗತ. ಹೊತ್ತು ಮುಳುಗಿತು. ಮತ್ತೆ ಹರಿದಾಡುತಿವೆ ಹಾವು ಚೇಳು. ಕಾಡಿನ ಶ್ವಾಪದಗಳು ನಾಡನಾಕ್ರಮಿಸಿ, ಬಾಲ ಗುಂಡಾಡಿಸುತ್ತ, ಜಪಮಾಲೆ ಎಣಿಸುತ್ತ ಜಪ್ಪಿಸಿ ಕುಳಿತಿವೆ - ಈ ಪ್ರತಿಮೆ ಅದೆಷ್ಟು ಸ್ವಾರಸ್ಯವಾಗಿದೆ! ಈ ಕವನದ ಕಟ್ಟಡದ ರಚನೆ ಒಂದು ಅಖಂಡ ಶಿಲ್ಪ, ಪರಿಚ್ಛೇದದಿಂದ ಪರಿಚ್ಛೇದಕ್ಕೆ ದಾಟುವ ಭಂಗಿಯೂ ಕಲಾತ್ಮಕ. ನಡುವೆ ತಂದ "ಶ್ರುತಯೋಜನೆ" (allusions)ಗಳು ತುಂಬ ಮಾರ್ಮಿಕ. ೧ನೇ ಪರಿಚ್ಛೇದದಲ್ಲಿಯ 'ಬೆಳಗಿ'ನ ವರ್ಣನೆಯೇ ತುಂಬ ಲಾಕ್ಷಣಿಕ. ಆರಂಭದ ಈ ಮಿಶ್ರ

ಪ್ರತಿಮೆಗಳ ಪಂಕ್ತಿಯ ಪಾಂಗನ್ನೆ ನೋಡಿರಿ :

"ನೀಲಿಯಾಗಸದ ತೊಳೆದ ಪಾಟಿಯ ಮೇಲೆ
ಹಕ್ಕಿ-ಧ್ವನಿ ಮೂಡಿ ತೀಡಿತು ಹೊಸದೊಂದು
ವರ್ಣಮಾಲೆ."

ಆಗಸದ ಪಾಟಿ-ಧ್ವನಿಯ ವರ್ಣಮಾಲೆ ಅಮೂರ್ತಕ್ಕೆ ಮೂರ್ತದ, ಕಿವಿಯ ಬದುಕಿಗೆ ಕಣ್ಣಿ ಬದುಕಿನ ಉಪಮಾನ ರೂಪಣ!

ತನ್ನ ಈ ರೂಪಣ ಶಕ್ತಿಯಲ್ಲಿ ಪೂರ್ಣ ನಂಬಿಗೆಯುಳ್ಳ ಈ ತರುಣ ಕವಿಯ ಗುಣಾತಿರೇಕವೇ ಒಂದು ದೋಷವಾಗಿದೆ. ಪ್ರತೀಕಾತ್ಮಕ ರಚನೆಗೆ ಬೇಕಾದ ನಿಷ್ಠುರ ಸಂಯಮ ಆಗೀಗ ತಪ್ಪಿಹೋಗುತ್ತದೆ. ಬಣ್ಣ ತುಂಬುವ ಮೋಹ ಅನಿವಾರ್ಯವಾಗುತ್ತದೆ. ಇದರಿಂದ ಸ್ಫಟಿಕ ಸ್ಫುಟವಾಗಿ ನಿಲ್ಲಬೇಕಾದ ಪ್ರತೀಕ ಸಡಿಲಾಗುತ್ತದೆ; ಮೊಂಡವಾಗುತ್ತದೆ. ಪ್ರತೀಕೀಕರಣ ಒಂದು ಲೇಪನ ಕ್ರಿಯೆಯಲ್ಲ; ರೂಪಣ ಕ್ರಿಯೆಯೂ ಅಲ್ಲ. ಕಾರ್ಪಣ್ಯವೆನಿಸುವಷ್ಟು ಶಬ್ದಗಳ ಮಿತವ್ಯಯ, ಅದಕ್ಕೆ ಬೇಕಾದ ಮನಃಸಂಯಮ (reserve), ಪುಟ ಹಾಕಿದ ಧಾತುವಿನಂಥ ಶಬ್ದಗಳ ಆಯ್ಕೆ (Preference for the calcinated word), ವಿಶೇಷಣ ಹಾಗೂ ವಾಕ್ಯರಚನೆಯ ದಾರಿದ್ರ್ಯವೊ ಎನ್ನುವಷ್ಟು ಭಾಷೆಯನ್ನು ಅದರ ಮೂಲಕ ಘಟಕಗಳಲ್ಲಿ ವಿಕಲಗೊಳಿಸಿ ಬಳಸುವದು - ಇವೇ ಕೆಲವು ಪ್ರತೀಕೀಕರಣದ ಲಕ್ಷಣಗಳೆನ್ನಬಹುದು. ಕಣವಿಯವರ ಶೈಲಿಗೆ ಈ ಕಟುವಾದ ಪಥ್ಯ ಅಷ್ಟೊಂದು ಒಗ್ಗುವುದಿಲ್ಲ. ರಸಿಕನ ಊಹೆಗೆ ಕೆಲವೊಂದು ಕಠಿಣ ಕೆಲಸ ಅವರು ಬಿಟ್ಟುಕೊಡುವದಿಲ್ಲ. ಈ ಉದಾಹರಣೆಯನ್ನೇ ಕೊಳ್ಳಿ :

ನಾನು (ಬೆಳೆದ ಮಗು)
ಮೂರು ಮಕ್ಕಳ ತಂದೆ
ಮೂರು ಸಲ ಮಗುವಾಗಿ ಮತ್ತೆ ಬೆಳೆದೆ.

ಇಲ್ಲಿ ೨ನೆಯ ಪಂಕ್ತಿ ಉಳಿದುದರ ಸಾರವತ್ತತೆಗೆ ನೀರು ಬೆರೆಸಿದಂತೆ ಆಗಿದೆ. ೩ನೆಯ ಪಂಕ್ತಿಯೇ ನಾಯಕ ಮೂರುಸಲ ತಂದೆಯಾದುದನ್ನು ಸೂಚಿಸುತ್ತದೆ; ಅಷ್ಟೂ ಊಹಿಸಲಾರದ ಓದುಗನಿಗಾಗಿ ಈ ಕಾವ್ಯವಲ್ಲ! ಅದೇ ರೀತಿ ಗಿರಣಿ ಬಂಬಿನ ಹುತ್ತದಿಂದ ಹೆಡೆ ಬಿಚ್ಚಿದ ಹೊಗೆ ಹಾವೂ ಹೌದೆಂದು ಬೇರೆ ಹೇಳುವುದೇಕೆ? ಹಾಗೆಯೇ "ಕೊನೆಯ ನಿಲ್ದಾಣ"ದಲ್ಲಿ ಪಾಕೀಟು ಕಳ್ಳನ ಪ್ರಸಂಗದ ವಿವರಣೆ ಅಷ್ಟು ಸರಾಗವಾಗಿ ಬೇಕಿದ್ದಿಲ್ಲ. ಡಬ್ಬಿಗಳನ್ನು ಎಳೆಯುವ ಎಂಜಿನ್ನಿಗೆ 'ದೊಡ್ಡ ಸಂಸಾರಕ್ಕೆ ಒಬ್ಬನೇ ದುಡಿಯುವವನ' ರೂಪಕ ತುಂಬ ಸಾರ್ಥಕವಿದೆ. ಆದರೆ ಅದನ್ನು 'ಹೀಗೆಯೇ ಹಳಿಗುಂಟ' ಎಳೆದ ಅದರ ಸಾಮರ್ಥ್ಯ ನುಗ್ಗಾಗಿದೆ! "ಕೊನೆಯ ನಿಲ್ದಾಣ" ಪೂರ್ತಿ ತೃಪ್ತಿಕೊಡುವದಿಲ್ಲ. ಅದರಲ್ಲಿಯ ಇಂಗಿತಕ್ಕೆ ಆಳಕಡಿಮೆ, ಅಗಲ ಹೆಚ್ಚಾದಂತಿದೆ. ಆರಂಭದಲ್ಲಿ ಎದ್ದ ಆಸೆ ಮುಂದೆ ಫಲಿಸುವುದಿಲ್ಲ. ಅದು ಶಬ್ದಚಿತ್ರವೋ,

ಪ್ರಪಂಚದ ಮೇಲಿನ ರೂಪಕವೋ, ವ್ಯಕ್ತಿ ಜೀವನದ ಅತಂತ್ರ ಪರತಂತ್ರ ಯಾತ್ರೆಯ ಪ್ರತೀಕವೋ ಸ್ಫುಟವಾಗಿಲ್ಲ. A Symbol is emptied of personal meaning. It has only emotional reference. ಆದರೆ ಈ ಕವಿಗೆ ಭಾವ ಸಂದರ್ಭದಲ್ಲಿಯೂ ವೈಯಕ್ತಿಕ ಆಶಯ ತುಂಬುವ ಹಂಬಲವಾಗುತ್ತದೆ. ಇದರಿಂದ ಪ್ರತೀಕಕ್ಕಿಂತ ಮೂರ್ತೀಕರಣ (personification) ಈ ಕವಿಗೆ ಹೆಚ್ಚು ಮೆಚ್ಚಿಗೆ. ಸಿಕ್ಕಲ್ಲಿ ಹೆಕ್ಕಿದ ಉದಾಹರಣೆಗಳಿವು :

"ಮರಿಗೆ ಮರಿ ಇಕ್ಕಿರುವ ಶೂನ್ಯ ಮಂಡಲ."

* * *

"ನಿಂತಲ್ಲಿಯೇ ನೀಲಿಗಟ್ಟಿರುವ ಆಕಾಶ."

* * *

"ನಳದಲ್ಲಿ ನೀರು...... ಹಂಡೆ ಕೊಡಗಳ ಜೊತೆಗೆ
ತೋಡಿಕೊಂಡಿತು ತನ್ನ ಸುಖದುಃಖ."

* * *

"ಅಗ್ನಿಗೆಂಡವ ಹಾಯ್ದು ತಳಿರ ಪಲ್ಲಕ್ಕಿಯಲಿ
ಚಿಗುರು-ಹೂ-ಮಿಡಿ ಛತ್ರ ಚಾಮರವ ಹಿಡಿದು
'ದೇವತಾ ಪೃಥಿವಿ.'
(ಎಂಥ ರಸ ತುಂಬಿದ ವಿವರಣೆ)

"ನಗರ ಭವನದ ಧ್ವನಿವರ್ಧಕವ ತೂರಿ ಸುರಿಯುತಿವೆ
ರಾಜಾ, ರೋರರ್, ರಾಕೆಟ್ ರಾಣಿ!"

(ಜೋಗದ ಜಲಪಾತ ಯಾವ ಕವಿಯ ವಾಣಿಯಲ್ಲಿಯೂ ಇಷ್ಟು ಚಮತ್ಕಾರಿಕ ವಿನಿಯೋಗ ತಾಳಿದ್ದಿಲ್ಲವೇನೋ!)

"ಬಾನಂಗಳಕೆ ಬರುವ ಚಂದ್ರನ ಹೆಗಲ ಮೇಲೆ ಹೊತ್ತು,
ಬಾನ ಕಣದಲಿ ಕೋಟಿ ಚಿಕ್ಕೆ ಹಂತಿಯ ಕಟ್ಟಿ
ದಿವದ ಬದುಕನು ಒಕ್ಕಿ ರಾಶಿಮಾಡಿ-
ಬೆಳಕು ಚಕ್ರಾಕಾರ ತಿರುಗುತ್ತಿದೆ."

(ಎಂಥ sustained metaphor! ಜಾಡುಹಿಡಿದ ರೂಪಕ!)

"ಕೋಗಿಲೆಯು ಮಾತ್ರ ಬಿಟ್ಟೊ ಬಿಡದೆ ತನ್ನ
ಜಾಹೀರಾತು ಪ್ರಕಟಿಸಿದೆ-

ಅಚ್ಚಾಗಿಹುದು ಕೆಳಗಿನ ಕವಿತೆ
'ಚೈತ್ರ' ಪತ್ರಿಕೆಯ ವಿಶೇಷ ಸಂಚಿಕೆಯ ಮೊದಲ
ಪುಟದ ಮೇಲೆ."

(ಇಲ್ಲಿ ಪತ್ರಿಕೆಯ ಇಷ್ಟೊಂದು ವಿವರ 'ಬಿಟ್ಟೂ ಬಿಡದೆ' ಬರುವದೇಕೊ!)

ಇಂಥ ರೂಪಕದ ಸ್ಫೂಪಕಶಕ್ತಿ ಇದ್ದೂ ಕವಿಯ ಶೈಲಿ ವ್ಯರ್ಥ ವಾಗಾಡಂಬರಕ್ಕೆ ಇಳಿಯುವದಿಲ್ಲ. ಇದಕ್ಕೆ ಕಾರಣ ಕವಿಯ ನಿರಂತರ ಕಲಾಜಾಗ್ರತಿ. ಪುನರುಕ್ತಿಯನ್ನು ಕವಿ ಆದಷ್ಟು ತಪ್ಪಿಸಿಕೊಳ್ಳುತ್ತಾನೆ. ವಸ್ತು ಒಂದೇ ಆದರೂ ಉಕ್ತಿವೈವಿಧ್ಯ, ಉಪಮಾನ ವೈಚಿತ್ರ್ಯ ಕವಿಗೆ ಯಶಸ್ವಿಯಾಗಿ ಸಾಧಿಸಿದೆ. ಮಿಶ್ರರೂಪಣ ಕ್ರಿಯೆಯು ನವ್ಯತಂತ್ರದ ಅಭೇದ್ಯ ಶಕ್ತಿ. ಅದನ್ನೂ ಕವಿ ಅಲ್ಲಲ್ಲಿ ಪ್ರಕಟಿಸುತ್ತಾನೆ. ("ನೀಲಿಯಾಗಸದ ತೊಳೆದ ಪಾಟಿ.....") . ಆದರೆ ಅದೇ ಆಕಾಶ ಬೇರೆಡೆಗೆ ಬಂದಲ್ಲಿ ಬೇರೆ ರೂಪಣಗಳನ್ನೇ ತಾಳಿದೆ. ಮೋಡವೂ ಕವಿಯ ಕೈಯಲ್ಲಿ ಕಾಮರೂಪವಾಗಿದೆ. ಒಮ್ಮೆ ಐರಾವತ, ಇನ್ನೊಮ್ಮೆ ಬಯಲಟ್ಟದ ಭರ್ಜರಿವೇಷ, ಮತ್ತೊಮ್ಮೆ ಮಳೆಯ ಜಾಲರಿ ಹಿಡಿದು ಶಿರಿಸಲದ ಹೂವಿನ ಅರಿಷಿಣ ತೊಡೆದು, ಹೂಬಿಸಿಲ ಮುಗುಳುನಗೆ ತಳೆದು ಸಾಗಿದ ಲಜ್ಜಾವತಿ, ಮಗುದೊಮ್ಮೆ ಹನಿಹನಿ ಕವಣೆ ಬೀಸುವ ಬಂಟ! - ಆಯಾ ಸಂದರ್ಭಕ್ಕೆ ರಸಪುಷ್ಪವಾದ ಔಚಿತ್ಯವುಳ್ಳ ಪ್ರತಿಮೆಗಳು. ಈ ರೂಪಣ ಬರಿ ಸ್ಥಿರಚಿತ್ರ (Stills)ಗಳಲ್ಲ. ಗತಿಮಯ ಸಜೀವತೆಯ ಚೆಲುವು.

ಇಷ್ಟು ಹೊತ್ತು ಕಣವಿಯವರ ನವ ವಿಧಾನದ ಸೇತುವೆಯ ಮೇಲೆ ನಿಂತು ಕೆಳಗೆ ಹರಿಯುವ ಕಾವ್ಯ ಪ್ರವಾಹವನ್ನೂ, ಸುತ್ತಲಿನ ಪ್ರಕೃತಿ ಪ್ರಪಂಚವನ್ನೂ ಕವಿಯ ಕಣ್ಣಿನಲ್ಲಿ ಕಣ್ಣಿಟ್ಟು ನೋಡಿದ್ದಾಯಿತು. ಕವನಗಳ ಪಾಕ ಸಿದ್ಧಿಯನ್ನೂ ಸಾಕಷ್ಟು ಸವಿದು ಅದರ ತರ-ತರಗತಿಗಳ ತರ-ತಮವನ್ನೂ ನೋಡಿದ್ದಾಯಿತು. ಈ ಸೇತುವೆ ಭಾವಗೀತ ಮತ್ತು ನವ್ಯ ಕಾವ್ಯ ಮಾರ್ಗಗಳ ನಡುವೆ ಇಮ್ಮುಖದ ದಾರಿ ತೆರೆದಂತೆ. ಇಂದು ಕನ್ನಡ ಕಾವ್ಯಲೋಕದಲ್ಲಿ "ಅತ್ತಕತ್ತಲೆಯಲ್ಲ ಇತ್ತ ಬೆಳಕೂ ಅಲ್ಲ, ಮೋಟು ಮರ ದೆವ್ವದಾಕಾರ ತಾಳಿರುವ ಸಂಧಿಕಾಲ." "ಎಂಥ ಕತ್ತಲೆಯಲ್ಲು ಸ್ವಂತ ತೇಜವ ಬಿಡದ, ಚಿಕ್ಕೆ ಬೆಳಕಿನ ಧೈರ್ಯ, ಶಾಂತಿ, ಔದಾರ್ಯ" ಈ ನಾಡಿನಲ್ಲಿ ಮೂಡಬಹುದು - ಎಂಬುದೇ ಕವಿಯೊಂದಿಗೆ ಈ ರಸಿಕನದೂ ಹಾರೈಕೆ.

ಗೋಕರ್ಣ
೨೦-೯-೧೯೬೦

**ಗೌರೀಶ ಕಾಯಕಿಣಿ**

# ನಾಲ್ಕು ಮಾತು

## ('ನೆಲ-ಮುಗಿಲು' ಸಂಗ್ರಹದ ಮುನ್ನುಡಿ)

'ನೆಲ-ಮುಗಿಲು' ಕವನ ಸಂಗ್ರಹವು ಶ್ರೀ ಚೆನ್ನವೀರ ಕಣವಿಯವರ ಏಳನೆಯ ಕೃತಿ. ಅವರ ಮೊದಲ ಕವನಸಂಗ್ರಹ 'ಕಾವ್ಯಾಕ್ಷಿ' ಹುಬ್ಬಳ್ಳಿಯಲ್ಲಿ ಪ್ರಕಟವಾಯಿತು; ನಾನು ಸೊಲ್ಲಾಪುರದಿಂದ ಅದಕ್ಕೆ "ಮುನ್ನುಡಿ" ಬರೆದು ಕಳುಹಿದೆ. ಅದು ೨೦.೪.೧೯೪೯ ಮಾತು. ಈಗ ೧೯೬೫ರ ಆಗಸ್ಟ್ ತಿಂಗಳಲ್ಲಿ ಧಾರಾವಾಡದಿಂದ 'ನಾಲ್ಕು ಮಾತು' ಬರೆಯುತ್ತಿದ್ದೇನೆ; ಕವನ ಸಂಗ್ರಹವು ಮೈಸೂರಿನಲ್ಲಿ ಪ್ರಕಟವಾಗಲಿದೆ. ಈ ಕವಿ ತನ್ನ 'ಸಪ್ತ-ಪದಿ'ಯಿಂದ ಏಳಿಗೆ ಪಡೆದಿದ್ದಾನೆ ಹದಿನಾರು ವರ್ಷಗಳಲ್ಲಿ. ಈ ಪ್ರೌಢತೆಗೆ ಮುನ್ನುಡಿಯಿರುವುದು ಅನವಶ್ಯಕ. ಆದರೆ ವಿನಯ, ಸಂಪ್ರದಾಯದ ಪ್ರಾರಬ್ಧ ಇದು ಎಂಬಂತೆ 'ನಾಲ್ಕು ಮಾತು' ಸಹೃದಯತೆಯಿಂದ ಸೇರಿಸುತ್ತಿದ್ದೇನೆ - ಕವಿಯ ಪ್ರೀತಿಯ ನಿಮಿತ್ತವೂ ಹೌದು.

ಕಣವಿ ಅವರ ಕಾವ್ಯ-ಶ್ರದ್ಧೆ ಇಲ್ಲಿ ನಿಷ್ಠೆಯ ಕಣ್ಣು ತೆರೆದು ತೋರಿದೆ. ಕಾವ್ಯಾಭ್ಯಾಸಿಗಳು 'ವಿನಾಯಕ-ಅಡಿಗ'ರ ತರುವಾಯ 'ಕಣವಿ-ಶಿವರುದ್ರಪ್ಪ' ಎಂತಲೂ ಹೆಸರಿಸುತ್ತಿದ್ದಾರೆ. ಸ್ವತಃ ಶ್ರೀ ಶಿವರುದ್ರಪ್ಪನವರು 'ನಿಸ್ಸಾರ ಅಹಮ್ಮದ-ಚಂದ್ರಶೇಖರ' ಎಂದು ಮುಂದಿನ ಜೋಡಿ ಸೂಚಿಸಿದ್ದಾರೆ. ಯಾರೋ ಮುಂದೆ ಹೆಜ್ಜೆಯಿಟ್ಟು, 'ಚಿತ್ತಾಲ-ಕಂಬಾರ' ಎಂದೂ ಮಾತು ಪುಟಿಸಿದರು. 'ಶ್ರೀ-ಶ್ರೀನಿವಾಸ' 'ಪೈ-ಪಂಜೆ'ಗಳ ಈ ಕಾವ್ಯರಥಕ್ಕೆ ಎಷ್ಟು ಜೋಡುಗಾಲಿಗಳೋ ಎಣಿಸಿದವರಾರು? 'ನಕ್ಕಳಾತಾಯಿ!'

ಶ್ರೀ ಕಣವಿಯವರು ತಮ್ಮ ಗದುಗಿನ ಕವಿ ಸಮ್ಮೇಲನ ಪೀಠದಿಂದ ಮಾಡಿದ ಕಾವ್ಯ ಸಿಂಹಾವಲೋಕನದಲ್ಲಿ ತಮ್ಮನ್ನೂ ವಿಮರ್ಶೆಗೆ ಗುರಿಪಡಿಸಿಕೊಂಡು ತಮ್ಮ ಹಂತ ಹೇಳಿದ್ದಾರೆ. ಶ್ರೀ ವಿನಾಯಕ ಗೋಕಾಕರು, ಹಿಂದೆ ಚೆನ್ನಮಲ್ಲ ಹಿಡಿದ ಹಾದಿಯಲ್ಲಿ ಇಂದು ಚೆನ್ನವೀರ ಮುಂದಾಗುತ್ತಾರೆ - ಎಂದು 'ಭಾವಜೀವಿ'ಯ ಸಂದರ್ಭದಲ್ಲಿ ಸೂಚಿಸಿದ್ದರು. ಶ್ರೀ ಕಾಯ್ಕಿಣಿಯವರು 'ಮಣ್ಣಿನ ಮೆರವಣಿಗೆ' ಎಂಬ ಕವನ ಸಂಗ್ರಹಕ್ಕೆ ಹಿಂದೆ ಮುಂದೆ ಮಶಾಲು ಎತ್ತಿ ಕವಿ ಕಣವಿಯವರು ಸಂಕ ದಾಟುತ್ತಿರುವ ಚಮತ್ಕಾರವನ್ನು ವಿವರಿಸಿದ್ದಾರೆ. ಶ್ರೀ ಕೀರ್ತಿನಾಥ ಕುರ್ತಕೋಟಿಯವರು ನವ್ಯ ಕವಿ ಪರಂಪರೆಯ ಮಣಿಮಾಲೆಯಲ್ಲಿ ಈ ಕವಿಯ ಸ್ಥಾನವನ್ನು ಗುರಿತಿಸಿದ್ದಾರೆ. ನಾಳಿನ ಕವಿಗಳು ಕಣವಿಯವರ ಆಶೀರ್ವಾದ ಬಯಸುವ ಹದಕ್ಕೆ ಕಾಲ ಬಂದಿರುವಾಗ ನನ್ನ 'ನಾಲ್ಕು-ಮಾತು' ಯಾವ ಮೀಸಲು ಮುರಿಯಬೇಕು? 'ಕಾವ್ಯಾಕ್ಷಿ'ಯ ಮುನ್ನುಡಿಯಲ್ಲಿ ನಾನು ಹೇಳಿದ ಮಾತು ಇಂದೂ ಹೇಳಬಹುದು; ಜಾತಿ ಅದೇ. ಆದರೆ ಒಗರು-ಪೊಗರು ಕಣ-ಕಣದಲ್ಲಿ ಪಿಂಡಗೊಂಡಿದೆ. ವಿನಯವೂ ಅಷ್ಟೇ ದಿಟವಾಗಿದೆ. ವಿನಯ ಹಳಸುವ ಬದುಕಲ್ಲ, ವಿಶಿಷ್ಟಕ್ಕೆ ತೊಡಕಲ್ಲ, ಇದು ಧಾರವಾಡ ತತ್ತ್ವ!

ಧಾರವಾಡ! ಭೂಮಿ ಅಂದರೂ, ಭಾರತ ಅಂದರೂ, ಕರ್ನಾಟಕ ಎಂದರೂ ಅಷ್ಟೆ, ಒಂದು ನೆಲದ ಒಂದು ಮಂದಿ; ಒಂದೇ ತನು-ಮನ-ಧನ ಎಂಬಂತೆ ಒಂದು 'ಜನ' ಆಗುವದು ಅವಸರದ ಅಡಿಗೆ ಅಲ್ಲ, ಕಾಲದ ಪಾಕ. ಹೂಲಿ, ಕಟ್ಟಿ, ರೊದ್ದ, ಅರಟಾಳ, ಕುಮಾರಸ್ವಾಮಿ, ಆರೂಢರು, ಫಾಟಕ, ಸಕ್ಕರಿ, ಶರೀಫ ಸಾಹೇಬ, ಗಳಗನಾಥ, ಕೆರೂರ, ಆಲೂರ ಹೀಗೆ ಹೆಜ್ಜೆ ಇಕ್ಕುತ್ತ ಪರಾಕ್ರಮಣ ತಟ್ಟು ಮಾಡಿ, ಸಕಲ ಸಂಕ್ರಮಣಗಳಿಗೂ ವಿದ್ಯಾಕ್ಷೇತ್ರವನ್ನು ಹದಮಾಡುವದು ಜಿಗುಟು ಶ್ರದ್ಧೆಯ ಕಾರ್ಯ. ಇದು ಬೆವರಿನಿಂದ ಬೆಳೆಸಿದ ಪಯಿರು. ಇರುಳು ಕುಯ್ದುಕೊಂಡು ಬಂಡಿ ಹೇರಿ, ಹಗುರುಗಾಲಿನಿಂದ ಹೊರಟುಹೋಗುವ ಧೂರ್ತರ ಚಮತ್ಕಾರವಲ್ಲ. ಸುಮ್ಮನೆ ರೂಪಗೊಂಡಿಲ್ಲ ವಿಶ್ವವಿದ್ಯಾಲಯದ ಪಾವಟೆ-ಗಿರಿ; ಮೈಲಾರಲಿಂಗದ ವಿದ್ಯಾಗಿರಿ; ಕೃಷಿಕಾಯಕದ ಎತ್ತಿನ ಗುಡ್ಡ-ವೃಷಭಗಿರಿ. ಅಥಣಿಯ ಪಾದಗಳು ಸದಾಶಿವಪೇಟೆ (ಹಾವೇರಿ ಪೇಟೆ)ಯ ಬಯಲಿನಲ್ಲಿ ನಿಲಯ ನೆಲಸಬೇಕಾದರೆ ಅನ್ನದಾನ ಎಷ್ಟು! ವಿದ್ಯಾದಾನ ಎಷ್ಟು! ಶ್ರದ್ಧಾದಾನ ಎಷ್ಟು! ಬೇಂದ್ರೇನ 'ಅಂಬಿಕಾತನಯ'ನಂತೆ ಕಣವಿಯ ಚೆನ್ನವೀರನಿಗೂ ಇವೇ, ಇಂಥವೇ ಮಹಾಪ್ರೇರಣೆಗಳು. ಒಬ್ಬ ಸರ್ವಜ್ಞನಿಗಾಗಿ ಒಂದು ಕೊರಡು ತೇಯ್ದು ಸುಗಂಧವಾಗಿ ಹೋಯಿತು. ಒಂದು ವಚನಶಾಸ್ತ್ರ ಕಟ್ಟುವ, ಬಿಚ್ಚುವ ಕಾಯಕದಲ್ಲಿ ಒಂದು ದೇಹಮಣ್ಣು-ಭಸ್ಮವಾಗಿ ಹೋಯಿತು. ಮಿಂಚಿನ ಬಳ್ಳಿಯ 'ಸಂಚಿಕೆ', 'ನಡೆದು ಬಂದ ದಾರಿ'ಯ ಮನ್ವಂತರ, ಬುನಾದಿ ಇಲ್ಲದೆ ಕಟ್ಟಿದ ಕಟ್ಟಡಗಳೆ? ಹಿಂದೆ 'ಪ್ರಭಾತ' ಕಾವ್ಯ ಆಗಿ ಹೋಯಿತು. ಇಂದು 'ಸಂಕ್ರಮಣ' ಕಾವ್ಯ ಬಂದಿದೆ. ಕಾವ್ಯಾನುಭವ ಮಂಟಪ; ಸಾಹಿತ್ಯ ಮಂಟಪಗಳು 'ನಾಡಹಬ್ಬ'ದ ಹಂದರಗಳ ಮರಿ. 'ವಾಗ್ಭೂಷಣ' ನುಂಗಿ ನಿಂತಿರುವ 'ವಿದ್ಯಾವರ್ಧಕ ಸಂಘ'ವು ಬರುವವರಿಗೆ ಹರವು, ಹೋಗುವವರಿಗೆ ತೆರವು - ಇದು ಧಾರವಾಡ.

ಶ್ರೀ ಕಣವಿಯವರನ್ನು ಸುತ್ತಿಕೊಂಡ ಕಾರ್ಯ-ಪ್ರಕಾಶನ, ಪ್ರಚಾರ-ಉಪನ್ಯಾಸ, ಗೆಳೆತನದ ಸಹಕಾರ್ಯದ ಚಟುವಟಿಕೆಗೆ ಮೊದಲು ಒಂದೊಂದಕ್ಕು ಸಾವಿರ ಬಿಸಿ ಉಸಿರು ಆರಿ, ಹಾರಿ ಹೋಗಿವೆ. ಧಾರವಾಡಕ್ಕಿಂತ ಹೆಚ್ಚು ಮಳೆ, ಹಚ್ಚ ಹಸಿರು, ದಾಂಡೇಲಿಯ ದಂಡಕಾರಣ್ಯದಲ್ಲಿ ರಾಮಾಯಣ ಕಾಲದಿಂದ ಇದ್ದೇ ಇದೆ. ಶಕ್ತಿಮೀರಿ ದುಡಿಯುವ ವ್ಯಕ್ತಿ; ಭಕ್ತಿ ಸೋಸಿ ನುಡಿಯುವ ಯುಕ್ತಿ; ಎಲ್ಲಿಂದ ತರಬೇಕು? ಬೆಳುದಿಂಗಳ, ಮಲಯಾನಿಲ, ಬೆಲೆಕೊಟ್ಟು ಇಂದಿನ ಯಂತ್ರವಿಜ್ಞಾನ ಯುಗದಲ್ಲಿ ತರಬಹುದೋ ಏನೋ! "ಎಚ್ಚರಿಕೆ, ಭಾಗ್ಯ ಯಾರಿಗು ಸ್ಥಿರವಲ್ಲ, ಎಚ್ಚರಿಕೆಚ್ಚರಿಕೆ" ಪಡಿನುಡಿ ಗುಡುಗಿದರು ಮುದುವೀಡು ಕೃಷ್ಣರಾಯರು! ಧಾರವಾಡದ ಹಳೆಕೋಟೆಯ ಮಣ್ಣು ಸೆಟೆದುಹೋಯಿತು ನಡುಗಿ. 'ವಿನಾಯಕ' ಹಾಡಲಿ, 'ಕಣವಿ' ಹಾಡಲಿ, ಧಾರವಾಡ ತತ್ತ್ವ ಅದು.

ಇಂದು ಹುಬ್ಬಳ್ಳಿಯ ಹೂ, ಧಾರವಾಡದ ದಾರ ಸರಗೊಳಿಸುವ ಕಾಲ ಬಂದಿದೆ. ಸೂಜಿ ಕಾಯಕದ ಕುಶಲಕರ್ಮವು ಚುಚ್ಚುಮದ್ದಿನಂತೆ ಚುಟುಕಿಯ ಕೆಲಸವಲ್ಲ. ಪ್ರಕೃತಿಯನ್ನು ವಿಕೃತಿಗೊಳಿಸುವ ಚೆಂದಗೇಡಿತನವನ್ನು ಚಾತುರ್ಯದಿಂದ ಬದಿಗೊತ್ತಿ, ಸಂಸ್ಕೃತಿಯ ಅಧಿಕಾರಕ್ಕೆ ಆಮಂತ್ರಣವೀಯುವದು ಮೈತುಂಬ ಎಚ್ಚರದ ಕೆಲಸ. ಅದು ಶೀಲದ ಚಾರಿತ್ರಿಕ ಸಾಹಿತ್ಯ.

ಶೀಲದ ಮೂಲ ಸತ್ವ; ಒಣಹಟ, ಕೆಟ್ಟ ಛಲ ಅಲ್ಲ. ಇಂಥ ಸತ್ವದಲ್ಲಿ ಉನ್ಮುಖ ಶ್ರದ್ಧೆ ಹುಟ್ಟುತ್ತದೆ. ಅಷ್ಟೇ ಬೇರು ನೆಲದೊಡಲಿಗೂ ಬಿಟ್ಟಿರುತ್ತದೆ. ಇದು ಕವಿಜೀವದ ವೀರ್ಯ. ವೀರ್ಯವೇ ನಿಷ್ಠೆಯಿಂದ ಸಾಕಾರವಾಗುತ್ತದೆ, ಹಠದ ತಿಪ್ಪರಲಾಗವಲ್ಲ; ಛಲದ ತಲೆತಿರುಕತನವಲ್ಲ. ಇಂಥ ವೀರ್ಯಕ್ಕೆ ಅಖಂಡ ಸ್ಮರಣೆಯ ಸೆಲೆ ಹತ್ತುತ್ತದೆ. ಅಲ್ಲಿಯ ಅವಧಾನ ಮಹಾನಿಧಾನ, ಮಹಾಪ್ರಸಾದ. ಈ ಒಲವು ಕಣವಿಯವರ ಕವನಗಳಿಗಿದೆ. ಸಾಹಿತ್ಯ ನೆಲ-ಬಾನುಗಳಿಗೆ ಹೊಂದಿಕೆ ಮಾಡುವ ಮುಗಿಲಿನ ಮಿಂಚಿನಾಟ. ಈ ದ್ಯಾವಾಪೃಥಿವಿಯ ಪೂಜಕ ಇಲ್ಲಿಯ ಕವಿ.

**ಇನ್ನು ಸದ್ಯದ ಸಂಗ್ರಹ :**

'ನೆಲ-ಮುಗಿಲಿ'ನ ಕವನಗಳು ಪ್ರೇರಣೆ, ಪ್ರತಿಮೆ, ಪ್ರತಿಬಿಂಬ ಎಂದು ಮೂರು ಮುಖವಾಗಿವೆ. ಮೂರು ಭಾಗಕ್ಕೂ ನಾಕು ಸಾಲಿನ ಬಿರುದು ಬಾವುಲಿ ಇದೆ. ಪ್ರೇರಣೆಯಲ್ಲಿ ಹಲವು ಅದ್ಭುತ ಪ್ರತಿಮೆಗಳಿವೆ; ಪ್ರತಿಮೆಗಳಲ್ಲಿ ಯಾವ ಪ್ರೇರಣೆ ಅಡಕವಾಗಿಲ್ಲ? ಪ್ರತಿಬಿಂಬದಲ್ಲಿ ಕವಿಯ ಕಲ್ಪನೆಯಾಡುವ ಗರಡಿಮನೆಯ ಅಂಕಣಗಳಿವೆ. ಎಲ್ಲಿ ನೋಡಿದರೂ ಧಾರವಾಡದ ಹೂರಣ. ಊರೂರಿಗೆ ಹತ್ತಿ ಹರಿಯುವ ಹೊಳೆ ಒಂದೆಯಾದರೂ ಕ್ಷಣ ಕ್ಷಣಕ್ಕೂ ಅದರ ನೀರು ಬೇರೆ. 'ಕಾವ್ಯಾಕ್ಷಿ'ಯಲ್ಲಿ ಇದೇ ನೆಲ ಮುಗಿಲು, 'ನೆಲ-ಮುಗಿಲಿ'ನಲ್ಲಿ ಅದೇ 'ಕಾವ್ಯಾಕ್ಷಿ'. ಆದರೆ ಕೆಚ್ಚು ಹೆಚ್ಚು. 'ವರ್ಣನಾ ನಿಪುಣಃ ಕವಿಃ!'

ಕಣವಿಯವರ ಕವನ ಹತ್ತುಗಡೆ ಹರಿದುಕೊಳ್ಳದೆ, ಸರ್ವಸಮಯಗಳ ಸಮನ್ವಯ ಒಳಗೊಳ್ಳಲು ತವಕಪಡುತ್ತದೆ : ಅದು ಅದರ ಛಂದ.

'ಮೃತ್ಯುಂಜಯ'ರಿಗೆ ಪುಷ್ಪಾಂಜಲಿ ಅರ್ಪಿಸಿದ ಕೈಗಳು ಪಾಂಡಿಚೇರಿಯ ಸಮಾಧಿಗೂ ಮುಗಿದುಕೊಳ್ಳುತ್ತವೆ. 'ಕಾಲ ನಿಲ್ಲುವದಿಲ್ಲ' ಓಡುವದಿಲ್ಲ. ಅದು ನೋಡುತ್ತದೆ; ಸಾಕ್ಷಿ. ಅಕ್ಷಿ ಅಕ್ಷಿಗಳ ಪ್ರತ್ಯಕ್ಷೀಕರಣದಲ್ಲಿ ಮೂಡುವ ಕಿರಣಗಳ ಬೆಳಕೇ ಬೇರೆ. ಈ ತಾಳ್ಮೆಗೂ ವಿಡಂಬನ ಕಲೆ ಗೊತ್ತಿದೆ. 'ಜಗದೇಕಮಲ್ಲ' ಕವನದಂತೆ 'ಕಣ್ಣಿರುವಷ್ಟು ನೋಟ' ಎಂಬ ಸಾನೆಟ್ಟಿನಲ್ಲಿಯೂ ಅದು ಹಣಕಿಹಾಕಿದೆ. 'ಶೀಲವಂತರ ಓಣಿಯಲ್ಲಿ ಕಣ್ಮರೆ ಕೋಳಿ' ಒಂದೇ ಸಾಲು ಸಾಕು. ಪಂಚಶೀಲವೇ ಬಿಕ್ಕೆ ಬೇಡುತ್ತಿರುವಾಗ ಕೋಳಿಯ ಕೂಗು ಕೇಳುವವರಾರು? ಹುಚ್ಚು ಕುರಿಮರಿ ಇನ್ನು ಜೋಪಾನ ಉಳಿದರೆ, ಅದೇ ಶೀಲ. ಕವಿಯ 'ಮೇಘೋಪಾಸನೆ' ಇಲ್ಲಿಯೂ ಮುಂದೆ ಸಾಗಿದೆ. 'ದೀಪಧಾರಿ'ಯ ಸುಳಿಯು 'ರಂಜನೆ'ಯಾಗಿ ಬಂದಿದೆ. 'ಆಕಾಶವಾಣಿ'ಯ ಪಂಚಾಂಗದ ಕರೆಗೆ ಓಗೊಟ್ಟ ಕಾಲೋಚಿತ ಕವನಗಳೂ ಇಲ್ಲಿ ಬಂದಿರುವವು. 'ನೆಹರು' ಅವರ ಸ್ಮೃತಿಯ ಕವನಗಳು ಬಾಳಿಕೆ ಬರುವಂಥವಾಗಿವೆ. 'ಭೂಮಿತೂಕ' ಶ್ರದ್ಧಾಪುಂಜ - 'ಧಾರವಾಡದಲ್ಲಿ ಮಳೆಗಾಲ' ಸುಂದರವಾದ ವರ್ಣಕ ಕವಿತ್ವ. 'ಪ್ರೇರಣೆ'ಯ 23 ಕವನಗಳಿಗಿಂತ 'ಪ್ರತಿಮೆ'ಯ 24 ಕವನಗಳು ಬಹಳೇ ಅಡಕವಾಗಿರುವುದರಿಂದ ಬಲವಾಗಿವೆ. ಈ ಸಂಗ್ರಹಕ್ಕೆ ಹೆಸರುಗೊಟ್ಟ 'ನೆಲ-ಮುಗಿಲು' ಈ ಭಾಗದ ಮೊದಲ ಕವನ. 'ಅದರೀಗಲೇ ಅದರ ಇತಿವೃತ್ತವನು ಬರೆಯದಿರು' ಎನ್ನುತ್ತಾನೆ ಕವಿ. ಆಗಲಿ, ಆದರೆ ನೆಲ-ಮುಗಿಲುಗಳಾಚೆಗೆ ಇರುವ 'ಬಾನಿನ ಅತೀಂದ್ರಿಯ ಸ್ಪರ್ಶ'ವನ್ನು ಕವಿ ಮರೆತಿಲ್ಲ. ವಾಚಕರೂ ಮರೆಯಬಾರದು. 'ವರ್ತುಳ'ದಲ್ಲಿ ಅತೀಂದ್ರಿಯ

ಸ್ಪರ್ಶವಿದೆ. ಅಂತೆಯೇ 'ನಾದದೊಳಗೂ ಪ್ರತಿಮೆ' 'ಪ್ರಣಯ-ಪ್ರೀತಿ'ಯೂ 'ಪ್ರೀತಿಯ ಪಣತಿ' ಆಗಬಹುದಿತ್ತೇನೋ?

'ಕತ್ತಲೆಯ ಗರ್ಭದಲಿ ಬಿದ್ದ ಬೆಳಕಿನ ಬೀಜ
ಬೆಳೆದು ಬ್ರಹ್ಮಾಂಡವನೆ ತಬ್ಬಿಕೊಂಡಿತು ಸಹಜ'

'ದಾಹ'ದ ಕೊನೆಯಲ್ಲಿ ಸಂಕಲ್ಪ-ವಿಕಲ್ಪ ತಾಕಲಾಡಿವೆ. 'ಉಪ್ಪು-ನೀರಿ'ನಲ್ಲಿ ಭುದಿಂಗನೆ 'ಹಿಮಗಿರಿ ತಿಮಿಂಗಲ' ಬಂದು 'ತಪ್ಪು ಯಾರದು?' ಎಂದು ಕೇಳುವಂತಾಗಿದೆ. 'ಕತ್ತಲೆ-ಬೆಳಕು', 'ರಾತ್ರಿ'ಗಳಲ್ಲಿ ಕರಂಟು ಆಗೀಗ ಫಕ ಫಕ ಮಾಡುವದು. 'ಕತ್ತಲೆಗೂ ಕಣ್ಣುಂಟು' ಆದರೆ 'ತೆರಬೇಕು ತಕ್ಕ ಬೆಲೆ'. ಕ್ರಮ-ಶ್ರಮಗಳ 'ಹಂಸಕ್ಷೀರ' ನ್ಯಾಯವು ಇನ್ನೊಂದು ಪ್ರತಿಮೆಯಲ್ಲಿ ಮೂಡಿದೆ. ಮೂರು ಸಾನೆಟ್ಟುಗಳು ವಿಶ್ವವಿದ್ಯಾಲಯಕ್ಕೆ ಮುಡಿಪಾಗಿವೆ. 'ಬಿಸಮಿಲ್ಲಾರ ಶಹನಾಯಿವಾದನ ಕೇಳಿ' ಎಂಬ ಸಾನೆಟ್ಟು ಔಚಿತ್ಯ-ಸುಂದರವಾಗಿದೆ ಅಭಿವ್ಯಕ್ತಿಯಲ್ಲಿ. ವಿಶ್ವೇಶ್ವರಯ್ಯನವರಿಗೆ ವಂದಿಸಲು ಬಾಗಿದ ತಲೆಯಲ್ಲಿ - ನಮ್ಮ ಮಂದಿಯ ನೆನಪಾಗಿ 'ಜಂಗುತಿಂದವರಿವರು' ಎಂಬ ಮುಕ್ತಾಯವು ಫಡಾರೆಂದು ಕಪಾಳಕ್ಕಪ್ಪಳಿಸುತ್ತದೆ. 'ಉತ್ತಂಗಿ' 'ಗೋವಿಂದ ಪೈ'ಗಳಿಗೆ ತಕ್ಕ ಕಾಣಿಕೆ ಒಪ್ಪಿಸಿ, 'ದ.ಬಾ.ಕು. ಸ್ಮೃತಿ'ಯಲ್ಲಿ ದಿವಂಗತ ಶಿವೇಶ್ವರ ದೊಡ್ಡಮನಿ, ಹಲಸಂಗಿ ಚೆನ್ನಮಲ್ಲಪ್ಪ, ಬಸವನಾಳ ಇವರನ್ನು ಕುರಿತು ಈ ಕವಿ ಈ ಮೊದಲು ಬರೆದ ಕವನಗಳ ನೆನಪು ಮರುಕಳಿಸುತ್ತದೆ. 'ಹಳಕಟ್ಟಿ'ಯವರಿಗರ್ಪಿತವಾದ ಸಾನೆಟ್ಟಿನಲ್ಲಿ ವಿಶ್ವೇಶ್ವರಯ್ಯನವರ ಸಾನೆಟ್ಟಿನಂತೆ ಕೊನೆಯ ಸಾಲಿನಲ್ಲಿ ಚೇಳಿನ ಕೊಂಡಿ ಇದೆ.

'ಏಳು ಸಲ ಕರೆದರೂ ಎಚ್ಚರಾಗದು ನಮಗೆ'

'ಪ್ರತಿಮಾ' ಕವನಗಳಲ್ಲಿ ಅರ್ಥಯತಿಗೆ ತಕ್ಕ ಪ್ರಸಾರ ರಚನೆ, ಶಿಥಿಲೋಚ್ಚಾರದ ಸ್ವಾಚ್ಛಂದ್ಯ, ಪಾದಾಂತಯತಿಯ ರಾಹಿತ್ಯವು ಶಬ್ದಗಳನ್ನು ಕತ್ತರಿಸುವಂತಾದುದು ನವೀನವಲ್ಲದಿದ್ದರೂ ಗಮನಾರ್ಹವಾಗಿದೆ.

'ಪ್ರೇರಣೆ', 'ಪ್ರತಿಮೆ'ಗಳು ಕವಿಯ ಭಾವಾರ್ಥವಿಸ್ತಾರವನ್ನು ಬಣ್ಣಿಸಿದರೆ, 'ಪ್ರತಿಬಿಂಬ'ವು ಯಥಾರ್ಥವಾಗಿ ಅವರು ತೀಡಿರುವ 'ಬಿಂಬ'ಗಳನ್ನು ಪ್ರಕಟಿಸುವದು. ಶೇಕ್ಸ್‌ಪಿಯರ್, ಬರ್ನ್ಸ್, ಎಲಿಝುಬೆತ್ ಜೆನಿಂಗ್ಸ್, ರವೀಂದ್ರ ಇವರ ಮೂಲಗಳ ಅನುವಾದಗಳಿವೆ ಈ ಭಾಗದಲ್ಲಿ. ರವೀಂದ್ರವು ಹೆಚ್ಚು, ಮೂಲ ಮಾತ್ರ ಇಂಗ್ಲೀಷು. ಕನ್ನಡದಲ್ಲಿ ರೂಢವಾಗಿರುವ ಭಾವಾನುವಾದಗಳ ಉಚಿತವಾದ ಮಾದರಿಗಳಿವೆ ಇಲ್ಲಿ. 'ಆರಿದ ಕುಲುಮೆ'ಯು ಗಾಂಭಿರ್ಯಕ್ಕೂ, 'ನನಗೆ ನನ್ನವಳೇ' ಎಂಬುದು ಲಘು ವಿಲಾಸಕ್ಕೂ ಮಾದರಿಯಾಗಿವೆ,

'ನೆಲ-ಮುಗಿಲು' ಸಂಗ್ರಹವು ಕವಿಯ ಹಳೆಯ ಗುಣಗಳ ಜತೆಗೆ ಹೊಸ ಬೆಡಗನ್ನೂ ಮೈಗೂಡಿಸಿಕೊಂಡಿದೆ. ಸದ್ಭಾವದ ಶ್ರದ್ಧೆಯು ಇಲ್ಲಿ ಗಟ್ಟಿ ಕಾಳಾಗಿದೆ. ಧಾರವಾಡಕ್ಕೆ ಅವರು ಉಪಕೃತರಿರುವಂತೆ ಧಾರವಾಡವು ಅವರಿಗೆ, ಕವನಗಳಿಗೆ ಉಪಕೃತ ಎನ್ನಬಹುದು.

'ಕಾವ್ಯಾಕ್ಷಿ'ಗೆ ನಾನು ಮುನ್ನುಡಿ ಬರೆದಾಗ ಕಣವಿಯವರ ಪರಿಚಯ ನನಗಿರಲಿಲ್ಲ.

ಕವಿಯನ್ನು ಅವರ ಗೆಳೆಯರೊಂದಿಗೆ ವಿನಾಯಕ ಗೋಕಾಕರೊಂದಿಗೆ ಆಮೇಲೆ ಕಂಡೆ. ಮುಂದೆ ಅವರು ಗುಂಪಿನ ಗೆಳೆಯರಾಗಿದ್ದ ಒಂದು ಮನೆತನಕ್ಕೆ ಅಳಿಯಂದಿರಾದರು. ಕೇಳುವದೇನು? ಈ ಮದಲಿಂಗನ ಮನೆಯ ಕತೆ, ಮಕ್ಕಳ ಕತೆ - 'ಮಧುಚಂದ್ರ' ಕೂಡ ಬಂತು - ಕನ್ನಡನಾಡೂ ಬಲ್ಲದು. ಕವಿ 'ನೆಲ-ಮುಗಿಲು' ಸಂಗ್ರಹದಲ್ಲಿ 'ಅಂಬಿಕಾತನಯದತ್ತ'ರನ್ನು ಹಲವು ಕಡೆಗೆ ನೆನೆಸಿದ್ದಾರೆ. ಅವರನ್ನು ರವೀಂದ್ರರ ಬದಿಗೆ ಕುಳ್ಳಿರಿಸಿದ್ದಾರೆ. 'ದ.ರಾ.ಬೇಂದ್ರೆ'ಯವರಿಗೆ ತಮ್ಮ 'ದೀಪಧಾರಿ' ಕವನ ಸಂಗ್ರಹ ಅರ್ಪಿಸಿದ್ದಾರೆ. 'ಅಹೋ ರೂಪಂ ಅಹೋ ಧ್ವನಿಃ' ಎಂದು ವಿಮರ್ಶಕ ಬಂಧುಗಳು ಈ 'ನಾಲ್ಕು ಮಾತಿ'ಗೆ ಸದ್ದು ಮಾಡಿದರೆ ಆ ಪ್ರಾಜ್ಞರಲ್ಲಿ ನಾನು ಕ್ಷಮೆ ಬೇಡುತ್ತೇನೆ.

ಸಾಧನಕೇರಿ, ಧಾರವಾಡ **ದ.ರಾ. ಬೇಂದ್ರೆ**

೧೫-೮-೧೯೬೫

## ಎರಡು ದಡ

### (ಮುನ್ನುಡಿ)

'ನೆಲ-ಮುಗಿಲು' ಪ್ರಕಟನೆಯಿಂದೀಚೆಗೆ ನಾನು ಬರೆದ ಕವಿತೆಗಳೆಲ್ಲವೂ ಈ ಸಂಗ್ರಹದಲ್ಲಿ ಬಂದಿವೆ. ಐದಾರು ಹಿಂದಿನ ಪದ್ಯಗಳೂ ಇದ್ದಾವು.

ಮೊದಲನೆಯ ಭಾಗದ ಕವಿತೆಗಳಲ್ಲಿ ಹತ್ತು ಸಾನೆಟ್ಟುಗಳು. ಕಾವ್ಯ ರಚನೆಯ ಪ್ರಾರಂಭದಿಂದಲೂ ನನ್ನ ಮನಸ್ಸನ್ನಾಕರ್ಷಿಸಿದ ಈ ಕಾವ್ಯ ಪ್ರಕಾರ ಇಂದು ರೂಪವೈವಿಧ್ಯದಿಂದಲೂ, ವಸ್ತುವೈವಿಧ್ಯದಿಂದಲೂ ಕನ್ನಡದಲ್ಲಿ ಕಂಗೊಳಿಸುವಂತಾಗಿದೆ. ಮಿತವಾದ ಚೌಕಟ್ಟಿನಲ್ಲಿ ಹಿತವಾದ ಚಿತ್ರಕಶಕ್ತಿಯಿಂದ ಭಾವ ವಿಚಾರಗಳು ಸಮ್ಮಿಲನಗೊಂಡು ತನ್ನ ಕಲೆಗಾರಿಕೆಯನ್ನು ಮೆರೆಯುವ ಈ ರೂಪದ ಹಲವು ಪ್ರಯೋಗಗಳನ್ನು ನನ್ನ ಹಿಂದಿನ ಸಂಕಲನಗಳಲ್ಲಿಯಂತೆ ಇಲ್ಲಿಯೂ ಓದುಗರು ಕಾಣಬಹುದು. ಇವುಗಳ ಕೆತ್ತನೆಯ ಕೆಲಸದಲ್ಲಿ ನಾನು ಸಂತೋಷಪಟ್ಟಿದ್ದೇನೆ.

ಆಗೊಮ್ಮೆ ಈಗೊಮ್ಮೆ ಎಂದರೂ ಬಿಟ್ಟೂಬಿಡದೆ ಬೆಂಬತ್ತಿದ ವಿವಿಧ ಭಾವನೆಯ ಮಿಂಚುಹುಳಗಳನ್ನು 'ಅಗೀಗ ನಾಲ್ಕು ಸಾಲು'ಗಳ ಗೊಂಚಲಿನಲ್ಲಿ ಹಿಡಿದಿಡಲಾಗಿದೆ. ಇಲ್ಲಿ ಚುಚ್ಚುವ ವಿಡಂಬನೆಯ ಜೊತೆಗೆ ಮೆಚ್ಚುವ ಮಾತೂ ಇದೆ. ಈ ಬಗೆಯ ಬಿಡಿನುಡಿಗಳಲ್ಲಿರಬೇಕಾದ ಉಕ್ತಿಯ ಅಡಕವೂ, ಅಪೇಕ್ಷಿತ ಸುಂದರತೆಯ ಕೂಡ ಅನಿರೀಕ್ಷಿತತೆಯ ಅಚ್ಚರಿಯೂ ಕೆಲಮಟ್ಟಿಗಾದರೂ ಇಲ್ಲಿ ಒಡಗೊಂಡಿವೆ ಎಂದು ಭಾವಿಸಿದ್ದೇನೆ.

ಇನ್ನುಳಿದವು ಆದಷ್ಟು ಆಡುಮಾತಿನ ಲಯವನ್ನು ಒಳಗೊಂಡ ಹೊಸಬಗೆಯ ಕವಿತೆಗಳಾದರೂ ಅವು ಯಾವುದೊ ಸೂತ್ರಕ್ಕೆ, ತಂತ್ರಕ್ಕೆ ಬಂಧಿಯಾದವುಗಳಲ್ಲ; ಆಕೃತಿನಿರ್ಮಾಣದಲ್ಲಿ ಆಸಕ್ತಿ ಪಡೆದ, ಸಹಜತೆಗೆ ಅಭಿವ್ಯಂಜನೆ ನೀಡಿದ, ಸಂಕೀರ್ಣಾನುಭವದ ಶಕ್ತಿಯನ್ನು ಪಡೆದು ಹೊರ ಹೊಮ್ಮಲು ಪ್ರಯತ್ನಿಸಿದ ರಚನೆಗಳು. ನಮ್ಮ ಜನದ ಜೀವನದಲ್ಲಿ ಮೂಡುತ್ತಿರುವ ಚಿಂತನೆ, ಭಾವನೆ, ಆಕಾಂಕ್ಷೆ, ಆಡಂಬರ, ಆತ್ಮವಿಮರ್ಶೆಗಳಲ್ಲಿ ಇಂದಿನ ಸ್ಫೂರ್ತಿ ಯಾವುದು ಎಂಬುದನ್ನು ಗುರುತಿಸುವ ಹವಣಿಕೆಯೊಂದಿಗೆ, ಮೈದಾಳಿ ನಿಲ್ಲಬೇಕಾದ ಸತ್ತ್ವದ ಶೋಧನೆಯೂ ಈ ಪದ್ಯಗಳಲ್ಲಿ ಅಲ್ಲಲ್ಲಿ ಕಂಡುಬರಬಹುದು.

ಎರಡನೆಯ ಭಾಗದಲ್ಲಿ ಹಾಡುಗಳೂ, ಒಂದೆರಡು ಗೀತರೂಪಕಗಳೂ ಇವೆ. ಒಂದೊಂದು ವಿಶಿಷ್ಟ ಸಂದರ್ಭ, ಪ್ರಸಂಗಗಳಿಗಾಗಿ ಇವು ರೂಪುಗೊಂಡುವು. ಹಾಗೆ ನೋಡಿದರೆ ಯಾವ ಕವಿತೆ ಸೃಷ್ಟಿಗೊಳ್ಳಲೂ ತನ್ನ ಒಂದು ಮುಹೂರ್ತಕ್ಕಾಗಿ ಕಾಯಬೇಕಾದೀತು. 'ವಿಶ್ವಭಾರತಿಗೆ ಕನ್ನಡದಾರತಿ' ಪದ್ಯವನ್ನು ಕರ್ನಾಟಕ ವಿಶ್ವವಿದ್ಯಾಲಯ ತನ್ನ ಘಟಿಕೋತ್ಸವ ಗೀತವಾಗಿ ಅಂಗೀಕರಿಸಿದ್ದು ಅಂಥ ಒಂದು ಶುಭಮುಹೂರ್ತ.

ಅನೇಕ ದ್ವಂದ್ವಗಳ ಘರ್ಷಣೆಯಲ್ಲಿಯೇ ತನ್ನ ದಾರಿಯನ್ನು ಕಂಡುಕೊಂಡು ಸಾಗಿರುವ ಬಾಳಿನ ಪ್ರತೀಕದಂತಿರುವ 'ಎರಡು ದಡ'ದ ಕವಿತೆಗಳನ್ನು ಓದುಗರ ಮಡಿಲಲ್ಲಿ, ಕಾಲದ ಉಡಿಯಲ್ಲಿ ಹಾಕುತ್ತಿದ್ದೇನೆ. ಈ ಹಿಂದಿನ ಸಂಗ್ರಹಗಳಿಗೆ ಆದರ ತೋರಿಸಿದ ರಸಿಕರಿಗೂ, ಲಕ್ಷ್ಯಗೊಟ್ಟ ವಿಮರ್ಶಕರಿಗೂ ಕೃತಜ್ಞತೆಯನ್ನರ್ಪಿಸುತ್ತೇನೆ. ಸ್ನೇಹದ ಹೊಂಬೆಳಕು ಎಂದಿನಂತೆ ಈ ಕೃತಿಯನ್ನೂ ತಣಿಸಿದೆ.

ಈ ಸಂಗ್ರಹದ ಮುಖಪುಟ ಚಿ. ಶಂಕರ ಪಾಟೀಲನ ಕಲಾಕೃತಿ; ಒಳ-ಹೊರಗಿನ ಅಚ್ಚು-ಮೆಚ್ಚು ಶಕ್ತಿ ಇಲೆಕ್ಟ್ರಿಕ್ ಪ್ರೆಸ್ಸಿನವರದು. ಈ ಕೃತಿಯು ಹೀಗೆ ಬೆಳಕು ಕಾಣಲು ಕಾರಣರಾದವರು ಗೀತಾ ಬುಕ್ ಹೌಸಿನ ಶ್ರೀ ಎಂ. ಸತ್ಯನಾರಾಯಣರಾವ್ ಅವರು - ಇವರೆಲ್ಲರಿಗೂ ನನ್ನ ವಂದನೆಗಳು.

ಕರ್ನಾಟಕ ವಿಶ್ವವಿದ್ಯಾಲಯ — ಚೆನ್ನವೀರ ಕಣವಿ
ಧಾರವಾಡ
ಆಗಸ್ಟ್ ೧೫, ೧೯೬೯

# ಜೀವಧ್ವನಿ

## ಎರಡು ಮಾತು

'ನಗರದಲ್ಲಿ ನೆರಳು' ಪ್ರಕಟವಾದನಂತರ ಆರು ವರುಷಗಳ ಅವಧಿಯಲ್ಲಿ ನಾನು ಬರೆದ ಕವನಗಳ ಸಂಕಲನವಿದು. ಕವಿತೆ ಬರೆಯುವಾಗ ಇರುವ ಮನಸ್ಸಿನ ಒತ್ತಡ, ಲವಲವಿಕೆ, ಕಾಳಜಿಗಳು ಒಂದು ಬಗೆಯಾದರೆ, ಅವನ್ನೇ ಸಂಗ್ರಹರೂಪದಲ್ಲಿ ಪ್ರಕಟಿಸುವಾಗ ಒದಗುವ ಜವಾಬ್ದಾರಿ ಕವಿಯ ಕೈ ಹಿಡಿಯುತ್ತದೆ. ಕಾವ್ಯ ಸೃಷ್ಟಿಗೊಳ್ಳುವಾಗಿನ ಒಂದು ಬಗೆಯ ತೃಪ್ತಿ, ಆಮೇಲೆ ಉಂಟಾಗುವ ಯಾವುದೋ ಒಂದು ಕೊರತೆ ಇವುಗಳ ಸೆಣಸಾಟವೇ ಇದಕ್ಕೆ ಕಾರಣವಿರಬಹುದು. ಎಷ್ಟೇ ಪ್ರಯತ್ನಪಟ್ಟರೂ ಕವಿ ತನ್ನನ್ನು ಇಡಿಯಾಗಿ ಒಂದು ಕವಿತೆಯಲ್ಲಿ ಅಭಿವ್ಯಕ್ತಿಗೊಳಿಸಿಕೊಳ್ಳುವುದು ಬಹುಮಟ್ಟಿಗೆ ಅಸಾಧ್ಯ. ಆದರೆ ಅದನ್ನು ಬರೆದ ಕಾಲದ ಮನಸ್ಸಿನ ಭಾವಾನುಭವ, ಕವಿಯ ಅಭಿವ್ಯಕ್ತಿ ಸ್ವಾತಂತ್ರ್ಯದ ಫಲವಾಗಿ ಸಹಜ ರೂಪವನ್ನು ತಳೆದು ಸ್ವಯಂಪೂರ್ಣವೇ ಆಗಿ ತೋರಬಹುದು. ಏನೇ ಆದರೂ ಕಾವ್ಯ ಕಲೆಯಲ್ಲಿ ಪರಿಪೂರ್ಣತೆಯೆನ್ನುವದು ಮೃಗಜಲದಂತೆ ಅವನನ್ನು ಮುಂದೆ ಮುಂದೆ ಎಳೆದುಕೊಂಡು ಹೋಗುತ್ತಲೇ ಇರುವಂಥದು.

ಕುಟಿಲ ರಾಜಕೀಯದಿಂದ ಬಗ್ಗಡಗೊಂಡು ಭ್ರಷ್ಟತೆಗೀಡಾಗುತ್ತಿರುವ ನಾಡ ಜೀವನ, ನಾವು ಬದುಕುತ್ತಿರುವ ಸಾಮಾಜಿಕ ಪರಿಸರ, ಬಾಳುವೆಯ ಆಳದಲ್ಲಿರುವ ರಸವಂತಿಕೆ, ಪ್ರೀತಿ, ಅಂತಃಕರಣಗಳಿಂದ ಮನುಷ್ಯ ಸಂಬಂಧಗಳಿಗೆ ಒದಗುವ ಸಂತೋಷ ಹಾಗೂ ಸಾರ್ಥಕ್ಯವಾದ, ನಮಗೆ ಅರಿವಿರದಂತೆಯೇ ಬಾಳನ್ನು ಬೆಳಗಿಸುವ ಲೋಕೋತ್ತರ ಕರುಣೆಯ ಸೆಳಕು - ಇವು ಎಂದಿನಂತೆ ಇಲ್ಲಿಯೂ ಬಹುಮಟ್ಟಿಗೆ ಪ್ರೇರಣೆ ನೀಡಿವೆ. ಹಲವು ಸಲ ಸಂಕೀರ್ಣವಾದ ಛಂದೋವಿನ್ಯಾಸದಲ್ಲಿ, ಕೆಲವು ಸಲ ಸಾಂದ್ರವಾದ ಸುನೀತ ಶಿಲ್ಪದಲ್ಲಿ, ಆಗೀಗ ಭಾವಗೀತದಲ್ಲಿ ಯಥೋಚಿತ ರೂಪುದಳೆದ ಕವನಗಳು ಇವು. ಇವೆಲ್ಲವನ್ನೂ ಒಟ್ಟಿಗೆ ಆಸ್ವಾದಿಸುವ ಸಂಸ್ಕಾರಸಂಪನ್ನ ರಸಿಕ ಮನಸ್ಸಿಗೆ ಅವುಗಳ ಜೀವಧ್ವನಿ ತಮ್ಮದೇ ಎನಿಸೀತು. ಅದಕ್ಕೆ ತಕ್ಕಂತೆ ವಿಮರ್ಶಕನೂ ತನ್ನ ದೃಷ್ಟಿಕೋನವನ್ನು ಹಿಗ್ಗಿಸಿಕೊಳ್ಳಬಹುದೆಂದು ಆಶಿಸುತ್ತೇನೆ.

ಗುಣಾನುರಾಗಿಗಳೂ ಮಾನ್ಯ ಮಿತ್ರರೂ ಆದ ಡಾ|| ಹಾ.ಮಾ. ನಾಯಕರ ಪ್ರೀತಿಯ ಒತ್ತಾಯವಿರದಿದ್ದರೆ ಈ ಸಂಗ್ರಹ ಇಷ್ಟು ಬೇಗ ಹೊರಬರುತ್ತಿರಲಿಲ್ಲ. ಹೆಸರಾಂತ ವಿಮರ್ಶಕರೂ, ಆತ್ಮೀಯ ಸ್ನೇಹಿತರೂ ಆದ ಶ್ರೀ ಗೌರೀಶ ಕಾಯ್ಕಿಣಿ ಹಾಗೂ ಡಾ. ಜಿ.ಎಸ್. ಕಾಪಸೆಯವರು ನಿರಂತರವಾಗಿ ತಮ್ಮ ಪ್ರೀತಿ ವಿಶ್ವಾಸಗಳನ್ನು ತೋರಿಸುತ್ತಲೇ ಬಂದಿದ್ದಾರೆ. ಇವರೆಲ್ಲರಿಗೂ, ಇನ್ನೂ ಅನೇಕಾನೇಕ ಕವಿ-ಸಹೃದಯರಿಗೂ ನನ್ನ ಅನನ್ಯ ಕೃತಜ್ಞತೆಗಳು.

ಐಬಿಎಚ್ ಪ್ರಕಾಶನದಿಂದ ಈ ಸಂಕಲನವನ್ನು ಇಷ್ಟೊಂದು ಅಂದವಾಗಿ ಪ್ರಕಟಿಸಿ ನನ್ನ ಮನಸ್ಸನ್ನು ಹಗುರಗೊಳಿಸಿರುವ ಶ್ರೀ ಜಿ.ಕೆ. ಅನಂತರಾಮ್ ಅವರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

'ಚೆಂಬೆಳಕು' **ಚೆನ್ನವೀರ ಕಣವಿ**

ಕಲ್ಯಾಣ ನಗರ, ಧಾರವಾಡ-7

15-9-1980

# ನೀವೇ ಪ್ರಮಾಣು

## ಅರಿಕೆ

ನನ್ನ ಸಮಗ್ರ ಕಾವ್ಯದ ಮೂರನೇ ಆವೃತ್ತಿ ಪ್ರಕಟವಾದದ್ದು ೨೦೦೩ರಲ್ಲಿ. ಅದುವರೆಗೆ ಪ್ರಕಟವಾದ ನನ್ನ ಹದಿನೈದು ಕವನ ಸಂಗ್ರಹಗಳನ್ನು ಅದು ಒಳಗೊಂಡಿತ್ತು. ಅವುಗಳ ಜೊತೆಗೆ ಹಿಂದಿನ ಕವನ ಸಂಗ್ರಹಗಳಲ್ಲಿ ಸೇರದೆ ಉಳಿದ ಒಂಬತ್ತು ಗೇಯ ಕವನಗಳು, ಇಪ್ಪತ್ನಾಲ್ಕು ಬಿಡಿಗವನಗಳು ಹಾಗೂ ಹದಿನೈದು ಅನುವಾದಿತ ಕವನಗಳು ಅನುಬಂಧದ ರೀತಿಯಲ್ಲಿ ಸೇರ್ಪಡೆಯಾಗಿದ್ದವು. ಅವೆಲ್ಲವೂ ಈಗ, ಕಳೆದ ನಾಲ್ಕು ವರ್ಷಗಳಲ್ಲಿ ನಾನು ಬರೆದ ಇನ್ನಷ್ಟು ಕವಿತೆಗಳನ್ನೂ ಅನುವಾದಗಳನ್ನೂ ಒಳಗೊಂಡು ಒಂದು ಪ್ರತ್ಯೇಕ ಸಂಗ್ರಹವಾಗಿ ಓದುಗರ ಕೈ ಸೇರುತ್ತಿದೆ.

ಎಂಬತ್ತು ಕವಿತೆಗಳ ಈ ಗುಚ್ಛದಲ್ಲಿ ಅರ್ಧದಷ್ಟು ಸುನೀತಗಳಿದ್ದು 'ನೀವೇ ಪ್ರಮಾಣು' ಎಂಬ ಶೀರ್ಷಿಕೆಯನ್ನು ಇದಕ್ಕೆ ಕೊಡಲಾಗಿದೆ. 'ಗುಹೇಶ್ವರನೆಂಬುದು ಅಪ್ರಮಾಣು' ಎನ್ನುವಲ್ಲಿ ಅವನು ಎಲ್ಲ ಮಾನದಂಡಗಳನ್ನು ಮೀರಿದ ಆತ್ಯಂತಿಕ ಸತ್ಯವೆನ್ನುವ ಅನುಭಾವ ದೃಷ್ಟಿ ಅಲ್ಲಮನದಾಗಿದ್ದರೆ, ಸದ್ಭಕ್ತರನ್ನೇ ತನ್ನ ಸರ್ವಸ್ವ, ಒಡೆಯರು ಎಂದು ಸಮರ್ಪಿಸಿಕೊಳ್ಳುವ ಬಸವಣ್ಣ ತನ್ನ ನಿಷ್ಠೆಗೆ 'ಕೂಡಲ ಸಂಗಮದೇವಾ ನೀವೇ ಪ್ರಮಾಣು' ಎಂದು ನಿವೇದಿಸಿಕೊಳ್ಳುತ್ತಾನೆ. ಈ ಹಿನ್ನೆಲೆಯಲ್ಲಿ ಕಾವ್ಯೋದ್ಯೋಗದಲ್ಲಿ ತೊಡಗಿದ ನನ್ನಂಥವನು ಈ ಕಾವ್ಯದ ಎಲ್ಲ ಆಗು-ಹೋಗುಗಳಿಗೆ 'ನೀವೇ ಪ್ರಮಾಣು' ಎಂದು ಸಹೃದಯ ವಾಚಕಲೋಕಕ್ಕೆ ಅರಿಕೆ ಮಾಡಿಕೊಂಡರೆ ತಪ್ಪಾಗಲಾರದೆಂದು ನಾನು ಭಾವಿಸಿದ್ದೇನೆ.

ಈ ಕವಿತೆಗಳಲ್ಲಿ ಕೆಲವನ್ನು ಈ ಮೊದಲು ತಮ್ಮ ಪತ್ರಿಕೆಗಳ ವಿಶೇಷ ಸಂಚಿಕೆಗಳಲ್ಲಿ ಹಾಗೂ ಅಭಿನಂದನ ಗ್ರಂಥಗಳಲ್ಲಿ ಪ್ರಕಟಿಸಿದ ಸಂಪಾದಕ ಮಿತ್ರರಿಗೆ ನಾನು ಕೃತಜ್ಞ.

ಪ್ರಸ್ತುತ ಸಂಕಲನವನ್ನು ವಿಶೇಷ ಆಸಕ್ತಿಯಿಂದಲೂ ಉತ್ಸಾಹದಿಂದಲೂ ಪ್ರಕಟಣೆಗೆ ಎತ್ತಿಕೊಂಡ ಬೆಂಗಳೂರಿನ ಪ್ರವರ್ಧಮಾನ ಪ್ರಕಾಶಕರಲ್ಲಿ ಒಬ್ಬರಾದ ಶ್ರೀ ನಾರಾಯಣ ಮಾಳ್ಕೋಡ್ ಅವರಿಗೆ ನಾನು ತುಂಬ ಆಭಾರಿಯಾಗಿದ್ದೇನೆ.

ಧಾರವಾಡ　　　　　　　　　　ಚೆನ್ನವೀರ ಕಣವಿ

೨೧-೧೦-೨೦೦೭ ವಿಜಯದಶಮಿ

# ಭೂಮಿ-ಬದುಕು

## ಅರಿಕೆ

ಐದು ವರ್ಷಗಳ ಹಿಂದೆ 'ನೀವೇ ಪ್ರಮಾಣು' ಸಂಗ್ರಹ ಬಂದ ಮೇಲೆ ಇದುವರೆಗೆ ಬರೆದ ಕೆಲವೇ ಕವಿತೆಗಳು ಇಲ್ಲಿವೆ. ಈಗಲೇ ಸಂಗ್ರಹಿಸಿಕೊಡಬೇಕೆಂಬ ಇಚ್ಛೆಯಾಗಲಿ ಆಸಕ್ತಿಯಾಗಲಿ ನನಗಿರಲಿಲ್ಲ. ಆದರೆ ಸಪ್ನ ಬುಕ್ ಹೌಸ್‌ನ ವ್ಯವಸ್ಥಾಪಕರಾದ ಆರ್. ದೊಡ್ಡೇಗೌಡರ ಪ್ರೀತಿಯ ಒತ್ತಾಯವೇ ಕಾರಣವಾಗಿ ಈ ಕೃತಿ ಓದುಗರ ಕೈ ಸೇರುತ್ತಿದೆ.

ಕರ್ನಾಟಕ ಏಕೀಕರಣದ ಸುವರ್ಣ ಮಹೋತ್ಸವದಂದು ರಾಜ್ಯೋತ್ಸವದ ನೆನಪಿಗಾಗಿ ಕನ್ನಡದ ಅಷ್ಟೇ ಸಂಖ್ಯೆಯ ಲೇಖಕರ ಒಂದೊಂದು ಕೃತಿಗಳನ್ನು ಪ್ರಕಟಿಸಿ ಬಿಡುಗಡೆ ಮಾಡುವ ಪ್ರತ್ಯೇಕ ಯೋಜನೆಯನ್ನು ಕಾರ್ಯರೂಪದಲ್ಲಿ ತಂದು, ಇತಿಹಾಸವನ್ನು ನಿರ್ಮಿಸಿದ ಈ ಪ್ರಕಾಶನ ಸಂಸ್ಥೆ, ಅದನ್ನು ಯಶಸ್ವಿಯಾಗಿ ಮುಂದುವರಿಸಿಕೊಂಡು ಬಂದಿರುವುದು ಅದರ ಸಾಂಸ್ಕೃತಿಕ ಕಾಳಜಿಯ ದ್ಯೋತಕವೆಂದು ನಾನು ಭಾವಿಸಿದ್ದೇನೆ.

ಈ ಸಂಗ್ರಹದ ಇಪ್ಪತ್ತಾರು ಕವಿತೆಗಳಲ್ಲಿ ಹದಿನೈದು ಸುನೀತಗಳು. ಇನ್ನುಳಿದವುಗಳಲ್ಲಿ ಜೀವನದ ಪ್ರೀತಿಯೊಂದಿಗೆ ಚಿಂತನೆಯ ಸ್ವಂತಿಕೆಯ ಹೊಳಹುಗಳನ್ನು ಗುರುತಿಸಬಹುದು. ಹಾಗೆಯೇ ಅನುವಾದಗಳಿಗೂ ಇಲ್ಲಿ ಎಡೆಗೊಡಲಾಗಿದೆ.

ಬೆನ್ನುಡಿ ಬರೆದ ವಿಮರ್ಶಕ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರನ್ನು ಸಂತೋಷದಿಂದ ನೆನೆಯುತ್ತೇನೆ.

ಈ ಕೃತಿಯನ್ನು ಪ್ರಕಟಿಸುತ್ತಿರುವ ಸಪ್ನ ಬುಕ್ ಹೌಸ್‌ನ ಶ್ರೀ ನಿತಿನ್ ಷಾ ಅವರಿಗೆ, ಇದರ ಅಕ್ಷರ ಜೋಡಣೆ ಮಾಡಿದ ಧಾರವಾಡದ ವಚನ ಗ್ರಾಫಿಕ್ಸ್ ಅವರಿಗೆ, ಮುದ್ರಣ ಕೈಕೊಂಡ ಪ್ರಿಂಟೆಕ್ ಪ್ರಿಂಟರ್ಸ್ ಇವರಿಗೆ, ಅಂದವಾಗಿ ಮುಖಪುಟ ವಿನ್ಯಾಸ ಮಾಡಿದ ಶ್ರೀಪಾದ ಅವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

ನವೆಂಬರ ೨೦೧೨ **ಚೆನ್ನವೀರ ಕಣವಿ**

- ಇದರಲ್ಲಿ ಈಚೆಗೆ ಬರೆದ (೨೦೧೫-೨೦೧೮) ಎಂಟು ಸಾನೆಟ್ಟುಗಳನ್ನು ಹೆಚ್ಚಿಗೆ ಸೇರಿಸಲಾಗಿದೆ.



ಏಕಾಗ್ರತೆ, ಅಮೂರ್ತಕ್ಕೆ ಆಕಾರ ಕೊಡುವ ಮೂರ್ತ ಪ್ರತಿಮೆಗಳ ಸೃಷ್ಟಿ, ವಚನಕಾರರಲ್ಲಿ ಕಂಡುಬರುವ ದರ್ಶನಸ್ಪಷ್ಟತೆ, ನಿರಾಭರಣ ಸುಂದರವಾದ ಭಾಷೆ, ಲಯದ ನಿಯಂತ್ರಣದಲ್ಲಿ ಹುಟ್ಟಿಕೊಳ್ಳುವ ಅರ್ಥಕ್ರಿಯೆ, ಮೌನ ಹೊರಡಿಸುವ ಶಬ್ಧ ಇವು ಈ ಕವಿತೆಗಳ ಶ್ರೇಷ್ಠ ಗುಣಗಳಾಗಿವೆ. ಕಣವಿ ಕಾವ್ಯದ ಒಂದು ವೈಶಿಷ್ಟ್ಯವೇ ಆದ ಬದುಕು ಹಾಗೂ ಕಾವ್ಯಗಳಲ್ಲಿಯ ಸಮಾನ ಶ್ರದ್ಧೆ ಅವರ ಇತ್ತೀಚಿನ ಕವಿತೆಗಳಿಗೂ ತಾತ್ವಿಕತೆಯನ್ನು ಒದಗಿಸಿದೆ. ಆತಂಕದ ಕ್ಷಣಗಳನ್ನು ಅವರು ಅನುಭವಿಸಿಲ್ಲವೆಂತಲ್ಲ, ಆದರೆ ಈ ಶ್ರದ್ಧೆಯನ್ನು ಅವರು ಕಾಯ್ದುಕೊಂಡು ಬಂದಿದ್ದಾರೆ ಹಾಗೂ ಅದು ಅವರನ್ನು ಕಾಯ್ದಿದೆ. ಬದುಕಿನ ಲಯವನ್ನು ಸಂತೋಷದಿಂದಲೇ ಸ್ವೀಕರಿಸುವ ಅವರ ಮನೋಧರ್ಮದಿಂದಾಗಿ ಅವರು ಅಸ್ತಿತ್ವವಾದಿ ನಿರಾಶೆಯಿಂದ ಪಾರಾಗಿದ್ದಾರೆ. ಕಣವಿಯವರ ಕಾವ್ಯದ ಸಂದರ್ಭದಲ್ಲಿ ಗಮನಿಸಲೇಬೇಕಾದ ಒಂದು ಸತ್ಯವೆಂದರೆ ಅವರ ಚಿಂತನೆಯ ಕ್ರಮ. ಬದುಕಿನ ಹಾಗೂ ಪ್ರಕೃತಿಯ ಲಯವನ್ನನುಸರಿಸಿದೆಯೇ ಹೊರತು ಬಂದು ಹೋಗುವ ಐಡಿಯಾಲಜಿಗಳನ್ನಲ್ಲ. ಇದರಿಂದಾಗಿ ಅವರ ಕಾವ್ಯ ತನ್ನ ಜೀವನದರ್ಶನದಿಂದಲೂ ಪ್ರಸ್ತುತತೆಯನ್ನು ಕಳೆದುಕೊಳ್ಳುವುದಿಲ್ಲ.

ಡಾ. ಜಿ.ಎಸ್. ಆಮೂರ




ಸಂವಹನ
೧೨/೧ಎ, ಈವನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು-೫೭೦೦೦೧